# ಕನ್ನಡದಲ್ಲಿ ಪ್ರವಚನ ಸಾಹಿತ್ಯ

ಭಾಷಾ ಅಧ್ಯಯನ ವಿಭಾಗದಲ್ಲಿ ಪಿ.ಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನಾ

**ಮಹಾಪ್ರಬಂಧ**

ಸಂಶೋಧಕರು :
**ಈಶ್ವರ ಶ್ರೀಶೈಲ ಮಂಟೂರ** ಪ್ರವಚನಕಾರರು.
ಬಸವಜ್ಞಾನ ಗುರುಕುಲ
ಹುನ್ನೂರ-ಮಧುರಖಂಡಿ,
ತಾ-ಜಮಖಂಡಿ. ಜಿ-ಬಾಗಲಕೋಟ.

**ನೋಂದಣಿ ಸಂಖ್ಯೆ: BRDSH-00102**

ಮಾರ್ಗದರ್ಶಕರು :
**ಡಾ. ಗೋಪಾಲಕೃಷ್ಣ ಹೆಗಡೆ** ವಿಭಾಗ ಮುಖ್ಯಸ್ಥರು
ಡಾ. ಎ. ವ್ಹಿ. ಬಾಳಿಗಾ ಕಲೆ ಮತ್ತು ವಿಜ್ಞಾನ ಮಹಾವಿದ್ಯಾಲಯ ಕುಮಟಾ,
ಉತ್ತರ ಕನ್ನಡ ಜಿಲ್ಲೆ



ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ
ತಾ-ಹಾರೂಗೇರಿ. ಜಿ-ಬೆಳಗಾವಿ.



ಮಾನ್ಯತೆ: ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೪

541

# ಕನ್ನಡದಲ್ಲಿ ಪ್ರವಚನ ಸಾಹಿತ್ಯ

ಭಾಷಾ ಅಧ್ಯಯನ ವಿಭಾಗದಲ್ಲಿ ಪಿ.ಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನಾ

## ಮಹಾಪ್ರಬಂಧ

ಸಂಶೋಧಕರು :
**ಈಶ್ವರ ಶ್ರೀಶೈಲ ಮಂಟೂರ** ಪ್ರವಚನಕಾರರು,
ಬಸವಜ್ಞಾನ ಗುರುಕುಲ
ಹುನ್ನೂರ-ಮಧುರಖಂಡಿ,
ತಾ-ಜಮಖಂಡಿ. ಜಿ-ಬಾಗಲಕೋಟ.

**ನೋಂದಣಿ ಸಂಖ್ಯೆ: BRDSH-00102**

ಮಾರ್ಗದರ್ಶಕರು :
**ಡಾ. ಗೋಪಾಲಕೃಷ್ಣ ಹೆಗಡೆ** ವಿಭಾಗ ಮುಖ್ಯಸ್ಥರು
ಡಾ. ಎ. ವ್ಹಿ. ಬಾಳಿಗಾ ಕಲೆ ಮತ್ತು ವಿಜ್ಞಾನ ಮಹಾವಿದ್ಯಾಲಯ ಕುಮಟಾ,
ಉತ್ತರ ಕನ್ನಡ ಜಿಲ್ಲೆ



ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,
ತಾ-ಹಾರೂಗೇರಿ. ಜಿ-ಬೆಳಗಾವಿ.

ಮಾನ್ಯತೆ: ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೩

# ದೃಢೀಕರಣ ಪತ್ರ

'ಕನ್ನಡದಲ್ಲಿ ಪ್ರವಚನ ಸಾಹಿತ್ಯ' ಎಂಬ ಮಹಾಪ್ರಬಂಧವನ್ನು **ಡಾ. ಗೋಪಾಲಕೃಷ್ಣ ಹೆಗಡೆ** ಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿ.ಎಚ್.ಡಿ. ಪದವಿಗಾಗಿ ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ ಹಾರೂಗೇರಿ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಹಾಗೂ ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಹಿ

ಸ್ಥಳ: ಆಶ್ರಮ ಹುನ್ನೂರ–ಮಧುರಖಂಡಿ.

ದಿನಾಂಕ:

**ಈಶ್ವರ ಶ್ರೀಶೈಲ ಮಂಟೂರ**

ಸಂಶೋಧಕರು

# ಪ್ರಮಾಣ ಪತ್ರ

‘ಕನ್ನಡದಲ್ಲಿ ಪ್ರವಚನ ಸಾಹಿತ್ಯ’ ಎಂಬ ಮಹಾಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಪಿ.ಎಚ್.ಡಿ. ಪದವಿಗಾಗಿ ಈಶ್ವರ ಶ್ರೀಶೈಲ ಮಂಟೂರ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಇವರ ಸ್ವತಂತ್ರ ಸಂಶೋಧನಾಧ್ಯಯನವಾಗಿದೆ. ಇದು ಯಾವುದೇ ವಿಶ್ವವಿದ್ಯಾಲಯದಲ್ಲಿ ಇಡಿಯಾಗಿ ಇಲ್ಲವೇ ಬಿಡಿಯಾಗಿ ಅಧ್ಯಯನ ನಡೆದಿರುವುದಿಲ್ಲ ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಡಾ. ಗೋಪಾಲಕೃಷ್ಣ ಹೆಗಡೆ.
ಸಂಶೋಧನಾ ಮಾರ್ಗದರ್ಶಕರು

ಡಾ|| ಗೋಪಾಲಕೃಷ್ಣ ಹೆಗಡೆ
ಮಾರ್ಗದರ್ಶಕರು
ಶ್ರೀ ಬಿ ಆರ್ ದರೂರ ಸಂಶೋಧನಾ ಕೇಂದ್ರ, ಹಾದಿಗೇರಿ.
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ಕುಮಟಾ
ದಿನಾಂಕ:

# ಅರಿಕೆ

ಪ್ರವಚನಗಳು ಕನ್ನಡದ ಜೀವಾಳ. ಅಧ್ಯಾತ್ಮದ ಮಾತುಗಳಿಂದ ಮನ ಪರಿವರ್ತನೆ. ಸುಸಂಸ್ಕಾರ ಬಿತ್ತುವ ಪ್ರಾಯೋಗಿಕ ಪರಂಪರೆ ಅಂದರೆ ಪ್ರವಚನ. ದುಡಿದು ದಣಿದು ಬಂದವರಿಗೆ ನಿದ್ರೆ ಸಹಜ. ಜೀವನದಲ್ಲಿ ನೊಂದು ಬೆಂದವರಿಗೆ ಅಧ್ಯಾತ್ಮವೂ ಅಷ್ಟೇ ಸಹಜ. ಇಂದಿಗೂ ಕೂಡ ಹಳ್ಳಿ ಪಟ್ಟಣ ನಗರಗಳಲ್ಲಿ ನಿರಂತರವಾಗಿ ಒಂದಿಲ್ಲ ಒಂದು ಕಡೆ ಪ್ರವಚನಗಳು ನಡೆದಿರುತ್ತವೆ.

ಇಂತಹ ಒಂದು ಪ್ರವಚನದ ಪರಿಸರದಲ್ಲಿ ಬೆಳೆದ ನಾನು ಬಾಲ್ಯದಿಂದಲೂ ನಮ್ಮೂರಿಗೆ ಬಂದ ಮಹಾತ್ಮರ, ಅನುಭಾವಿಗಳ ಪ್ರವಚನ, ಕೀರ್ತನ, ಪುರಾಣಗಳನ್ನು ವೇದಿಕೆಯ ಮುಂದೆ ಕುಳಿತು, ಕೇಳುವುದು ನನ್ನ ಹವ್ಯಾಸವಾಗಿತ್ತು. ಕಲಾವಿದರ ಹಿನ್ನೆಲೆವುಳ್ಳ ಮನೆತನದಲ್ಲಿ ಹುಟ್ಟಿ, ಬೆಳೆದು ಓದಿದ ನಾನು ಬಸವಗುರುವಿನ ಆಶೀರ್ವಾದದಿಂದ ಪ್ರವಚನಕಾರನಾದೆ. ನಾಡಿನುದ್ದಗಲಕ್ಕೂ ಸಂಚಾರಿ ಪ್ರವಚನಕಾರನಾಗಿ ಚರಿಸಿದೆ. ಗುಬ್ಬಿಮಲ್ಲಣ್ಣಾರ್ಯರಾದಿಯಾಗಿ ಇಲ್ಲಿಯ ತನ ಅನೇಕ ಪ್ರವಚನಕಾರರು ಆಗಿ ಹೋಗಿದ್ದಾರೆ. ಅವರು ಆಡಿದ ಮಾತುಗಳು ಕೃತಿರೂಪಕ್ಕೆ ಬಂದದ್ದು ಕಡಿಮೆ ಆದರೂ ಅವರ ಬಗ್ಗೆ ತಿಳಿದುಕೊಳ್ಳುವ ತುಡಿತ–ಮಿಡಿತವಿತ್ತು.

ಒಂದುಬಾರಿ ನನಗೆ ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಉದ್ಘಾಟನೆಯಲ್ಲಿ ಸನ್ನಿಧಾನ ವಹಿಸಿ ಮಾತನಾಡಲು ಅವಕಾಶ ದೊರಕಿತ್ತು. ಸರಳ ಸ್ನೇಹ ಜೀವಿಗಳೂ ಮತ್ತು ಹದುಳಭಾವದ ವಿದ್ವಾಂಸರಾದ ಸಂಶೋಧನಾ ಕೇಂದ್ರದ ನಿರ್ದೇಶಕರೂ ಆಗಿರುವ ಡಾ. ವ್ಹಿ. ಎಸ್. ಮಾಳಿಯವರ ಹತ್ತಿರದ ಪರಿಚಯವಾಯಿತು. ತಾವು ಪ್ರವಚನಕಾರರು ನೀವೇ ಇಂದು ನಮ್ಮ ಕೇಂದ್ರದ ಮೊದಲ ಸಂಶೋಧನಾ ವಿದ್ಯಾರ್ಥಿಗಳಾಗಿ ಹೆಸರು ನೋಂದಾಯಿಸಬೇಕು. ಪ್ರವಚನ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ವಿಷಯ ಆಯ್ಕೆ ಮಾಡಿ ಪ್ರಬಂಧ ಸಿದ್ಧಪಡಿಸಿರಿ ಎಂದು ಆತ್ಮೀಯ ಮಾತುಗಳನ್ನಾಡಿ ವೇದಿಕೆಯ ಮೇಲೆ ಘೋಷಿಸಿದರು. ಯಾವತ್ತೂ ಪ್ರವಚನದಲ್ಲಿ ಸಂಚರಿಸುವವನಿಗೆ ಪಿ.ಎಚ್.ಡಿ. ಅಧ್ಯಯನ ಕಷ್ಟಸಾಧ್ಯ. ಆದರೂ ಅವರ ಅಂತಃಕರಣದ ಮಾತುಗಳು ಎಚ್ಚರಿಸಿದವು. ಪ್ರವಚನ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ **'ಕನ್ನಡದಲ್ಲಿ ಪ್ರವಚನ ಸಾಹಿತ್ಯ'** ಎಂಬ ವಿಷಯನ್ನು ಅವರ ಆಶಯದಂತೆ ಆಯ್ಕೆ ಮಾಡಿಕೊಂಡು ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದಲ್ಲಿ ಅಧ್ಯಯನದ ವಿದ್ಯಾರ್ಥಿಯಾಗಿ ಹೆಸರು ನೋಂದಾವಣೆ ಮಾಡಿದೆ. ನಾನು ಒಬ್ಬ ಪ್ರವಚನಕಾರ ಸಂಶೋಧಕನಾಗಿ ಬೆಳೆಯಲಿ ಪಿ.ಎಚ್.ಡಿ. ಪ್ರಬಂಧ ಸಿದ್ಧಪಡಿಸಲಿ ಎಂದು ಹಿರಿದಾಸೆ ಹೊಂದಿ ಸಹಕರಿಸಿದ ಎನ್ನ ಆತ್ಮೀಯ ಶ್ರೀ ಮಾಳಿಯವರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ.

ಪ್ರವಚನ ಕ್ಷೇತ್ರ ವಿಶಾಲವಾದದು. ಇದರ ಅರ್ಥ ವ್ಯಾಪ್ತಿ ಮಾತಿಗೆ ನಿಲುಕದು. ಕನ್ನಡ ನಾಡಿನಲ್ಲಿ ಅನೇಕಾನೇಕ ಪ್ರವಚನಕಾರರು ಬೇರೆ-ಬೇರೆ ಧರ್ಮದ ತಳಹದಿಯಲ್ಲಿ ಪ್ರವಚನ ನೀಡಿದ್ದಾರೆ. ಅಲ್ಲದೇ ಅಧ್ಯಾತ್ಮಿಕ ಕ್ಷೇತ್ರವನ್ನು ಹುಲುಸಾಗಿ ಬೆಳೆಸಿದ್ದಾರೆ. ಆ ಮೂಲಕ ಅನೇಕ ಸಾಮಾಜಿಕ ಧಾರ್ಮಿಕ ಶೈಕ್ಷಣಿಕ ಕಾರ್ಯಗಳನ್ನು ಮಾಡಿದ್ದಾರೆ. ಇದರ ಬಗ್ಗೆ ವಿದ್ವಾಂಸರ ಆಧ್ಯಾತ್ಮಿಕ ಹಿನ್ನಲೆವುಳ್ಳ ಮಾರ್ಗದರ್ಶಕರ ಅವಶ್ಯವೆಂದು ತಿಳಿದು ಡಾ. ವ್ಹಿ.ಎಸ್. ಮಾಳಿಯವರ ಆದೇಶದಂತೆ ಆತ್ಮೀಯರೂ, ಅನುಭಾವಿಗಳೂ, ಯಕ್ಷಗಾನ ಮಂಡಳಿಯ ಶ್ರೇಷ್ಠ ಕಲಾವಿದರೂ ಮತ್ತು ಯಕ್ಷಗಾನ ಸಂಶೋಧನಾ ಕೇಂದ್ರದ ನಿರ್ದೇಶಕರು ಆಗಿರುವ ಕಾರವಾರ ಜಿಲ್ಲೆಯ ಕುಮಟಾ ಕಾಲೇಜಿನ ಡಾ. ಜಿ.ಎಲ್. ಹೆಗಡೆ ಯವರನ್ನು ನನ್ನ ಸಂಶೋಧನಾ ಪ್ರಬಂಧಕ್ಕೆ ಮಾರ್ಗದರ್ಶಕರಾಗಿ ಆಯ್ಕೆ ಮಾಡಿಕೊಂಡೆ. ನಿಜಕ್ಕೂ ನನಗವರು ದೊರೆತದ್ದು ಪುಣ್ಯ ವಿಶೇಷವೆಂದು ನಾನು ಭಾವಿಸಿರುವೆ. ತಮ್ಮ ಮನೆಯಲ್ಲಿಯೇ ಆಶ್ರಯ ನೀಡಿ ಪೂಜೆಗೆ ವ್ಯವಸ್ಥೆ ಮಾಡಿಕೊಟ್ಟು ತಮ್ಮ ಕೈಯಿಂದಲೇ ಪ್ರಸಾದ ಸಿದ್ಧಗೊಳಿಸಿ ಎಡೆಮಾಡಿ ಉಣಿಸಿದ ತಾಯಿಯವರು. ಅವರ ಸೇವೆ ಮತ್ತು ಮಾರ್ಗದರ್ಶನ ಸ್ಮರಣೀಯ. 'ಏನ! ಮಲಗಿದಿರಾ, ಪ್ರವಚನಕ್ಹೋಗಿದಿರಾ, ಇಲ್ಲಾ ಓದ್ತಾ ಇದಿರಾ, ಹಾಂ! ಬೇಗ-ಬೇಗ ಕೆಲಸಾ ಮುಗಿಸಿ' ಎಂದು ಪ್ರತಿದಿನ ಎಚ್ಚರಿಸಿ ಪ್ರಯೋಜನಕಾರಿಯಾದ ಸಲಹೆ ಸೂಚನೆಗಳನ್ನು ಬಹು ಮಾರ್ಮಿಕವಾಗಿ ದೂರವಾಣಿ ಮತ್ತು ಇಂಟರನೆಟ್ ಮೂಲಕ ತಿಳಿಸಿ ದೊರೆತ ವಿಷಯ ಸಾಮಗ್ರಿಯನ್ನು ಸಂಯೋಜಿಸಿ, ಅಧ್ಯಾಯಗಳನ್ನು ಕ್ರಮಬದ್ಧವಾಗಿ ಸಿದ್ಧಪಡಿಸಿ ಕಾರ್ಯ ಆರಂಭಿಸಿ ಎಂದು ಮಾರ್ಗದರ್ಶನವಿತ್ತು, ಈ ಸಂಶೋಧನಾ ಪ್ರಬಂಧ ಸಿದ್ಧಗೊಳ್ಳಲು ಸಹಕರಿಸಿದ ಮಾರ್ಗದರ್ಶನ ಗುರುಗಳಾದ ಡಾ. ಜಿ. ಎಲ್. ಹೆಗಡೆಯವರಿಗೆ ನನ್ನ ಅನಂತ ಶರಣು ಶರಣಾರ್ಥಿಗಳು.

ಧಾರವಾಡದ ಡಾ. ಬಿ. ಆರ್. ಚಿಲುಮಿಯವರ ಮೂಲಕ ಹಿರಿಯ ವಿದ್ವಾಂಸರಾದ ಡಾ. ಗುರುಲಿಂಗ ಎಸ್. ಕಾಪಸೆ, ಡಾ. ವೀರಣ್ಣ ರಾಜೂರ, ಡಾ. ಬಸವರಾಜ ಹೂಗಾರ, ಡಾ. ಎಸ್. ಆರ್. ಗುಂಜಾಳ ಅವರನ್ನು ಭೆಟ್ಟಿಯಾದಾಗ ಇದರ ಅಧ್ಯಯನದ ಸಂಪೂರ್ಣ ಸ್ವರೂಪ ಅರ್ಥವಾಯಿತು. ಈ ವಿಷಯಕ್ಕೆ ಪರಿಕರಗಳು ಅಲಭ್ಯ. ಆದರೂ ಕಷ್ಟ ಪಡಬೇಕು ಚನ್ನಾಗಿ ಮಾಡಿ ಸಾಧ್ಯವಾಗುತ್ತದೆ, ಎಂದು ಪ್ರೋತ್ಸಾಹಿಸಿದ ಈ ಹಿರಿಯರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ.

ಹಂಪಿ ವಿಶ್ವವಿದ್ಯಾಲಯದ ಹಿರಿಯ ವಿದ್ವಾಂಸರಾದ ಡಾ. ಎಫ್. ಟಿ. ಹಳ್ಳಿಕೇರಿ, ಡಾ. ಕೆ. ರವೀಂದ್ರನಾಥ, ಡಾ. ಮೃತ್ಯುಂಜಯ ರುಮಾಲೆ ಹೊಸಪೇಟೆ, ಡಾ. ಸಂಗಮೇಶ ಬಿರಾದಾರ, ಶ್ರೀ ಶಿವಯೋಗಿ ಬಿದರಿ, ಪ್ರೊ. ಮಲ್ಲಿಕಾರ್ಜುನ ಹುಲಗಬಾಳಿ, ಡಾ. ಡಿ. ವ್ಹಿ. ಬಾಗಲಕೋಟ, ಶ್ರೀ

ಎಂ. ಬಿ. ಇಂಡಿ ಹಿರಿಯ ಶಿಕ್ಷಕರು, ಡಾ. ಹಲಸಗಿ ಕಾಗವಾಡ, ಮುಂತಾದವರು ಸರಿಯಾಗಿ ಸೂಕ್ತ ಸಲಹೆಗಳನ್ನು ಇತ್ತು ಮತ್ತು ಭರವಸೆಯನ್ನು ತುಂಬಿದ್ದಾರೆ. ಇವರಿಗೂ ಶರಣುಗಳು.

ಪೂಜ್ಯ ಡಾ. ಶ್ರದ್ಧಾನಂದ ಸ್ವಾಮಿಗಳು ಕಾಗವಾಡ, ಅಲ್ಲದೆ ಪ್ರೊ. ಎಂ. ಎಸ್. ಬಾದಾಮಿ ರಬಕವಿ, ಪ್ರೊ. ಎಂ. ಸಿ. ಕಾರಬಾರಿ ಜಮಖಂಡಿ. ಚಿತ್ರದುರ್ಗದ ಶ್ರೀ ವೆಂಕಣ್ಣಾಚಾರ್ಯರು ಮತ್ತು ಪ್ರೊ. ಮಂಜುನಾಥ ಹಾಗೂ ಮಾದನಹಿಪ್ಪರಗಿಯ ಶರಣ ಶಿವಲಿಂಗೇಶ್ವರ ಮಠದ ಕಮೀಟಿ ಬಳಗಕ್ಕೆ ಅನಂತ ವಂದನೆಗಳು.

ಸಕಾಲಕ್ಕೆ ಹಲವು ಮಾಹಿತಿಯನ್ನು ಶ್ರದ್ಧೆಯಿಂದ ಒದಗಿಸಿದ ಧೈರ್ಯ ತುಂಬಿರುವ ಪರಮಪೂಜ್ಯ ಶ್ರೀ ಮಲ್ಲಯ್ಯಾ ಸ್ವಾಮಿಗಳು ಶ್ರೀ ಶಿವಾನಂದಮಠ ಘೋಡಗೇರಿ, ಪೂಜ್ಯ ಷ. ಬ್ರ ಮಹಾಂತಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಹಿರೇಮಠ ನಂದವಾಡಗಿ, ಪೂಜ್ಯ ಮ. ನಿ. ಪ್ರ ಗುರುಮಹಾಂತ ಮಹಾಸ್ವಾಮಿಗಳು ಇಳಕಲ್ ಅಲ್ಲದೇ ನಾಡಿನ ಎಲ್ಲ ಮಠಾಧೀಶರಿಗೆ, ಪುರಾಣ ಪ್ರವಚನ ಕೀರ್ತನಕಾರರಿಗೆ, ಭಕ್ತಿಯಿಂದ ವಂದಿಸುವೆ. ಪೂಜ್ಯ ಹೆತ್ತವರ ವಾತ್ಸಲ್ಯಕ್ಕೆ ಬಸವಜ್ಞಾನ ಗುರುಕುಲ ಆಶ್ರಮದ ಸ್ಫೂರ್ತಿ ಚೈತನ್ಯ ನೀಡಿದ ತಾಯಿಯಂದಿರಿಗೆ ಮತ್ತು ಎಲ್ಲ ಮಕ್ಕಳ ಸಹಕಾರಕ್ಕೆ ಹಾಗೂ ಅಪಾರ ಒಲವು ತೋರಿ ಇಲ್ಲವೆನ್ನದೆ ಎಡೆಬಿಡದೆ ಡಿ.ಟಿ.ಪಿ. ಮಾಡಿಕೊಟ್ಟ ಪ್ರಾಮಾಣಿಕ ಪ್ರಬಂಧಕ ಶ್ರೀ ಗಿರೀಶ ಬಿಳ್ಳೂರ. ಇವರೆಲ್ಲರ ಸೇವೆಗೆ ಅಭಿನಂದನೆಗಳು ಮತ್ತು ಆಕರ್ಷಕವಾಗಿ ಪುಸ್ತಕವನ್ನು ಬೈಂಡ್ ಮಾಡಿದ ಸಾಯಿ ಡಿ.ಟಿ.ಪಿ. ಸೆಂಟರ್ ಬೆಳಗಾವಿ ಇವರೆಲ್ಲರ ಸಹಕಾರವನ್ನು ಸದಾ ಸ್ಮರಿಸುವೆ.

ಪ್ರವಚನ ಸಾಹಿತ್ಯ ಕ್ಷೇತ್ರ ಬಹುದೊಡ್ಡದು. ನಾನು ಸಾಧಕ ಇನ್ನೂ ಅನೇಕ ವಿಷಯಗಳು ನನ್ನ ಅವಗಾಹನೆಗೆ ಬಾರದೇ ಉಳಿದಿವೆ ಮುಂದೆ ಅವು ಪೂರ್ಣಗೊಳ್ಳಬಹುದು. ಉತ್ತರ ಕರ್ನಾಟಕ ೧೯ನೇ ಶತಮಾನದಿಂದೀಚೆಗಿರುವ ಲಿಂಗಾಯತ ಪ್ರವಚನಕಾರರನ್ನು ಮಾತ್ರ ಇಲ್ಲಿ ಗಮನಿಸಿ, ಹೆಚ್ಚಿನ ಆದ್ಯತೆ ಕೊಟ್ಟು ಅಧ್ಯಯನ ನಡೆಸಲಾಗಿದೆ. ಪ್ರವಚನ ಸಾಹಿತ್ಯ ಉಳಿದು ಬೆಳೆದು ಮುಂದುವರೆದರೆ ಈ ನನ್ನ ಶ್ರಮ ಸಾರ್ಥಕ.

ದಿನಾಂಕ :

**ಈಶ್ವರ ಮಂಟೂರ.**

# ಪರಿವಿಡಿ

# ಅಧ್ಯಾಯ– ೧:
## ಪೀಠಿಕೆ

೧.೧. ಉದ್ದೇಶ

೧.೨. ವ್ಯಾಪ್ತಿ ಮತ್ತು ಸ್ವರೂಪ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಅಗತ್ಯ

೧.೫. ಅಧ್ಯಾಯಗಳ ವಿಂಗಡನೆ

# ಅಧ್ಯಾಯ-೧

## ಪೀಠಿಕೆ

### ಪೀಠಿಕೆ

ಸಂಪದ್ಭರಿತವೂ ವೈವಿಧ್ಯಮಯವೂ ಅನುಸ್ಯೂತವೂ ಪ್ರಯೋಗಶೀಲವೂ ಸೋಪಜ್ಞವೂ ವೈಶಿಷ್ಟ್ಯಪೂರ್ಣವೂ ಸ್ವಂತಿಕೆಯಿಂದಲೂ, ಸ್ವಾತಂತ್ರ್ಯದಿಂದಲೂ ಸಮಾಜಮುಖಿ-ಸಿದ್ಧಾಂತಮುಖಿಯೂ ಆದ ಕನ್ನಡ ಸಾಹಿತ್ಯಕ್ಕೆ ಸುದೀರ್ಘವಾದ ಚರಿತ್ರೆಯಿದೆ. ಕಾಲದಿಂದ ಕಾಲಕ್ಕೆ ವಿದ್ಯಮಾನದ ಅವಶ್ಯಕತೆಗಳಿಗೆ ಸ್ಪಂದಿಸಿದ ಕನ್ನಡ ಸಾಹಿತ್ಯವು, ರಾಜಾಶ್ರಯ, ಧರ್ಮಾಶ್ರಯ, ಜನಾಶ್ರಯಗಳನ್ನು ಪಡೆದು ತನ್ನ ನಿರಂತರ ಕ್ರಿಯಾಶೀಲತೆಯನ್ನು ತುಂಬಿಕೊಂಡು ಬೆಳೆದಿದೆ. ತನ್ನ ವಸ್ತು-ಶೈಲಿಗಳ ವೈವಿದ್ಯಮಯ ಆಯ್ಕೆಯಲ್ಲಿ ಪ್ರಯೋಗ ವೈಭವವನ್ನು ಅದು ಮೆರೆದಿದೆ. ಸಾಹಿತ್ಯ ಚರಿತ್ರೆಯಲ್ಲಿ ಒಂದು ನಾಡು ಹೆಮ್ಮೆಪಡಬಹುದಾದ ಎಲ್ಲ ಅಂಶಗಳನ್ನು ಕನ್ನಡ ಭಾಷೆಯು ಹಲವು ಸಾಂಸ್ಕೃತಿಕ ಪ್ರಭಾವಗಳ ಮೂಲಕ ಮುಂಚೂಣಿಯಲ್ಲಿ ನಿಲ್ಲಬಹುದಾದ ಅರ್ಥವಂತಿಕೆಯನ್ನು ಪಡೆದಿದೆ. ದೇಶೀಯ ನೆಲೆಯಲ್ಲಿ ತನ್ನನ್ನು ಪ್ರಯೋಗಗೊಳಿಸಿಕೊಂಡಿರುವ ಕನ್ನಡ ಸಾಹಿತ್ಯವು ವಚನಗಳ ಮೂಲಕ, ನಂತರದ ಘಟ್ಟದಲ್ಲಿ ಕೀರ್ತನೆಗಳ ಮೂಲಕ, ದೇಶೀಯ ಛಂದಿಸ್ಸಿನಲ್ಲಿ ಮಹಾಕಾವ್ಯಗಳ ಮೂಲಕ ನಂತರ ಸೋಪಜ್ಞ ಪ್ರಯೋಗಗಳ ಮೂಲಕ ಕಾಣಿಸಿಕೊಂಡಿದೆ. ಇದು ಕನ್ನಡ ಸಾಹಿತ್ಯದ ಜೀವಂತ ಪ್ರಕ್ರಿಯೆಗೆ ತನ್ನನ್ನು ತೊಡಗಿಸಿಕೊಂಡ ಫಲವಾಗಿದೆ.

ಸಾಹಿತ್ಯದ ಆಶಯಗಳು ಏಕೀಕೃತಗೊಂಡು ಅದನ್ನು ತಿಳಿಸಲು ಬಳಸುವ ಅಭಿವ್ಯಕ್ತಿ ತಂತ್ರಗಳು ವೈವಿಧ್ಯಮಯಗೊಳ್ಳಲು ಬಹುಶಃ ಅದು ಸಾಮಾಜೀಕರಣಗೊಳ್ಳುವ ಯಶಸ್ಸಿನ ಹಿನ್ನೆಲೆಯ ಕಾರಣದಿಂದ. ಒಂದುವರೆ ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿರುವ ಕನ್ನಡ ಭಾಷೆ-ಸಾಹಿತ್ಯ ಹೀಗೆ ಹಲವು ಘಟ್ಟಗಳನ್ನು, ಹಲವು ಹಂತಗಳನ್ನು, ಹಲವು ಪ್ರಯೋಗ-ತಾತ್ವಿಕ ಹಿನ್ನೆಲೆಗಳನ್ನು ಕಾಲಾನುಕಾಲದ ಅವಶ್ಯಕತೆಗೆ ಸ್ಪಂದಿಸುತ್ತ ಸಾಗಿ ಬಂದಿರುವುದರ ಹಿಂದೆ ಇದು ಸಾಮಾಜಿಕವಾಗಿ ತಾದಾತ್ಮ್ಯಗೊಂಡಿರುವುದನ್ನೇ ಹೇಳುತ್ತವೆ. ಸಮಾಜಕ್ಕೆ ಒಂದು ಸಾಹಿತ್ಯ ಕೃತಿ ಸಂವಹನಗೊಳ್ಳುವುದಾಗಲಿ ಅಥವಾ ಒಂದು ಸಾಹಿತ್ಯ ಕೃತಿ ವಿಶಾಲ ವ್ಯಾಪ್ತಿಯ ಆಸಕ್ತ ಸಹೃದಯರಿಗೆ ಮತ್ತು ವಿದ್ವಜ್ಜನರಿಗೆ ಸಂವಹನಗೊಂಡು ಚರ್ಚೆ-ಸಂವಾದಗೊಳ್ಳುವುದಾಗಲಿ

ಆಗಲು ಅದಕ್ಕಿರುವ ಸಾತ್ವಿಕ ಮಹತ್ವವನ್ನು ಹೇಳುತ್ತದೆ. ಈ ದಿಶೆಯಲ್ಲಿ ಪ್ರವಚನ ಸಾಹಿತ್ಯದ ಕೊಡುಗೆ ತೀರ ಮಹತ್ವದ್ದಾಗಿದೆ.

"ಪ್ರವಚನ(ನಾ) ೧. ಮಾತು; ನುಡಿ. ೨. ವಿವರಣೆ; ವ್ಯಾಖ್ಯಾನ. ೩. ಉತ್ತಮವಾದ ಮಾತು. ೪. ಧಾರ್ಮಿಕ ವ್ಯಾಖ್ಯಾನ,-ಉಪದೇಶ".[೧] "ಪ್ರವಚನ (ಸಂ)ನಾ. ಓದಿ ಅರ್ಥ ವಿವರಣ ಮಾಡುವಿಕೆ. ಉತ್ತಮವಾದ ಮಾತುಗಾರಿಕೆ. ಸರಿಯಾದ ನಿರೂಪಣೆಃ ವೇದಾರ್ಥ ಜ್ಞಾನ. ಉತ್ತಮ ಉಪನ್ಯಾಸ".[೨] "ಪ್ರವಚನ: ಉಪದೇಶ, ಬೋಧನೆ, ವ್ಯಾಖ್ಯಾನ, ವಿವರದೊಡನೆ ಪ್ರತಿಪಾದಿಸುವದು ಪ್ರ+ವಚ-(ಪರಿಭಾಷಣೆ) ಪ್ರವಚನೀಯ-ಪ್ರವಚನ ಮಾಡಲ್ಪಡುವ ಪ್ರವಚಸ್-ಚೆನ್ನಾಗಿ ಮಾತನಾಡುವ ವಾಗ್ಮಿ".[೩]

ಧಾರ್ಮಿಕ ಸಂದೇಶಗಳನ್ನು ಶಬ್ದ ಪದಗಳಿಗೆ ಧಕ್ಕೆಬಾರದಂತೆ ಸಮಾಜಕ್ಕೆ ಉಪದೇಶ ಮಾಡುವುದು ಪ್ರವಚನವಾಗುತ್ತದೆ; ವಿಷಯ ವಿವರಣೆ ಇಲ್ಲಿ ಮುಖ್ಯ. ಪ್ರವಚನವು ತತ್ತ್ವಪ್ರಧಾನವಾಗಿರುತ್ತದೆ. ಮಾನವೀಯ ಮೌಲ್ಯಗಳನ್ನು ಬಿಂಬಿಸುವುದು, ಇದರ ಪ್ರಮುಖ ಉದ್ದೇಶ. ಪ್ರವಚನ ಹೇಳುವುದು ಒಂದುಕಲೆ. ಪ್ರವಚನವು ಪರಿಣಾಮಕಾರಿ ಮಾಧ್ಯಮ. (Most effective media) ಒಳ್ಳೆಯ ಮಾತುಗಳು ಅನರ್ಘ್ಯ ರತ್ನಗಳು. ಕಲ್ಲಿನ ವಸ್ತುಗಳು ರತ್ನಗಳಲ್ಲ. ಬಲ್ಲವರ ಬೆಳಕಿನ ಮಾತುಗಳಲ್ಲಿ ಜೀವನ ಮೌಲ್ಯಗಳಿವೆ. ಸುಂದರ ಬದುಕಿಗೆ ಅನುಭಾವಿಗಳ ನುಡಿಗಡಣ ಸಾಕು.

ಭಾಷಣ, ಪುರಾಣ, ಕೀರ್ತನ, ಪ್ರವಚನಗಳು ಧರ್ಮೋಪದೇಶ ಮಾಡುವ ಸಾಧನಗಳಾದರೂ, ಅವುಗಳನ್ನು ಪ್ರತಿಪಾದನೆ ಮಾಡುವ ವಿಧಿ-ವಿಧಾನಗಳಲ್ಲಿ ಸ್ವಲ್ಪ ಅಂತರವನ್ನು ಕಾಣಬಹುದು. ಪುರಾಣ-ಕೀರ್ತನೆಗಳಲ್ಲಿ ತತ್ತ್ವಗೌಣವಾದರೆ ಕಥೆ ಪ್ರಾಮುಖ್ಯವಾಗಿರುತ್ತದೆ. ತರ್ಕಕ್ಕೆ ನಿಲ್ಲದ ಅನೇಕ ಪವಾಡಗಳನ್ನು ಪ್ರತಿಪಾದಿಸಲಾಗುವುದು. ಅದರಲ್ಲಿಯೂ ಕೀರ್ತನದಲ್ಲಿ ಹಾಡಿನ ಮಾಧ್ಯಮದಲ್ಲೇ ವಿಷಯ ನಿರೂಪಿಸುವರು. ಭಾಷಣದಲ್ಲಿ ನೇರವಾಗಿ ವಿಚಾರವನ್ನು ಜನತೆಗೆ ಹೇಳಬೇಕಾಗುತ್ತದೆ. ಇಲ್ಲಿ ಕಥೆಗೆ ಸ್ಥಾನವಿಲ್ಲ. "ಪ್ರವಚನದಲ್ಲಿ ಕಥೆ ಗೌಣವಾಗಿರುವುದಾದರೆ, ತತ್ತ್ವವು ಪ್ರಾಮುಖ್ಯವಾಗಿರುವುದು" ಜನ ಸಾಮಾನ್ಯರಿಗೆ ತತ್ತ್ವ ತಿಳಿಯಪಡಿಸಲು ಅಲ್ಲಲ್ಲಿಗೆ ಕೆಲವು ಮಾರ್ಮಿಕ ದೃಷ್ಟಾಂತಗಳನ್ನು ಬಳಸಿಕೊಳ್ಳಲಾಗುವುದು.

---

೧ " " ಸಂಕ್ಷಿಪ್ತ ಕನ್ನಡ ನಿಘಂಟು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಪುಟ-೮೩೨. ೨೦೧೦

೨ " " ಪಂಡಿತ ಕವಲಿಯವರ ಸಚಿತ್ರ ಕನ್ನಡ-ಕನ್ನಡ ಕಸ್ತೂರೀ ಕೋಶ ಪುಟ-೬೦೧. ೨೦೦೫

೩ " " ಸಂ.ಕ.ಶಕೋ-ತುರೀಯಭಾಗ ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ ಮಹಾರಾಜ ಕಾಲೇಜು ಬೆಂಗಳೂರು-೪. ೧೯೭೮.

"ಪ್ರವಚನ ಹೇಳುವುದು ಒಂದು ಕಲೆಯಾದರೆ ಕೇಳುವುದೂ ಒಂದು ಕಲೆ. ಶಿರವನ್ನು ತೆರೆದಿಟ್ಟುಕೊಂಡು, ಉರವನ್ನು ಅರಳಿಸಿಕೊಂಡು ಪ್ರವಚನ ಕೇಳಿದರೆ ಅನಿರ್ವಚನೀಯ ಅಲೌಕಿಕ ಆನಂದವನ್ನು ಯಾವುದೇ ಮತಸಂಪ್ರದಾಯದ ಬಣ್ಣದ ಕನ್ನಡಕವನ್ನು ಹಾಕಿಕೊಳ್ಳದೆ, ಸತ್ಯಾನ್ವೇಷಣೆಯ ಪರಿಶುದ್ಧವಾದ, ಪಾರಮಾರ್ಥಿಕವಾದ ಆತ್ಮೀಯತೆಯ ಕನ್ನಡಕವನ್ನು ಧರಿಸಿ ಪ್ರವಚನವನ್ನು ನಿರೀಕ್ಷಿಸಿರೆಂದು ನಿವೇದಿಸಿಕೊಳ್ಳುವೆ. ನಮ್ಮೆಲ್ಲರ ಪ್ರಾತಿಭಚಕ್ಷು ಉನ್ಮೀಲನವಾಗಲಿ! ಶಿವಾನುಭವ ಸಂಸ್ಕಾರದಿಂದ ಎಲ್ಲರ ಹೃದಯಗಳಲ್ಲಿ ಸದ್ಭಾವನೆಗಳುದಯಿಸಿ, ನಾವೆಲ್ಲರೂ ಶಿವನ ಮಕ್ಕಳು ಎಂಬ ಆತ್ಮೀಯತೆಯ ಅರಿವು ಕರಿಗೊಳ್ಳಲಿ"![೪] ಎಂಬ ಪ್ರವಚನಗಳಲ್ಲಿ ಮನುಷ್ಯನ ಪ್ರತಿನಿತ್ಯದ ಜೀವನವನ್ನು ಸುಖಮಯವನ್ನಾಗಿ ಮಾಡುವ ಹೇಳಿಕೆಗಳಿವೆ. ಅನುಭಾವಿ ಪ್ರವಚನಕಾರನ ಅಮೃತವಾಣಿಯಲ್ಲಿ ಒಂದು ಕಡೆ ಮನುಷ್ಯನ ಜೀವನವನ್ನು ಸುಂದರಮಯ ಹಾಗೂ ಸುಖಮಯ ಮಾಡುವ ಆತ್ಮೀಯ ಪ್ರೇರಣೆಯೂ ಇದೆ.

## ೧.೧. ಉದ್ದೇಶ

ಬಹುಶಃ ಕನ್ನಡ ಸಾಹಿತ್ಯ ವಿಫುಲವಾಗಿ ಮತ್ತು ವೈವಿಧ್ಯ-ವೈಶಿಷ್ಟ್ಯಪೂರ್ಣವಾಗಿ ಬೆಳೆದು ತನ್ನ ರಾಚನಿಕ ನಿರಂತರತೆ ಕಾಯ್ದುಕೊಂಡು ಬಂದದ್ದನ್ನು ಗಮನಿಸಿದರೆ, ಕಾಲಾನುಕಾಲಕ್ಕೆ ಸೂಕ್ತ ಮತ್ತು ಪರಿಪೂರ್ಣ ಮನಸ್ಸಿನ ವಾಚಕರನ್ನು, ಕೇಳುಗರನ್ನು, ಓದುಗರನ್ನು ಅದು ಪಡೆದುಕೊಂಡಿದೆ ಎಂದೆನಿಸುತ್ತದೆ. ಆದರೆ ಇಲ್ಲಿ ಮುಖ್ಯ ಪ್ರಶ್ನೆ ಮತ್ತು ವಿಚಾರ ಇರುವುದು ಸಾಹಿತ್ಯದಲ್ಲಿ ತಾತ್ವಿಕತೆಯನ್ನು, ನೈತಿಕ ವಿಚಾರವನ್ನು ಕೇಳುಗ ಸಮೂಹಕ್ಕೆ ತಲುಪಿಸುವವರು ಯಾರು?- ಎಂಬುದಕ್ಕೆ ಉತ್ತರವನ್ನು ಹುಡುಕುವುದು ಈ ಅಧ್ಯಯನದ ಉದ್ದೇಶವಾಗಿದೆ.

ಪ್ರಾಚೀನಕಾಲದಲ್ಲಿ ರಾಜಾಶ್ರಯದಲ್ಲಿ ಆಸ್ಥಾನದ ಸಪ್ತಾಂಗಗಳಲ್ಲಿ ಕವಿ, ಗಮಕಿಗಳಿರುತ್ತಿದ್ದರು. ಕವಿ ಸಾಹಿತ್ಯ ರಚಿಸುವನಾದರೆ, ಗಮಕಿ ಆ ಸಾಹಿತ್ಯವನ್ನು ಓದುಗ-ಕೇಳುಗ ವರ್ಗಕ್ಕೆ ತಲುಪಿಸುತ್ತಿದ್ದ. ಆಸ್ಥಾನದಲ್ಲಿ ಸೃಷ್ಟಿಯಾಗುತ್ತಿದ್ದ ಈ ಸಾಹಿತ್ಯದ ರಸಾಸ್ವಾದನೆಯೂ ವಿದ್ವತ್ವಲಯದ ಸೀಮಿತ ಪರಿಧಿಯಲ್ಲಿ ಮಾತ್ರ ಸಂವಹನಗೊಳ್ಳುತ್ತಿತ್ತು. ಆದರೆ ಇದು ಸಾರ್ವಕಾಲಿಕ ಮೌಲ್ಯವೆಂಬಂತೆ ಸಮುದಾಯದ ಮುಂದೆ ಮುಖಾಮುಖಿಗೊಳ್ಳುವಂಥ ಸಾಂಸ್ಕೃತಿಕ ಮಹತ್ವದ ಕ್ರಿಯೆ ನಡೆಯಬೇಕಾದಂಥ ಒಂದು ಪ್ರಮುಖ ಅವಶ್ಯಕತೆ ಇತ್ತು.

---

೪ " " ಅಕ್ಕನ ಪ್ರವಚನಗಳು. ಲೇ. ಸದ್ಗುರು ಸ್ವಾಮಿ ಲಿಂಗಾನಂದರು. ವಿಶ್ವಕಲ್ಯಾಣ ಮಿಷನ್, ಬಸವ ಮಂಟಪ, ಬೆಂಗಳೂರು. ಮ.ಪ್ರ. ೧೯೯೭

ಅರಮನೆಯಲ್ಲಿ ಸೀಮಿತವಾದ ಮತ್ತು ಆಯ್ಕೆಗೊಂಡ ಕೇಳುಗರೊಂದಿಗೆ ಉಳಿದಿರುತ್ತಿದ್ದ ಸಾಹಿತ್ಯ ಗುರುಮನೆಯಲ್ಲಿ ಸ್ವಲ್ಪಮಟ್ಟಿನ ವಿಸ್ತಾರವನ್ನು ಪಡೆದಿತ್ತಾದರೂ ಅದು ಸದಾ ಸಾಹಿತ್ಯ ಮತ್ತು ಸಾಹಿತ್ಯಕೃತಿಯ ಅಂತಿಮ ಸಾರ್ಥಕ್ಯವನ್ನು ಸಾದರಪಡಿಸಲಿಲ್ಲ. ಇಂಥ ಸಂದರ್ಭದಲ್ಲಿ ಗಮಕಿಯ ಕರ್ತವ್ಯವನ್ನು ವಿಸ್ತರಿದಂತೆ ಪ್ರವಚನಕಾರರು ಬಹುದೊಡ್ಡ ಹೊಣೆಗಾರಿಕೆಯನ್ನು ಪೂರೈಸಿದರು. ಮುಖ್ಯವಾಗಿ ಪ್ರವಚನಕಾರನ ಪ್ರವಚನದಲ್ಲಿ ಸ್ಥೂಲವಾದ ಕೆಲವು ಲಕ್ಷಣಗಳಿವೆ.

೧. ಎಲ್ಲಾ ವರ್ಗದ, ಎಲ್ಲಾ ಸಂವೇದನೆಯ ಕೇಳುಗರಿಗೆ ಸಾಹಿತ್ಯ ಕೃತಿಯನ್ನು ಸಾದರ ಪಡಿಸುವುದು.

೨. ಬಹುಸಂಖ್ಯಾತ ಅನಕ್ಷರಸ್ಥ ಸಮಾಜಕ್ಕೆ ವಿದ್ವತ್ಪೂರ್ಣವಾದ ಒಂದು ಮಹತ್ವದ ಸಾಹಿತ್ಯಕೃತಿಯನ್ನು ಸರಳವಾಗಿ ಸಂವಹನಗೊಳಿಸುವುದು.

೩. ಸಾಹಿತ್ಯಕೃತಿಯ ಅಂತಿಮ ಸಾರ್ಥಕ್ಯವನ್ನು ಮಧ್ಯಸ್ಥಿಕೆವಹಿಸಿ ಸಮುದಾಯಕ್ಕೆ ತಲುಪಿಸುವುದು.

೪. ತನ್ನ ವೈಯಕ್ತಿಕ ಪ್ರತಿಭೆ ಮತ್ತು ಸೃಜನಶೀಲ ಸಂವಹನಶಕ್ತಿಯಿಂದ ಸಾಹಿತ್ಯಕೃತಿಗೆ ಮತ್ತಷ್ಟು ವ್ಯಾಪಕ ಮಹತ್ವ ತರುವುದು.

೫. ಪ್ರವಚನದ ಮೂಲಕ ಸ್ವಚ್ಛ-ಸುಂದರ ಮನಸ್ಸುಗಳನ್ನು ಸಿದ್ಧಗೊಳಿಸುವುದು.

೬. ಪ್ರವಚನದ ಮೂಲಕ ಸಮಾಜಕ್ಕೆ ನೈತಿಕಶಿಕ್ಷಣವನ್ನು ಬೋಧಿಸುವುದು.

೭. ಜಾತಿ, ಮತ, ಲಿಂಗ, ಧರ್ಮ ಮೊದಲಾದ ಎಲ್ಲ ಲೌಕಿಕ ಮಾನದಂಡಗಳಿಂದ ಸಮಾಜವನ್ನು ಮುಕ್ತಗೊಳಿಸುವುದು- ಹೀಗೆ ಪ್ರವಚನದಂಥ ಮಧ್ಯಸ್ಥಿಕೆಯ ಸಾಂಸ್ಕೃತಿಕ ಸಂವಹನದ ಶಕ್ತಿಯೊಂದು ಕವಿ ಮತ್ತು ಸಮಾಜದ ನಡುವೆ ಕ್ರಾಂತಿಕಾರಕವಾದ ದೊಡ್ಡ ಯಶಸ್ವಿ ಪ್ರಯತ್ನ ಮಾಡಿದೆ ಎಂಬುದನ್ನು ಸಾದರಪಡಿಸುವದು ಪ್ರಕೃತ ಅಧ್ಯಯನದ ಉದ್ದೇಶವಾಗಿದೆ.

## ೧.೨. ವ್ಯಾಪ್ತಿ ಮತ್ತು ಸ್ವರೂಪ

ಪ್ರವಚನ ಪರಿವರ್ತನದ ಮಾಧ್ಯಮ ಎಂಬುದನ್ನು 20ನೇ ಶತಮಾನದ ಅನೇಕ ಪ್ರವನಕಾರರು ಸ್ವಯಂ ಮಾಡಿ ತೋರಿಸಿದ್ದಾರೆ.

೧. ಬಂಥನಾಳದ ಶ್ರೀ ಸಂಗನಬಸವ ಮಹಾಸ್ವಾಮಿಗಳು ಪ್ರವಚನಗಳ ಮೂಲಕ ಶೈಕ್ಷಣಿಕ ಸಂಸ್ಥೆಗಳನ್ನು ಸಮಾಜವನ್ನು ಬೆಳೆಸಿದರು.

೨. ಚಿತ್ತರಗಿ ಇಲಕಲ್ ಮಠದ ಡಾ. ಮಹಾಂತಪ್ಪಗಳು ಪ್ರವಚನಗಳಿಂದ ವ್ಯಸನಮುಕ್ತ ಸಮಾಜ ನಿರ್ಮಿಸುವಲ್ಲಿ ಯಶಸ್ವಿಯಾದರು.

೩. ಬಿಜಾಪೂರ ಜ್ಞಾನಯೋಗಾಶ್ರಮದ ವೇದಾಂತ ಕೇಸರಿ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಪ್ರವಚನಗಳ ಮೂಲಕ ೧೯೭೨ ರಲ್ಲಿ ಬರಗಾಲದಲ್ಲಿ ಗಂಜೀಕೇಂದ್ರಗಳನ್ನು ತೆರೆದರು. ಅನೇಕ ದೇವಸ್ಥಾನಗಳ ಜೀರ್ಣೋದ್ಧಾರ ಮಾಡಿದರು. ಆಧ್ಯಾತ್ಮಿಕ ಸಂಘಟನೆಗಳನ್ನು ಕಟ್ಟಿದರು. ಗ್ರಾಮೀಣ ಭಾಗದಲ್ಲಿ ಶಿಕ್ಷಣ ಕೇಂದ್ರಗಳನ್ನು ತೆರೆದರು– ಇದಕ್ಕೆ ಅವರ ಪ್ರವಚನಗಳು ನೆರವಿಗೆ ಬಂದವು.

೪. ಇದಲ್ಲದೇ ಅನೇಕ ಪ್ರವಚನಕಾರರು ಗಡಿಭಾಗದಲ್ಲಿ ಕನ್ನಡ ಕಟ್ಟುವ ಕೆಲಸ ಮಾಡಿದರು.

೫. ಕಾಯಕ, ದಾಸೋಹಗಳ ಮಹತ್ವವನ್ನು ಜನತೆಗೆ ಮುಟ್ಟಿಸಿದರು.

ಇವು ಪ್ರವಚನಗಳ ಪರಿಣಾಮದ ಕುರಿತ ಜೀವಂತ ನಿದರ್ಶನಗಳಾಗಿವೆ. ಕಾರಣ ನಮ್ಮ ಅಧ್ಯಯನವನ್ನು ೨೦ನೇ ಶತಮಾನದ ಪ್ರವಚನಕಾರರಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಅದರಲ್ಲೂ ಮುಖ್ಯವಾಗಿ ಉತ್ತರ ಕರ್ನಾಟಕದ ವೀರಶೈವ/ಲಿಂಗಾಯತ ಪ್ರವಚನಕಾರರನ್ನು ಪ್ರಧಾನವಾಗಿ ಗಣಿಸಲಾಗಿದೆ. ಹಾಗೇ ಗಣಿಸಿದವರನ್ನು ಸನ್ಯಾಸಿ ಪ್ರವಚನಕಾರರು, ಅದ್ವೈತ ಪ್ರವಚನಕಾರರು, ಗುರು ವಿರಕ್ತ ಪ್ರವಚನಕಾರರು ಹಾಗೂ ಪ್ರಾಪಂಚಿಕ ಪ್ರವಚನಕಾರರೆಂಬ ಪರಿಭೇದಗಳೊಡನೆ ಈ ಅಧ್ಯಯನವನ್ನು ಮಿತಿಗೊಳಿಸಿದೆ.

ಪ್ರವಚನ ಸಾಹಿತ್ಯದ ಅಧ್ಯಯನವೆಂದರೆ ಒಂದರ್ಥದಲ್ಲಿ ತೋಂಡಿ ಸಾಹಿತ್ಯದ ಅಧ್ಯಯನ. ಬಸವಾದಿ ಶರಣರ ಕಾಲದಿಂದಲೂ ನಡೆದುಕೊಂಡು ಬಂದ ಈ ಪ್ರವಚನ ಪರಂಪರೆ ೨೧ನೇ ಶತಮಾನದವರೆಗೂ ಮುಂದುವರೆದು ಬಂದಿದ್ದು ಅವುಗಳನ್ನು ದಾಖಲಿಸುವ ಯತ್ನ ಅಲ್ಪ ಪ್ರಮಾಣದಲ್ಲಿ ನಡೆದಿದೆ. ಈ ಕುರಿತು ಕೆಲವು ಪುಸ್ತಕಗಳು ನಮಗೆ ಲಭ್ಯ ಇವೆ. ಈ ಅಧ್ಯಯನಕ್ಕೆ ಅಂತಹ ಪುಸ್ತಕಗಳನ್ನು ಬಳಸಿಕೊಳ್ಳಲಾಗಿದೆ. ಅಲ್ಲದೇ ಸ್ವತಃ ಸಾವಿರಾರು ಪ್ರವಚನಗಳನ್ನು ನೀಡಿದ ಸ್ವಂತ ಅನುಭವಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

## ೧.೩. ಅಧ್ಯಯನದ ವಿಧಾನ

೧. ಚರ್ಚಾ ವಿಧಾನ :– ಅನೇಕ ಪ್ರವಚನಕಾರರೊಡನೆ ಚರ್ಚಿಸಿ ಈ ಅಧ್ಯಯನಕ್ಕೆ ಮಾಹಿತಿ ಸಂಗ್ರಹಿಸಲಾಗಿದೆ.

೨. ಶ್ರವಣ ವಿಧಾನ :– ಪ್ರಮುಖ ಪ್ರವಚನಕಾರರ ಪ್ರವಚನಗಳನ್ನು ಆಲಿಸಿ ವಿಷಯ ಸಿದ್ಧಪಡಿಸಲಾಗಿದೆ.

೩. ದೃಕ್ ಶ್ರವಣೋಪಕರಣ ಬಳಕೆ ವಿಧಾನ:– ಇವುಗಳಿಂದ ವಿಷಯಗಳನ್ನು ಸಂಗ್ರಹಿಸಲಾಗಿದೆ.

೪. ಕ್ಷೇತ್ರಕಾರ್ಯ :– ಪ್ರಬಂಧಕ್ಕೆ ಸಂಬಂಧ ಪಟ್ಟಂತೆ ಮಹಾಸ್ವಾಮಿಗಳ, ಸಾಹಿತಿಗಳ, ಪ್ರವಚನಕಾರರ ಸ್ಥಳಗಳಿಗೆ ಭೆಟ್ಟಿಕೊಟ್ಟು ವಿಷಯ ಸಂಗ್ರಹಿಸಲಾಗಿದೆ. ಈ ಅಧ್ಯಯನಕ್ಕಾಗಿ ಉತ್ತರ ಕರ್ನಾಟಕದ ೧೦ ಜನ ಪ್ರವಚನಕಾರರನ್ನು ಸಹೃದಯರನ್ನು ಸಂದರ್ಶಿಸಲಾಗಿದೆ. ಅವರು ಮುಖತಃ ಹೇಳಿದ ಕೆಲವು ಅಂಶಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಅನೇಕ ಪ್ರವಚನಗಳನ್ನು ಸ್ವತಃ ಧ್ವನಿ ಮುದ್ರಣ ಮಾಡಿಕೊಳ್ಳಲಾಗಿದೆ. ಮತ್ತೆ ಕೆಲವನ್ನು ಸಿಡಿಗಳ ಮೂಲಕ ಕೇಳಿ ವಿವೇಚಿಸಲಾಗಿದೆ. ಪ್ರವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ನೇರ ದಾಖಲೆಗಳು– ಪುಸ್ತಕರೂಪದಲ್ಲಿ ಬಂದಿಲ್ಲ. ಪ್ರವಚನವನ್ನು ಕೇಳಿ ತಮ್ಮ ತಮ್ಮ ಭಾಷೆಯಲ್ಲಿ ತಮ್ಮ ರೀತಿಯಲ್ಲಿ ಬರೆದ ಕೆಲವು ಪುಸ್ತಕಗಳು ಬಂದಿವೆ. ಅಧ್ಯಯನಕ್ಕೆ ಅವುಗಳನ್ನು ಬಳಸಿಕೊಳ್ಳಲಾಗಿದೆಯಾದರೂ ಅವುಗಳೊಡನೆ ಅಧಿಕೃತ ಅಧ್ಯಯನದ ಆಕರಗಳಾಗಿ ಬಳಸಲು ಸಾಧ್ಯವಾಗುವದಿಲ್ಲ. ಅದಕ್ಕಾಗಿ ಅನೇಕ ಪ್ರವಚನಗಳನ್ನು ಯಥಾವತ್ತಾಗಿ ಬರವಣಿಗೆಗೆ ಇಳಿಸುವ ಯತ್ನಮಾಡಲಾಗಿದೆ.

ಪ್ರವಚನದ ವ್ಯಾಪ್ತಿ ದೇಶ ವಿದೇಶಗಳನ್ನು ವ್ಯಾಪಿಸಿರುವದರಿಂದ ಉತ್ತರ ಕರ್ನಾಟಕದ, ಬೀದರ, ಗುಲಬರ್ಗಾ, ರಾಯಚೂರು, ಬಾಗಲಕೋಟೆ, ವಿಜಾಪೂರ, ಬೆಳಗಾವಿ, ಹುಬ್ಬಳ್ಳಿ, ಧಾರವಾಡಗಳಲ್ಲಿ ಪ್ರಚಲಿತವಿರುವ, ಕೆಲವು ಪ್ರವಚನಕಾರರನ್ನು ಮಾತ್ರ ಗಣೀಸಲಾಗಿದೆ. ಅದರಲ್ಲೂ ವೀರಶೈವ, ಲಿಂಗಾಯತ ಧರ್ಮದ ಪ್ರವಚನಕಾರರನ್ನು ವಿಶೇಷವಾಗಿ ಗಣನೆಗೆ ತಗೆದುಕೊಳ್ಳಲಾಗಿದೆ. ಹಾಗೆ ನೋಡಿದರೆ ಈ ಅಧ್ಯಯನ ಈ ದಿಶೆಯಲ್ಲಿ ನಡೆದ ಒಂದು ಪ್ರಾಥಮಿಕ ಪ್ರಯತ್ನ.

## ೧.೪ ಅಧ್ಯಯನದ ಅಗತ್ಯ:

೧. ಕನ್ನಡ ಭಾಷೆಗೆ ಪ್ರವಚನಕಾರರ ಕೊಡುಗೆ ಅನನ್ಯವಾದುದು.

೨. ಕನ್ನಡ ಸಮಾಜಕ್ಕೆ ಪ್ರವಚನಗಳಿಂದ ನೈತಿಕ ಆಧ್ಯಾತ್ಮಿಕ ಮತ್ತು ಶೈಕ್ಷಣಿಕ

೩. ಬದುಕು  ದೊರೆತಿದೆ.

೪. ಪ್ರವಚನಗಳೇ ಕಾರಣವಾಗಿ ನೂರಾರು ಶಿಕ್ಷಣ ಸಂಸ್ಥೆಗಳು ಉದಯವಾಗಿ

೫. ಬೆಳೆದು ನಿಂತಿವೆ.

೬. ಪ್ರವಚನ ಸಾಹಿತ್ಯದ ಪ್ರಭಾವದಿಂದ ದೀನ ದಲಿತರು, ಅನಾಥರು, ಲಕ್ಷಾಂತರ

೭. ವಿದ್ಯಾರ್ಥಿಗಳು ದಾಸೋಹದ ಲಾಭ ಪಡೆಯುಂತಾಗಿದೆ.

೮. ಪ್ರವಚನ ಸಾಹಿತ್ಯದ ಪರಿಣಾಮದಿಂದ ಅನೇಕ ಸಮಾಜಗಳು ವ್ಯಸನಮುಕ್ತವಾಗಿವೆ.

೯. ಪ್ರವಚನಗಳ ಕಾರಣದಿಂದ ಸಮಾಜದಲ್ಲಿ ಸಾಮರಸ್ಯ ನೆಲೆಸಲು ಸಹಕಾರವಾಗಿದೆ.

೧೦. ಪ್ರವಚನಗಳ ಪರಿಣಾಮದ ಮೂಲಕ ಅನೇಕ ಅನಾಥ ರಕ್ಷಕ (ಆಶ್ರಮ) ಸಂಸ್ಥೆಗಳು ಹುಟ್ಟಿಕೊಂಡಿವೆ.

೧೧. ಪ್ರವಚನದ ಪರಿಣಾಮವಾಗಿ ಆರೋಗ್ಯಕರವಾದ ಸಾಮಾಜಿಕ ಸಂಘಟನೆಗಳು ಮೈತಾಳಿವೆ.

೧೨. ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಮತ್ತು ದೇಶೀಯ ಚಿಂತನೆಗಳ ನೆಲೆಯಲ್ಲಿ ಪ್ರವಚನಗಳ ಪರಿಣಾಮ ಮಹತ್ವದ್ದಾಗಿದೆ.

೧೩. ದೇಶಭಕ್ತಿ, ಪರಿಸರ. ಆರೋಗ್ಯ, ಮನೋಲ್ಲಾಸಗಳಿಗೆ ಸಂಬಂಧಿಸಿದ ಅನೇಕ ಚಟುವಟಿಕೆಗಳಿಗೆ ಪ್ರವಚನ ಕಾರಣವಾಗಿದೆ.

ಇಂತಹ ಒಂದು ಸಶಕ್ತವಾದ, ಜೀವಂತವಾದ, ಸಾಮಾಜಿಕ ಪರಿವರ್ತನೆಯ ಮೂಲಚೈತನ್ಯವಾದ ಪ್ರವಚನ ಸಾಹಿತ್ಯವನ್ನು ಅಧ್ಯಯನ  ಮಾಡುವುದು ಮತ್ತೆ ಅದನ್ನು ಮುಂದಿನವರಿಗೆ ತಲುಪಿಸುವುದು ಈ ಕಾಲದ ಅನಿವಾರ್ಯ ಅಗತ್ಯವಾಗಿದೆ.

ಸಾಹಿತ್ಯ ಪ್ರವಚನ ಸಾಹಿತ್ಯ ಉಳಿದ ಯಾವ ಸಾಹಿತ್ಯಕ್ಕೂ ಕಡಿಮೆ ಎನಿಸದು. ಏಕಕಾಲಕ್ಕೆ ಸಾವಿರಾರು ಹೃದಯಗಳಿಗೆ ಸ್ಪರ್ಶವಾಗುವ ಸಾಹಿತ್ಯ. ಯಾವ ಮಾತುಗಳನ್ನು ಕೇಳಿದಾಗ ಮನ ಅರಳುತ್ತದೆಯೋ ಅದು ಪ್ರವಚನ ಸಾಹಿತ್ಯ. ಪ್ರವಚನ ವೇದಿಕೆಯಲ್ಲಿ ಮೂಡಿಬಂದ ಅನುಭಾವವನ್ನು ಗ್ರಂಥಗಳ ರೂಪದಲ್ಲಿ ಪ್ರಕಟಗೊಳಿಸಿ ಆ ಅನುಭಾವಿಗಳ ಸಾಧನೆ, ಸಿದ್ಧಿ,

ಧಾರ್ಮಿಕ, ಆಧ್ಯಾತ್ಮಕ ವಿಚಾರಧಾರೆಗಳನ್ನು ಒಂದೆಡೆ ಸೇರಿಸಿ ಅಧ್ಯಯನ ಮಾಡುವುದೇ ಇದಾಗಿದೆ. ಮತ ಮಾನ್ಯಗಳಲ್ಲಿ ಆಡಿದ ಮಾತುಗಳು, ಟಿಪ್ಪಣೆ ಮಾಡಿ ನುಡಿದ ನುಡಿಗಳು ಹಾಗೇ ಗಾಳಿಮಾತುಗಳಾಗಿ ತೂರಿ ಹೋಗಿವೆ. ಇಂಥ ಅಮೂಲ್ಯ ಸಾಹಿತ್ಯ ಕನ್ನಡಕ್ಕೆ ಅಪೂರ್ವ ಕೊಡುಗೆ ನೀಡಿದೆ. ಅದನ್ನು ದಾಖಲಿಸುವದು ಇಂದಿನ ಅಗತ್ಯತೆ. "ಸಮಾಜದಲ್ಲಿ ಇಂದು ಧಾರ್ಮಿಕ ಭಾವನೆ ಕ್ಷಯವಾಗುತ್ತ ನಾಸ್ತಿಕ ಭಾವನೆ ಹೆಚ್ಚಾಗುತ್ತಲಿದೆ. ಜಾತೀಯತೆಯ ಪಿಡುಗು ಪಸರಿಸುತ್ತಲಿದೆ. ಮಾನವನ ಎಲ್ಲ ಜೀವನ ರಂಗಗಳಲ್ಲಿ ಅನ್ಯಾಯ, ಅಸತ್ಯ, ಅನೀತಿ, ಅಸಮತೆಗಳು ತಾಂಡವವಾಡುತ್ತಲಿವೆ. ಸಮಾಜದ ಸ್ವಾಸ್ಥ್ಯ ದಿನ ದಿನಕ್ಕೂ ಹದಗೆಡುತ್ತಲಿದೆ. ಸಮಾಜಕ್ಕಂಟಿಕೊಂಡಿರುವ ಈ ಜಾಡಕ್ಕೆ ಶರಣರ ವಚನಾಮೃತವೇ ದಿವ್ಯ ಔಷಧಿಯೆಂದು ಹೇಳಬಹುದು. ಅಶಾಂತಿಯ ಕಗ್ಗತ್ತಲೆಯಲ್ಲಿ ತಡವರಿಸುತ್ತಿರುವ ಇಂದಿನ ಸ್ಪುಟ್ನಿಕ್ ಯುಗದಲ್ಲಿ ಶರಣರ ಸುಜ್ಞಾನದ ಶಾಂತಿ ಜ್ಯೋತಿಯನ್ನು ಹಿಡಿದು ಮಾನವನಿಗೆ ನೆಮ್ಮದಿಯನ್ನು ನೀಡುವುದು ಅನಿವಾರ್ಯವಾಗಿದೆ".೫

ಇಂದಿನ ಈ ವೈಜ್ಞಾನಿಕ, ಆಧುನಿಕ ಸುಖಭೋಗಗಳ ಸನ್ನಿವೇಶದಲ್ಲಿ ಧರ್ಮ, ಆಧ್ಯಾತ್ಮಗಳ ಕುರಿತ ಪ್ರವಚನಗಳ ಅವಶ್ಯಕತೆ ಇದೆ. ಬಾಳಲಿಕ್ಕೆ ಬೇಕಾದ ನೈತಿಕ ಶಾಸನಗಳು, ಸಂಹಿತೆಗಳು ಸಿಕ್ಕುವುದೇ ಮಹಾತ್ಮರ ನುಡಿಗಳಲ್ಲಿ. ಓರ್ವ ತತ್ತ್ವಜ್ಞಾನಿ ಹೇಳುತ್ತಾನೆ, "Poets are the unacknowledged legislators of the world" ಎಂದು. ನೈತಿಕ ರಂಗದಲ್ಲಿ ಕಾಯಿದೆಗಳನ್ನು ಸೃಷ್ಟಿಮಾಡುವವರು, ಜನಮನದಲ್ಲಿ ಮೌಲ್ಯಗಳನ್ನು ರೂಪಿಸುವವರು, ಮಹಾತ್ಮರೆಂಬುದನ್ನು ತಿಳಿಯಬೇಕು. ಅವರ ಮಾತುಗಳು, ಸಂದೇಶಗಳು, Foot prints on the sands of time" ಕಾಲನ ಗರ್ಭದಲ್ಲಿ ಬಿಟ್ಟು ಹೋದ ಹೆಜ್ಜೆಯ ಗುರುತುಗಳು".೬

---

೫ " " ಅಕ್ಕನ ಪ್ರವಚನ. ಲೇ. ಸದ್ಗುರು ಸ್ವಾಮಿ ಲಿಂಗಾನಂದರು. ವಿಶ್ವಕಲ್ಯಾಣ ಮಿಷನ್, ಬಸವ ಮಂಟಪ, ಬೆಂಗಳೂರು. ಪುಟ-ಮುನ್ನುಡಿ-೪. ೧೯೯೭

೬ " " ವಿಶ್ವಧರ್ಮ ಪ್ರವಚನ ಭಾಗ-೧ ಲೇ. ಜಗದ್ಗುರು ಮಾತೆಮಹಾದೇವಿ. ಪ್ರ ವಿಶ್ವಕಲ್ಯಾಣ ಬಸವ ಮಂಟಪ, ಬೆಂಗಳೂರು. ಪುಟ-೪&೫. ೧೯೮೭

ಪ್ರವಚನಕಾರ ಪ್ರವಚನದ ಮೂಲಕ ಒಂದು ಸಾಹಿತ್ಯ ಕೃತಿಯನ್ನು ಜನಸಮೂಹಕ್ಕೆ ತಲುಪಿಸುತ್ತಾನೆ. ಇದು ಶ್ರಮದಾಯಕ ಮತ್ತು ಶ್ರೇಷ್ಠ ಸಾಹಿತ್ಯಕ ಕಾರ್ಯ. ಇದು ಕವಿಗೆ, ಸಾಹಿತ್ಯ ಕೃತಿಗೆ, ಸಮಸ್ತ ಸಮಾಜಕ್ಕೆ ಸಲ್ಲಿಸುವ ಮಹತ್ವದ ಗೌರವವಾಗಿದೆ, ಇದೇ ಸಂದರ್ಭದಲ್ಲಿ ಒಂದು ಅಂಶವನ್ನು ಗಮನಿಸಬೇಕಾಗುತ್ತದೆ. ಪ್ರವಚನಕಾರ-ಸಾಹಿತ್ಯ ಕೃತಿಯನ್ನು ಕವಿಯ ಆಶಯವನ್ನು ಸಾರ್ವಜನಿಕವಾಗಿ ಸಾದರಪಡಿಸಬೇಕಾಗುತ್ತದೆ. ಹೀಗೆ ಮಾಡುವಾಗ ಕವಿಯ ವಿದ್ವತ್ತನ್ನು ಯಥಾವತ್ತಾಗಿ ಪ್ರಸ್ತುತ ಪಡಿಸುವುದರಿಂದ ಸಂವಹನದ ತೊಂದರೆಯನ್ನು ಗಮನಿಸಬೇಕಾಗುತ್ತದೆ. ಕವಿಯ ವಿದ್ವತ್ತನ್ನು ಸಂಕೀರ್ಣಗೊಳಿಸುವುದರ ಜೊತಜೊತೆಗೆ ಅದನ್ನು ಸರಳಗೊಳಿಸಬೇಕಾಗುತ್ತದೆ. ಕವಿ ಸೂಕ್ಷ್ಮವಾಗಿ, ಬೆಡಗಿನ ಮಾದರಿಯಾಗಿ, ನಿಗೂಢವಾಗಿ ಹೇಳಿರುವ ವಿಚಾರವನ್ನು ತನ್ನದೆ ಆದ ರೂಪಕ, ನಿದರ್ಶನ, ದೃಷ್ಠಾಂತಗಳ ಮೂಲಕ ಪ್ರವಚನಕಾರ ಸಂವಹನಿಸಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ ಕವಿಯ ನಂತರದ ಸ್ಥಾನವನ್ನು ಮತ್ತು ಗಮಕಿಗಿಂತಲೂ ಹೆಚ್ಚಿನ ಸ್ಥಾನವನ್ನು ಪ್ರವಚನಕಾರ ನಿರ್ವಹಿಸಬೇಕಾಗುತ್ತದೆ.

ಪ್ರವಚನಕಾರ- ಒಂದು ಸಾಹಿತ್ಯ ಕೃತಿಯನ್ನು ಅಥವಾ ಒಂದು ವಿಚಾರಧಾರೆಯನ್ನು ಸಂವಹನಗೊಳಿಸಲು ತನ್ನದೆ ಆದ ಪೂರ್ವಸಿದ್ಧತೆಯನ್ನು ಮಾಡಬೇಕಾಗುತ್ತದೆ. ಅದಕ್ಕೆ ಪೂರಕ ಸಾಹಿತ್ಯವನ್ನು ಸಂಗ್ರಹಿಸಬೇಕಾಗುತ್ತದೆ. ಈ ಸಾಹಿತ್ಯವನ್ನು 'ಪ್ರವಚನ ಸಾಹಿತ್ಯ' ಎಂದು ಕರೆಯಬೇಕಾಗುತ್ತದೆ. ಸಿದ್ಧ ಸಾಹಿತ್ಯದಿಂದ ಸಂಪಾದಿಸಿದ ಪೂರಕ ಮಾಹಿತಿ, ಸ್ವಾನುಭವದಿಂದ ಕೂಡಿರುತ್ತದೆ. ಇದು ಸಂವಹನದ ಒಂದು ಮಹತ್ವದ ಪ್ರಕಾರ. ಕವಿ, ಕೃತಿ ಮತ್ತು ಸಮಾಜಗಳನ್ನು ಇದು ಬೆಸೆಯುವ ಸಾಹಿತ್ಯವಾಗಿದೆ.

ಪ್ರವಚನಕಾರ-ಕನ್ನಡ ಸಾಹಿತ್ಯವನ್ನು ಜನಸಾಮಾನ್ಯರಿಗೆ ತಲುಪಿಸುವ ಬಹುದೊಡ್ಡ ಸಾಂಸ್ಕೃತಿಕ ಹೊಣೆಗಾರಿಕೆಯನ್ನು ಪೂರೈಸುತ್ತಾನೆ. ಕನ್ನಡ ಸಂದರ್ಭದಲ್ಲಿ ಹನ್ನೆರಡನೇ ಶತಮಾನದ ವಿಚಾರಧಾರೆಯನ್ನು, ಶರಣರ ವಚನಗಳನ್ನು ಪ್ರವಚನಕಾರ ಜನಮಾನಸಕ್ಕೆ ತಲುಪಿಸಿದ್ದು ದೊಡ್ಡಕಾರ್ಯವಾಗಿದೆ.

ಪ್ರವಚನಕಾರ ನೀಡಿದ ಅಲೌಕಿಕ-ಲೌಕಿಕ ವಿಚಾರಗಳನ್ನು ಸಮಾಲೋಚಿಸುವ ಹಾಗೂ ನಿರ್ಧರಿಸುವತ್ತ ಜನತೆಯನ್ನು ಬದ್ಧಗೊಳಿಸುತ್ತಾನೆ-ಹೀಗೆ ಇಂಥ ಅಪರೂಪದ ಮತ್ತು ಉಪಯುಕ್ತವಾದ ಕಾರ್ಯನಿರ್ವಹಿಸುವ ಪ್ರವಚನಕಾರನ ಪ್ರವಚನ ಸಾಹಿತ್ಯ ಕನ್ನಡದಲ್ಲಿ ಶೈಕ್ಷಣಿಕ ಪರಿಧಿಗೆ ಅಳವಡಿಸಿ ಒಂದು ಶಿಸ್ತಿನ ಅಧ್ಯಯನಕ್ಕೆ ತೊಡಗಿಸುವ ಅಗತ್ಯ ಮುಖ್ಯವೆನಿಸಿತ್ತು.

ಹೀಗಾಗಿ 'ಕನ್ನಡದಲ್ಲಿ ಪ್ರವಚನ ಸಾಹಿತ್ಯ' ಎಂಬ ವಿಷಯವನ್ನು ಇಲ್ಲಿ ವಿಶೇಷ ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

"ಕಡಿಮೆ ಮಾತಿನಲ್ಲಿ ಹೆಚ್ಚು ಅರ್ಥವನ್ನು ತುಂಬುವುದು ಕುಶಲಕಲೆ. ಇಂತಹ ಮಾತು ವಾಕ್ಯ ಮಾಣಿಕ್ಯ ಕೋಶದಲ್ಲಿ ಸೇರುತ್ತದೆ. ವಾಕ್‌ಶ್ರೀ, ಶ್ರವಣ ಸುಂದರಿ. ಮಾತಿಗೆ ಅಕ್ಷರ ಶಕ್ತಿ, ಪದಶಕ್ತಿ, ಧ್ವನಿಶಕ್ತಿಗಳೆಂಬ ತ್ರಿಪುಟಗಳಿರುತ್ತವೆ. ವಕ್ತೃತ್ವವೆಂಬುದು ದೈವದತ್ತವಾದ ಸಂಪತ್ತು. ಅನುಭವದ ಮೂಸೆಯಿಂದ ಪುಟಗೊಂಡು ಮಾತು ಸಾರ್ವತ್ರಿಕವಾಗಿ ಬೆಲೆಗೊಳ್ಳುತ್ತದೆ. ವಾಕಸಿದ್ಧಿ ದೈವೀಕೃಪೆ, ವಾಕ್‌ಶುದ್ಧಿ ಮಾನುಷೀ ಸಾಧನೆ. ಇವೆರಡು ಒಂದೆಡೆ ಸೇರಿರುವುದು ಜೀವನ ಪುಷ್ಪಕ್ಕೆ ಬಣ್ಣ–ಪರಿಮಳ ಸೇರಿಕೊಂಡಂತೆ. ಯಾವ ಮಾತು ಹೃದಯದಿಂದ ಬರುತ್ತದೆಯೋ ಆ ಮಾತು ಇನ್ನೊಂದು ಹೃದಯ ಮುಟ್ಟುತ್ತದೆ. ಮತ್ತು ತಟ್ಟುತ್ತದೆ; ಮಾಡಬೇಕಾದ ಪರಿಣಾಮವನ್ನು ಮಾಡುತ್ತದೆ".[೭]

## ೧.೫. ಅಧ್ಯಾಯಗಳ ವಿಂಗಡಣೆ

**ಪೀಠಿಕೆ** : ಪ್ರವಚನವು ಶಾಸ್ತ್ರವೂ ಹೌದು ಮತ್ತು ಸಾಹಿತ್ಯವೂ ಹೌದು. ಜನಸಾಮಾನ್ಯರಿಗೆ ಆಧ್ಯಾತ್ಮದ, ಶಾಸ್ತ್ರ ಸಮ್ಮತವಾದ ವಿಚಾರಗಳನ್ನು ಕಲಾತ್ಮಕವಾಗಿ ತಲುಪಿಸುವ ದೃಷ್ಟಿಯಲ್ಲಿ ಪ್ರವಚನ ಎಂಬ ಮಾಧ್ಯಮ ಹೇಗೆ ಪ್ರಾಮುಖ್ಯತೆಯನ್ನು ಪಡೆಯಿತು ಎಂಬ ಚಿಂತನೆ ಇಲ್ಲಿದೆ.

**೧.೧ ಅಧ್ಯಯನದ ಉದ್ದೇಶ** : ಒಬ್ಬ ಪ್ರವಚನಕಾರ ಹೊಸದನ್ನು ಸೃಷ್ಟಿಸುತ್ತಾನೆ. ವಿಶ್ವದ ಅನೇಕ ಸಂಗತಿಗಳನ್ನು ಹೃದಯದ ಕಣ್ಣಿನಿಂದ ನೋಡುತ್ತಾನೆ. ಅನುಭಾವವನ್ನು ತನ್ನ ಸ್ವಾನುಭಾವದ ನುಡಿಗಳ ರೂಪದಲ್ಲಿ ಹೊರಗೆಡಹುತ್ತಾನೆ. ಸಹೃದಯರಿಗೆ ಅದನ್ನು ಮುಟ್ಟಿಸುವುದು ಅವನ ಉದ್ದೇಶವಾಗಿದೆ. ಈ ಅವಧಿಯಲ್ಲಿ ಹೊಸದೊಂದು ಸಾಹಿತ್ಯ ಕಣ್ದೆರೆಯುತ್ತದೆ. ಅದುವೇ ಪ್ರವಚನ ಸಾಹಿತ್ಯ.

---

೭ " " ಅಮೃತ ಸಿಂಚನ. ಲೇ. ಅಂದಾತನಯ ಮುದ್ರಾಡಿ. ಪ್ರ ಗಾಯತ್ರಿ ಶಿವರಾಂ, ಚಿತ್ರದುರ್ಗ. ಪುಟ–೧೧೬೧.೩. ೨೦೧೧

**೧.೨ ವ್ಯಾಪ್ತಿ ಮತ್ತು ಸ್ವರೂಪ** : ಪ್ರವಚನ ಸಾಹಿತ್ಯವು ಕೇವಲ ಸಾಹಿತ್ಯಿಕ ಅಧ್ಯಯನವಾಗದೇ ಅದೊಂದು ಸಾಮಾಜಿಕ ಅಧ್ಯಯನವಾಗಿದೆ. ಉತ್ತರ ಕರ್ನಾಟಕದಲ್ಲಿ ಪ್ರವಚನಕ್ಕೆ ಒಂದು ಪರಂಪರೆಯಿದೆ. ತಾತ್ವಿಕ ನಿಖರತೆ. ತರ್ಕಬದ್ಧವಿಚಾರ, ಅನುಭಾವದ ಸ್ಪಷ್ಟ ಚಿಂತನೆ, ಸುಂದರ ಶಾರೀರ, ಉಪಮೆ, ದೃಷ್ಟಾಂತ, ರಾಜಹಾಸ್ಯ, ಜೋಡಿಸಿ, ಆಂಗಿಕ ಭಾಷೆಯನ್ನು ಬಳಸಿ ಮನದುಂಬಿ ಮಾತನಾಡಿದಾಗ ಒಂದು ಮನೋಹರ ಸಾಹಿತ್ಯ ರೂಪಗೋಳ್ಳುತ್ತದೆ. ಪ್ರಭುತ್ವವುಳ್ಳ ವಾಗ್ಝರಿ ಸುರಿದು ಹರಿದಾಗ ರಚನೆಗೊಂಡ ಸಾಹಿತ್ಯವೇ ಪ್ರವಚನ ಸಾಹಿತ್ಯ.

**೧.೩ ಅಧ್ಯಯನದ ವಿಧಾನ** : ಪ್ರವಚನ ಸಾಹಿತ್ಯದ ಹರವು ವಿಶಾಲವಾಗಿದ್ದು ಹಾಗೆಯೇ ಪ್ರವಚನಕಾರರ ಸಂಖ್ಯೆಯೂ ಅಪಾರವಾಗಿದೆ. ಉತ್ತರ ಕರ್ನಾಟಕದ ೨೦ನೇ ಶತಮಾನದ ವೀರಶೈವ ಲಿಂಗಾಯತ ಪ್ರವಚನಕಾರರಿಗೆ ಮಾತ್ರ ಸೀಮಿತಗೊಳಿಸಿ, ಪ್ರವಚನಕಾರರಿಂದ, ಚಿಂತಕರಿಂದ, ಶರಣ ಸಾಹಿತಿಗಳಿಂದ, ಧ್ವನಿ ಮುದ್ರಿತ ಕ್ಯಾಸೆಟ್. ಸಿಡಿಗಳ ಮೂಲಕ ಮೊಬೈಲ್ ಸಂಭಾಷಣೆಗಳ ಮೂಲಕ ಸಂಬಧಿಸಿದ ಗ್ರಂಥಗಳ ಮೂಲಕ ಕನ್ನಡದಲ್ಲಿ ಪ್ರವಚನ ಸಾಹಿತ್ಯದ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**೧.೪ ಅಧ್ಯಯನದ ಅಗತ್ಯ** : ಮಾನವೀಯ ಮೌಲ್ಯಗಳ ಕಿಲುಬುಗಟ್ಟಿ ಅಶಾಂತಿ, ಹಿಂಸೆ ತಾಂಡವಾಡುತ್ತಿರುವ ಇಂದಿನ ದುರ್ಭರ ದಿನಮಾನಗಳಲ್ಲಿ ಈ ಸಾಹಿತ್ಯ

ಅಧ್ಯಯನದ ಅವಶ್ಯಕತೆಯಿದೆ. ಹುಟ್ಟಿನಿಂದ ಸಾಯುವ ಕೊನೆಯ ಕ್ಷಣದವರೆಗೂ ಪ್ರವಚನ ನುಡಿಗಳ ಅವಶ್ಯಕತೆಯಿದೆ. ಕಾರಣ ಸ್ವಾಸ್ಥ್ಯ ಸಮಾಜ ರಚನೆಗೆ ಪ್ರವಚನ ತುಂಬಾ ಫಲಕಾರಿ ಎಂಬುದನ್ನು ವಿವರಿಸಲಾಗಿದೆ.

**೧.೫ ಕ್ಷೇತ್ರ ಕಾರ್ಯ** : ಪ್ರವಚನವು ಚಲನಶೀಲ ಗುಣಲಕ್ಷಣಗಳನ್ನು ಹೊಂದಿದ ಸಾಹಿತ್ಯವಾಗಿದೆ. ಒಬ್ಬ ವ್ಯಕ್ತಿ, ಒಂದು ವೇದಿಕೆ, ಒಂದು ಪ್ರದೇಶದಲ್ಲಿ ನೀಡಿದ ಪ್ರವಚನ ಅಧ್ಯಯನಕ್ಕೆ ಸಾಕಾಗದು. ವಿವಿಧ ಪ್ರದೇಶದ ಬೇರೆಬೇರೆ ರೀತಿಯ ಪ್ರವಚನ ಸಾಹಿತ್ಯ ಸಾರವನ್ನು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ನಾನೂ ಒಬ್ಬ ಪ್ರವಚನಕಾರನಾಗಿದ್ದು, ಬೇರೆ ಬೇರೆ ಪ್ರವಚನಕಾರರ ಪರಿಚಯವಿರಲಾಗಿ ಆಯಾ ಕ್ಷೇತ್ರಗಳಿಗೆ ಭೇಟಿ ನೀಡಿ, ಈ ಕುರಿತು ಮಾಹಿತಿ ಸಂಗ್ರಹಿಸಲಾಗಿದೆ.

**ಅಧ್ಯಾಯ-೨. ಪುರಾಣ, ವಚನ, ನಿರ್ವಚನ, ಕೀರ್ತನ, ಉಪನ್ಯಾಸ, ಪ್ರವಚನ ಹಾಗೂ ವಿಶ್ಲೇಷಣೆ.**

**೨.೧ ಪುರಾಣ** : ಪುರಾಣದಲ್ಲಿ ಅನೇಕ ಪವಾಡಗಳನ್ನು ಇಲ್ಲಿ ಪ್ರತಿಪಾದಿಸಲಾಗುವುದು. ಪುಣ್ಯ ಪುರುಷರ ಬದುಕು ಇಲ್ಲಿ ಪವಾಡ ಸದೃಶವಾಗಿರುತ್ತದೆ. ರಮ್ಯ ಮತ್ತು ರೋಮಾಂಚನಗೊಳ್ಳುವ ರೀತಿಯಲ್ಲಿ ರಾಗಬದ್ಧವಾದ ವಿವರಣೆಯಿಂದ ಕೂಡಿರುತ್ತದೆ. ಪುರಾಣಗಳು ಜನಜಾಗೃತಿಮಾಡುವ, ನಂಬಿಕೆ ಶ್ರದ್ಧೆಯನ್ನು ಬಲಗೊಳಿಸುವ ಸಾಧನಗಳಾಗಿವೆ.

**೨.೨ ವಚನ** : ವಚನಗಳು ಶಿವಶರಣ ಚಿಂತನೆಗಳು. ಇವುಗಳಲ್ಲಿ ಅನುಭವವಿದೆ. ಶಾಂತಿಯಿದೆ, ಬಲವಿದೆ, ಬದುಕಿನ ಕಲೆಯಿದೆ. ಮತ್ತು ವಿಶ್ವ ಭಾತೃತ್ವದ ಭಾವವಿದೆ. ತ್ರಿಕರ್ಣಗಳು ಶುದ್ಧಗೊಂಡು ರಚಿತವಾದವುಗಳೇ ವಚನಗಳಾಗಿವೆ. ಸತ್ಯ ಶುದ್ಧ ಆಚಾರ ಮತ್ತು ವಿಚಾರದ ಅನುಷ್ಠಾನವೇ ವಚನ.

**೨.೩ ನಿರ್ವಚನ** : ಇದೊಂದು ದಿವ್ಯದರ್ಶನ. ಸಾಕಾರ ವಸ್ತುವಿನ ನಿರಾಕಾರ ಸ್ವರೂಪ. ವಚನ ಪುಷ್ಪವಾದರೆ ಅದರ ಪರಿಮಳ ನಿರ್ವಚನ. ಮಾತು ಮನಕ್ಕೆ ನೆಲುಕುವ ವಚನ, ಮಾತು ಮನಂಗಳಿಂದಾಚೆ ನಿರ್ವಚನ. ವಚನಗಳ ಒಳಾರ್ಥ, ವ್ಯಾಖ್ಯಾನ, ಟೀಕೆ, ಟಿಪ್ಪಣೆ, ತಾತ್ಪರ್ಯ ಮುಂತಾದ ವಿವರಣೆಗಳೇ ನಿರ್ವಚನಗಳಾಗಿವೆ,

**೨.೪ ಕೀರ್ತನ** : ಹಾಡಿನ ಮಾಧ್ಯಮದಲ್ಲಿ ವಿಷಯ ನಿರೂಪಿಸುವ ಕಲೆಯೇ ಕೀರ್ತನ. ಐತಿಹಾಸಿಕ ಮತ್ತು ಧಾರ್ಮಿಕ ಅಂಶಗಳೇ ಇಲ್ಲಿ ಪ್ರಧಾನ. ಕೀರ್ತನೆಗಳು ದಾಸರ ಪದಗಳಿಂದ ಪ್ರಸಿದ್ಧಿಗೆ ಬಂದವು. ನವವಿಧ ಭಕ್ತಿಗೆ ಕೀರ್ತನೆಯೇ ಒಂದಾಗಿದೆ. ದಾಸಸಾಹಿತ್ಯಕ್ಕೆ ನಾಂದಿಯಾಯಿತು.

**೨.೫ ಉಪನ್ಯಾಸ** : ಒಬ್ಬ ವ್ಯಕ್ತಿಯು ತನ್ನ ವಿಶಿಷ್ಠ ಸಾಧನೆಯ ಕ್ಷೇತ್ರದಲ್ಲಿ ತಾನು ಸಂಪಾದಿಸಿದ ಜ್ಞಾನವನ್ನು, ತಾನು ಕಂಡುಂಡು ಅನುಭವಿಸಿದ ಸ್ವಾರಸ್ಯವನ್ನು ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ನೇಮಾನುಪಾತದಲ್ಲಿ ಸಂವಹನಗಳನ್ನು ನೀಡಿ ಅರ್ಥಪೂರ್ಣವಾಗಿ ವಿಷಯ ವಿವರಣೆ ಮಾಡುತ್ತಾನೆ ಇದನ್ನೇ ಉಪನ್ಯಾಸವೆನ್ನುವರು.

**೨.೬ ಪ್ರವಚನ ಹಾಗೂ ವಿಶ್ಲೇಷಣೆ** : ಯಾರ ಮಾತುಗಳನ್ನು ಕೇಳಿದಾಗ, ಮನಸ್ಸು ಅರಳುತ್ತದೆಯೋ ಆ ಮಾತುಗಳೆಲ್ಲ ಪ್ರವಚನದ ಮಾತುಗಳು. ಪ್ರಜ್ಞಾಸ್ಥಿತಿಗೆ ನಮ್ಮನ್ನು ಸಾಗಿಸುವ ಸಾಧನವೇ ಪ್ರವಚನವಾಗಿದೆ. ಮನವನ್ನು ಕೆರಳಿಸುವುದು ಮತ್ತು ಉದ್ರೇಕಗೊಳಿಸುವುದು ಪ್ರವಚನವಾಗಲಾರದು. ನಿಶ್ಯಬ್ದ ಬ್ರಹ್ಮನನ್ನು ಶಬ್ದರೂಪಗಳಲ್ಲಿ ಸೆರೆಹಿಡಿಯುವುದು ಪ್ರವಚನವಾಗಿದೆ. ಅನಿರ್ವಚನಿಯ ಅಲೌಕಿಕ ಆನಂದವನ್ನುಂಟುಮಾಡುವ ವಿಧಾನವೇ ಪ್ರವಚನ.

## ಅಧ್ಯಾಯ-೩. ಪ್ರವಚನದ ಸಾಹಿತ್ಯ ಸ್ವರೂಪ

ಪ್ರವಚನಕಾರರು ವಿಷಯಗಳನ್ನು ವರ್ಗೀಕರಿಸಿ ಪ್ರಕೃಷ್ಠ ಅನುಸಂಧಾನಗಳ ಮೂಲಕ ಮಾತನಾಡುತ್ತಾರೆ. ಅವರ ಪ್ರತಿಭಾಶಕ್ತಿ ಶಬ್ದಸಮೂಹಗಳ ಮೂಲಕ ರಚನೆಗೊಳ್ಳುತ್ತದೆ. ಗ್ರಂಥಗಳ ರೂಪದಲ್ಲಿ, ಧ್ವನಿಮುದ್ರಣ ಸಾಧನಗಳಲ್ಲಿ, ಸಾಹಿತ್ಯ ಹೊರ ಬರುತ್ತದೆ. ಪ್ರವಚನಗಳು ನಾಡ ಜನರ ಭಾಷೆಯಲ್ಲಿವೆ. ಅವುಗಳಲ್ಲಿಯ ವಿಚಾರಧಾರೆ ಉನ್ನತ ಮಟ್ಟದ್ದು ಪ್ರವಚನದ ಮಾತುಗಳು ಮನಕ್ಕೆ ತಟ್ಟಿ ಸಮಾಜ ಪರಿವರ್ತನೆಗೆ ದಾರಿ ದೀಪವಾಗಿವೆ. ಪ್ರವಚನಗಳು ಸಮಾಜದಲ್ಲಿ ಭಕ್ತಿ, ಜ್ಞಾನ, ವೈರಾಗ್ಯದ ತತ್ವಗಳನ್ನು ತಿಳಿಸಿ ಜನಜಾಗೃತಿ ಮಾಡಿವೆ.

## ಅಧ್ಯಾಯ-೪. ಪ್ರವಚನ ಪರಂಪರೆ

ಪ್ರವಚನ ಪರಂಪರೆಗೆ ಇತಿಹಾಸವಿದೆ. ಪ್ರವಚನ ಒಂದು ಬಗೆಯ ಸಮನ್ವಯ ಪದ್ಧತಿಯನ್ನು ಸನುಸರಿಸುತ್ತದೆ. ಪ್ರವಚನ ಪರಂಪರೆ ಬುದ್ಧ, ಮಹಾವೀರ, ಬಸವರಾದಿಯಾಗಿ ಸಾಗಿ ಬಂದಿದೆ. ಗುರು, ವಿರಕ್ತ, ವೇದಾಂತ ಇಂಚಗೇರಿ ಮತ್ತು ಗೃಹಸ್ಥ ಪ್ರವಚನಕಾರರ ಪರಂಪರೆ ಮುಂದುವರೆದಿದೆ. ಇಲ್ಲಿ ವೈದಿಕ ಮತ್ತು ಅವೈದಿಕ ಪರಂಪರೆಯನ್ನು ಕಾಣುತ್ತೇವೆ.

ವೀರಶೈವಾಮೃತ ಮಹಾಪುರಾಣವನ್ನು ಹಲಗೆ ದೇವರು ಅಂತರಂಗದ ಶಿಷ್ಯನಾದ ಕೆಂಚವೀರಣ್ಣನಿಗೆ ಜ್ಯೋತಿಯಮ್ಮನ ಆಲಯದಲ್ಲಿ ಸಂಬೋಧಿಸಿ ಹೇಳಿದ್ದು ಪ್ರವಚನವಾಗಿದೆ.

## ಅಧ್ಯಾಯ-೫. ಪ್ರಮುಖ ಪ್ರವಚನಕಾರರು

ಮುಧೋಳ ಮೃತ್ಯುಂಜಯ ಮಹಾಸ್ವಾಮಿಗಳು, ಜೋಳದರಾಶಿ ದೊಡ್ಡನಗೌಡರು, ಪೂಜ್ಯ ಲಿಂಗಾನಂದರು, ಧಾರವಾಡ ಕುಮಾರಸ್ವಾಮಿಗಳು, ವೇದಾಂತ ಕೇಸರಿ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಬಿಜಾಪೂರ, ಹರ್ಡೇಕರ್ ಮಂಜಪ್ಪನವರು, ಹುಬ್ಬಳ್ಳಿಯ ಶಂಕರಾನಂದರು, ಬೀದರ ಅಕ್ಕ ಅನ್ನಪೂರ್ಣಾ ತಾಯಿಯವರು, ನೀಲಮ್ಮ ಅಸುಂಡಿಯವರು ಮುಂತಾದ ಪ್ರವಚನಕಾರರ ವಿವರಗಳನ್ನು ಸಂಗ್ರಹಿಸಲಾಗಿದೆ.

## ಅಧ್ಯಾಯ-೬. ಪ್ರವಚನದ ಮೌಲ್ಯ ವಿವೇಚನೆ.

ಪ್ರವಚನ ಸಾಹಿತ್ಯ ನೇರ ಜನಮನ ತಲುಪುವುದು. ಒಂದು ಕಡೆ ಕುಳಿತು ಒಬ್ಬ ಪುಸ್ತಕ ಓದಬಹುದು. ಆದರೆ ಒಂದೇ ಸ್ಥಳದಲ್ಲಿ ಒಂದೇ ಸಮಯದಲ್ಲಿ ಸಾವಿರಾರು ಜನರಿಗೆ ಪ್ರವಚನಕಾರ ಅಮೂಲ್ಯ ಸಾಹಿತ್ಯವನ್ನು ತಲುಪಿಸಬಹುದು. ಕೇಳುಗನ ಹೃದಯಕ್ಕೆ ಪ್ರವಚನ ಮೂಲಕ ನೇರ ವಿಷಯ ವಸ್ತುಗಳನ್ನು ತಲುಪಿಸಬಹುದು. ಮನವರಳುವ ಮಾತುಗಳೆಂದರೆ ಪ್ರವಚನದ ಮಾತುಗಳು. ಅವುಗಳನ್ನು ಸಾಹಿತ್ಯಕ, ಸಾಂಸ್ಕೃತಿಕ ಹಾಗೂ ವೈಚಾರಿಕ ಹಿನ್ನಲೆಯಲ್ಲಿ ವಿವೇಚಿಸಲಾಗುವುದು.

## ಅಧ್ಯಾಯ-೭. ಪ್ರವಚನ ಸಾಹಿತ್ಯ ಹಾಗೂ ಶ್ರೀ ಸಿದ್ಧೇಶ್ವರ ಸ್ವಾಮಿಗಳು.

ಶ್ರೀ ಸಿದ್ಧೇಶ್ವರ ಶ್ರೀಗಳು ಈ ನಾಡುಕಂಡ ಅಪರೂಪದ ಪ್ರವಚನಕಾರರು. ಮಧುರಭಾವದ ಶ್ರೀಗಳು ಕನ್ನಡ, ಸಂಸ್ಕೃತ, ಇಂಗ್ಲೀಷ್, ಮರಾಠಿ ಮತ್ತು ಹಿಂದಿ ಭಾಷೆಗಳಲ್ಲಿ ನಿಷ್ಣಾತರು. ಉಪನಿಷತ್‌ದಂತಹ ಕಠಿಣ ವಿಷಯಗಳ ಮೇಲೆ ಮಾತನಾಡಿ ಅಲ್ಲಮಪ್ರಭುದೇವರ ವಚನ-ನಿರ್ವಚನದಂತಹ ಹಲವಾರು ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ಕನ್ನಡ ಸಾರಸ್ವತಲೋಕಕ್ಕೆ ಕೊಡುಗೆ ನೀಡಿದ್ದಾರೆ. ಅವರ ಸಾಹಿತ್ಯ ಕುರಿತು ಅಧ್ಯಯನ ಮಾಡುವುದು ಇದರ ಉದ್ದೇಶ.

## ಅಧ್ಯಾಯ-೮. ಉಪಸಂಹಾರ.

ಹಿಂದೆಂದಿಗಿಂತಲ್ಲೂ ಇಂದು ಪ್ರವಚನಗಳ ಅವಶ್ಯಕತೆ ಇದೆ. ಮಾನವೀಯ ಸಂಬಂಧಗಳು ಕದಡಿವೆ, ಸ್ನೇಹ, ಪ್ರೀತಿ ಸಹಕಾರ, ಬಿರುಕು ಬಿಟ್ಟಿವೆ. ಹರಿದುದನ್ನು ಹೋಲಿದು ಬಿರುಕುಗಳನ್ನು ಮೆತ್ತುವ ಕಾರ್ಯ ಪ್ರವಚನದ ನುಡಿಗಡಣಗಳಿಂದ ಸಾಧ್ಯ. ವೈಚಾರಿಕ ಪ್ರಜ್ಞೆ ವೈಜ್ಞಾನಿಕ ನೆಲೆಗಟ್ಟಿನ ಮೇಲೆ ಬದುಕು ನಿರ್ಮಾಣಗೊಳ್ಳಬೇಕಿದೆ. ಜ್ಞಾನವಾಹಿನಿ ಎನಿಸಿದ ಪ್ರವಚನದಲ್ಲಿ ಪಾಲ್ಗೊಂಡು ಒಂದಿಷ್ಟು ಒಳ್ಳೆಯ ಮಾತುಗಳನ್ನು ಕೇಳಿದರೆ ತಲೆಯೊಳಗಿನ ಅಜ್ಞಾನ, ಮೂಢನಂಬಿಕೆ, ಕಂದಾಚಾರಗಳು ಕಡಿಮೆಯಾಗುತ್ತವೆ. ಬದುಕಿಗಾಗಿ ನಾವು ವ್ಯಾಪಾರ ವ್ಯವಸಾಯ, ವೈದ್ಯ ವಕೀಲ ಅಧ್ಯಾಪಕ ಏನೇಯಾಗಿರಲಿ ಪ್ರವಚನ ಕೇಳುವುದನ್ನು ಮರೆಯಬಾರದು. ಆ ಮಾತುಗಳಲ್ಲಿ ಅಮೃತವಿದೆ. ನಮ್ಮೆಲ್ಲರ ಬಾಳಿಗೆ ಬೆಳಕನ್ನು ತರುವ ಅಂಶಗಳಿವೆ.

"ಪೃಥಿವ್ಯಾಂ ತ್ರೀಣಿ ರತ್ನಾನಿ ಜಲಮನ್ನಂ ಸುಭಾಷಿತಂ ।

ಮೂಢೈಃ ಪಾಷಾಣಖಂಡೇಷು ರತ್ನಸಂಜ್ಞಾ ವಿಧೀಯತೇ"[೧] ॥

(ಸುಭಾಷಿತರತ್ನ ಭಂಡಾಗಾರ)

ಭೂಮಿಯಲ್ಲಿ ಸರ್ವಶ್ರೇಷ್ಠವಾದ ವಸ್ತುಗಳು ಕೇವಲ ಮೂರೇ ಇವೆ. ಜಲ, ಆಹಾರ ಮತ್ತು ಒಳ್ಳೆಯ ಮಾತು. ಇವುಗಳಿಂದಲೇ ಸಂತೋಷ. ಆದರೆ ಮೂರ್ಖರು ಕಲ್ಲಿನ ಚೂರುಗಳನ್ನು ರತ್ನ ಅಥವಾ ಶ್ರೇಷ್ಠ ವಸ್ತು ಎಂದು ಕರೆಯುವುದು ವಿಷಾದಕರ. ಕಹಿಯಾದ ಸಂಸಾರದಲ್ಲಿ ಸಿಹಿಯನ್ನು ನೀಡುವ ಹಣ್ಣು ಒಳ್ಳೆಯ ಮಾತುಗಳು ಅವು ಸಜ್ಜನರ ಸಂಘದಿಂದ ಲಭ್ಯ. ಪ್ರವಚನ ರಸಾನುಭವದಿಂದ ಉಂಟಾದ ರೋಮಾಂಚನ ಮಾತುಗಳು ಮನಸ್ಸನ್ನು ಸೂರ್ಯಗೊಳ್ಳುತ್ತವೆ. ಭಾಷೆ ಮೃದು ಮತ್ತು ಮಧುರವಾಗಿದ್ದರೆ ಅಮೃತದ ಸವಿಯ ಸವಿದಂತೆ.

ಪ್ರವಚನ-ಈ ವಿಶೇಷ ಶಬ್ದವನ್ನು ನಾನಾ ನೆಲೆಯಲ್ಲಿ ಅರ್ಥೈಸಿಕೊಂಡು ವಿವಿಧ ಆಯಾಮಗಳನ್ನು ಆಧಾರವಾಗಿಸಿಕೊಳ್ಳಲಾಗಿದೆ. ಕೀರ್ತನೆ, ಉಪನ್ಯಾಸ ಮೊದಲಾದ ಸಂವಹನ ಪ್ರಕಾರ ಕಾರ್ಯಗಳು ಪ್ರವಚನದೊಂದಿಗೆ ತುಲನೆ ಮಾಡಿದಾಗ ಬರುವ ಮಹತ್ವವನ್ನು ಸಹಾ ಈ ಮೂಲಕ ಗುರುತಿಸಲಾಗಿದೆ.

ಕನ್ನಡದಲ್ಲಿ ಪ್ರವಚನ, ಪ್ರವಚನಕಾರರು, ಪ್ರವಚನ ಸಾಹಿತ್ಯ–ಈ ಮೂರು ಮುಖ್ಯ ಅಂಶಗಳನ್ನು ಈ ಮೂಲಕ ಅರ್ಥೈಸಿಕೊಳ್ಳುವ ಸಾಧ್ಯತೆಗಳು ಈ ವಿಶೇಷ ಅಧ್ಯಯನ (ಪಿ.ಎಚ್.ಡಿ) ದ ಮೂಲಕ ಅಂತಿಮವಾಗಿ ತಿಳಿಯುತ್ತದೆ. ಇಂದಿನ ಒತ್ತಡದ ಸಂದರ್ಭದಲ್ಲಿ ಜಾಗತೀಕರಣದ ದಿನಮಾನದಲ್ಲಿ ಕೇಳುವವರು ವಿರಳವಾಗಿದ್ದು, ಪ್ರವಚನಗಳಿಗೆ ಮಹತ್ವವಿಲ್ಲದಂತಾಗಿದೆ. ಆದರೆ ಮಾನಸಿಕ ಸ್ವಾಸ್ಥಕ್ಕೆ, ಆರೋಗ್ಯಪೂರ್ಣ ಸಮಾಜಕ್ಕೆ, ಸಂಸ್ಕಾರವಂತ ಮನುಕುಲಕ್ಕೆ ಪ್ರವಚನಗಳು ಇಂದು ಅವಶ್ಯಬೇಕಾಗಿವೆ.

---

೦ " " ಸುಭಾಷಿತ ಮಂಜರೀ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ಪುಟ–೩. ೨೦೦೦

# ಅಧ್ಯಾಯ-೨

## ವಚನ-ನಿರ್ವಚನ-ಕೀರ್ತನೆ-ಪುರಾಣ-ಪ್ರವಚನ:ವಿಶ್ಲೇಷಣೆ

### ೨.೧: ವಚನ-ಪ್ರವಚನ

"ವಚನಾನುಭವ ವಾಗ್ರರಚನೆಯಲ್ಲ ಮನವೆ,

ವಚನಾನುಭವ ವಾಗ್ರಚನೆಯಲ್ಲ.

'ವಚನಾನುಭವೋ ವರ್ಚೋ ನ' ಎಂಬುದು ಶ್ರುತಿಸಿದ್ಧ ನೋಡಾ,

ಕಪಿಲಸಿದ್ಧಮಲ್ಲಿಕಾರ್ಜುನಾ".೯

ವಚನವೆಂದರೆ ವಾಗ್ರರಚನೆಯಲ್ಲ ಮನವೆ. ಮಾತು, ನುಡಿ, ಭಾಷೆ, ಆಣೆ, ಪ್ರಮಾಣ, ವಾಗ್ದಾನ ಮತ್ತು ಪ್ರತಿಜ್ಞೆ ನೆಲೆಗಳಲ್ಲಿ ಮತ್ತು ವಿವಿಧ ಅರ್ಥಗಳಲ್ಲಿ ಬಳಕೆಯಾಗುತ್ತಿದ್ದ ಶಬ್ದವಾಗಿದೆ. 'ವಚನ' ಎಂಬ ಪದವು ಶಿವಶರಣರಿಂದ ಅನುಪಮ ಸಾಹಿತ್ಯ ಪ್ರಕಾರವಾಯಿತು. ಇದು ಸಾಹಿತ್ಯ ಪ್ರಕಾರವಷ್ಟೇ ಆಗಿರದೇ ಸಾಮಾಜಿಕ ಸಿದ್ಧಾಂತವನ್ನೂ ಅಭಿವ್ಯಕ್ತಿಗೆ ಅಳವಡಿಸುವ ಮಹತ್ವಪೂರ್ಣವಾದ ಚಿಂತನೆಯ ಪ್ರಕಾರವೂ ಆಗಿ ಗಮನ ಸೆಳೆಯುತ್ತದೆ. ಗದ್ಯವೂ ಅಲ್ಲದ, ಪದ್ಯವೂ ಅಲ್ಲದ ಎರಡೂ ಆಗಿ ಕಾಣುವ ಈ ಪ್ರಕಾರವು ಸಮಾಜದ ಎಲ್ಲಸ್ತರದ ಜನರಿಂದಲೂ ರೂಪುಗೊಂಡದ್ದು ಕಂಡು ಬರುತ್ತದೆ. ಕಾವ್ಯಮಿಮಾಂಸೆಯ ಧ್ವನಿಶಾಸ್ತ್ರದಲ್ಲಿ 'ವಚನ' ಒಂದು ಹೊಸ ಪರಿವೇಷವನ್ನು ರೂಪಿಸಿದ್ದು ಶರಣರ ಸೃಜನಾತ್ಮಕವಾದ ದಾರ್ಶನಿಕ ಪ್ರಾಯೋಗಿಕತೆಯನ್ನು ಹೇಳುತ್ತದೆ. ಪ್ರಸ್ತುತವಾಗಿ ಮುಖ್ಯವೆನಿಸುವುದು-ವಿಚಾರಗಳು ಸಂವಹನಗೊಳ್ಳವಾಗ ಅವುಗಳಿಗೆ ಇರುವ ಸರಳತೆ ಮತ್ತು ಸ್ಪಷ್ಟತೆಯನ್ನು ಎತ್ತಿ ಹೇಳುತ್ತವೆ. ಹೀಗೆ ಹೇಳುವಾಗ 'ವಚನ'ಗಳು ಜನಮನವನ್ನು ಮುಟ್ಟಬೇಕೆಂಬ ಹಂಬಲ ಇದೆ. ವಿನಃ ಸಾಹಿತ್ಯ ರಚನೆ ಎಂಬ ಮುಖ್ಯ ಉದ್ದೇಶ ಶರಣರದ್ದಾಗಿರಲಿಲ್ಲ.

"ಎಲ್ಲ ವರ್ಣಗಳ ಜನಸಮುದಾಯ ಬಸವಣ್ಣನವರ ನೇತೃತ್ವದಲ್ಲಿ ಕೈಕೊಂಡಿದ್ದ ವ್ಯಕ್ತಿಕಲ್ಯಾಣ ಮತ್ತು ಸಮಾಜಕಲ್ಯಾಣ ಚಳುವಳಿಯ ಸೃಷ್ಟಿಯೆನಿಸಿದ ಈ ವಚನಗಳು, ಜಾಗತಿಕ ಸಾಹಿತ್ಯದ ಮಹತ್ವಪೂರ್ಣ ಭಾಗವೆನಿಸಿವೆ. 'ವಚನ' ಶಬ್ದಕ್ಕೆ ಇಲ್ಲಿ ಗದ್ಯ ಸಾಹಿತ್ಯಪ್ರಕಾರವೆಂದು ಅರ್ಥವಲ್ಲ; ಪ್ರತಿಜ್ಞೆ, ಆತ್ಮಸಾಕ್ಷಿಯ ಮಾತು ಎಂದು ಅರ್ಥ. ನಡೆ ಹೇಗೇ ಇರಲಿ, ನುಡಿ ಮಾತ್ರ ಕಲಾತ್ಮಕವಾಗಿದ್ದುದು 'ರಚನೆ'ಯಾದರೆ, ನಡೆದಂತೆ ನುಡಿದ ಆತ್ಮಸಾಕ್ಷಿಯ ವಾಣಿ

'ವಚನ'ವೆನಿಸುತ್ತದೆ. ವಚನಗಳು ಆಚಾರ್ಯರ ಸಾಹಿತ್ಯವಲ್ಲ, ಅನುಭಾವಿಗಳ ಸಾಹಿತ್ಯ. ಮೂಲತಃ ವಚನನಿಧಿ, ಜನರಿಗಾಗಿ ಹುಟ್ಟಿ, ಜನರ ಮಧ್ಯದಲ್ಲಿ ಬಾಳಿದ ಸಾಹಿತ್ಯವಾಗಿದೆ".೧೦

ವಚನರಚನೆಯ ಚಿಂತನೆಯಲ್ಲಿ ಏಕತಾನತೆಗೆ ಅವಕಾಶವಿಲ್ಲ. ಚರ್ಚಿಸಲ್ಪಟ್ಟು ನಂತರ ಅನುಭವದಿಂದ ಮೂಡಿಬರುವ ಸೃಜನಶೀಲ ಕ್ರಿಯೆಯಾಗಿದೆ.

ಈ ವಚನ ಸಾಹಿತ್ಯ ಪ್ರಕಾರವು ಅನ್ಯ ಭಾಷೆಗಳ ಯಾವುದೇ ಮಾದರಿಯನ್ನು ಯಾವುದೇ ದೃಷ್ಟಿಯಿಂದಲೂ ಅನುಕರಿಸದೇ ಅಥವಾ ಆದರ್ಶವಾಗಿಟ್ಟುಕೊಳ್ಳದೆ ತಮ್ಮ ಅನುಭವದಿಂದಲೇ ಮೂಡಿಬಂದ ಅನುಭವದ ಅನುಭಾವ ಸಾಹಿತ್ಯ ಇದಾಗಿದೆ. ಈ ದೃಷ್ಟಿಯಿಂದಲೂ ಇದೊಂದು ದೇಶೀಸಾಹಿತ್ಯ.

ವಚನವೆಂದರೆ ಸತ್ಯಶುದ್ಧ ವಿಚಾರ ಮತ್ತು ವಿಚಾರದ ಅನುಷ್ಠಾನ ಇವುಗಳಿಂದ ಕೂಡಿದ ಮಾತು ಎಂದು ಅರ್ಥವಾಗುತ್ತದೆ. ವಚನ ಎಂಬ ಶಬ್ಧವನ್ನು ಹೀಗೆ ಅರ್ಥೈಸಬಹುದು.

'ವ' ಎಂದರೆ ವಚಿಸುವುದು-ಅಂದರೆ ಬೇರೆಯವರೊಂದಿಗೆ ಮಾತನಾಡುವಾಗ ಅವರಿಗೆ ಸಂತೋಷವಾಗುವ ರೀತಿಯಲ್ಲಿ ಮಾತನಾಡಬೇಕು. ಮತ್ತು ಉಪಯೋಗವಾಗುವ ರೀತಿಯಲ್ಲಿ ನಮ್ಮ ಮಾತಿರಬೇಕು. ಅವರ ಮನಸ್ಸನ್ನು ನೋಯಿಸುವಂತಿರಬಾರದು.

'ಚ' ಎಂದರೆ ಚಲಿಸುವುದು- ಅಂದರೆ ನಾವು ಸರಿಯಾದ ರೀತಿಯಲ್ಲಿ ಬದುಕನ್ನು ನಡೆಸುವುದು ಇನ್ನೊಬ್ಬರಿಗೆ ತೊಂದರೆ ಕೊಡದೆ ಜೀವನ ಸಾಗಿಸಿ ಸುಂದರವಾದ ಬದುಕನ್ನು ಸಾರ್ಥಕಪಡಿಸಿಕೊಳ್ಳುವುದು. ಉತ್ತಮವಾದ ಚಾರಿತ್ರ್ಯವನ್ನು ಜೀವನದುದ್ದಕ್ಕೂ ಕಾಪಾಡಿಕೊಂಡು ಜೀವನ ಸಾಗಿಸುವುದು.

'ನ' ಎಂದರೆ ನಯನ+ಇಸು ಅಂದರೆ ದೃಷ್ಟಿಸುವುದು (ಕಣ್ಣುಗಳಿಂದ ದರ್ಶನವನ್ನು ಪಡೆಯುವುದು) ಸುಂದರವಾದುದ್ದನ್ನು ನೋಡಲಿಕ್ಕೆ ಎಂಬುದನ್ನು ತಿಳಿದು ಪರಸ್ತ್ರೀ ಮತ್ತು ಪರವಸ್ತುವನ್ನು ಕೆಟ್ಟದೃಷ್ಟಿಯಿಂದ ನೋಡದೆ ಒಳ್ಳೆಯ ದೃಷ್ಟಿಕೋನದಿಂದ ನೋಡುವುದು. ನಮ್ಮ ನಡೆ-ನುಡಿ-ನೋಟ ಪರಿಶುದ್ಧವಾಗಿರಬೇಕು. ಅದು ಉತ್ತಮ ಶರಣನ ಲಕ್ಷಣವಾಗಿರುತ್ತದೆ.

---

೯ " " ಸಿದ್ಧರಾಮೇಶ್ವರ ವಚನ. ಸಂಪುಟ-ಭಾಗ-೪. ಪುಟ ಸಂಖ್ಯೆ-೪೫೬ ವಚನ ಸಂಖ್ಯೆ-೧೫೯೬

೧೦ " " ಸಮಗ್ರ ವಚನಸಂಪುಟ-೮. ಸಂಪಾದಕೀಯ. ಎಮ್.ಎಮ್. ಕಲಬುರ್ಗಿ. ಪುಟ ಸಂಖ್ಯೆ-೧೨

ಅಂದರೆ 'ವಚನ' ಎಂಬ ವಿಶಿಷ್ಟ ಸಾಹಿತ್ಯದ ಪ್ರಭೇದವೆಂದು, ವಿಶಿಷ್ಟವಾದ ಅಭಿವ್ಯಕ್ತಿ ಮಾಧ್ಯಮವಾಗಿಯೂ 'ವಚನ' ಎಂಬುದು ವಿಶಿಷ್ಟವಾದ ಸಮೂಹ ಸಂವಹನ ಮಾಧ್ಯಮವಾಗಿ ಆಗಿ ರೂಪ ಪಡೆದಿರುವುದು ಸಾಹಿತ್ಯ-ಸಮಾಜ-ಸಂವಹನಕ್ಕೆ ಸಂಬಂಧಿಸಿದಂತೆ ಅಪರೂಪದ ವಿಷಯವೆನಿಸುತ್ತದೆ. ಸಮಾಜದಿಂದ ಸಾಹಿತ್ಯಸೃಷ್ಟಿಯಾಗಿ ಸಮಾಜದ ಸುಧಾರಣಾತ್ಮಕ ವಿಧಾನವಾಗಿ ಸಮಾಜದ ಒಂದು ಭಾಗವಾಗಿ ಸಮಾಜಕ್ಕೆ ಸಮರ್ಪಿತಗೊಳ್ಳುವುದು ವಚನಗಳ ವೈಶಿಷ್ಟ್ಯವಾಗಿದೆ.

ಸತ್ಯ, ಮಾತು, ಪ್ರತಿಜ್ಞೆ, ನಡೆ-ನುಡಿ ಒಂದಾದದ್ದು ವಚನ. ವಚನ ಎಂದರೆ ಮಾತು ಅಲ್ಲದ್ದು. ವಚನ ಒಂದು ಅರ್ಥ ಪ್ರಮಾಣ ಮಾಡುವುದು ಅಥವಾ ವಚನ ನೀಡೋದು ಅಂದರೆ ವಿಶ್ವಾಸಕ್ಕೆ ಸಾಕ್ಷಿ 'ಪ್ರಮಾಣ' ಮಾಡು ಎಂದು ಹೇಳುವುದು. ಅದು ಆಡಿದ ಮಾತಿಗೆ ಮನವೇ ಸಾಕ್ಷಿ. ವಚನ ನೀಡುವುದೆಂದರೆ ಮಾತು ಕೊಡುವುದೆಂದೇ ಅರ್ಥ. ಹೃದಯಗಳ ಭಾವ ಒಂದೇ ಮಿಡಿತಕ್ಕೆ ನಾವು ಬೇಡುವ ಬಯಕೆಗೆ ನೀಡುವ ದೇವರ ಪ್ರಮಾಣ ಮಾಡಿ ಹೇಳುತ್ತೇವೆ. ದೇವರಾಣೆ, ನನ್ನಾಣೆ, ನಿನ್ನಾಣೆ ಎಂಬ ವಚನ, ಭಾಷೆ ನೀಡುವ ಮಾತು ನಿಮ್ಮ ನಿಶ್ಚಯ ಭಾವದ ಧೃಡತೆಗೆ ಸಾಕ್ಷಿಯಾಗಿ ಮನಸ್ಸನ್ನು ಹಿಡಿದಿಟ್ಟು ಆಡಿದ ಮಾತಿಗೆ ತಪ್ಪಿ ನಡೆದರೆ ಮೆಚ್ಚನಾ ಪರಮಾತ್ಮನೆಂಬ ಪುಣ್ಯಕೋಟಿ ಕತೆಯಲ್ಲಿ 'ಕಪಿಲೆ' (ಹಸು) ಹುಲಿಗೆ ಕೊಟ್ಟ ವಚನದಂತೆ ತನ್ನ ಕರುವಿಗೆ ಮೊಲೆ ಹಾಲು ನೀಡಿ ಬರುವ ಪ್ರಮಾಣವೇ ವಚನ.

"ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ
ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ
ಕೂಡಲಸಂಗಮದೇವಾ ನಿಮ್ಮ ಚರಣ ಕಮಲದೊಳಗಾನು ತುಂಬಿ".೧೧

---

೧೧ " " ಸಮಗ್ರ ವಚನಸಂಪುಟ-೧. ಬಸವಣ್ಣನವರ ವಚನಸಂಪುಟ. ವಚನಸಂಖ್ಯೆ-೪೯೨

ಈ ವಚನದ ಭಾವಾರ್ಥದಲ್ಲಿ ಅಡಗಿರುವ ಸರಳ ಅರ್ಥ ಮತ್ತು ಬಯಲು ಬಯಲನೆ ಮಾಡುವ ಮೇಲಿನ ವಚನದ ಅಂತರಾರ್ಥ ಒಂದೇ ಆಗಿದೆ. ಅಲ್ಲಿ ಭಕ್ತಿಯ ನೆಲೆ, ಪರಮಾನುಭವದ ಸೆಲೆ, ಅಂತಃಕರಣದ ಶುದ್ಧಿಗೆ ಕಾಯಾ ವಾಚಾ ಮಾಡುವ ಕ್ರಿಯೆಗಳೇ ಸಾಧನವಾಗಿಸಿಕೊಂಡ ಶರಣರ ವಚನದ ಅರ್ಥ ಹೇಳುವುದೆಂದರೆ ಅಂತರಂಗವನ್ನು ಶೋಧಿಸುವುದು ಎಂದೂ ಅರ್ಥವಾಗುತ್ತದೆ.

ವಚನವೆಂದರೇನು? ಮಾತುಗಳೆಲ್ಲಾ ವಚನಗಳಲ್ಲ ಮಾತಲ್ಲದ ಮಾತು ವಚನ, ಅಂದರೆ ಬುದ್ಧಿಯ ಆಚೆಯಿಂದ ಅರಿವಿನ ಮರೆಯನ್ನು ಸರಿಸಿ, ಬೆಳಕನ್ನು ನೀಡುವುದೇ ವಚನ. ತ್ರಿಕರಣ ಶುದ್ಧಗೊಂಡು ಸಿದ್ಧವಾದ ಸಾಹಿತ್ಯದ ಸಮೂಹ ಸೃಷ್ಟಿ. 'ವ' ಎಂದರೆ– ವಚಿಸುವಲ್ಲಿ, 'ಚ' ಎಂದರೆ– ಚಲಿಸುವಲ್ಲಿ, 'ನ' ಎಂದರೆ– ನಯನಿಸುವಲ್ಲಿ. ಈ ಮೂರರಿಂದಲೂ ಶುದ್ಧವಾಗಿರಬೇಕು. (ನಡೆ, ನುಡಿ, ನೋಟ)

ಅಂತಹ ಬಹಿರಂಗ ಶುದ್ಧ ಇದ್ದವರ ನುಡಿಗಳು. ವಚನಗಳು ಸಮಾಜದ ಸರ್ವತೋಮುಖ ಬೆಳವಣಿಗೆಗೆ ಕಾರಣವಾಗಿವೆ. ಚಿಂತನೆಯ ವಿಚಾರ ಬದುಕನ್ನು ಸುಗಮ ದಾರಿಗೆ ತರುತ್ತವೆ. ಮನಸ್ಸಿನ ಮಲಿನತೆ ತೋಳೆದು ಸಹಜೀವನದ ಪರಿತಿಳಿಸುತ್ತವೆ. ವಚನಗಳು ಸಮಾಜದಲ್ಲಿ ಭಕ್ತಿ ಜ್ಞಾನ ವೈರಾಗ್ಯದ ತತ್ತ್ವಗಳನ್ನು ತಿಳಿಸಿ ಜನಜಾಗೃತಿ ಮಾಡಿವೆ.

ಶರಣರ ವಚನಗಳು ಸಂತ್ರಸ್ತ ಮನಕೆ ಸಾಂತ್ವನ ನೀಡುವ ಸಂಜೀವಿನಿ. ಇದು ಬದುಕಿನ ಸಾರ್ಥಕತೆಗೆ ಇಂಬಾಗಿದೆ. ಶರಣರು ಬಳಸಿದ ರೂಪಕಗಳಲ್ಲಿ ಸಾಂದ್ರವಾದ ಸಾಂಸ್ಕೃತಿಕ ಆಯಾಮವು ತುಂಬಿಕೊಂಡಿರುವುದು ಕಂಡು ಬರುತ್ತದೆ.

ಭಕ್ತಿ ಸಾಮಾಜಿಕ ವಿವರ್ಶೆ, ಸ್ವವಿಮರ್ಶೆ, ನೀತಿಬೋಧೆ, ಕಾಯಕ, ದಾಸೋಹ, ಶಿವಯೋಗ, ಇವು ವಚನಗಳ ಪ್ರಧಾನ ತಿರುಳು. ಇದು ಕನ್ನಡದ ನೂತನ ಅಭಿವ್ಯಕ್ತಿ. ತಮ್ಮ ಮಾತುಗಳನ್ನು ಬೇರೆಯವರಿಗೆ ಪರಿಣಾಮಕಾರಿಯಾಗಿ ಮನಮುಟ್ಟುವಂತೆ ಹೇಳಬೇಕೆಂಬುದು ಅವರ ಮುಖ್ಯ ಉದ್ದೇಶವಾಗಿತ್ತು. ಆದುದರಿಂದ ಒಂದು ರೀತಿಯಲ್ಲಿ ವಚನ ಸಾಹಿತ್ಯವು ಜನಸಾಮಾನ್ಯರಿಂದ ಜನಸಾಮಾನ್ಯರಿಗಾಗಿ ರಚನೆಯಾದ ವಾಙ್ಮಯರೂಪ. 'ಮಾತೆಂಬುದು ಜ್ಯೋತಿರ್ಲಿಂಗ "ಮೃದುವಚನವೆ ಸಕಲ ಜಪಂಗಳಯ್ಯಾ, ಮೃದುವಚನವೆ ಸಕಲ ತಪಂಗಳಯ್ಯಾ" ಎಂಬ ಮಾತುಗಳಿಗೆ ಇವರು ಮಹತ್ವ ನೀಡಿದರು. ಮಾತಿಗೆ ಮಾನವೀಯತೆಯ ಸ್ಪರ್ಶಕೊಟ್ಟದ್ದು ವಚನಗಳ ವೈಶಿಷ್ಟ್ಯ.

ವಚನಕಾರರಲ್ಲಿಯೇ ಭಕ್ತಿಭಾಂಡಾರಿ ಎನಿಸಿದ್ದ ಬಸವಣ್ಣನವರ ಮತ್ತು ಶರಣರ ನುಡಿಮುತ್ತುಗಳಿಗೆ ಹೆಚ್ಚಿನ ಮಹತ್ವ ನೀಡಿದ ಶರಣ. ಬಸವಣ್ಣನವರು ಮಾತಿನ ಮಹತ್ವವನ್ನು ಕುರಿತು ಹೇಳುವ ಒಂದು ವಚನ ಪ್ರವಚನಕಾರರ ದೃಷ್ಟಿಯಲ್ಲೂ ಅರ್ಥಪೂರ್ಣವಾಗಿದೆ.

"ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನುವಂತಿರಬೇಕು
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲಸಂಗಮದೇವನೆಂತೊಲಿವನಯ್ಯಾ"?೧೨

ಒಬ್ಬ ಸಶಕ್ತ ಪ್ರವಚನಕಾರನಿಗೆ ಬೇಕಾದ ಅರ್ಹತೆಗಳನ್ನು ಈ ವಚನ ನಮಗೆ ಸ್ಪಷ್ಟೀಕರಿಸುತ್ತದೆ.

೧) ನಡೆ-ನುಡಿ ಒಂದಾದ ಬದುಕು.

೨) ಕಾಯಕವೇ ಕೈಲಾಸ.

೩) ದಯೆಯೇ ಧರ್ಮದ ಮೂಲ.

೪) ಆಚಾರವೇ ಸ್ವರ್ಗ ಅನಾಚಾರವೇ ನರಕ.

೫) ಪರವಸ್ತು ನಿರಾಕರಣೆ.

೬) ಅಂತರಂಗ ಮತ್ತು ಬಹಿರಂಗ ಶುದ್ಧತೆ.

೭) ಮಾನವೀಯತೆ ಮೌಲ್ಯಗಳ ಸಂಪಾದನೆ.

೮) ಮಾತು-ಮನಸ್ಸು ಕೃತಿ ಶುದ್ಧವಾಗಿರುವುದು.

೯) ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವುದು.

---

೧೨ " " ಸಮಗ್ರ ವಚನಸಂಪುಟ-೧. ಸಂಪಾದಕ. ಎಮ್.ಎಮ್. ಕಲಬುರ್ಗಿ. ಪುಟಸಂಖ್ಯೆ-೬೧. ವಚನಸಂಖ್ಯೆ-೨೪೪. ೨೦೦೧

೧೦) ಭೂಮಿ, ಸೀಮೆ, ಧನ ಕನಕಾದಿ ಕಾಂಚನಗಳಿಗಾಗಿ ಹೋರಾಡುವುದಷ್ಟೇ ಬದುಕಲ್ಲ.

೧೧) ಗುರು ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ, ಇವು ಅಷ್ಟಾವರಣಗಳು; ಭಕ್ತನ ಸಾಧನೆಯ ಮೆಟ್ಟಿಲುಗಳು.

೧೨) ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಷಟ್‌ಸ್ಥಲಗಳನ್ನು ಪಾಲಿಸುವುದರ ಮೂಲಕ ಭಕ್ತನಾದವನು ಹಂತಹಂತವಾಗಿ

ಆತ್ಮದರ್ಶನದ ಮಾರ್ಗಕಂಡುಕೊಳ್ಳುವನು. ಇಂತಹ ಸಾರಭೂತವಾದತತ್ತ್ವಗಳು ಪ್ರವಚನಕಾರರ ಮೂಲಬಂಡವಾಳವಾಗಿ ಬೆಳೆದುಕೊಂಡು ಬಂದಿರುವುದನ್ನು ಗಮನಿಸುವಾಗ ವಚನಕ್ಕೆ ಪ್ರವಚನಗಳು ಋಣಿಯಾಗಿವೆ ಎನ್ನುವುದರಲ್ಲಿ ಎರಡು ಮಾತಿಲ್ಲ.

ಶಿವತತ್ತ್ವಚಿಂತಾಮಣಿ, ವೀರಶೈವಾಮೃತ ಪುರಾಣ ಮೊದಲಾದ ಕೃತಿಗಳಲ್ಲಿನ ಶರಣರ ಬದುಕನ್ನು ಮತ್ತು ತತ್ತ್ವಗಳನ್ನು ಪ್ರವಚನಕ್ಕೆ ಬಳಸಿಕೊಂಡಿರುವುದು ತಿಳಿದುಬರುತ್ತದೆ. ವಚನಗಳು ತ್ರಿಕಾಲ ಸಾಧ್ಯವಾದವುಗಳು ಅವು ನೀತಿ ನಿಯಮ ತತ್ತ್ವವೇದಾಂತ ಸಿದ್ಧಾಂತಗಳನ್ನು ಮೀರಿ ನಿಂತವು. ಅವು ಬಯಲು ಬಯಲನ್ನೇ ಸೇರುವ ಪರಿಯನ್ನೇ ಹೇಳಿವೆ. ಒಟ್ಟಿನಲ್ಲಿ ಮಾನವೀಯ ಮೌಲ್ಯ ಬೆಳೆಸಿ ದಯೆ, ದಾನ, ದಾಸೋಹ, ಭಾವ ಹುಟ್ಟಿಸಿ ಆತ್ಮಾನಂದ ನೀಡುವ ಅಂಗತರಂಗದ ಅಲಂಕರಣಗಳಾಗಿವೆ. ಒಳ್ಳೆಯ ಗುಣಗಳನ್ನು ತುಂಬಿ ಆತ್ಮವಿಶ್ವಾಸ ಹೆಚ್ಚಿಸುತ್ತವೆ. ಮಂತ್ರಗಳಾಗಿ ದಿವ್ಯ ಜ್ಯೋತಿಗಳಾಗಿ ನಮ್ಮನ್ನು ಭವಸಾಗರದಿಂದ ಪಾರು ಮಾಡಿವೆ. ಅಂತರಂಗದ ತಟ್ಟಿ ಮನಕ್ಕೆ ಮುದನೀಡುವಂಥವುಗಳಾಗಿವೆ. ಅವುಗಳನ್ನು ಕೇಳಿಯೇ ಅನುಭವಿಸಬೇಕು. ವಚನಕಾರರ ವಚನಗಳ ನೀಲುವು ನಮ್ಮ ಬದುಕಿಗೆ ನೆಲೆಯಾಗಿ ಸಂಪತ್ತಾಗಿ ಮಿಂಚಿನಂತೆ ಹೊಳಪು ನೀಡುವ ದೇವರನ್ನಿರುವ ಸಾಧನಗಳಾಗಿವೆ.

"ವಚನ ವಾಗಿಂದ್ರೀಯ ಕ್ರಿಯೆ, ಅಭಿಪ್ರಾಯ ವಾಹಕ. ವೈಖರಿಯ ಮೂಲ ಶಕ್ತಿ. ವಚನವೆಂದರೆ ನುಡಿ, ಮಾತು, ವಾಕ್ಕು ಎಂಬರ್ಥಗಳಿವೆ. ಇಚ್ಚೆ ಜ್ಞಾನ ಕ್ರಿಯೆಗಳು ಭಾವ ಬುದ್ಧಿಗಳು ಮಾತಿನ ಮೂಲಕ ಹೊರಹೊಮ್ಮುತ್ತವೆ; ಮತ್ತೊಬ್ಬರಿಗೆ ಅರಿವನ್ನುಂಟುಮಾಡುತ್ತವೆ. ವಚನಕ್ಕೆ ಬೋಧನಾ ಶಕ್ತಿ ಇದೆ; ವ್ಯಗ್ಗಳಿಸುವ ಸಾಮರ್ಥ್ಯ ವಿದೆ".[೧೩] ಇದು ವಚನ–ಪ್ರವಚನವಾಗುವ ಬಗೆ.

---

೧೩ " " ನಿರ್ವಚನ. ಲೇ. ಶ್ರೀ ಜ.ಚ.ನಿ. ಪುಟಸಂಖ್ಯೆ–೯. (೧೯೭೦)

## ೨.೨: ನಿರ್ವಚನ ಮತ್ತು ಪ್ರವಚನ

"ಇಳೆಯಿಂದ ಮೊಳಕೆಯಾಗುವಂದು ತಮಟೆಗಳಿಲ್ಲ
ಫಲಮಾಗುವಂದು ತುತ್ತೂರಿ ದನಿಯಿಲ್ಲ
ಬೆಳಕೀವ ಸೂರ್ಯಚಂದ್ರದೊಂದು ಸದ್ದಿಲ್ಲ।
ಹೊಲಿ ನಿನ್ನ ತುಟಿಗಳನು ಮಂಕುತಿಮ್ಮ".೧೪

ಡಿ.ವಿ.ಜಿ.ಯವರ ಕಗ್ಗದ ಈ ಸಾಲುಗಳು ನಿರ್ವಚನಕ್ಕೆ ಉತ್ತಮ ಉದಾಹರಣೆಯಾಗಿದೆ. ಶಬ್ದದಾಚೆ ಇರುವ ಗಹನವಾದ ನಿಗೂಢವಾದ ಮಹತ್ತರವಾದ ವಿಚಾರಗಳನ್ನು ಧ್ವನಿಸುತ್ತದೆ.

ವಚನವೆನ್ನುವುದು ಮನುಷ್ಯ-ಮನುಷ್ಯರ ಮಧ್ಯ ಬಂದ ಅನುಭವದ ಮಾತು. ಮಾತು ನಿಂತಾಗ ಉಂಟಾಗುವ ನಿಶ್ಯಬ್ಧವೆ ನಿರ್ವಚನ; ಮಾತಿಗೆ ನಿಲುಕ್ಕದ್ದು, ಮಾತಿಗೆ ಮೀರಿದ್ದು ನಿರ್ವಚನವಾಗುತ್ತದೆ. ವಚನ ಪ್ರಪಂಚವಾದರೆ, ನಿರ್ವಚನ ಎನ್ನುವುದು ಇಂದ್ರಿಯಾತೀತ ಸ್ಥಿತಿ. ನಿರ್ವಚನ ಎಂಬ ಶಬ್ದಕ್ಕೆ ಮೌನ, ನೀರವತೆ, ನಿಶ್ಯಬ್ದ ಮಾತಲ್ಲದ್ದು ಎಂಬ ಅರ್ಥಗಳಿವೆ. ಆದರೂ ಗೂಢವಾದ ವಿಚಾರ ವಿಷಯಗಳನ್ನು ಒಳಗೊಂಡಿರುವುದೇ ನಿರ್ವಚನ. ನಾಮರೂಪಗಳಾಚೆ ಇರುವುದು, ಬುದ್ಧಿ ಮನಸ್ಸಿನಾಚೆ ಇರುವುದು ಪಂಚೇಂದ್ರಿಯಗಳಿಗೆ ಕಾಣಿಸದೆ ಇರುವಂಥದ್ದು ನಿರ್ವಚನವಾಗುತ್ತದೆ. ಶಬ್ದಕ್ಕೆ ಅತೀತವಾದದ್ದೆ ನಿರ್ವಚನ. ಏನೂ ಇಲ್ಲದೇ ಇರುವುದು ಎಲ್ಲವೂ ಇರುವುದೇ ನಿರ್ವಚನ. ಮಾತಿನಲ್ಲಿ ಹೇಳಲಿಕ್ಕೆ ಆಗದ್ದನ್ನು ನಿರ್ವಚನ ಎನ್ನಬಹುದು. ಧ್ಯಾನದ ಸ್ಥಿತಿಯಲ್ಲಿ ಎಲ್ಲವನ್ನು ತಿಳಿಯುವುದೇ ನಿರ್ವಚನ.

ನಿರ್ವಚನ ಮಾತಿನಾಚೆ, ಶಬ್ದದಾಚೆ ಇರುವಂಥದ್ದು. ಶಬ್ದವನ್ನು ಅರಿಯಬಹುದು, ಗ್ರಹಿಸಬಹುದು, ಶಬ್ದದ ನಾದಕ್ಕೆ ಮರುಳಾಗಬಹುದು, ತಲೆದೂಗಬಹುದು. ತಾಂಡವ ನೃತ್ಯದ ಡಮರುಗದ ಶಬ್ದ ಪ್ರಳಯದ ಸಂಕೇತವಾಗಬಹುದು; ಆದರೆ, ಇವೆಲ್ಲವೂ ಹುಟ್ಟಿನ ನೆಲೆಯನ್ನು ಪ್ರತಿಪಾದಿಸಿದರೆ ನಿಶ್ಯಬ್ದ ನೀರವತೆಯನ್ನು, ಅಂತಿಮವನ್ನು ಅರಿಯಲಾಗದ ನಿಗೂಢ ಸಾವನ್ನು ಪ್ರತಿಪಾದಿಸುತ್ತದೆ. 'ಶಬ್ದದೊಳಗಣ ನಿಶ್ಯಬ್ದ' ಎಂದು ಅಲ್ಲಮಪ್ರಭುವಿನ ಮಾತು ನಿರ್ವಚನವಾಗುತ್ತದೆ. ಇಲ್ಲಿ ಶಬ್ದ ಅಲ್ಲಮನಾದರೆ, ನಿಶ್ಯಬ್ದ ಗುಹೇಶ್ವರನಾಗುತ್ತಾನೆ. ಅಲ್ಲಮಪ್ರಭುದೇವರ ಒಂದು ವಚನವನ್ನು ನಿರ್ವಚನಕ್ಕೆ ಉದಾಹರಣೆ ನೀಡಬಹುದು.

---

೧೪. "      " ಮಂಕುತಿಮ್ಮನ ಕಗ್ಗ ಲೇ. ಡಿ. ವಿ. ಜಿ. ಮಟಸಂಖ್ಯೆ-

"ಶಿಲೆಯೊಳಗಣ ಪಾವಕನಂತೆ
ಉದಕದೊಳಗಣ ಪ್ರತಿಬಿಂಬದಂತೆ
ಬೀಜದೊಳಗಣ ವೃಕ್ಷದಂತೆ
ಶಬ್ದದೊಳಗಣ ನಿಶ್ಯಬ್ದದಂತೆ
ಗುಹೇಶ್ವರ ನಿಮ್ಮ ಶರಣರ ಸಂಬಂಧ".[೧೫]

'ಶಿಲೆಯೊಳಗಣ ಪಾವಕನಂತೆ' ವಚನದ ಸಾಲು ದೇವರ ಅಥವಾ ಗುಹೇಶ್ವರನ ಹಲವು ರೂಪಗಳ ಬಗ್ಗೆ ಹೇಳಲು ಪ್ರಯತ್ನಿಸುತ್ತಿದೆ. 'ಶಿಲೆಯೊಳಗೆ ಅಗ್ನಿ' ಇದೆ. ಅದೃಶ್ಯವಾಗಿ, 'ಜಲದೊಳಗೆ ಪ್ರತಿಬಿಂಬವಿದೆ' ಅಲಿಪ್ತವಾಗಿ, ಅದರಂತೆ ಶರಣನಲ್ಲಿ, ಸಕಲ ಜೀವಜಂತುಗಳಲ್ಲಿ ಹಾಗೂ ಅತ್ಯಂತ ವಿಶಾಲವಾದ ವಿಸ್ತಾರವಾದ ವಿಶ್ವದಲ್ಲಿ

ಪರಶಿವನು ನೆಲೆಸಿದ್ದಾನೆ. ಅವನು ಸರ್ವಾತ್ಮಕ ಆತ್ಮ ಅವನು ಅದೃಶ್ಯ, ಅಲಿಪ್ತ, ಅವ್ಯಕ್ತ ಅಭೇದ್ಯ. ಇಂದ್ರಿಯಗಳು ಅವನನ್ನು ಕಾಣವು. ಯಾವುದೇ ವಸ್ತುವಿನಿಂದ ಅವನು ಲಿಪ್ತನಾಗಲಾರ. ಗುಣಗಳಾಗಲಿ, ಕ್ರಿಯೆಗಳಾಗಲಿ ಅವನಲ್ಲಿ ಇಲ್ಲವಾಗಿ ಅವನು ಅವ್ಯಕ್ತನಾಗಿರುತ್ತಾನೆ. ಅವನನ್ನು ಅವನ ನಿಲುವನ್ನು ಭೇದಿಸುವ ಶಕ್ತಿ ಯಾವ ಶಾಸ್ತ್ರಗಳಿಗೂ, ಯಾವ ಶಬ್ದಗಳಿಗೂ ಇಲ್ಲ. ಅವನು ಮನಬುದ್ಧಿಗಳನ್ನು ಮೀರಿದ ಪ್ರಶಾಂತ ತತ್ತ್ವವಾಗಿರುತ್ತಾನೆ".

ಶಿಲೆಯಲ್ಲಿ ಅಗ್ನಿಯು ಅಡಗಿರುವಂತೆ ಶಾಂತಚಿತ್ತವಾದ ಪರಮಾತ್ಮನು ಜಡಜಗತ್ತಿನಲ್ಲಿ ಗೂಢವಾಗಿ ನೆಲೆಸಿದ್ದಾನೆ. ಜಲದಲ್ಲಿ ಪ್ರತಿಬಿಂಬವಿದ್ದು ಜಲದ ಗುಣದೊಷಗಳು ಆ ಪ್ರತಿಬಿಂಬಕ್ಕೆ ಅಂಟುವುದಿಲ್ಲ. ಅದು ನಿರ್ಲಿಪ್ತ ಚಲನಶೀಲವಾದ ಪ್ರಪಂಚದಲ್ಲಿ ಪರಮಾತ್ಮನಿದ್ದಾನೆ. ಪ್ರಪಂಚದ ಯಾವ ಗುಣದೋಷಗಳು ಅವನಿಗೆ ಅಂಟುವುದಿಲ್ಲ. ಚಿಕ್ಕದಾದ ಬೀಜದಲ್ಲಿ ಬೃಹತ್ತಾದ ವೃಕ್ಷ ಅಡಗಿದೆ. ಬೀಜವು ವ್ಯಕ್ತವಾದರೆ, ವೃಕ್ಷವು ಅವ್ಯಕ್ತ ಹಾಗೆ ದೇಹಾದಿ ಸಂಗತನಾದ ವ್ಯಷ್ಟಿಜೀವಾತ್ಮನಲ್ಲಿ ಮಹಾದ್ರೂಪನಾದ ದೇವನು ಅವ್ಯಕ್ತವಾಗಿ ನೆಲೆಸಿದ್ದಾನೆ.

ಶ್ರವಣೇಂದ್ರಿಯ ಗ್ರಾಹ್ಯವಾದ ಶಬ್ದದೊಳಗೆ, ಶಬ್ದದ ಹಿಂದೆ ಅಗ್ರಾಹ್ಯವಾದ ನಿಶ್ಯಬ್ದವಿದೆ. ಅದು ಬಯಲಿನಂತೆ ಮಹಾಮೌನಿ. ಹಾಗೆ ಪರಮಾತ್ಮನು ನಿಶ್ಯಬ್ದ ಬ್ರಹ್ಮ. ನಿಮ್ಮ ಶರಣರ ಸಂಬಂಧ ಎನ್ನುವ ಮಾತು ನಿಮ್ಮ=ಪರಮಾತ್ಮನ, ಶರಣ=ಅರಿಯಲೆಳೆಸುವ: ಅರಿತು ಜ್ಞಾನಿಯಾಗಲಿರುವವ. ಸಂಬಂಧ=ಶರಣರ ಸಾಂಬಂಧಿಕ ನಿಲುವು. ಪರಮಾತ್ಮನು ವಿಶ್ವದಲ್ಲಿ ಜೀವ ಸೃಷ್ಟಿಯಲ್ಲಿ ನೆಲೆಸಿದ ರೀತಿಯಾಗಿದೆ.

---

೧೫ " " ಅಲ್ಲಮ್ಮಪ್ರಭುದೇವರ ವಚನ-ನಿರ್ವಚನ. ಶ್ರೀ ಸಿದ್ಧೇಶ್ವರ ಸ್ವಾಮಿಗಳು ವಚನಸಂಖ್ಯೆ-೧. (೨೦೦೧)

**ನಿರ್ವಚನ:**

ವಚನಕ್ಕೆ ವ್ಯಾಖ್ಯಾನವೇ ನಿರ್ವಚನ. ವಿಜಯನಗರ ಸಾಮ್ರಾಜ್ಯದ ಉಚ್ಛ್ರಾಯ ಕಾಲದಲ್ಲಿ ವಚನಗಳನ್ನು ಮೊಟ್ಟ ಮೊದಲು ಸಂಗ್ರಹಿಸಿ, ಸಂಕಲನ, ಪರಿಷ್ಕರಣ ಮತ್ತು ವ್ಯಾಖ್ಯಾನಗಳ ಕಾರ್ಯ ನಡೆಯಿತು. ಅದರಲ್ಲಿ ಮೊದಲಿಗರಾದವರೆಂದರೆ– ಮಹಾಲಿಂಗ ದೇವರು, ನಂತರ ಕಲ್ಲುಮಠದ ಪ್ರಭುದೇವರು, ಸಿದ್ಧಬಸವರಾಜ ದೇವರು ಮತ್ತು ಚೆನ್ನವೀರಾರ್ಯರು ಮುಂತಾದವರ ವ್ಯಾಖ್ಯಾನಗಳು ಬಂದಿವೆ. ಶಿವಾನುಭವಿಗಳ ಟೀಕೆಗಳ ನಿರ್ವಚನಗಳಾಗಿವೆ. ಈ ನಿರ್ವಚನಗಳೆಂದರೆ ಭಾವ, ಭಾಷ್ಯಗಳ ರೂಪದಲ್ಲಿ ವಿಸ್ತಾರವಾಗಿ ವಿವರ ಮಾಹಿತಿ ನೀಡುತ್ತಿವೆ. ಆತ್ಮ ಸಾಕ್ಷಾತ್ಕಾರದ ಮಾತಾಗಿವೆ. ಈ ಸತ್ಯದ ಅರಿವು ಮೂಡಿಸುವ ನಿರ್ವಚನಗಳನ್ನು ಪ್ರವಚನಗಳ ಮೂಲಕ ಬರಹಗಳ ಮೂಲಕ ಸಂಗ್ರಹಿಸಿ ಅಧ್ಯಯನಶೀಲರಿಗೆ ಅನುಕೂಲವಾಗಲೆಂದು ಸಮಾಜಕ್ಕೆ ಸಹಕಾರಿಯಾದ ನಿರ್ವಚನಗಳು, ಸಿದ್ಧೇಶ್ವರ ಸ್ವಾಮಿಜಿಯವರ "ಅಲ್ಲಮ ಪ್ರಭುದೇವರ ವಚನ ನಿರ್ವಚನ"ದಲ್ಲಿ ಷಟಸ್ಥಲ ವಚನಗಳ ಭಾಷ್ಯವನ್ನು ಓದಿದಾಗ, ಆ ಅಗಾಧ ಜ್ಞಾನದ ಹೊಳಪು ಕಣ್ಣಿಗೆ ಕಟ್ಟುವಂತಾಗುತ್ತದೆ ಅಂಥವರ ಪ್ರವಚನಗಳು ಎಲ್ಲರನ್ನೂ ಮಂತ್ರಮುಗ್ಧರನ್ನಾಗಿಸುತ್ತವೆ.

ವಚನಗಳ ಹಿಂದಿನ ಒಳಾರ್ಥ, ವ್ಯಾಖ್ಯಾನ, ಟೀಕೆ, ಟಿಪ್ಪಣೆ, ತಾತ್ಪರ್ಯ, ಮುಂತಾದ ವಿವರಣೆಗಳೇ ನಿರ್ವಚನಗಳು, ವಚನಗಳ ಒಳಾರ್ಥವನ್ನು ಒಡೆದು ತಿಳಿಸುವುದು ಮಾತಿನ ಮರ್ಮವನು ನಿರ್ವಹಿಸುವುದು. ಆ ಮಾತುಗಳು ಶರಣರ, ಸಂತರ, ಜ್ಞಾನಿಗಳ, ಬಲ್ಲವರ ಮಾತುಗಳಾಗಿವೆ. ಮನದಾಚೆ, ಬುದ್ಧಿಯ ಸೀಮೆ ದಾಟಿ ಅಂತರಾತ್ಮನ ಅಂತರಂಗವನರೆಸುವ ಆತ್ಮಚಿಂತನದ ಮಾತುಗಳನ್ನು ಸರಳಗೊಳಿಸಿ ತಿಳಿಸುವ ರೀತಿಯೇ ನಿರ್ವಚನ ಯಾವುದು ಎಲ್ಲರಿಗೂ ಕಂಡಿಲ್ಲವೋ ಅದನ್ನು ಕಂಡವನು ನಿರ್ವಚಿಸಬಲ್ಲವ ನಿರ್ವಚನಕಾರ. ವಚನ–ಪುಷ್ಪ ಇದ್ದಹಾಗೆ, ನಿರ್ವಚನ–ಪರಿಮಳ: ಇದ್ದಂತೆ. ಇಲ್ಲಿ ಪುಷ್ಪ–ಕಣ್ಣಿಗೆ ಕಾಣದ ಗ್ರಹಿಸಲು ಸಾಧ್ಯವಾದುದಾಗಿದೆ. ಅದೇ ಸುಗಂಧವೇ–ನಿರ್ವಚನಗಳೆಂದು ತಿಳಿಯಬಹುದು. ವಚನದಲ್ಲಿ– ನೋಟವಿದೆ, ಭಾವವಿದೆ. ನಿರ್ವಚನದಲ್ಲಿ–ನಿರ್ಭಾವವಿದೆ. ಶರಣರ ವಾಣಿ ಕವಿವಾಣಿ. ಅನುಭವವಾಣಿಗಳೇ ವಚನವಾದರೆ ಜಗತ್ತಿನ ದಿವ್ಯಮನಕ್ಕೆ ನಿಲುಕುವ ಚೇತನವೇ ನಿರ್ವಚನಗಳಾಗಿವೆ. ಮಾತು ಮನಕ್ಕೆ ನಿಲುಕುವ ವಚನವಾದರೆ, ಮಾತು–ಮನಗಳಾಚೆಯದೇ ನಿರ್ವಚನ ಎನ್ನುತ್ತಾರೆ. "ನಿರ್ವಚನ ಮಾತಿನ ಮಥನವಲ್ಲ; ಕರಣ ಕಥನವಲ್ಲ. ಸ್ವರಭೇದದಿಂದಾದುದಲ್ಲ. ಅನಾಹತ ಅನುಪಮ ಸ್ವರಸ್ವರೂಪ. ಅರಿವನ್ನು ಅರಿತು ಮರೆತು ನುಡಿದ ನುಡಿ ನಿರ್ವಚನ. ಅನುಭವಾನಂದದಲ್ಲಿ ಅವಿರಳವಾಗಿ ಸಹಜದಲ್ಲಿ ನುಡಿದ ನುಡಿ

ನಿರ್ವಚನ". "ಅರಿವು ಮರವುಗಳುಳ್ಳುದು ವಚನ; ಅರಿವು ಸಯವಾಗಿ ಮರವು ಲಯವಾಗಿರುವುದು ನಿರ್ವಚನ. ವಚನ ಅನಿತ್ಯ; ನಿರ್ವಚನ ನಿತ್ಯ. ವಚನ ಪ್ರವೃತ್ತಿ; ನಿರ್ವಚನ ನಿವೃತ್ತಿ; ಮತ್ತು ನಿಷ್ಪತ್ತಿ, ವಚನ ಪರ. ನಿರ್ವಚನ ಪರಾತ್ಪರ. ಶ್ರವಣ ಸಾಧನ ವಚನ; ಧಾರಣ ಕಾರಣ ನಿರ್ವಚನ. ಶ್ರುತ ವಚನ; ಅಶ್ರುತ ನಿರ್ವಚನ". ನಿರ್ವಯಲನ್ನು ನಿರೂಪಿಸುವುದೆ ನಿರ್ವಚನ. ನಿರ್ವಚನವೆಂದರೆ ವಿಮರ್ಶಾಶಕ್ತಿ. ಧ್ವನಿ, ವರ್ಣ, ಶಬ್ದ, ವಾಕ್ಯಗಳಿಂದ ವಚನವಾಗುತ್ತದೆ. ಬಳಿಕ ಇವೆಲ್ಲವುಗಳ ಬುದ್ಧಿ ಮಾಯವಾಗಿ ಇವುಗಳೊಳಗಿರುವ ಅನುಭಾವವೊಂದೇ ನಿರ್ವಚನವೆನಿಸುತ್ತದೆ. "ಮಾತುಗಾರಿಕೆ ಮಾನವನ ವಿಶಿಷ್ಟ ಶಕ್ತಿ; ಮಾನವ ಸಹಜ ಗುಣ. ಆದರೆ ಮಾತೆಲ್ಲ ಕಲೆಯಲ್ಲ. ಆಡಿದ ಮಾತಿನಲ್ಲೆಲ್ಲ ಕಳೆಯಿರುವುದಿಲ್ಲ. ಮಾತನಾಡುವುದು ಒಂದು ಕಲೆ; ಕಲೆಯಿಂದ ಕೂಡಿದ ಮಾತಿನಲ್ಲಿ ಕಳೆಯಿರುತ್ತದೆ. ಬೆಲೆಯಿರುತ್ತದೆ. ಕಾವ್ಯವಿರುತ್ತದೆ. ಶಾಸ್ತ್ರವೂ ಆಗುತ್ತದೆ".೧೬ ಪ್ರವಚನ ಇದೆಲ್ಲವೂ ಆಗಿದೆ.

ಪ್ರವಚನವು ಸಾರ್ವಕಾಲಿಕ ಸತ್ಯವನ್ನು ಪ್ರಕಟಮಾಡುತ್ತದೆ. ಅದು ತನ್ನೊಳಗಿರುವ ಸಾರವನ್ನು ಅಭಿವ್ಯಕ್ತಿಸುವ ಕ್ರಮವೇ ವಿಶಿಷ್ಟ. ಪ್ರವಚನವು ಒಂದೇ ಕಾಲದ ಪರಿವ್ಯಾಪ್ತಿಯಲ್ಲಿ ತನ್ನ ಅರ್ಥ ಪಡೆಯುವದಿಲ್ಲ. ಚಿಂತನೆ ಮಾಡಿದಷ್ಟು ತನ್ನೊಳಗಿರುವ ಅರ್ಥವನ್ನು ಅದು ಹೊರಹಾಕುತ್ತದೆ.

ವಚನಗಳಲ್ಲಿರುವ ಇಂಥಹ ನಿರ್ವಚನಗಳನ್ನು ಪ್ರವಚನಕಾರ ಕಾಣಿಸುವ ಪ್ರಯತ್ನವನ್ನು ಮಾಡಬೇಕಾಗುತ್ತದೆ. ಇದಕ್ಕಾಗಿ ಮಾತಿನ ಸಾಧ್ಯತೆಗಳನ್ನೆಲ್ಲ ಪ್ರವಚನಕಾರ ಬಳಸಿಕೊಳ್ಳಬೇಕಾಗುತ್ತದೆ. ಪ್ರವಚನಕಾರನಿಗೆ ವಚನಗಳು ಅವುಗಳ ನಿರ್ವಚನಗಳು ಎಲ್ಲವೂ ವಸ್ತು ಆಗುತ್ತವೆ.

---

೧೬ " " ನಿರ್ವಚನ. ಲೇ. ಜ.ಚ.ನಿ. ಪುಟಸಂಖ್ಯೆ-೫೦,೫೩,೫೪,೫೬,೫೯. (೧೯೭೦)

## ೨.೩ ಪ್ರವಚನ:ಕೀರ್ತನೆ

ಕೀರ್ತನಗಳು ವಚನಗಳ ಮುಂದುವರೆದ ರೂಪ. ಅಲ್ಲಿಯೂ ಭಕ್ತಿ ಇದೆ. ಹೇಳುವ ವಿಶ್ವಾಸಭಿನ್ನ ವಚನಗಳಂತೆ ಸ್ವವಿವರ್ಶೆ, ಸಮಾಜವಿಮರ್ಶೆ ಮಾಡುತ್ತವೆ. ವಿಡಂಬಣೆಗಳ ಮೂಲಕ ಸಮಾಜದ ಓರೆಕೋರೆ ತಿದ್ದುವ ಕೆಲಸಮಾಡುತ್ತವೆ.

'ದೇವರ ನಾಮ' ಎಂದೇ ಪ್ರಸಿದ್ಧವಾಗಿ ಕನ್ನಡಿಗರ ನಾಲಿಗೆಯ ಮೇಲೆ ನಲಿದಾಡಿದ ಸಾಹಿತ್ಯ ಪ್ರಕಾರವೇ ಕೀರ್ತನ ಸಾಹಿತ್ಯ. ಕೀರ್ತನೆ, ಭಗವಂತನನ್ನು ಕುರಿತು ಹೇಳುವ ಭಕ್ತನ ತನ್ಮಯತೆಯ ಫಲ. ಭಗವಂತ ಭಕ್ತನ ನಡುವಿನ ನಿರಾಲಂಬ ಭಾವ ಕೀರ್ತನೆಯಾಗಿ ರೂಪ ತಾಳಿದೆ. ಕೀರ್ತನೆಗಳ ಮುಖ್ಯ ಭಾವ ಗೇಯಾಂಶದ ಅಭಿವ್ಯಕ್ತಿ ಸಹಿತವಾದ ಭಕ್ತಿ. ಹರಿದಾಸರು ತಮ್ಮ ಇಷ್ಟದೈವವನ್ನು ಭಕ್ತಿಯ ನಾನಾ ಮುಖಗಳಿಂದ ಅರ್ಚಿಸುತ್ತಾ ತಮ್ಮ ದಾರಿಯನ್ನು ಕಂಡುಕೊಳ್ಳುವುದರೊಂದಿಗೆ ಸಮಾಜದಲ್ಲೋ ಒಂದು ಮಾರ್ಗವನ್ನು ನಿರ್ಮಿಸಿದರು. ಸಂಸಾರದ ನಿಸ್ಸಾರತೆಯನ್ನು, ನಶ್ವರತೆಯನ್ನು ಎತ್ತಿ ಹಿಡಿಯುವುದು, ಲೌಕಿಕ ಭೋಗದ ಸುಖದಲ್ಲಿ ಮುಳುಗಿ ಎಂತಹ ಹೇಯ ಕೃತ್ಯಕ್ಕೂ ಹೇಸದ ಮನಸ್ಸನ್ನು ಭಗವಂತನ ಕಡೆ, ಮೋಕ್ಷದ ಕಡೆ ತಿರುಗಿಸುವುದು ಆ ಮೂಲಕ ಇಡೀ ಸಮಾಜದ ಏಳ್ಗೆಗೆ ಪ್ರಯತ್ನಿಸುವುದು–ಇದು ಕೀರ್ತನೆಗಳ ಉದ್ದೇಶವಾಗಿತ್ತು.

ಕೀರ್ತನೆಗಳು ಉಪಕಥೆಗಳಿಂದ ತುಂಬಿರುತ್ತವೆ. ಪ್ರವಚನದಲ್ಲಿ ಇದಕ್ಕೆ ಅವಕಾಶವಿರುವುದಿಲ್ಲ. ಆದರೆ ದೃಷ್ಟಾಂತ ಕಥೆಗಳನ್ನು ಔಚಿತ್ಯಪೂರ್ಣವಾಗಿ ಬಳಸಿಕೊಳ್ಳಬಹುದು.

"ಹಾಡಿಹೊಗಳು ಎಂಬ ನುಡಿಗಟ್ಟೊಂದು ಕನ್ನಡದಲ್ಲಿ ಉಂಟು. ಕೀರ್ತನೆ ಈ ಬಗೆಯ ಹಾಡಿ ಹೊಗಳುವ ವಿಧಾನ. ಭಕ್ತ ಭಗವಂತನನ್ನು ಹಾಡಿ ಹೊಗಳಿದ್ದು. ಈ ಹಾಡಿ ಹೊಗಳುವ ಹಿಂದಿನ ಸ್ಥಿತಿ, ಭಕ್ತ ಪ್ರಾಪಂಚಿಕ ಸುಖಗಳಿಂದ ವಿಮುಖನಾಗುವ, ಬದುಕಿನ ಬಂಧದಿಂದ ಬಿಡಿಸಿಕೊಳ್ಳುವ ಒಂದು ಪಾಡು, ಭಕ್ತನ ಈ ಪಾಡು ಮಾದು ಭಗವಂತನ ಹಾಡಾಗುವ ಹಾದಿಯಲ್ಲಿ ಕೀರ್ತನೆಗಳು ಅರಳುತ್ತಾ ಹೋಗಿವೆ". ಕೀರ್ತನೆಗಳ ಮುಖ್ಯಭಾವ ಭಕ್ತಿ. ಈ ಭಕ್ತಿ ಏಕ ದೈವ ನಿಷ್ಠೆಯಿಂದಾಗಿ ಹಂಚಿಹೋಗದೆ ಗಾಢವಾಗುವಂಥದ್ದು. ವಿಶ್ವದ ಮೂಲಭೂತ ಸತ್ಯದ ಅರಿವಿಗೆ ಈ ಭಕ್ತಿಮಾರ್ಗ ಸುಲಭವೆಂಬುದು ಕೀರ್ತನಕಾರರ ಒಟ್ಟು ಧಾಟಿ".೧೭

---

೧೭ " " ಕೀರ್ತನಕಾರರು ಎಚ್.ಎಸ್. ವೆಂಕಟಮೂರ್ತಿ. ಪುಟಸಂಖ್ಯೆ-೧೨. (೨೦೦೯)

ಹದಿನಾಲ್ಕನೇ ಶತಮಾನದಲ್ಲಿ ಬಂದ ನರಹರಿತೀರ್ಥರು ಹರಿದಾಸ ಕೀರ್ತನಾ ಪರಂಪರೆಯ ಮೂಲಪುರುಷರು. ನರಹರಿತೀರ್ಥರು ಕೀರ್ತನೆಗಳನ್ನು ಬರೆದ ಮೊದಲ ಹರಿದಾಸರಾದರೂ ಅದನ್ನು ಒಂದು ಪರಂಪರೆಯಾಗಿ ಬೆಳೆಸಿದವರು ಶ್ರೀಪಾದರಾಯರು. ಈ ಪರಂಪರೆಯು ಶ್ರೀಮಂತಗೊಳ್ಳಲು ಕಾರಣರಾದವರು; ವ್ಯಾಸರಾಯರು. ಇವರು ಕೀರ್ತನೆಗಳನ್ನು ರಚಿಸಿದರು ಎಂಬುದಕ್ಕಿಂತ ಪುರಂದರದಾಸ, ಕನಕದಾಸ ಮೊದಲಾದ ಶಿಷ್ಯ ಶ್ರೇಷ್ಠರಿಂದ ಬರೆಸಿದರು ಎನ್ನಬಹುದು. ಪುರಂದರದಾಸರು, ಕನಕದಾಸರು 'ದಾಸಸಾಹಿತ್ಯದಲ್ಲಿ ಅಶ್ವಿನಿದೇವತೆ'ಗಳೆಂದೇ ಲೋಕ ಪ್ರಸಿದ್ಧಿಯಾಗಿದ್ದಾರೆ. 'ದಾಸರೆಂದರೆ ಪುರಂದರ ದಾಸರಯ್ಯ' ಎಂದು ಹರಿದಾಸರಿಂದಲೇ ಗೌರವಕ್ಕೆ ಭಾಜನರಾಗಿದ್ದಾರೆ. ಕರ್ನಾಟಕ ಸಂಗೀತ ಪಿತಾಮಹಾರೆಂದು ಕರೆಯಲಾಗಿದೆ. ಕೀರ್ತನಕಾರರು ಹಾಡಲೆಂದು ಕೀರ್ತನೆಗಳನ್ನು ಬರೆದರು. ಜೊತೆಗೆ ಹೊರಗಿನ ಸಂಗೀತದ ಹಿಮ್ಮೇಳನವನ್ನು ಗಮನದಲ್ಲಿಟ್ಟುಕೊಂಡು ಕೀರ್ತನೆಗಳನ್ನು ರಚಿಸಿದರು. ಕೀರ್ತನ ಸಾಹಿತ್ಯವನ್ನು ಉಳಿದ ಸಾಹಿತ್ಯ ಪ್ರಕಾರಗಳಿಂದ ಬೇರ್ಪಡಿಸಲು ಸಾಧ್ಯವಾಗುವ ಮುಖ್ಯ ಲಕ್ಷಣವೆಂದರೆ ಅದರಲ್ಲಿಯ ಗೇಯತೆ ಮತ್ತು ನರ್ತನ. ಕರ್ನಾಟಕ ಸಂಗೀತಕ್ಕೆ ಭರತ ನಾಟ್ಯಕ್ಕೆ ಹಿನ್ನೆಲೆಯುಳ್ಳ ಸಾಹಿತ್ಯ ಇದಾಗಿದೆ.

ಶಿವಶರಣರ ವಚನಗಳಂತೆ ಹರಿದಾಸರ ಕೀರ್ತನೆಗಳು ಅಂದಿನ ಸಮಾಜದಲ್ಲಿದ್ದ ಲೋಪದೋಷಗಳನ್ನು ಅಂಕುಡೊಂಕುಗಳನ್ನು, ಮೇಲು-ಕೀಳು, ಶ್ರೇಷ್ಠ-ಕನಿಷ್ಠ ಮುಂತಾದ ತಾರತಮ್ಯ ಭಾವನೆಗಳನ್ನು ತಿದ್ದುವಲ್ಲಿ ಪ್ರಮುಖ ಪಾತ್ರವಹಿಸಿದವು. ಚಾರಿತ್ರ್ಯಶೀಲರಾಗಿ ಸನ್ನಡತೆಯಿಂದ ವರ್ತಿಸುವುದರ ಮೂಲಕ ಸಜ್ಜನರಾಗಿ ಬಾಳು ನಡೆಸುವಂತೆ ಪ್ರೇರಣೆ ನೀಡಿದವು. ಸಹಬಾಳ್ವೆಯ ಜೀವನಕ್ಕೆ ದಾರಿದೀಪವಾದವು. ಪರನಿಂದನೆ, ಪರಪೀಡನೆ, ಪರವಸ್ತುವಿಗೆ ಆಸೆ ಪಡುವುದರಿಂದ ಮನುಷ್ಯ ಜಂಜಾಟಕ್ಕೊಳಗಾಗುತ್ತಾನೆ. ಆದ್ದರಿಂದ ಇಂತಹ ನೀಚಗುಣಗಳನ್ನು ಬಿಟ್ಟು ಪರಹಿತ, ಪರಸೇವೆ ಪರವಸ್ತುನಿರಾಕರಣೆ ಇಂತಹ ಆದರ್ಶಗುಣಗಳನ್ನು ಜೀವನದಲ್ಲಿ ಮೈಗೂಡಿಸಿಕೊಂಡು ಬಾಳಿದಾಗ ಜೀವನ ಸಾರ್ಥಕವಾಗುತ್ತದೆ ಎಂಬುದನ್ನು ಹಾಡುಗಳ ಮೂಲಕ ಜನತೆಗೆ ಮುಟ್ಟಿಸಿದ ಶ್ರೇಯಸ್ಸು ಕೀರ್ತನಕಾರರದು.

ತಾತ್ವಿಕ, ಧಾರ್ಮಿಕವನ್ನೊಳಗೊಂಡಂತೆ ಯಾವುದೇ ವಿಚಾರಗಳನ್ನು ಉದ್ಬೋಧಕವಾಗಿ ಹೇಳಬಲ್ಲ ಸಂವಹನತಂತ್ರಗಳು ಹಲವುರೂಪದಲ್ಲಿವೆ. ಉಪನ್ಯಾಸ, ಪ್ರವಚನ ಕೀರ್ತನೆಗಿಂತ ಭಿನ್ನವಾಗುವದು ಅವರ ಅಭಿವ್ಯಕ್ತಿವಿಧಾನದಲ್ಲಿ ಮೂಲಭೂತವಾಗಿ, ಕೀರ್ತನೆಯ ಉದ್ದೇಶಕ್ಕೂ ಪ್ರವಚನದ ಉದ್ದೇಶಕ್ಕೂ ವ್ಯತ್ಯಾಸವೇನೂ ಇಲ್ಲ. ಸಂಗೀತದ ಮೂಲಕ ಮನಗೆಲ್ಲುವ, ಆಕರ್ಷಿಸುವ ಕೀರ್ತನೆಗಳು ಅದರ ಸ್ವರೂಪದಲ್ಲಿ ಪ್ರವಚನಕ್ಕಿಂತ ಭಿನ್ನವಾಗುತ್ತದೆ. ಪ್ರವಚನಗಳಲ್ಲಿ

ಕೀರ್ತನೆಗಳನ್ನು ಬಳಸಿಕೊಳ್ಳಬಹುದು ವಿನಃ ಕೀರ್ತನೆಗಳೂ ಪ್ರವಚನಗಳನಿಸಲಾರವು. ಈ ದೃಷ್ಟಿಯಿಂದ ಕೀರ್ತನೆಗಳಿಗಿಂತ ಹೆಚ್ಚು ವ್ಯಾಪ್ತಿ ಪ್ರವಚನಗಳಿಗೆ ಇವೆ ಎಂಬುದು ಸ್ಪಷ್ಟ.

ಪ್ರವಚನಗಳಿಗೆ ಸಾಮಾನ್ಯವಾಗಿ ಸಮಯಮಿತಿಯಲ್ಲಿ ರೂಪುಗೊಳ್ಳುತ್ತವೆ. ಅಂದರೆ ಸಾಮಾನ್ಯವಗಿ ಪ್ರವಚನದ ಕಾಲಾವಧಿ ಒಂದುಗಂಟೆ. ಕೀರ್ತನೆ ಪ್ರಧಾನವಾಗಿ ಭಕ್ತಿಗೇ ಅಂಟಿಕೊಂಡಿರುತ್ತದೆ. ಆದರೆ ಪ್ರವಚನಕ್ಕೆ ಅದು ಅನುಶಂಗಿಕವಾಗಿಯೇ ಇರುತ್ತದೆ. ಕೀರ್ತನ ಸಾಹಿತ್ಯವು ಈಗಾಗಲೇ ಸಿದ್ಧರೂಪದಲ್ಲಿದ್ದರೆ ಪ್ರವಚನಗಳು ಸಿದ್ಧವಾಗುತ್ತ ಸಾಗುತ್ತದೆ. ಕೀರ್ತನಗಳು ಒಂದು ಕಥೆಯನ್ನು ಅಥವಾ ಒಬ್ಬ ಮಹಾತ್ಮನ ವೃತ್ತಾಂತಕ್ಕೆ ಇಲ್ಲವೇ ನೀತಿಗೆ ಸಂಬಂಧಪಟ್ಟದಾಗಿದೆ. ಆದರೆ ಪ್ರವಚನಗಳು ಚಿಂತನೆಗಳ ಹಾಗೆ ಒಂದು ವಿಷಯ, ವಚನ, ವಚನದಸಾಲು, ನಿಜಗುಣದ ತತ್ತ್ವದಸಾಲು, ಹೀಗೆ ಭಿನ್ನ-ಭಿನ್ನವಾಗಿ ಇದ್ದು ನಿಗದಿತ ಅವಧಿಯಲ್ಲಿ ಮುಗಿಸುವ ಪ್ರವಚನಗಳೂ ಸಹ ಇಂದು ಕೀರ್ತನಗಳ ರೂಪದಲ್ಲಿ ಮುಂದುವರೆದಿವೆ. ಪ್ರವಚನಕಾರನು ಕೀರ್ತನಕಾರನಂತೆ ಸಂಗೀತ ಪರಿಕರಗಳನ್ನು ಬಳಸಿಕೊಳ್ಳುತ್ತಿದ್ದಾನೆ. ಸಾಮೂಹಿಕ ಪ್ರಾರ್ಥನೆ ಮಧ್ಯದಲ್ಲಿ ವಿಷಯವನ್ನು ಜನರಿಗೆ ಮನವರಿಕೆ ಮಾಡಿಕೊಡಲು ಹಾಡುಗಳನ್ನು ಬಳಸುತ್ತಾನೆ. ಸಂಗೀತವನ್ನು ಬಳಸುವಾಗ ಕೀರ್ತನಗಳ ಹಾಗೆ ಕರ್ನಾಟಕ ಸಂಗೀತವನ್ನು ಬಳಸದೇ ಸುಗಮಸಂಗೀತವನ್ನು ಬಳಸಿಕೊಳ್ಳವುದು ಕಂಡುಬರುತ್ತದೆ. ಈ ದೃಷ್ಟಿಯಿಂದಲೂ ಕೀರ್ತನೆಗಳಿಗಿಂತ ಪ್ರವಚನಗಳು ಭಿನ್ನವಾಗುತ್ತವೆ. ಕೀರ್ತನೆಗಳನ್ನು ಚಂಪೂರೂಪವೆಂದು ಒಪ್ಪುವದಾದರೆ ಪ್ರವಚನಗಳನ್ನು ಹಾಗೇ ಒಪ್ಪಬೇಕಾಗುತ್ತದೆ.

ಹೀಗೆ ಭಿನ್ನವಾಗಿಯೂ, ಅಭಿನ್ನವಾಗಿಯೂ ಕೀರ್ತನಗಳ ಜೊತೆ ಪ್ರವಚನಗಳು ತಮ್ಮ ಪ್ರತ್ಯೇಕತೆಯನ್ನು ಉಳಸಿಕೊಂಡು ಬೆಳೆದುಬಂದಿದೆ. ಕೀರ್ತನೆಗಳು ಉಪಕಥೆಗಳಿಂದ ತುಂಬಿರುತ್ತವೆ. ಪ್ರವಚನದಲ್ಲಿ ಇದಕ್ಕೆ ಅಷ್ಟು ಅವಕಾಶವಿರುವುದಿಲ್ಲ. ಆದರೆ ದೃಷ್ಟಾಂತ ಕಥೆಗಳನ್ನು ಔಚಿತ್ಯಪೂರ್ಣವಾಗಿ ಬಳಸಿಕೊಳ್ಳಬಹುದು.

**ಉಪನ್ಯಾಸ-ಪ್ರವಚನ:**

"ಉಪನ್ಯಾಸವೆಂದರೆ ವಚನದ ಉಪಕ್ರಮ. ಮಾತಿನ ಪ್ರಾರಂಭ ವ್ಯಾಖ್ಯಾನ. ಅರ್ಥವಿವರಣೆ, ಭಾಷಣ, ಇತ್ಯಾದಿ ಅರ್ಥಗಳನ್ನು ಪದಕೋಶಗಳನ್ನು ನೀಡುತ್ತವೆ".[೧೮]

ಕನ್ನಡದ ಸಂದರ್ಭದಲ್ಲಿ ಧಾರ್ಮಿಕ ಶೈಕ್ಷಣಿಕ ಆಧ್ಯಾತ್ಮಿಕ ಇತ್ಯಾದಿ-ಇತ್ಯಾದಿ ಉಪನ್ಯಾಸಗಳನ್ನು ನಾವು ಗಮನಿಸಬಹುದು. ಇಂಗ್ಲೀಷನ, 'LECTURER' ಎಂಬ ಶಬ್ದಕ್ಕೆ ಸಂವಾದಿಯಾಗಿ ಮಹಾವಿದ್ಯಾಲಯಗಳಲ್ಲಿ ಉಪನ್ಯಾಸವೆಂಬುದನ್ನು ಬಳಸಿದಹಾಗೆ ಕಾಣುತ್ತದೆ. ತಾತ್ವಿಕ, ಧಾರ್ಮಿಕವನ್ನೊಳಗೊಂಡಂತೆ ಯಾವುದೇ ವಿಚಾರಗಳನ್ನು ಉದ್ಬೋಧಕವಾಗಿ ಹೇಳಬಲ್ಲ ಸಂವಹನ ತಂತ್ರಗಳು ಹಲವು ರೂಪದಲ್ಲಿವೆ. ಉಪನ್ಯಾಸ, ಕೀರ್ತನೆ, ಗಮಕ ಮೊದಲಾದವುಗಳು. ಅವುಗಳಲ್ಲಿ ಪರಿಣಾಮ, ಪ್ರಭಾವ, ಸರಳತೆ, ನಿರಾಡಂಬರತೆಗಳಿಂದ ತುಂಬಿಯೂ ಹೆಚ್ಚು ಸಾರ್ಥಕ್ಯವನ್ನು ಪಡೆಯುವಂಥದ್ದೇ ಪ್ರವಚನ. ಉಪನ್ಯಾಸ ಎಂಬುದು ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ನಿಯಮಾನುಪಾತದಲ್ಲಿ ಸಂವಹನಗೊಳ್ಳುತ್ತದೆ.

ಪ್ರವಚನಗಳು ಉಪನ್ಯಾಸದ ತಂತ್ರಗಳನ್ನು ಬಳಸಿಕೊಳ್ಳುತ್ತದೆ ಆದರೂ ಪ್ರವಚನಗಳು ಒಂದು ಧಾರ್ಮಿಕ ಪ್ರಭಾವಲಯವನ್ನು ಹೊಂದಿರುತ್ತವೆ. ಉಪನ್ಯಾಸಕ್ಕೆ ಈ ನಿರ್ಬಂಧ ಅಗತ್ಯವಿಲ್ಲ. ಪ್ರವಚನಕಾರ ಒಂದರ್ಥದಲ್ಲಿ ಉಪನ್ಯಾಸಕನಾಗಿದ್ದಾನೆ.

ಉಪನ್ಯಾಸಕನಲ್ಲಿರಬೇಕಾದ ಮುಖ್ಯಗುಣಗಳೆಂದರೆ- ಉಪನ್ಯಾಸ ನೀಡುವ ವಿಷಯಕ್ಕೆ ಸಂಬಂಧಿಸಿದಂತೆ ಮೊದಲು ವಿಷಯ ಸಂಗ್ರಹಣೆ ಮಾಡಿಕೊಳ್ಳುವುದು. ಆ ವಿಷಯಕ್ಕೆ ಪೂರಕವಾಗುವಂತಹ ಪರಾಮರ್ಶಗ್ರಂಥಗಳ ಅಧ್ಯಯನ ಮಾಡಬೇಕು. ಆಗ ಮಾತ್ರ ತಾನು ಬೋಧಿಸುವ ವಿಷಯದ ಬಗ್ಗೆ ಪರಿಪೂರ್ಣಜ್ಞಾನಗಳಿಸಿಕೊಳ್ಳಲು ಸಾಧ್ಯವಾಗುತ್ತದೆ. ಉಪನ್ಯಾಸಕ ನಿರಂತರ ಅಧ್ಯಯನ ಶೀಲನಾಗಿರಬೇಕು. ಉಪನ್ಯಾಸಕನು ವಿದ್ಯಾರ್ಥಿಗಳಿಗೆ ಬೋಧಿಸುವ ವಿಷಯವನ್ನು ಅರ್ಥಪೂರ್ಣವಾಗಿ, ರಸವತ್ತಾಗಿ ಮತ್ತು ಸ್ವಾರಸ್ಯಕರವಾಗಿ ಹೇಳಬೇಕು. ಉಪನ್ಯಾಸಕನು ಒಂದು ವಿಷಯ ಬೋಧಿಸುವ ಮುನ್ನ ಅದಕ್ಕೆ ಸಂಬಂಧಿಸುವಾಗ ಆಯಾ ಸಂದರ್ಭಕ್ಕನುಗುಣವಾಗಿ ದೃಷ್ಟಾಂತ, ಹೋಲಿಕೆಗಳು ಮತ್ತು ನಿದರ್ಶನಗಳನ್ನು ನೀಡುವುದರ ಮೂಲಕ ಬೋಧಿಸಬೇಕು ಆಗ ಮಾತ್ರ ವಿದ್ಯಾರ್ಥಿಗಳು ಉತ್ಸಾಹದಿಂದ ಆಸಕ್ತಿಯಿಂದ ಕೇಳುತ್ತಾರೆ. ಈ ತಂತ್ರವನ್ನು ಪ್ರವಚನಕಾರನೂ ರೂಢಿಸಿಕೊಂಡಿರುತ್ತಾನೆ.

---

೧೮ " " ಸಂಸ್ಕೃತ ಕನ್ನಡ ಶಬ್ದಕೋಶ. ಸಂಪುಟ-೧. ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ- ದಾಮ್ಲೆ ಪ್ರಕಾಶನ-೧೯೯೭

ವಿದ್ಯಾರ್ಥಿಗಳ ಆಸಕ್ತಿಯನ್ನು ಕೆರಳಿಸಬೇಕಾದರೆ ಉಪನ್ಯಾಸಕನು ವಿಷಯವನ್ನು ರಸವತ್ತಾಗಿ ಸ್ವಾರಸ್ಯಕರವಾಗಿ ತಿಳಿಸಬೇಕಾಗುತ್ತದೆ. ಉಪನ್ಯಾಸಕನಿಗೆ ಬೋಧನ ಸಂದರ್ಭದಲ್ಲಿ ಅವನಲ್ಲಿರುವ ಶಿಸ್ತು ಮತ್ತು ಹಾಸ್ಯಪ್ರಜ್ಞೆ ಎಷ್ಟು ಮುಖ್ಯವಾಗಿರುತ್ತದೆಯೋ ಔಚಿತ್ಯ ಜ್ಞಾನ ಹಾಗೂ ಸನ್ನಿವೇಶ ಪ್ರಜ್ಞೆ ಅಷ್ಟೆ ಮುಖ್ಯವಾಗುತ್ತದೆ. ಆಳವಾದ ವಿಷಯ ಜ್ಞಾನ ಮತ್ತು ಪಾಂಡಿತ್ಯದ ಜೊತೆಗೆ ಉಪನ್ಯಾಸಕನಿಗೆ ಉತ್ತಮವಾದ ನಡತೆ, ಶಿಸ್ತು ಸಮಯಪ್ರಜ್ಞೆ, ತಾಳ್ಮೆ ಸ್ಥೈರಣೆ, ಮತ್ತು ಸೌಜನ್ಯತೆ, ಆತ್ಮಗೌರವ, ಆತ್ಮಸಂಯಮ, ಸ್ವಾಭಿಮಾನ, ಬೇರೆಯವರನ್ನು ಗೌರವಿಸುವ ಮನೋಭಾವ ಇಂತಹ ಮಾನವೀಯ ಗುಣಗಳನ್ನು ಉಪನ್ಯಾಸಕನಾದವನು ತನ್ನ ವೃತ್ತಿ ಜೀವನದಲ್ಲಿ ಮೈಗೂಡಿಸಿಕೊಂಡಿರಬೇಕು. ಪ್ರವಚನಕಾರನಿಗೂ ಕೂಡ ಇದೇ ಮಾನದಂಡಗಳು ಅಗತ್ಯವಾಗುತ್ತವೆ.

ಪುನ:ರ್ಮನನ ಅಭ್ಯಾಸವಾದರೆ, ಅಭ್ಯಾಸ ಮಾಡಿಕೊಂಡು ಪಾಠ ಮಾಡುವುದು ಉಪನ್ಯಾಸವಾಗಿದೆ. ಉಪನ್ಯಾಸ ನಿರ್ದಿಷ್ಟ ವಿಷಯವನ್ನು, ನಿರ್ದಿಷ್ಟ ಸಮಯದಲ್ಲಿ ವಸ್ತು-ವಿಷಯಗಳನ್ನು ವಿಶ್ಲೇಷಿಸಿ ಸಭೆಗಳಲ್ಲಿ, ಸಮಾರಂಭಗಳಲ್ಲಿ ಚೆನ್ನಾಗಿ ತಿಳಿಹೇಳುವ ವಿಧಾನವಾಗಿದೆ. ಇಲ್ಲಿ ಅನುಭವದ ವಿಷಯವನ್ನು ನಿಯಮ ಬದ್ಧ ರೀತಿಯಿಂದ ಹೇಳುವುದು ಒಂದು ರೀತಿ. ಅಲ್ಲಿ ವಾದ-ವಿವಾದವಿರದು. ಹೇಳುವುದನ್ನು ನೇರ ಮಾತುಗಳಿಂದ ಕೇಳಲು ಬಂದವರಿಗೆ ಉಪನ್ಯಾಸದ ರೀತಿಯಿಂದ ಹೇಳುವುದಾಗಿದೆ. ಅದೊಂದು ಮಾತಿನ ಮೋಡಿಯಿಂದ ಜನರನ್ನು ತಾವು ಹೇಳುವ ವಿಷಯದ ಕಡೆ ಅವರ ಗಮನವನ್ನು ಸೆಳೆಯುವುದಾಗಿದೆ. ಪುರಾಣ-ಭಯಾನಕ ಕತೆ ಆದರೆ, ಕೀರ್ತನೆ-ರೋಚಕಕತೆಯಾಗಿದೆ. ಆದರೆ ಉಪನ್ಯಾಸ ಶುದ್ಧ ಭಾಷೆ, ಜನರಿಗೆ ಸುಲಭವಾಗಿ ತಿಳಿಯುವಂತೆ ಹೇಳುವ ಕಲೆ. ಜನ, ಜಾಗೃತಿ ಮೂಡಿಸಲು, ಸಮಾಜದಲ್ಲಿ ಸುಧಾರಣೆ ತರಲು ಶೀಲವರ್ಧನೆಗೆ ಬದುಕಲ್ಲಿ ಸುಧಾರಣೆ ಪರಿವರ್ತನೆ ಮಾಡಿಕೊಳ್ಳಲು ಹೇಳುವ ರೀತಿ.

ಮಹಾವಿದ್ಯಾಲಯಗಳ, ವಿಶ್ವವಿದ್ಯಾಲಯಗಳ ಉಪನ್ಯಾಸಕರಿಗೆ ನಿರ್ದಿಷ್ಟ ವಿಷಯಗಳ ಮೇಲೆ ಪದವಿಯ ಅಗತ್ಯವಿರುತ್ತದೆ. ಪ್ರವಚನಕಾರನಿಗೆ ಇದರ ಅಗತ್ಯವಿಲ್ಲ.

ಉಪನ್ಯಾಸಕನಿಗೆ ಹೇಗೋ ಪ್ರವಚನಕಾರನಿಗೂ ವಿಷಯಜ್ಞಾನದ ಜೊತೆಗೆ ಭಾಷಾಜ್ಞಾನ ಬಹಳ ಮುಖ್ಯವಾಗಿರುತ್ತದೆ. ಏಕೆಂದರೆ ಮಾಸ್ತಿಯವರು ಹೇಳುವ ಹಾಗೆ "ಭಾಷೆ ಪಲ್ಲಟವಾದರೆ ಬಾಳು ಪಲ್ಲಟವಾಗುತ್ತದೆ".

ಒಬ್ಬ ಉತ್ತಮ ಉಪನ್ಯಾಸಕನಲ್ಲಿ ಪ್ರವಚನಕಾರನ ಗುಣವಿರಬೇಕಾದುದು ಮತ್ತು ಅವನು ಸಿದ್ಧಮಾಡಿಕೊಳ್ಳುವ ಟಿಪ್ಪಣೆಗಳು ಪ್ರವಚನಕಾರನ ಪ್ರವಚನ ಸಾಹಿತ್ಯಕ್ಕೆ ಸಂಬಂಧಸಿದಂತೆ ಇರಬೇಕಾಗುತ್ತದೆ ಎಂಬುದು ಇಲ್ಲಿ ಮುಖ್ಯ.

## ೨.೪: ಪುರಾಣ ಪ್ರವಚನ–ಹಾಗೂ ಪ್ರವಚನ

"ಹಿಂದೂ ಧಾರ್ಮಿಕ ಸಾಹಿತ್ಯದ ಒಂದು ದೊಡ್ಡ ಭಾಗ ವೈದಿಕ ಪುರಾಣಗಳಾಗಿದೆ. ಅನೇಕ ಶತಮಾನಗಳಿಂದ ಈ ದೇಶದ ಜನರ ಮೇಲೆ ತಮ್ಮ ಅದ್ಭುತ ಪ್ರಭಾವವನ್ನು ಬೀರುತ್ತ ಬಂದಿವೆ. ಇವು ಜನರು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಲೂ, ಜನಸಾಮಾನ್ಯರ ಮನಸ್ಸಿನಲ್ಲಿ ವೇದೋಪನಿಷತ್ತುಗಳ ಬೋಧೆಯನ್ನೂ ದೇವರ ಸಾಮರ್ಥ, ದಯೆ, ಪ್ರೀತಿಗಳನ್ನೂ, ಶಾಪ–ವಿಶಾಪಗಳ ಪ್ರಭಾವಗಳನ್ನೂ ಪ್ರತ್ಯಕ್ಷ ನಿದರ್ಶನಗಳಿಂದ ಶ್ರುತಪಡಿಸಲೂ ಬಹುಮಟ್ಟಿಗೆ ಸಹಾಯ ಮಾಡಿವೆ"೧೯

"ಪುರಾಣ ಶಬ್ದಕ್ಕೆ ನಿಘಂಟುಕಾರರು ಕೊಡುವ ಅರ್ಥ 'ಪ್ರಾಚೀನ'ವೆಂಬುದು. ಮಿಥ್ ಹಾಗೂ ಮೈಥಾಲಜಿ ಎಂಬ ಸಮಾನಾರ್ಥಕ ಪದಗಳನ್ನು ಬಳಸಿ, ನಮ್ಮಲ್ಲೂ ಅವು ಬಳಕೆಯಾಗಲು ಪ್ರೇರಣೆ ನೀಡಿದವರು ಗ್ರೀಕ್ ಬರಹಗಾರರು. ಅವರಿಗೆ ನಮ್ಮಲ್ಲಿ ಬಳಕೆಯಲ್ಲಿರುವಂತೆ ಮೈಥಾಲಜಿ ಎಂದರೆ ಬರಿಯ ಪುರಾಣದ ಅಧ್ಯಯನವಲ್ಲ; ಪುರಾಣ ಕಥೆಗಳನ್ನು ಹೇಳುವುದು ಎಂಬಂತಿದೆ. ಮುಂದೆ ಈ ಎರಡು ಪದಗಳಲ್ಲಿ ಸ್ಪಷ್ಟವಾದ ಅರ್ಥ ವ್ಯತ್ಯಾಸ ತಲೆದೋರಿತು. ಭಾರತೀಯ ಸಾಹಿತ್ಯದಲ್ಲಿ ಪುರಾಣಗಳ ಸ್ಥಾನ ದೊಡ್ಡದು".೨೦

ಪುರಾಣಗಳು ಪ್ರಾಚೀನವಾದವು ಎಂದು ಹೇಳಲು ಪ್ರಾಚೀನವಾದ ವೇದಗಳಿಂದ ಹಿಡಿದು ಮಹಾಭಾರತದವರೆಗಿನ ಎಲ್ಲ ಗ್ರಂಥಗಳಲ್ಲಿಯೂ ಪ್ರಮಾಣಗಳು ದೊರಕುತ್ತವೆ. ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಪುರಾಣಗಳಿಗೆ ಪ್ರಮುಖವಾದ ಸ್ಥಾನವಿದೆ. ಕಾಲಕಾಲಕ್ಕೆ ಭಾರತೀಯ ಸಂಸ್ಕೃತಿ ಬೆಳೆದು ಮಹಾವಟುವೃಕ್ಷವಾಗಿ ನೆರಳು ನೀಡಿ ನಿಂತಿರುವ ಈ ಕಥೆ ಪುರಾಣಗಳಿಂದ ತಿಳಿದುಬರುತ್ತದೆ. ಶೃತಿ ಸ್ಮೃತಿ ಇತಿಹಾಸಗಳಿಗೆ, ಧರ್ಮಾದಿ ವಿಷಯಗಳ ವರ್ಣನೆ ಮತ್ತು ನಿರೂಪಣೆಗಳಲ್ಲಿ ಸಮ–ಸಮವಾಗಿ ತೂಗುವ ಸತ್ವ ಪುರಾಣಗಳಿಗೆ ಇದೆ. ಭಾರತೀಯ ವೇದಾಂತ, ವಿವಿಧ ಮತಗಳು ಇವುಗಳ ಬೆಳವಣಿಗೆಗೆ ಪುರಾಣಗಳೇ ಆಕರ. ಪುರಾಣಗಳಲ್ಲಿ ಭಾರತೀಯ ಜನಾಂಗದ ಅಂದಿನ ಜೀವನ ಮತ್ತು ಸಂಸ್ಕೃತಿಯ ಸ್ವರೂಪ ಸಮಗ್ರವಾಗಿ ಚಿತ್ರಿತವಾಗಿದೆ. ಪುರಾಣಗಳನ್ನು 'ಭಾರತೀಯ ಸಂಸ್ಕೃತಿಯ ವಿಚಾರಗಳ ವಿಶ್ವಕೋಶವೆ'ನ್ನಬಹುದು.

---

೧೯ " "ವೀರಶೈವ ಪುರಾಣಗಳು–ಒಂದು ಅಧ್ಯಯನ. ಡಾ. ಎಸ್. ವಿದ್ಯಾಶಂಕರ. ಪುಟಸಂಖ್ಯೆ–೧ (೨೦೦೬)

೨೦ " " ಅದೇ ಪುಟಸಂಖ್ಯೆ–೧.೨.

"ಪುರಾಣಗಳು ಭಾರತೀಯ ಜನಜೀವನದಲ್ಲಿ ಹಾಸುಹೊಕ್ಕಾಗಿ ಹೆಣೆದು ಕೊಂಡಿವೆ; ಮತ್ತು ಅತಿ ಪ್ರಮುಖ ಪಾತ್ರವಹಿಸಿವೆ. ವೇದ ಆಗಮಗಳಂತೆ ಪುರಾಣಗಳೂ ಭಾರತೀಯರ ದೃಷ್ಟಿಯಲ್ಲಿ ಪೂಜ್ಯವಾಗಿವೆ. ವೇದಗಳಿಗೆ ಬರೆದ ಭಾಷ್ಯವೇ ಪುರಾಣಗಳು ಎಂಬ ಕಲ್ಪನೆ ಬೆಳೆದುಬಂದಿದೆ".೨೧

"ಪುರಾಣಗಳು ಸಾಂಕೇತಿಕ ಕಥೆಗಳ ಆಧಾರದ ಮೇಲೆ ರಚಿತವಾಗಿವೆ. "ಪುರಾಣಗಳು ತಮ್ಮ ಹೆಸರಿಗೆ ತಕ್ಕಂತೆ ಪುರಾತನ ಕಾಲದಿಂದಲೂ ಸಾಗಿಬಂದಿರುವ ಸೃಷ್ಟಿವರ್ಣನೆ, ಸಾಂಕೇತಿಕ ಕಟ್ಟುಕತೆ, ರೂಪಕ, ಸಂಪ್ರದಾಯ, ಮತ, ಸಮಾಜ ನಿಯಮ ಮುಂತಾದವುಗಳ ಜನಪ್ರಿಯ ನಿರೂಪಣೆಗಳು. ಇದೇ ಪುರಾಣಗಳ ಮೂಲೋದ್ದೇಶ. ಉಚ್ಚತಮವಾದ ಆಧ್ಯಾತ್ಮಿಕ ಹಾಗೂ ದಾರ್ಶನಿಕ ಸತ್ಯಗಳನ್ನು ಕಥೆ, ಆಖ್ಯಾನ. ಸಂಕೇತ, ಅಡ್ಡಕಥೆ, ಪವಾಡ, ದೃಷ್ಟಾಂತಗಳ ಮೂಲಕ ಜನಸಾಮಾನ್ಯರಿಗೆ ತಿಳಿಯಪಡಿಸುವುದೇ ಪುರಾಣಗಳ ಗುರಿ" ಎಂದು ಶ್ರೀ ಅರವಿಂದರು ಹೇಳಿರುವುದು ಗಮನಾರ್ಹ".೨೨ (Shri Aurobindo. Foundations of Indian Culture p.352.)

ಪುರಾಣಗಳು ನೀತಿಕಥೆ ಮತ್ತು ಅಖ್ಯಾಯಿಕೆಗಳ ರೂಪದಲ್ಲಿ ಯೋಜಿಸಲ್ಪಟ್ಟು ಸಾಮಾನ್ಯ ಜನತೆಗೆ ಧರ್ಮಗ್ರಂಥಗಳಾದವು. ಧರ್ಮ ಮತ್ತು ಮತದ ಮಹತ್ವವನ್ನಲ್ಲದೇ ಸಾಮಾಜಿಕ, ರಾಜಕಿಯ, ಸಾಂಸ್ಕೃತಿಕ ಜೀವನ ಇವುಗಳ ಚಿತ್ರಣವನ್ನು ಒದಗಿಸುತ್ತವೆ. ಪುರಾಣಗಳು ಕುತೂಹಲಕಾರಿಯಾದ ವಿವಿಧ ಜನಪದ ಕಥೆಗಳ ಬಗ್ಗೆ ತತ್ವಜ್ಞಾನದ ಬಗ್ಗೆ ಶಾಸನ ಸಂಸ್ಥೆಗಳ, ಜನಪ್ರಿಯ ಹಬ್ಬಗಳ ಮತ್ತೆ ಕಲೆಗಳ ವೃತ್ತಾಂತದ ಬಗ್ಗೆ ವಿವರವಾಗಿ ತಿಳಿಸುತ್ತವೆ. ವ್ಯಾಕರಣ, ಛಂದಸ್ಸು, ಅಲಂಕಾರ, ಧನುರ್ವಿದ್ಯೆ, ಅಶ್ವಗಜಗಳ ಪಾಲನೆ, ಮುಂತಾದ ವಿಷಯಗಳನ್ನು ಪುರಾಣಗಳು ವಿವರಿಸುತ್ತವೆ.

ಹೊಸ ಹೊಸ ವಿಚಾರಧಾರೆಗಳು, ಸಂಶೋಧನೆಗಳು, ಸಾಧನಗಳು ಎಷ್ಟು ಮುಖ್ಯವೋ ಪುರಾಣಗಳು ಸಹ ಎಲ್ಲ ಸಂದರ್ಭದಲ್ಲೂ ಸರ್ವಕಾಲಕ್ಕೂ ಚರಿತ್ರೆ ಮತ್ತು ಪ್ರಾಚೀನ ನಾಯಕರನ್ನು ಪ್ರಧಾನ ವಸ್ತುವಾಗಿರಿಸಿಕೊಂಡು ರಚನೆಯಾದ ಮತ್ತು ಪ್ರಧಾನಭೂಮಿಕೆಯಲ್ಲಿ ಕಾವ್ಯದ ಬೃಹತ್ ಸ್ವರೂಪವನ್ನು ಚಿತ್ರಿಸುವ ನಮ್ಮ ಪೂರ್ವಿಕರ ಸಾಹಿತ್ಯಕೃತಿಗಳು ಜನಮಾನಸವನ್ನು ತಲುಪಿದ್ದು 'ಪ್ರವಚನದಂಥ ಸಾಂಸ್ಕೃತಿಕ ಸಂವಹನ ಕ್ರಿಯೆ'ಯ ಮೂಲಕ.

---

೨೧ " " ಗುಬ್ಬಿಮಲ್ಲಣಾರ್ಯ ವಿರಚಿತ ವೀರಶೈವಾಮೃತ ಪುರಾಣ ಭಾಗ-೧. ಪುಟಸಂಖ್ಯೆ-೧೪.

೨೨ " " ಅದೇ ಪುಟ-೧೬

ಬಹುಶಃ ಒಂದು ಅಂಶವನ್ನು ಈ ಹಿನ್ನೆಲೆಯಲ್ಲಿ ಸ್ಪಷ್ಟಪಡಿಸಬಹುದು. ಪ್ರವಚನದಂತಹ ಸೌಲಭ್ಯವಿರದಿದ್ದರೆ, ಬಹುಸಂಖ್ಯಾತ ಅನಕ್ಷರಸ್ಥ ಸಮಾಜಕ್ಕೆ ಸಾಹಿತ್ಯ ಕೃತಿಗಳು ಮತ್ತು ಆ ಮೂಲಕ ಜೀವನ ಮೌಲ್ಯಗಳು ತಲುಪುತ್ತಿರಲಿಲ್ಲ. ಪುರಾಣ ಎಂಬುದು ಒಂದು ಸಾಹಿತ್ಯ ಕೃತಿಯಾಗಿದೆ. ಪ್ರವಚನ ಎಂಬುದು ಅದು ಜನಕ್ಕೆ ತಲುಪುವ ಸಂವಹನ ಕ್ರಿಯೆ.

ಪ್ರವಚನದ ಮೂಲಕವೇ ಪುರಾಣ ತನ್ನ ಆಧಿಕ್ಯವನ್ನು ಸಾರ್ಥಕ್ಯವನ್ನು ಪಡೆಯಬಲ್ಲದು. ಪುರಾಣದಲ್ಲಿ ತತ್ತ್ವಗೌಣವಾಗಿ ಕಥೆ ಪ್ರಮುಖವಾಗಿರುತ್ತದೆ. ಅನೇಕ ಪವಾಡಗಳನ್ನು ಪ್ರತಿಪಾದಿಸಲಾಗುವುದು.

ಪುರಾಣಗಳನ್ನು ನಿರೂಪಿಸುವ ಕಲೆ ಎಲ್ಲರಿಗೂ ಬರುವುದಿಲ್ಲ. ಪುರಾಣ ಹೇಳುವವರು ದೇವರಲ್ಲಿ ನಂಬಿಕೆ ಇಟ್ಟವರಿರಬೇಕು. ಅವರು ನಿರರ್ಗಳವಾಗಿ ಮಾತನಾಡುತ್ತ ಸುಶ್ರಾವ್ಯವಾಗಿ ಹಾಡುತ್ತ, ಹೊಗಳಿ, ರೋಚಕವಾಗಿ ಹೇಳುವ ಕಲೆ ಅಳವಡಿಸಿಕೊಂಡಿರಬೇಕು. ಒಟ್ಟಿನಲ್ಲಿ ಪುರಾಣಗಳು ಜನಜಾಗೃತಿ ಮಾಡುವ ಸಾಧನಗಳಾಗಿವೆ ಎಂನ್ನುವದಕ್ಕಿಂತ ಪುಣ್ಯಪ್ರದಗಳೆನಿಸಿವೆ.

ಮಹಾಮುನಿಕೃತವಾದ ಅಷ್ಟಾದಶಪುರಾಣ ಹಾಗೂ ಉಪಪುರಾಣಗಳಲ್ಲದೆ ಜೈನಪುರಾಣಗಳು ಕೂಡಾ ಮಹತ್ವಪಡೆದಿವೆ. ಸೂತಪುರಾಣಿಕರನ್ನು ಪುರಾಣ ಪ್ರವಚನಕಾರನೆಂದೇ ಕರೆಯಲಾಗಿದೆ. ೨೦ನೇ ಶತಮಾನದ ಉತ್ತರ ಕರ್ನಾಟಕದ ವೀರಶೈವ/ಲಿಂಗಾಯತ ಪ್ರವಚನಕಾರರು ತಮ್ಮ ಪ್ರವಚನಕ್ಕೆ ಸಂಪನ್ಮೂಲವಾಗಿ ಅನೇಕ ವೀರಶೈವ ಪುರಾಣಗಳನ್ನು ಬಳಸಿಕೊಂಡಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ವೀರಶೈವರ ಆದಿಪುರಾಣವಾದ ಭೀಮಕವಿಯ ಬಸವಪುರಾಣ, ಪದ್ಮಣಾಂಕನ-ಪದ್ಮಪುರಾಣ, ಚನ್ನಬಸವಪುರಾಣ, ಪಾಲ್ಕುರಿಕೆಯ ಸೋಮನಾಥನ ಸೋಮೇಶ್ವರಪುರಾಣ, ಪ್ರಭುದೇವರ ಪುರಾಣ, ಜೇಡರದಾಸಿಮಯ್ಯನ ಪುರಾಣ, ಮಹಾದೇವಿಯಕ್ಕನ ಪುರಾಣ, ದ್ಯಾಮಪುರ ಚನ್ನಕವಿಗಳ ಹೇಮರೆಡ್ಡಿಮಲ್ಲಮ ಪುರಾಣ.

ಉತ್ತರ ಕರ್ನಾಟಕದಲ್ಲಿ ಈ ಪುರಾಣ ಪ್ರವಚಚನಗಳೆಂಬ ಒಂದು ವಿಶಿಷ್ಟವಾದ ವೇದಿಕೆ ಇದೆ. ನಾವು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿರುವ ಪ್ರವಚನ ವಿಧಾನವು ಪುರಾಣ ಪ್ರವಚನಕ್ಕಿಂತ ಭಿನ್ನವಾಗಿರುದು ಕಂಡುಬರುತ್ತದೆ.

- "ಪುರಾಣಗಳಲ್ಲಿ ತಾತ್ವಿಕ ಮತ್ತು ಧಾರ್ಮಿಕ ಅಂಶಗಳು ಪ್ರಾಮುಖ್ಯತೆ ಪಡೆದಿವೆ. ಪ್ರವಚನಗಳು ವರ್ತಮಾನದ ಬದುಕಿನ ಕಡೆಗೆ ಮುಖಮಾಡಿರುತ್ತವೆ.

* ಪುರಾಣ ಪ್ರವಚನಗಳು ಆ ಕಾಲದ ನೀತಿಯನ್ನು ತತ್ತ್ವವನ್ನು ಕಥೆ ಸಿದ್ಧ ಸಾಹಿತ್ಯದ ರೂಪದಲ್ಲಿ ಮುಂದಿಡುತ್ತಿದೆ. ಪ್ರವಚನಕಾರ ಇವುಗಳನ್ನು ಅನೇಕ ಸಾರಿ ಆಧುನಿಕ ಬದುಕಿಗೆ ಅನ್ವಯಿಸಿ ನೋಡಲು ಉಪಕ್ರಮಿಸುತ್ತಾನೆ.

ಪುರಾಣ ಪ್ರವಚನಗಳಿಗೆ ಅದರದೇ ಶೈಲಿ ಇದೆ. ಪ್ರವಚನಗಳಿಗೆ ಪುರಾಣ ಪ್ರವಚನಗಳಲ್ಲಿ ಆಚರಣೆಗಳು ಹೆಚ್ಚು ಮುಖ್ಯವಾಗುತ್ತವೆ. ಗ್ರಂಥಪೂಜೆ, ಕಾಂಡಪೂಜೆ, ಅಧ್ಯಾಯಕ್ಕೊಂದು ಮಂಗಳಾಚರಣೆ, ಪ್ರಸಾದ ವಿತರಣೆ ಜಂಗಮಪಾದಪೂಜೆ. ಗ್ರಂಥಗಳಲ್ಲಿಯ ಪದ-ಪದ್ಯಗಳನ್ನು ರಾಗಕ್ಕೆ ಹೊಂದಿಸಿ ಸಂಗೀತದೊಂದಿಗೆ ಗಮಕದಲ್ಲಿ ಅಥವಾ ಸುಗಮಸಂಗೀತದ ಧಾಟಿಯಲ್ಲಿ ಹಾಡಬೇಕಾಗುತ್ತದೆ. ಅದರ ಸಂಪೂರ್ಣ ಪಠಣ ಪ್ರವಚನಕಾರ ಬೆಳಗ್ಗೆ ಅಧ್ಯಾಯದಿಂದ ಅಧ್ಯಾಯಕ್ಕೆ ಓದಬೇಕು. ಪುರಾಣ ಮುಗಿಸುವ ದಿನದ ಒಳಗೆ ಇಡೀ ಗ್ರಂಥವನ್ನು ಆತ ಪಠಣ ಮಾಡಬೇಕು. ದಿನಾಲು ಪುರಾಣ ಮುಗಿದ ನಂತರ ಮಂಗಳ ಹಾಡಬೇಕು. ಹೊರಗಡೆ ಮಂಗಳಾಚರಣೆಗೆಂದು ಆರುತಿ ಹಿಡಿದಿರುತ್ತಾನೆ. ಭಕ್ತರು ಅಲ್ಲಿ ತಮ್ಮ ಭಕ್ತಿ ಕಾಣಿಕೆಯನ್ನು ಸಲ್ಲಿಸುತ್ತಾನೆ. ಆದರೆ ಪ್ರವಚನಗಳ್ಲಿ ಇದಾವುದು ಇರುವುದಿಲ್ಲ. ಒಂದು ಸ್ತುತಿ ಅಥವಾ ಪ್ರಾರ್ಥನೆ, ಸಾಮೂಹಿಕ ಪ್ರಾರ್ಥನೆ ಇದ್ದು ನೇರವಾಗಿ ಪ್ರವಚನಕಾರ ವಿಷಯವನ್ನು ಪ್ರತಿಪಾದಿಸುತ್ತಾನೆ.

## ಪುರಾಣಗಳ ವಿಶೇಷ ಲಕ್ಷಣಗಳು

"ಸರ್ಗಶ್ಚ ಪ್ರತಿಸರ್ಗಶ್ವ ವಂಶೋ ಮನ್ವಂತರಾಣಿ ಚ

ವಂಶಾನುಚರಿತಾನುಚ್ಯೆವ ಪುರಾಣಂ ಪಂಚಲಕ್ಷಣಂ॥"[೨೩]

ಪುರಾಣಗಳು ಧಾರ್ಮಿಕ, ತಾತ್ವಿಕ, ಸಾಮಾಜಿಕ, ಸಾಂಸ್ಕೃತಿಕ, ನೈತಿಕ ಹಾಗೂ ಸಾಹಿತ್ಯಿಕ ಮೌಲ್ಯಗಳನ್ನು ಒಳಗೊಂಡಿವೆ.

---

೨೩ " " ವೀರಶೈವಾಮೃತ ಪುರಾಣ ಭಾಗ-೧. ಸಂಪಾದಕರು. ಡಾ. ಆರ್.ಸಿ. ಹಿರೇಮಠ. ಪುಟಸಂಖ್ಯೆ-೨೦

**ಆಧುನಿಕ ಪುರಾಣಗಳು:**

ದ್ಯಾಂಪುರ ಚನ್ನಕವಿಗಳ ಪುರಾಣಗಳು:

೧. ಹೇಮರಡ್ಡಿ ಮಲ್ಲಮ್ಮನ ಪುರಾಣ

೨. ಹಾಲಕೆರೆ ಅನ್ನದಾನಸ್ವಾಮಿಗಳ ಪುರಾಣ

೩. ನಾಲ್ವತವಾಡದ ವೀರೇಶ್ವರ ಪುರಾಣ

೪. ಹುಚ್ಚೇಶ್ವರ ಪುರಾಣ

೫. ಇಳಕಲ್ಲ ಮಹಾಂತಸ್ವಾಮಿಗಳ ಪುರಾಣ

೬. ಬಾಲಲೀಲಾ ಮಹಾಂತಶಿವಯೋಗೀಶ್ವರ ಪುರಾಣ

೭. ಹಾನಗಲ್ಲ ಕುಮಾರಸ್ವಾಮಿಗಳ ಪುರಾಣ

೮. ಕಂಬಳಿಹಾಳ ದೊಡ್ಡಬಸವೇಶ್ವರ ಪುರಾಣ

ಸರ್ವದರ್ಶನತೀರ್ಥ, ಪಂಡಿತ ವೈ. ನಾಗೇಶಶಾಸ್ತ್ರಿಗಳ ಪುರಾಣಗಳು:

೧. ಮರಿಯೋಗೀಶ್ವರ ಪುರಾಣ

೨. ಫಲಹಾರೇಶ್ವರ ಪುರಾಣ

೩. ಅರ್ಧನಾರೀಶ್ವರ ಪುರಾಣ

೪. ಸಿದ್ಧಲಿಂಗೇಶ್ವರ ಪುರಾಣ

೫. ಗವಿಸಿದ್ಧೇಶ್ವರ ಪುರಾಣ

೬. ಜಯದೇವ ಲೀಲೆ

೭. ಶ್ರೀ ಮೃತ್ಯುಂಜಯ ಲೀಲಾವಿಲಾಸಂ

ಪಂಡಿತ ಹುಕ್ಕೇರಿ ಸದಾಶಿವಶಾಸ್ತ್ರಿಗಳ ಪುರಾಣಗಳು:

೧. ಅಥಣಿ ಶಿವಯೋಗಿಗಳ ಪುರಾಣ

೨. ಬಿದರಿ ಕುಮಾರೇಶ್ವರ ಪುರಾಣ

ಶ್ರೀಮತಿ ಜಯದೇವಿತಾಯಿ ಲಿಗಾಡೆ ಅವರ ಪುರಾಣಗಳು:

೧. ಶ್ರೀ ಸಿದ್ಧರಾಮೇಶ್ವರ ಪುರಾಣ

ಪಂ. ಪುಟ್ಟರಾಜ ಕವಿಗಳು:

೧. ಮುಗಳಖೋಡ ಶ್ರೀ ಯಲ್ಲಾಲಿಂಗೇಶ್ವರ ಪುರಾಣ

೨. ಹಿಂದಿ ಬಸವ ಪುರಾಣ

೩. ಹೇಮರೆಡ್ಡಿಮಲ್ಲಮ್ಮನ ಪುರಾಣ. ಇನ್ನು ಮುಂತಾದವು

ಆಯಾ ಧರ್ಮಸಂಸ್ಕೃತಿಯ ಪ್ರಚಾರ ಮತ್ತು ಪ್ರಸಾರಕ್ಕೆ ಪುರಾಣಗಳನ್ನು ರಚಿಸಿ ಜನರಲ್ಲಿ ಶ್ರದ್ಧೆ ಮತ್ತು ಭಕ್ತಿ ಹುಟ್ಟುವಂತೆ ಮಾಡುತ್ತಿದ್ದರು.

## ೨.೫ ಪ್ರವಚನ: ವಿಶ್ಲೇಷಣೆ

"ಪ್ರವಚನ; ಉಪದೇಶ, ಬೋಧನೆ, ವ್ಯಾಖ್ಯಾನ ವಿವರದೊಡನೆ ಪ್ರತಿಪಾದಿಸುವುದು ಪ್ರ+ವಚ-(ಪರಿಭಾಷಣೆ), ಒಳ್ಳೆಯ ಮಾತು".[೨೪] "ಪ್ರವಚನನೀಯ-ಪ್ರವಚನ ಮಾಡಲ್ಪಡುವ ವಾಗ್ಮಿ, ಪ್ರವಕ್ತೃ".[೨೫] ಪ್ರವಚನ ಎಂಬ ಶಬ್ದವು 'ಪ್ರ' ಉಪಸರ್ಗದಿಂದ ಕೂಡಿದ 'ವಚ್' ಪರಿಭಾಷೆಯ ಧಾತುವಿನಿಂದ ನಿಷ್ಪತ್ತಿಯಾಗಿದೆ. ಪ್ರಕೃಷ್ಟವಚನ-ಪ್ರವಚನ ಚೆನ್ನಾಗಿ ಮಾತನಾಡುವವನು, ಚನ್ನಾಗಿ ತಿಳಿಸುವವನು ಚನ್ನಾಗಿ ಉಪದೇಶ ಮಾಡುವವನು ಪ್ರವಚಸ್. ಕ್ಲಿಷ್ಟ ಹಾಗೂ ತಾತ್ತ್ವಿಕ ಅಂಶಗಳನ್ನು ತನ್ನ ಕಾಲದ ಮಾನದಂಡಗಳಿಗೆ ಅನ್ವಯಿಸಿ ದೃಷ್ಟಾಂತ ಸೋದಾಹರಣಗಳ ಮೂಲಕ ವಿವರಿಸುವುದು. ಹೀಗೆ ಹೇಳುವಾಗ ಪ್ರವಚನ-ವಿವರಣೆ, ವ್ಯಾಖ್ಯಾನ ಎಂಬ ಅರ್ಥವಿರುವ ಸ್ವರೂಪಕ್ಕೆ ಸೂಕ್ತ ಪರಿಧಿಯನ್ನು ನೀಡಿದದಂತಾಗುತ್ತದೆ. ಪುರಾಣ-ಪ್ರವಚನ, ವಚನ-ಪ್ರವಚನ, ಇತ್ಯಾದಿ ನೆಲೆಯಲ್ಲಿ ವಿಶ್ಲೇಷಿಸಿ ವಿವರಿಸುವಾಗ, ಒಂದುಕಾಲದ ತಾತ್ತ್ವಿಕ ಮೌಲ್ಯವನ್ನು ಪ್ರತಿಪಾದಿಸುವ ಅಭಿವ್ಯಕ್ತಿಯನ್ನು ಮತ್ತೊಂದು ಕಾಲಕ್ಕೆ ವಿವರಿಸಿ ಹೇಳುವ ಒಂದು ಸಮೂಹ ಸಂವಹನ ಯೋಜನೆಯಾಗಿರುತ್ತದೆ. ಸಮೂಹ ಸಂವಹನಗೊಳ್ಳುವ ಯಾವುದೇ ಮಾಧ್ಯಮಗಳು ಇಲ್ಲದ ಕಾಲಘಟ್ಟದಲ್ಲಿ ಪ್ರವಚನ ಬಹುಮುಖೀ ಕಾರ್ಯ ಪೂರೈಸಿದೆ. ಸಾಮಾನ್ಯವಾಗಿ ಪ್ರವಚನ ಎನ್ನುವುದು ಧಾರ್ಮಿಕ, ಆಧ್ಯಾತ್ಮಿಕ ಮತ್ತು ವೇದಾಂತದ ವಿಷಯಗಳನ್ನು ಒಳಗೊಂಡಿರುತ್ತದೆ. ಮಹಾಭಾರತ, ರಾಮಾಯಣ, ಭಗವದ್ಗೀತೆ ಮತ್ತು ಭಾಗವತ ಮುಂತಾದ ಗ್ರಂಥಗಳಲ್ಲಿರುವ ತಾತ್ತ್ವಿಕ ಮತ್ತಿತರ ವಿಷಯಗಳನ್ನು ಕುರಿತು ವಿವರಣೆ, ವ್ಯಾಖ್ಯಾನ ಮಾಡುವುದು ಪ್ರವಚನಗಳಿಗೆ ಮೂಲ ಆಧಾರಗಳು ವೇದಕಾಲೀನ ಉಪನಿಷತ್ತುಗಳಿಂದಲೇ ದೊರೆಯುತ್ತವೆ. ಪ್ರವಚನ ಎಂಬ ಪದ ಆಧ್ಯಾತ್ಮಿಕ ತಳಹದಿಯ ಮೇಲೆ ನಿಂತಿದೆ. ಆಧ್ಯಾತ್ಮ ವಿಚಾರವನ್ನು ಚರ್ಚಿಸುತ್ತ ಆಸ್ತಿಕ ಮಹಾಶಯರ ಹೃದಯಕ್ಕೆ ನೇರವಾಗಿ ವಿಚಾರಗಳನ್ನು ಮನಮುಟ್ಟುವಂತೆ ತಿಳಿಸುವುದು ಹಾಗೂ ಆಸ್ತಿಕತೆಯನ್ನು ಜಾಗೃತಗೊಳಿಸುವುದು ಅದರ ಉದ್ದೇಶ. ಕಾಲಾಂತರದಲ್ಲಿ ಸಕಾಲಿಕ-ಸಾರ್ವಕಾಲಿಕ-ಸಮಕಾಲಿಕವಾದ ಅಂಶಗಳನ್ನು ಪ್ರವಚನ ಒಳಗೊಳ್ಳುತ್ತ ನಡೆದಿದೆ. ಪ್ರವಚನದ ಮೂಲ ಉದ್ದೇಶ ಸಮಾಜವನ್ನು ಸರಿದಾರಿಗೆ ತರುವುದು.

---

೨೪ " " ಸಂಸ್ಕೃತ-ಕನ್ನಡ ಶಬ್ದಕೋಶ. ಸಂ-೪. ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ ಬಾಪೋ ಪ್ರಕಾಶನ ಬೆಂಗಳೂರು.ಪುಟಸಂಖ್ಯೆ-೪. ೧೯೭೮.

೨೫ " " ಅದೇ ಪುಟಸಂಖ್ಯೆ-೪.

ಪ್ರವಚನಕಾರನಿಗೆ ನಿರ್ದಿಷ್ಟವಾದ ನಿಗದಿತ ಸಮಯವಿರುವುದಿಲ್ಲ. ಯಾವುದೇ ಒಂದು ವಿಷಯವನ್ನು ಬೇರೆ–ಬೇರೆ ರೀತಿಯಾಗಿ ಹಿಗ್ಗಿಸಿ ಹೇಳುವಸ್ವಾತಂತ್ರ್ಯ ಪ್ರವಚನಕಾರನಿಗೆ ಇದೆ. ವಿಷಯವನ್ನು ವಿಸ್ತಾರವಾಗಿ ಹೇಳಬೇಕಾದರೆ ದೃಷ್ಟಾಂತಗಳು, ನಿದರ್ಶನಗಳು ಮತ್ತು ಉದಾಹರಣೆಗಳು ಪ್ರವಚನಕಾರನಿಗೆ ಮುಖ್ಯವಾಗಿರುತ್ತವೆ. ಆದುದರಿಂದ ಪ್ರವಚನಕಾರ ಅನೇಕ ಗ್ರಂಥಗಳ ಅಧ್ಯಯನ ಮಾಡಿ ಆಳವಾದ ಜ್ಞಾನಸಂಪತ್ತನ್ನು ಪಡೆದಿರುತ್ತಾನೆ.

ಲೌಕಿಕ ಮತ್ತು ಪಾರಮಾರ್ಥಿಕ ಜ್ಞಾನದ ಅರಿವು, ಭಾಷೆಯ ಬಗ್ಗೆ ಪಾಂಡಿತ್ಯ ಹಾಗೂ ಯೋಗ್ಯವಾದ ರೀತಿಯಲ್ಲಿ ವಿಚಾರಗಳನ್ನು ಹೇಳುವ ಪ್ರತಿಭೆ ಮತ್ತು ಸಾಮರ್ಥ ಪ್ರವಚನಕಾರನಲ್ಲಿರಬೇಕಾಗುತದೆ. ಪ್ರವಚನ ಮಾಡುವವರಿಗೆ ನಿರ್ದಿಷ್ಟ ವಿಷಯದ ಚೌಕಟ್ಟಾಗಲಿ ಬಂಧನವಾಗಲಿ ಇರುವುದಿಲ್ಲ. ಆದರೆ ಒಂದು ಖಚಿತವಾದ ಧಾತುವಿಚಾರವನ್ನು ಸೂತ್ರವಾಗಿರಿಸಿಕೊಂಡಿರುತ್ತಾರೆ. ಸಾಮಾಜಿಕ ಸಿದ್ಧಾಂತಗಳನ್ನು ಅಳವಡಿಸಿ ಸಾಮಾಜಿಕ ಜಾಗೃತಿ, ಸಾಮಾಜಿಕ ಕಳಕಳಿ, ಸಾಮಾಜಿಕ ಬದಲಾವಣೆ ಮತ್ತು ಸಮಾಜವನ್ನು ಸರಿದಾರಿಗೆ ತರುವುದು. ಸಮಾಜದಲ್ಲಿರುವ ಅಂಕುಡೊಂಕುಗಳನ್ನು ತಿದ್ದಿ ಸರಿಪಡಿಸುವುದು ಪ್ರವಚನದ ಮತ್ತು ಪ್ರವಚನಕಾರನ ಉದ್ದೇಶವಾಗಿರುತ್ತದೆ. ಯಾವುದು ಕೇಳುಗನ ಮೇಲೆ ನೇರವಾದ ಪರಿಣಾಮವನ್ನುಂಟು ಮಾಡುತ್ತದೆಯೋ ಅದು ಉತ್ತಮ ರೀತಿಯ ಪ್ರವಚನವಾಗುತ್ತದೆ. ಪ್ರವಚನವು ಆಧ್ಯಾತ್ಮಿಕವಾದ, ಧಾರ್ಮಿಕವಾದ, ವಿಚಾರಗಳನ್ನು ಪ್ರವಚನದ ಸಂದರ್ಭದಲ್ಲಿ ಒಟ್ಟೊಟ್ಟಿಗೆ ತಿಳಿಸಬೇಕಾಗುತ್ತದೆ. ಆಗ ಮಾತ್ರ ಕೇಳುಗನ ಹೃದಯಕ್ಕೆ ನೇರವಾಗಿ ವಿಷಯವು ತಲುಪುತ್ತದೆ. ಪ್ರವಚನಕಾರ ಯಾವುದೇ ವಿಷಯವನ್ನು ಸಮರ್ಥವಾಗಿ, ಸರಳವಾಗಿ, ಸುಂದರವಾಗಿ ದೃಷ್ಟಾಂತ ಕೊಡುವುದರ ಮೂಲಕ ಪ್ರವಚನ ಮಾಡಿದರೆ, ಅಥವಾ ವಿಷಯವನ್ನು ಅರ್ಥಪೂರ್ಣವಾಗಿ ತಿಳಿಸಿದರೆ ಆಗ ಮಾತ್ರ ಕೇಳುಗ ತನ್ನಲ್ಲಿರುವ ತಪ್ಪುಗಳನ್ನು ತಿದ್ದಿಕೊಂಡು ಸರಿಯಾದ ದಾರಿಯಲ್ಲಿ ಮುನ್ನೆಡೆಯಬಲ್ಲನು.

ಲೌಕಿಕದಲ್ಲಿ ಮುಳುಗಿಹೋಗಿರುವ, ಭೌತಿಕ ಸಂಪತ್ತುಗಳನ್ನು ಗಳಿಸಿಕೊಂಡು ವಿಲಾಸದ, ಆಡಂಬರದ, ವ್ಯವಸ್ಥಿತವಲ್ಲದ ಜೀವನ ನಡೆಸುತ್ತಿರುವ, ಮೋಸವಂಚನೆಯಲ್ಲಿ ತೊಡಗಿರುವ ಹಾಗೂ ಭ್ರಷ್ಟಾಚರದಲ್ಲಿ ಮುಳುಗಿ ಹೋಗಿರುವ ಮನುಷ್ಯರನ್ನ ತಿದ್ದಿ ಅವರನ್ನು ಸರಿದಾರಿಗೆ ತರಲು ಪ್ರವಚನದ ಅವಶ್ಯಕತೆ ಮತ್ತು ಅಗತ್ಯತೆ ಬಹಳ ಮುಖ್ಯವಾಗಿದೆ.

ಇಂತಹ ಮನುಷ್ಯರಿಗೆ ಪ್ರವಚನ ಮೂಲಕ ಮನೋಚಿಕಿತ್ಸೆ ನೀಡಿ ಅವರಲ್ಲಿರುವ ಅವಗುಣಗಳನ್ನು, ನಾನಾ ರೀತಿಯ ರೋಗರುಜಿನಗಳನ್ನು ನಿವಾರಣೆ ಮಾಡಬಹುದಾಗಿದೆ. ಶ್ರೇಷ್ಠಪ್ರವಚನಕಾರರದು ಆ ರೀತಿಯ ಪ್ರಯತ್ನವಾಗಿದೆ. ಆಧುನಿಕ ಅತ್ಯಾಧುನಿಕ ಯುಗದಲ್ಲಿ ಈ ಕಾರ್ಯ ನಡೆಯುತ್ತದೆ. ಪ್ರಾತಿನಿಧಿಕವಾಗಿ ಉದಾಹರಿಸುವುದಾದರೆ, ೧೯ನೇ ಶತಮಾನದ ಕೊನೆಯದಶಕದಲ್ಲಿ ೨೦ನೇ ಶತಮಾನದ ಆರಂಭದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರು ಮತ್ತು ಸ್ವಾಮಿ ವಿವೇಕಾನಂದರು ಶ್ರೇಷ್ಠವಾದ ಪ್ರವಚನ ನೀಡುವುದರ ಮುಖಾಂತರ ಸಮಾಜದಲ್ಲಿದ್ದ ಮತ್ತು ಜನರಲ್ಲಿದ್ದ ಮೂಢನಂಬಿಕೆಗಳನ್ನು ತೊಡೆದುಹಾಕಿದರು. ಕನ್ನಡ ನಾಡಿನಲ್ಲಿ ಪ್ರವಚನ ನೀಡುವುದರ ಮೂಲಕ ಸಮಾಜದಲ್ಲಿದ್ದ ತಪ್ಪು ತಿಳುವಳಿಕೆಗಳು, ಕಂದಾಚಾರಗಳು, ಮೂಢನಂಬಿಕೆಗಳು ಇವುಗಳು ಬಗ್ಗೆ ಸರಿಯಾದ ಮಾಹಿತಿ ಮತ್ತು ದೃಷ್ಟಾಂತಗಳನ್ನು ನೀಡಿ ಸಮಾಜವನ್ನು ತಿದ್ದಿ ಸರಿದಾರಿಗೆ ತರುವ ಪ್ರಯತ್ನವನ್ನು ಮಾಡುತ್ತಿರುವ ಶ್ರೇಷ್ಠ ಪ್ರವಚನಕಾರರೆಂದರೆ, ಶ್ರೀ ಸಿದ್ದೇಶ್ವರ ಸ್ವಾಮಿಗಳು, ಕೆ. ಎಸ್. ನಾರಾಯಣಾಚಾರ್ಯ, ಚಂದ್ರಶೇಖರ ಗುರೂಜಿ, ವೀರೇಶನಾಂದ ಸ್ವಾಮಿಗಳು, ನಿರ್ಮಲಾನಂದ ಸ್ವಾಮಿಗಳು, ಶ್ರೀ ಪೂಜ್ಯ ಬಸವಾನಂದ ಸ್ವಾಮಿಗಳು, ಪಾವಗಡ ಪ್ರಕಾಶರಾವ್, ಬನ್ನಂಜೆ ಗೋವಿಂದಾಚಾರ್ಯ, ಹಿರೇಮಗಳೂರು ಕಣ್ಣನ್, ಇಬ್ರಾಹಿಂ ಸುತಾರ ಮತ್ತು ಮೊದಲಾದವರು. ಈ ಪ್ರವಚನಕಾರರೆಲ್ಲ ಪ್ರವಚನ ನೀಡುವುದರ ಮೂಲಕ ಸಾಮಾಜಿಕ ಸುಧಾರಣೆ ಮಾಡಿದ್ದಾರೆ.

## ಪ್ರವಚನದಿಂದಾಗುವ ಪ್ರಯೋಜನಗಳು

೧) ಪ್ರವಚನ ಕೇಳುವುದರಿಂದ ಉತ್ತಮ ರೀತಿಯ ಸಂಸ್ಕಾರ ಬೆಳೆಸಿಕೊಳ್ಳಬಹುದು

೨) ತನು–ಮನ–ಹೃದಯ ಪರಿಶುದ್ಧವಾಗುತ್ತದೆ.

೩) ಸತ್ಯಶುದ್ಧವಾದ ರೀತಿಯಲ್ಲಿ ಕಾಯಕವನ್ನು ಮಾಡಲು ಮುಂದಾಗುತ್ತೇವೆ.

೪) ನಮ್ಮಲ್ಲಿರುವ ಕೆಟ್ಟ ಚಟಗಳನ್ನು ಬಿಟ್ಟು ಉತ್ತಮ ರೀತಿಯ ಹವ್ಯಾಸಗಳನ್ನು ಬೆಳೆಸಿಕೊಳ್ಳತ್ತೇವೆ.

೫) ನೆಮ್ಮದಿಯ ಜೀವನ ನಡೆಸಲು ಪ್ರವಚನ ಸರಿಯಾದ ಮಾರ್ಗ ತೋರುತ್ತದೆ.

೬) ಪರೋಪಕಾರ ಮಾಡುವುದರಿಂದ ಜೀವನವನ್ನು ಸಾರ್ಥಕ ಪಡಿಸಿಕೊಳ್ಳುತ್ತೇವೆ.

೭) ಮಾನವೀಯ ಮೌಲ್ಯಗಳನ್ನು ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳವುದು.

೮) ಧರ್ಮದ ರಕ್ಷಣೆ ಮತ್ತು ಮಾನವಧರ್ಮವನ್ನು ಅನುಸರಿಸುವುದು.

೯) ನಮ್ಮ ಸಂಸ್ಕೃತಿಯ ಪರಂಪರೆಯನ್ನ ಉಳಿಸಿಕೊಳ್ಳಲು ಮುಂದಾಗುತ್ತೇವೆ.

೧೦) ಆಚಾರವಂತರಾಗಿ, ವಿಚಾರವಂತರಾಗಿ ಗೌರವಯುತ ಜೀವನ ನಡೆಸುವುದು.

೧೧) ಗುರು ಹಿರಿಯರ ಬಗ್ಗೆ ಗೌರವ ತೋರುವುದು.

೧೨) ಸ್ವಾಭಿಮಾನ, ರಾಷ್ಟ್ರಪ್ರೇಮವನ್ನು ಮೈಗೂಡಿಸಿಕೊಂಡು ಬದುಕುವುದು.

೧೩) ಪರಾವಲಂಬಿಯಾಗದೆ ಸ್ವಾವಾಲಂಬಿಯಾಗಿ ಜೀವನ ಸಾಗಿಸುವುದು.

೧೪) ಕಪಟ, ಮೋಸ, ವಂಚನೆ, ಅತಿಯಾದ ಆಸೆ, ದ್ವೇಷ, ಅಸೂಯೆ, ಮುಂತಾದ ನೀಚಗುಣಗಳನ್ನು ಬಿಟ್ಟು ಉತ್ತಮವಾದ ಗುಣಗಳನ್ನು ಬೆಳೆಸಿಕೊಳ್ಳುವುದು.

೧೫) ಎಂತಹ ಸಂದರ್ಭಲ್ಲೂ ಧೃತಿಗೆಡದೆ ಕಷ್ಟಗಳನ್ನು ಎದುರಿಸುವುದು.

೧೬) ಸರಳವಾಗಿ ಸುಂದರವಾಗಿ ಸೌಜನ್ಯಯುತವಾಗಿ ಮಾತನಾಡುವುದು.

೧೭) ಪ್ರವಚನ ಕೇಳುವುದರಿಂದ ಕಾಯಕದಲ್ಲಿ ಕೈಲಾಸ ಕಾಣಬಹುದು.

ಪ್ರವಚನ ಎನ್ನುವ ಪದ ಆಧುನಿಕವಾಗಿ ಅಪರಿಮಿತವಾದ ವಿಶಾಲವಾದ ಮತ್ತು ವಿಶಿಷ್ಟವಾದ ಅರ್ಥವನ್ನೂಳಗೊಂಡಿರುವುದು ತತ್ಕಾಲೀನ ಅವಶ್ಯಕತೆಯನ್ನು ಪೂರೈಸುತ್ತಿರುವುದರಿಂದಲೆ, ವನಚಗಳು ಅನುಭವ ಮಾತುಗಳಾದರೆ, ಕೀರ್ತನೆಗಳು, ದೇವರನಾಮಗಳು ಹಾಡುಗಳಿಗೆ ಸಂಬಂಧಿಸಿರುತ್ತವೆ. ನಿರ್ವಚನ ನಿರ್ಧಿಷ್ಟ ವಿಷಯದ ಭಾಷಣವಾಗುತ್ತದೆ. ಪುರಾಣಗಳು ಪ್ರಾಚೀನವಾದದ್ದುನ್ನು ಪುರಾತನವಾದದ್ದನ್ನು ತಿಳಿಯಪಡಿಸುತ್ತವೆ. ಆದರೆ ಪ್ರವಚನ ಅಥವಾ ಪ್ರವಚನಕಾರ ಸೀಮಿತವಾದ ಯಾವುದೇ ಒಂದು ವಿಷಯಕ್ಕೆ ಮತ್ತು ಚೌಕಟ್ಟಿಗೆ ಒಳಪಡದೇ ಸಂದರ್ಭ ಸನ್ನಿವೇಶಕ್ಕನುಗುಣವಾಗಿ ಯೋಗ್ಯವಾದ ಮತ್ತು ಆದರ್ಶವಾದ ವಿಚಾರಗಳನ್ನು ದೃಷ್ಟಾಂತಗಳ ಮೂಲಕ ನೇರವಾಗಿ ಕೇಳುಗನಿಗೆ ಮನಮುಟ್ಟುವಂತೆ ತಿಳಿಸುತ್ತಾನೆ. ಪ್ರವಚನ ಓದಿ ತಿಳಿದುಕೊಳ್ಳುವ ವಿಚಾರವಲ್ಲ. ಕೇಳಿ ತಿಳಿದುಕೊಳ್ಳವ ವಿಷಯ ಮತ್ತು ವಿಚಾರವಾಗಿದೆ. ಆದುದರಿಂದ ಸಹೃದಯನಾಗಿ ಕುಳಿತುಕೊಂಡು ಪ್ರವಚನ ಕೇಳಬೇಕಾಗುತ್ತದೆ. ಪ್ರವಚನವು ಮನುಷ್ಯನಿಗೆ ಚಕಿತ್ಸೆನೀಡುವ ದಿವ್ಯ ಔಷಧವಾಗಿದೆ. ಕ್ರಿಯಾಶೀಲ ವ್ಯಕ್ತಿಯಾಗಿ ಉತ್ತಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಪ್ರವಚನ ಸಹಾಯಕವಾಗುತ್ತದೆ.

"ಸಂತರ ಒಂದೊಂದು ಮಾತು ಅದು ಮಂತ್ರ, ದಿವ್ಯಜ್ಯೋತಿ! ಅದು ನಮ್ಮನ್ನು ಈ ಭವಸಾಗರದಿಂದ ಪಾರು ಮಾಡುತ್ತದೆ. ಅಂಥ ಪರಮಾನು ಭಾವಿಗಳ ನುಡಿಗಳನ್ನು ಕೇಳುವುದೇ 'ಸ್ವಾಧ್ಯಾಯ' ಅವರ ಅಮರ ಸಂದೇಶದಲ್ಲಿ ಕೆಲವು ನಮ್ಮ ಅಂತರಂಗದ ಕದವನ್ನು ತಟ್ಟಿ ನಮ್ಮನ್ನು ಎಚ್ಚರಿಸುತ್ತವೆ. ಬೆಳಕಿನ ಲೋಕದತ್ತ ಕರೆದೊಯ್ಯುತ್ತವೆ. ನಮ್ಮ ಮನಕ್ಕೆ ಮುದವನ್ನು ನೀಡುವ ಆ ನುಡಿ ಮುತ್ತುಗಳನ್ನು ನಾವು ನಮ್ಮವರೊಂದಿಗೆ ಹಂಚಿಕೊಳ್ಳಬೇಕು. ಅದುವೇ ಪ್ರವಚನ. ನಾವೀ ಪ್ರಪಂಚದಲ್ಲಿ ಅಜ್ಞಾನಿಗಳ ಮುಳ್ಳಿನ ಮಾತುಗಳನ್ನು ಮರೆಯಬೇಕು. ಸುಜ್ಞಾನಿ, ಸಂತರ, ಮಹಂತರ ನುಡಿಕುಸುಮಗಳನ್ನು ಉಡಿಯಲ್ಲಿ ಹಾಕಿಕೊಂಡು ನಾಡೆಲ್ಲ ಹರಡಬೇಕು. ಅದುವೇ ಸ್ವಾಧ್ಯಾಯ-ಪ್ರವಚನ!! ಫ್ರಾನ್ಸಿಸ್ ಬೇಕನ್ ವೈಜ್ಞಾನಿಕ ದೃಷ್ಟಿಯುಳ್ಳ ಮಹಾ ಮೇಧಾವಿ. ಸಾಧ್ಯಾಯದ ಕುರಿತು ಒಂದು ಸುಂದರ ಮಾತು ಹೇಳಿದ. "ಸ್ವಾಧ್ಯಾಯವು ಮನುಷ್ಯನಿಗೆ ಸಂತೃಪ್ತಿ ಸೌಂದರ್ಯ, ಸಾಮರ್ಥ್ಯಗಳನ್ನು ನೀಡುತ್ತದೆ!"೨೬

"ಸ್ವಾಧ್ಯಾಯದಿಂದ ಮನುಷ್ಯನ ದುರಾಶೆಗಳೆಲ್ಲ ಅಳಿದು ಸಂತೃಪ್ತಿ ಅಳವಡುತ್ತದೆ. ಸಮಸ್ತ ಸೃಷ್ಟಿಯಲ್ಲಿ ಶಿವನ ಸೌಂದರ್ಯವನ್ನು ಕಾಣುವ ದೃಷ್ಟಿಯು ಅರಳಿ ನಿಲ್ಲುತ್ತದೆ. ಯಾವ ಪ್ರಾಪಂಚಿಕ ವಿಷಯಗಳಿಗೂ ಸೋಲದ ಆತ್ಮಬಲ ಬೆಳೆದು ಬರುತ್ತದೆ. ಹೀಗೆ ಸಂತರ ಸವಿಮಾತುಗಳಿಂದ, ನುಡಿ ಕುಸುಮಗಳಿಂದ ನಮ್ಮ ಜೀವನವು ಸಾಲಂಕೃಗೊಳ್ಳುತ್ತದೆ. ಸುಂದರವೂ ಸುಮಧುರವೂ ಆಗುತ್ತದೆ".೨೭

"ಅಂಥ ಸಂತ-ಮಹಂತರ ನುಡಿ ಮುತ್ತುಗಳು ನಮ್ಮ ಅಂತರಂಗವನ್ನು ಬೆಳಗುವ ಜ್ಞಾನದ ದೀಪಗಳು! ಅಮರ ನುಡಿಗಳು. ನಾವು ನಿತ್ಯವೂ ಕೇಳುವುದು 'ಸ್ವಾಧ್ಯಾಯ' ಅವುಗಳನ್ನು ನಮ್ಮವರೊಂದಿಗೆ ಹಂಚಿಕೊಂಡು ಸಂತಸ ಪಡುವುದೇ ಪ್ರವಚನ".೨೮

"ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಸ್ವಾಧ್ಯಾಯ-ಪ್ರವಚನದ ಸುಗ್ಗಿಯೇ ನಡೆಯಿತು. ಬಸವಾದಿ ಶಿವಶರಣರು ಅನುಭಾವದ ನುಡಿಮುತ್ತುಗಳನ್ನಾಡಿದರು. ಅವುಗಳನ್ನು ತಲೆಯ ಮೇಲೆ ಹೊತ್ತು ದೇಶವನ್ನೆಲ್ಲ ಸುತ್ತಿ ಮನೆ ಮನೆಗೂ ತಲುಪಿಸುವ ಪವಿತ್ರ ಕಾಯಕ ಮಾಡಿದ ತ್ಯಾಗದ ಮೂರ್ತಿಗಳು ನೂರಾರು ಜನ. ಅವರ ಪವಿತ್ರ ಸ್ವಾಧ್ಯಾಯ-ಪ್ರವಚನ, ತಪಸ್ಸಿನಿಂದ ಕಲ್ಯಾಣದಲ್ಲಿ ಶಿವನ ಪ್ರಕಾಶ ತೊಳಗಿ ಬೆಳಗಿತು!".೨೯

---

೨೬ " " ಗುಣಸಂಪದ. ಸಂ. ಡಾ. ಶ್ರದ್ಧಾನಂದ ಸ್ವಾಮಿಗಳು. ಜ್ಞಾನಯೋಗ ಫೌಂಡೇಶನ್ ವಿಜಾಪುರ. ಪುಟಸಂಖ್ಯೆ-೪೮ (೨೦೦೦)

೨೭ " " ಗುಣಸಂಪದ. ಸಂ. ಡಾ. ಶ್ರದ್ಧಾನಂದ ಸ್ವಾಮಿಗಳು. ಜ್ಞಾನಯೋಗ ಫೌಂಡೇಶನ್ ವಿಜಾಪುರ. ಪುಟಸಂಖ್ಯೆ-೪೯ (೨೦೦೦)

೨೮ " " ಅದೇ ಪುಟಸಂಖ್ಯೆ-೪೯.

೨೯ " " ಅದೇ ಪುಟಸಂಖ್ಯೆ-೪೯.

# ಅಧ್ಯಾಯ-೩

## ಪ್ರವಚನ ಸಾಹಿತ್ಯ ಸ್ವರೂಪ

ಮನಸ್ಸು ಸಬಲ, ಸದೃಢ, ಸಂಪದ್ಭರಿತ ಆಗಲು ಆಂತರಿಕ ಭಾವ ಕಡಿಮೆ ಮಾಡಿ ಕೇಳಬೇಕು. ಜೀವನದಲ್ಲಿ ಸಂತೃಪ್ತಿ, ಸಮಾಧಾನ, ಸಂತಸತುಂಬಲು ಆಧ್ಯಾತ್ಮಿಕ ಗುಣಸಿರಿಯ ಅವಶ್ಯಕತೆ ಇದೆ. ಬದುಕನ್ನು ಕಲಿಸುವುದು ಪ್ರವಚನ. ಪ್ರವಚನಕ್ಕೆ ಪ್ರಭಾವಿತರಾದವರ ಜೀವನದಲ್ಲಿ ಕೋಟ್ಯಾಧೀಶರಲ್ಲಿಯೂ ಇಲ್ಲದ ಪ್ರಸನ್ನತೆ, ಪ್ರಶಾಂತಿ. ತಾವು ಕಡುಬಡತನದಲ್ಲಿ ಕಷ್ಟನಷ್ಟಗಳನ್ನು ಎದುರಿಸಿಯೂ ಅನ್ಯರಿಗೆ ಅನ್ನ ಆಶ್ರಯವನ್ನಿತ್ತ ಹೃದಯವಂತರ ದೇಶವಿದು. ಸೌಂದರ್ಯದ ಸುಗಂಧಗಳು ಹೂವಿನ ಗುಣಗಳು. ಅವೆರಡಿಲ್ಲವಾದರೆ ಹೂವೇ ಇಲ್ಲ. ಜೀವನದಲ್ಲಿ ಪ್ರವಚನದ ನುಡಿ-ನಡೆ ಇಲ್ಲವಾದರೆ ಬದುಕೇ ಶೂನ್ಯ. ಅಂಧಕಾರವನ್ನು ಕಳೆದ ಅಂದವಾದ ಬೆಳಕಿಗೆ ಬೆಲೆ ಇಲ್ಲ. ಅಮೂಲ್ಯವಾದ ಸೂಳ್ನುಡಿಗಳಿಗೆ ಸಮನಾದುದು ಬೇರೊಂದಿಲ್ಲ.

"ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ, ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥ".೩೦ ಎಂದಿದ್ದಾರೆ, ಜೇಡರ ದಾಸಿಮಯ್ಯ. ಯಾವುದರಿಂದ ಎಲ್ಲವೂ ಸಂತಸ ತರುವುದೋ ಅದನ್ನೇ ನಾವು ಮರೆತಿದ್ದೇವೆ. ಅರಿವಿನ ಕಣ್ಣು ತೆರೆಯಲು ಆನಂದದ ಪ್ರಭೆ ಸುತ್ತೆಲ್ಲ ಚೆಲ್ಲವರಿಯಲು ಪ್ರವಚನ ಬೇಕು.

ನಿಶ್ಚಿಂತ ತಲೆ, ವಿಶಾಲ ಹೃದಯ, ಪ್ರಸನ್ನ ಮನಸ್ಸು, ಸಮೃದ್ಧಿ ಸುಖೀ ಜೀವನಕ್ಕೆ ಸ್ವಾಧ್ಯಾಯ ಪ್ರವಚನ ಬೇಕು. ಬಲ್ಲವರ ಮಾತುಗಳು ಕ್ರಿಯಾಶೀಲ ಬದುಕಿಗೆ ಪ್ರೇರಕವಾಗಬಲ್ಲವು. ಸಂತಮಹಾಂತರ ಒಂದು ಮಾತಿನಲ್ಲಿ ಮಹದ ಬೆಳಕು ಕಾಣಬಹುದು. ಮಲಿನ ಮನವು ಸತ್ಸಂಗದಲ್ಲಿ, ಸತ್ಯಶ್ರವಣದಲ್ಲಿ ತಿಳಿಗೊಂಡಾಗ ನಿರ್ಮಲವಾದಾಗ ಬದುಕಿನಲ್ಲಿ ಆನಂದ ಅಳವಡುತ್ತದೆ. ಪಂಚವಿಷಯಗಳಿಂದ ಕೂಡಿದ ಪ್ರಪಂಚವು ಮನ ಪ್ರಸನ್ನತೆಗೆ ಕಾರಣವಾದರೆ ಅದುವೇ ಪ್ರಸಾದೀಕರಣ. ನೋವು-ನಲಿವು, ಮಾನಾಪಮಾನ ಇವೆಲ್ಲವನ್ನೂ ಭಗವತ್ಪ್ರಸಾದವೆಂದು ಅನುಭವಿಸಿ ನಾವು ಪ್ರಸನ್ನರಾಗಿ ಇರುವುದನ್ನು ಕಲಿಸುತ್ತದೆ. ಶರಣರ ನುಡಿಗಡಣದಿಂದ ಎನ್ನಮನ ಪ್ರಸಾದವಾಯಿತು.

---

೩೦ " " ಜೇಡರದಾಸಿಮಯ್ಯನವರ ವಚನ. ಸಂಖ್ಯೆ-೭೭೨ ಸಂಕೀರ್ಣ ವಚನಸಂಪುಟ-೨. ಪುಟ-೨೪೩.

ನಮ್ಮ ನೂರು ವರ್ಷದ ಬದುಕು ಸುಂದರ ಚಿತ್ರವಾಗಿ ಅರಳುವಂತೆ ಮಾಡಲು ಕಲಿಸಿಕೊಡುವ ಕಲೆಯೇ ಪ್ರವಚನ. ಬದುಕನ್ನು ಸುಂದರ ಭವ್ಯದಿವ್ಯ ಮಾಡುವದೇ ಪ್ರವಚನಯೋಗ. ನಮ್ಮ ಬದುಕನ್ನು ಪರಮಾನಂದದ ಕಡಲವನ್ನಾಗಿಸುವುದೇ ಪ್ರವಚನ.

ಕನ್ನಡ ಸಾಹಿತ್ಯಕ್ಕೆ ಸುದೀರ್ಘವಾದ ಇತಿಹಾಸವಿದೆ. ಸಾವಿರ ವರ್ಷಗಳ ಹಳಮೆ ಇದೆ. ಚಂಪೂ, ರಗಳೆ, ವಚನ, ಷಟ್ಪದಿ, ಸಾಂಗತ್ಯ, ಕೀರ್ತನೆ, ಸ್ವರವಚನ ಹಾಗೂ ತತ್ವಪದ ಹೀಗೆ ಹಲವು ಪ್ರಕಾರಗಳಲ್ಲಿ ಹರಡಿಕೊಂಡು ಕನ್ನಡ ಸಾಹಿತ್ಯ ಸೃಷ್ಟಿಗೊಳ್ಳುತ್ತ ಬಂದಿದೆ. ಸಾಹಿತ್ಯದ ಅಧ್ಯಯನ ಇತ್ತೀಚೆಗೆ ತೀವ್ರತರವಾಗಿ ನಡೆದಿದೆ. ವಚನಸಾಹಿತ್ಯದಿಂದ ಪ್ರೇರಣೆಗೊಂಡು ರಚನೆಗೊಂಡ ಈ ಪ್ರವಚನ ಸಾಹಿತ್ಯ ತುಂಬಾ ಮೌಲಿಕವಾದುದು. ಇದರ ಅಧ್ಯಯನ ನಡೆಯಬೇಕಾದುದು ಇಂದಿನ ಅವಶ್ಯ.

ಯಾವುದೇ ಒಂದು ಸಾಹಿತ್ಯ ಪ್ರಕಾರ ತನ್ನದೇ ಆಗಿರುವ ಸಿದ್ಧಾಂತದಿಂಬ ಕೂಡಿಬರುತ್ತದೆ. ಜೀವನ ಮೌಲ್ಯಗಳನ್ನು ಪರಮಾತ್ಮನ ಸ್ವರೂಪವನ್ನು ತಿಳಿಸುವ ಪ್ರಯತ್ನ ಇಲ್ಲಿ ಅಡಕವಾಗಿರುತ್ತದೆ. ಇದನ್ನೇ ಅಧ್ಯಾತ್ಮ ಎನ್ನುತ್ತೇವೆ. ಪ್ರವಚನವೆಂಬ ಮೂಲವಸ್ತು ಯಾವುದೇ ಒಂದು ಸನ್ನಿವೇಶ, ಘಟನೆಯಿಂದ ಜನ್ಮತಾಳುತ್ತದೆ.

ತತ್ವಪದಗಳು, ಅನುಭಾವ ಪದಗಳು, ಭಜನಾಗೀತೆಗಳು, ಸ್ವರವಚನಗಳು, ಶರಣರ ವಚನಗಳು, ಕವಿಸಾಹಿತಿಗಳ ಮಾತುಕೃತಿಗಳು ಪ್ರವಚನ ಸಾಹಿತ್ಯದಲ್ಲಿ ತುಂಬಿಕೊಂಡಿರುತ್ತವೆ. ದಿನದ ಜೀವನದಲ್ಲಿ ಪಾರಮಾರ್ಥಿಕ ಜೀವನ ಸತ್ಯ ಎಂಬುದನ್ನು ಪ್ರತಿನಿಧಿಸುತ್ತದೆ ದೇಹದ ಮಾಯೆಯನ್ನು ಹರಿದು ಚಿದಾನಂದದ ಬೆಳಕಿನ ದರ್ಶನ ಮಾಡಿಕೊಳ್ಳುವುದೇ ಆಗಿದೆ. ಲೌಕಿಕ ಜೀವನದಲ್ಲಿಯೇ ಇದ್ದು ಸಂಸಾರದ ಸಾರ ಸರ್ವಸ್ವವನ್ನೂ ಹೀರಿ ಒಂದಿಷ್ಟು ಮಾಗಿದ ಮಾತುಗಳನ್ನೂ, ಗುರುಕಾರುಣ್ಯರ ನುಡಿಗಳನ್ನೂ, ಸದ್ಭಾವನಾ ಹಾಡುಗಳನ್ನೂ ಕೇಳುತ್ತ ಪರಮಾನಂದ ಸುಖ ಹೊಂದುವುದೇ ಇದರ ಮೂಲ ಉದ್ದೇಶ. ನಶ್ವರತೆ ಶಾಶ್ವತವಲ್ಲ ಎಂಬುದನ್ನು ತಿಳಿಸಲು ಒಬ್ಬ ಮಾರ್ಗದರ್ಶಕ ಉಪದೇಶಕನಾಗಿ ಅರಿವು ಜಾಗೃತಗೊಳಿಸಿ ದೇಹದ ಗುಣಗಳನ್ನು ಇಲ್ಲವಾಗಿಸಿ ದೇವ ಗುಣಗಳನ್ನು ತುಂಬುತ್ತಾನೆ. ಆ ಅರಿವು ಪಡೆದುಕೊಂಡವನು ನೀತಿವಂತನಾಗಿ ಸಂಸಾರದಲ್ಲಿದ್ದುಕೊಂಡೆ ಶಿವ ಸುಖವನ್ನು ಹೊಂದಬಲ್ಲವನಾಗುತ್ತಾನೆ. ಶರೀರದ ಮೇಲಿನ ಅತಿಯಾದ ವ್ಯಾಮೋಹವನ್ನು ನೀಗಿಸಿ ಪರಮಾತ್ಮನ ಸನ್ನಿಧಿಗೆ ಪ್ರಯಾಣಿಸಬೇಕಾದುದು ಭಕ್ತನ ಕರ್ತವ್ಯ. ನಾನು-ನನ್ನದು ಎನ್ನುವ ಭ್ರಾಂತಿ ತೊರೆದು ಮಹಾಂತನಾಗುವ ಬಗೆಯನ್ನು ಪ್ರವಚನ ತಿಳಿಸಿಕೊಡುತ್ತದೆ.

ಅರಿವೇ ಗುರುವಾಗುವ ಬಗೆಯನ್ನು ಕಲಿಸಿಕೊಡುತ್ತದೆ. ಆಯಾ ಸಂಸ್ಕೃತಿಗಳ ಒತ್ತಡಗಳ ಹಿನ್ನೆಲೆಯಲ್ಲಿ ಗುರು, ಲಿಂಗ, ಆತ್ಮ, ಪರಮಾತ್ಮ, ಗುರುಶಿಷ್ಯ, ಭಕ್ತಿವೈರಾಗ್ಯ, ಧರ್ಮಕರ್ಮ, ಸಮಾಜ ಸಂಸ್ಕೃತಿ, ಪಾರಮಾರ್ಥ ಮೋಕ್ಷ ಸಾಧನೆಯ ವಿವಿಧ ಮೆಟ್ಟಿಲುಗಳನ್ನು ಪ್ರವಚನವು ನಮಗೆ ತಿಳಿಸಿಕೊಡುತ್ತದೆ. ಸಾಮರಸ್ಯ ಜೀವನಕ್ಕೆ, ಸಹಬಾಳ್ವೆಯ ಬದುಕಿಗೆ ಮಾರ್ಗದರ್ಶಿಯಾಗುತ್ತದೆ. ತನು–ಮನ–ಧನವನ್ನು ಗುರು ಲಿಂಗ ಜಂಗಮಕ್ಕರ್ಪಿಸಿ ನಿಶ್ಚಿಂತ ನಿರ್ಮಲವಾಗಿ ಬಾಳುವುದನ್ನು ಹೇಳಿಕೊಡುತ್ತದೆ.

ಪ್ರತಿವ್ಯಕ್ತಿಯೂ ಶಿವತತ್ತ್ವದ ಗುಣಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡು ಕಾರ್ಯೋನ್ಮುಖನಾಗಬೇಕು. ಆಧ್ಯಾತ್ಮಿಕ ಸಂಬಂಧ ತಂದೆ–ತಾಯಿ–ಮಗುವಿನ ಸಂಬಂಧಕ್ಕಿಂತಲೂ ಮಿಗಿಲು. ಪಂಚಭೂತಗಳಿಂದ ನಿರ್ಮಾಣಗೊಂಡ ಈ ಶರೀರವು ಪಂಚಭೂತಗಳಲ್ಲಿ ಲೀನವಾಗುವತನ ಶಾಶ್ವತ ಸುಖದ ಕಡೆ ಹಂಬಲಿಸಬೇಕು.

ವೇದ ಶಾಸ್ತ್ರ ಪುರಾಣೋಕ್ತಿಗಳನ್ನು ಬರೀ ಓದಿ ಹೇಳಿದರೆ ಸಾಲದು ಅದನ್ನು ಅನುಭಾವಕ್ಕೆ ಅಳವಡಿಸಬೇಕು. ಶಿಕ್ಷಣ ಶಾಸ್ತ್ರದಲ್ಲಿ ಬಲ್ಲಿದನಾದ ಶಿಕ್ಷಕನು ಮಂದಮತಿಯ ವಿದ್ಯಾರ್ಥಿಗೆ ಬಗೆಬಗೆಯ ದೃಷ್ಟಾಂತಗಳನ್ನು ಕೊಟ್ಟು ಗಹನ ವಿಷಯವನ್ನು ತಿಳಿಸಲು ಪ್ರಯತ್ನಿಸುವಂತೆ, ಜಾಣನಾದ ವೈದ್ಯನು ಉಲ್ಬಣ ರೋಗದಿಂದ ನರಳುವ ರೋಗಿಗೆ ವಿವಿಧ ಔಷಧೋಪಚಾರಗಳಿಂದ ಗುಣಪಡಿಸಲು ಚಡಪಡಿಸುವಂತೆ ಪತಿತರ ಉದ್ಧಾರಕ್ಕಾಗಿಯೇ ಸಮಾಜದ ಏಳ್ಗೆಗಾಗಿಯೇ ಪ್ರವಚನಗಳು ಇರುತ್ತವೆ.

ಚಿನ್ನ, ಬೆಳ್ಳಿ, ಉಡುಗೆ, ತೊಡುಗೆ ಮೊದಲಾದವು ನಮ್ಮ ಮನಕ್ಕೆ ಮುದಕೊಡುವ ಬಹಿರಂಗದ ಅಲಂಕಾರಗಳು. ನಮಗೆ ಆತ್ಮಾನಂದ ನೀಡುವ ಅಂತರಂಗದ ಅಲಂಕಾರಗಳೆಂದರೆ ಅನುಭಾವಿಗಳ ಆ ಮಾತುಗಳು, ಆತ್ಮವಿಶ್ವಾಸ, ಮನೋಬಲ ತುಂಬುವ ಮಾತುಗಳ ಅವಶ್ಯಕತೆ ಇದೆ. ಪರಮಸತ್ಯವನ್ನು ಕಂಡ ಇಂಥ ಜ್ಞಾನಿಗಳ ಒಂದೊಂದು ಮಾತನ್ನು ಮೆಲುಕು ಹಾಕುವುದು. ನಿತ್ಯ ನಡೆವುದೇ ಸ್ವಾಧ್ಯಾಯ. ನಮ್ಮ ಬದುಕನ್ನು ಕೆಡಿಸುವ, ನೆಮ್ಮದಿಯನ್ನು ಕಳೆಯುವ, ಸಾಮಾನ್ಯರ ನಿಂದೆಯ ನುಡಿಗಳನ್ನು ನಾವು ಮರೆಯಬೇಕು. ಸಂತರ–ಶರಣರ ಅಮರ ನುಡಿಗಳನ್ನು ನಮ್ಮ ಹೃದಯಮಂದಿರದಲ್ಲಿಟ್ಟು ನಿತ್ಯ ಆರಾಧಿಸಬೇಕು. ಅವರಿಂದಲೇ ನಮ್ಮ ಬದುಕು ಸುಂದರ. ಮಹಾತ್ಮರ ಒಂದು ಮಾತು ಅಂದೊಂದು ಮಂತ್ರ, ದಿವ್ಯಜ್ಯೋತಿ. ಅದು ನಮ್ಮನ್ನು ಈ ಭವಸಾಗರದಿಂದ ಪಾರು ಮಾಡುತ್ತದೆ. ಅಂಥಹ ಪರಮಾನುಭವದ ನುಡಿಗಳನ್ನು ಕೇಳುವುದೇ ಸ್ವಾಧ್ಯಾಯ. ಇಂತಹ ಅಮರ ಸಂದೇಶಗಳು ನಮ್ಮ ಅಂತರಂಗದ ಕದವನ್ನು ತಟ್ಟಿ ನಮ್ಮನ್ನು ಎಚ್ಚರಿಸುತ್ತವೆ. ಬೆಳಕಿನ ಲೋಕದತ್ತ ಕರೆದೊಯ್ಯುತ್ತವೆ.

ನಮ್ಮ ಮನಕ್ಕೆ ಮುದವನ್ನು ನೀಡುವ ಅಂಥ ಇಲ್ಲಿ ಒಂದು ನಿದರ್ಶನವನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹದು. ಆ ನುಡಿಗಳನ್ನು ನಾವು ನಮ್ಮವರೊಂದಿಗೆ ಹಂಚಿಕೊಳ್ಳಬೇಕು. ಅದುವೇ ಪ್ರವಚನ.

"ಉತ್ತರ ಜಪಾನ ದೇಶದಲ್ಲಿ ಓರ್ವ ಬಡ ಹುಡುಗ. ಹತ್ತು ಹದಿನೈದರ ವಯಸ್ಸು ತಂದೆ ತೀರಿಕೊಂಡಿದ್ದ. ಮನೆಯಲ್ಲಿ ಆ ತಾಯಿ ಒಬ್ಬಳೆ. ಅವಳಿಗೂ ವಿಪರೀತ ಕಾಯಿಲೆ ಏರಿದ ಜ್ವರದಿಂದ ಪ್ರಜ್ಞೆ ಕಳೆದು ಹೋಗುತ್ತಿದೆ. ಮೃತ್ಯುವಿನ ಹೆಜ್ಜೆಯ ಸದ್ದು ಕೇಳಿ ಬರುತ್ತಿದೆ. ಅಂಥದರಲ್ಲಿ ಮಗನನ್ನು ಕರೆದು ತಾಯಿ ಹೇಳಿದಳು ಮಗನೇ ನನ್ನದೊಂದು ಇಚ್ಛೆ ಇದೆ ನೆರವೇರಿಸುವೆಯಾ? ಮಗ ಹೇಳಿದ ತಾಯಿ ನಿನ್ನ ಆಶೀರ್ವಾದವಿರಲಿ ನೆರವೇರಿಸುವೆ. ಮಗನೇ ನೀನೊಬ್ಬ ಆತ್ಮಜ್ಞಾನಿಯಾಗಬೇಕು ಎಂದು ಹೇಳಿ ತಾಯಿ ಕಣ್ಣು ಮುಚ್ಚಿದಳು."

"ತಾಯಿ ಕಟ್ಟಿಟ್ಟಿದ್ದ ಕೊನೆಯ ಬುತ್ತಿ ತತ್ರಾಣಿಯನ್ನು ತೆಗೆದುಕೊಂಡು ಮಗಹೊರಟ, ಗುರುವನ್ನರಸುತ್ತ, ಹಲವಾರು ದಿನಗಳವರೆಗೆ ನಾಡೆಲ್ಲಾ ಸುತ್ತಿ ದಕ್ಷಿಣ ಜಪಾನದೇಶ ತಲುಪಿದ. ಅಲ್ಲೊಂದು ಆಮ್ರವನದ ಮರದಡಿಯಲ್ಲಿ ಬೌದ್ಧ ಗುರುವನ್ನು ಕಂಡ. ಸುತ್ತ ಸಾವಿರಾರು ಜನರು. ಗುರುವಿನ ಸೌಮ್ಯಶಾಂತಿ ಪರಮೋಪದೇಶ ಸಾಗಿದೆ. ಜನರೆಲ್ಲ ಮಂತ್ರಮುಗ್ದರಾಗಿ ಆಲಿಸುತ್ತಿದ್ದಾರೆ. ಆ ಹುಡುಗನೂ ಅಲ್ಲಿಗೆ ಹೋಗಿ ದೃಢವಾಗಿ ಕುಳಿತು ಮೈಯೆಲ್ಲ ಕಿವಿಯಾಗಿ ಕೇಳಿದ. ಆ ಮಹಾಗುರುಗಳು ನಿರ್ವಾಣದ ಉಪದೇಶ ಮಾಡಿದರು".[೩೧]

"ಕಾಣುವ ಮೇಘ, ಹರಿಯುವ ಹೊಳೆ, ಉರಿಯುವ ದೀಪ ಎಲ್ಲವೂ ಒಂದು ದಿನ ಮರೆಯಾಗುತ್ತದೆ. ಭವ್ಯವಾಗಿ ತೋರುವ ಈ ಪ್ರಪಂಚದ ತಿಲಮಾತ್ರದ ಲೇಪವಿಲ್ಲದ ಬರೀ ಬಯಲೊಂದು ಉಳಿದಿರುತ್ತದೆ ಅದೇ ನಿರ್ವಾಣ! ಮನುಷ್ಯನೇ ನೀನು ಅದನರಿತು ಬಾಳಿದರೆ ನಿನಗಿಲ್ಲ ಈ ಬಂಧನ. ಗುರುವಿನ ಈ ಅಮರವಾಣಿಯನ್ನು ಕೇಳಿದ ಆ ಸಾಧಕನಲ್ಲಿ ನಿರ್ವಾಣ ಜ್ಯೋತಿ ಬೆಳಗಿತು. ಅವನೊಬ್ಬ ಮಹಾಜ್ಞಾನಿಯಾಗಿದ್ದ. ಇದು ಪ್ರವಚನದ ಪ್ರಭಾವ".[೩೨]

---

೩೧ " " ಗುಣಸಂಪದ-ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರ ಪ್ರವಚನಗಳು ಸಂ.ಡಾ। ಶ್ರದ್ಧಾನಂದ ಸ್ವಾಮಿಗಳು. ಪುಟಸಂಖ್ಯೆ-೪೭, ೪೮. (೨೦೧೦)

೩೨ " " ಅದೇ ಪುಟಸಂಖ್ಯೆ

ಸಂತರ, ಮಹಾಂತರ, ಶರಣರ ನುಡಿಮುತ್ತುಗಳು ನಮ್ಮ ಅಂತರಂಗವನ್ನು ಬೆಳಗುವ ಜ್ಞಾನದ ದೀಪಗಳು. ಅಮರ ನುಡಿಗಳು ನಿತ್ಯವೂ ಕೇಳುವುದು ಸ್ವಾಧ್ಯಾಯ. ಅವುಗಳನ್ನು ನಮ್ಮವರೊಂದಿಗೆ ಹಂಚಿಕೊಂಡು ಸಂತಸ ಪಡುವುದೇ ಪ್ರವಚನ. ಭಕ್ತಿಗೆ ಅರಿವು ಅಂತರ್‌ಮುಖಿಗುಣ ಮುಖ್ಯ. ಬಹಿರಂಗದ ಮೋಹವನ್ನು ಬೇಗನೆ ನಾಶ ಮಾಡಿ, ದೇಹದ ಕೆಟ್ಟ ಚಿಂತೆಗಳನ್ನು ದೂರಮಾಡಿ, ಪ್ರಳಯ ಕಾಲವನ್ನು ಮೆಟ್ಟಿನಿಲ್ಲುವುದನ್ನು ಸೂಳ್ನುಡಿಗಳು ಕಲಿಸುತ್ತವೆ. ನಿವಾರಿಸುತ್ತವೆ. ಮನೋಹರವಾದ ಮನೋಮಧ್ಯದಲ್ಲಿ ಲಿಂಗಾನುಭವ ಸುಖ ತಂದು ನಿಲ್ಲಿಸುತ್ತವೆ.

ಒಂದು ಹೂವನ್ನು, ಎಲೆಯನ್ನು ಕಂಡು ಸಂತಸದ ಸೌಧವನ್ನೇ ಕಟ್ಟುತ್ತೇವೆ. ನಮ್ಮ ಮನಸ್ಸು ಮಹಾಂತರ ಉಪದೇಶದ ಒಂದು ಮಾತಿನಲ್ಲಿ ಮಹದ ಬೆಳಕು ಕಾಣುತ್ತದೆ. ಅಂದು ಕಂಡದ್ದನ್ನು ಇಂದಿಗೆ, ಇಂದು ಕಂಡದ್ದನ್ನು ನಾಳೆಗೆ ಮರೆಯದೇ ಮಡಿಲಬಿಟ್ಟು ಓಡಾಡುತ್ತದೆ. ಅಂತರಂಗವು ಪಾರದರ್ಶಕದಂತೆ, ಮುಂಜಾವಿನ ಇಬ್ಬನಿಯಂತೆ ನಿರ್ಮಲವಾಗಿರಬೇಕು. ತಿಳಿ-ತಿಳಿಯಾಗಿರಬೇಕು. ನಮ್ಮ ಬಾಳಬಂಡಿ ಸುಖಶಾಂತಿಯಿಂದ ಇರಲಿ. ಸತ್ಯದ ನುಡಿಗಳು ಅವಶ್ಯ ನಿರ್ಮಲ ಮನೋಗನ್ನಡಿಯಿಂದ ಅದು ಸಾಧ್ಯ.

ಪ್ರವಚನದ ಮಾತುಗಳು ಅವು ಯೋಗ್ಯ ಸಲಹೆಗಳು. ಅದನ್ನು ಅರಿತುಕೊಳ್ಳಬೇಕು. ಆದರ್ಶಗಳು, ಚಿಂತನೆಗಳು, ಜೀವನ ಮೌಲ್ಯಗಳು, ಸಂಬಂಧಗಳು, ಮಹಾನುಭಾವರ ಜೀವನ ದರ್ಶನಗಳು ಇಂದು ದೂರವಾಗುತ್ತಿವೆ. ಭಾವನೆಗಳು ಬತ್ತಿ ಹೋಗುತ್ತಿವೆ. ಅನೇಕ ವರ್ಷಗಳಿಂದ ಬಿದ್ದ ಪ್ರಪಂಚದ ಕಸವನ್ನು ಮನದ ಡಬ್ಬಿಯಿಂದ ಹೊರ ಚೆಲ್ಲಬೇಕು. ಮನವನ್ನು ಶುಚಿಗೊಳಿಸಿಕೊಳ್ಳಬೇಕು. ಮಲಿನ ಮನವು ಸತ್ಸಂಗ ಶ್ರವಣದಲ್ಲಿ ತೊಡಗಿ ತಿಳಿಗೊಂಡು ನಿರ್ಮಲವಾದಾಗ ಬದುಕು ಆನಂದಗೊಳ್ಳವುದು.

ಕನ್ನಡ ಪ್ರವಚನ ಕ್ಷೇತ್ರಕ್ಕೆ ಪರಂಪರೆಯಿದೆ. ಪ್ರವಚನದ ಮಾತುಗಳು ಚಿರಸ್ಥಾಯಿಯೂ ಉಳಿದಿರುತ್ತದೆ. ಪ್ರವಚನಕಾರನು ತನ್ನ ಉದ್ದೇಶ ಸಾಧಿಸುತ್ತಾನೆ. ಅಭಿವ್ಯಕ್ತಿಯನ್ನು ಸಶಕ್ತಗೊಳಿಸಲು ಬದುಕಿನ ಎಲ್ಲಾ ಘಟನೆ ಬಳಕೆಯಾಗಬೇಕು. ಪ್ರವಚನಕ್ಕೆ ಸಾಮಾನ್ಯವಾಗಿ ಪ್ರಥಮ ದರ್ಜೆಯ ಪ್ರವಚನದಲ್ಲಿ ಸಾಮಾನ್ಯ ಭಾಷೆ ಬಳಸಬೇಕು. ಪ್ರವಚನ ಪರಿಣಾಮ ತೀಕ್ಷ್ಣವಾದುದು. ಪ್ರವಚನಕ್ಕೆ ಕೇಳುಗರು ಅರ್ಧ ಯಶಸ್ಸಿಗೆ ಕಾರಣರಾದರು. ಕೇವಲ ಪಾಂಡಿತ್ಯ ಪ್ರದರ್ಶನವಲ್ಲ. ಬುದ್ಧಿಜೀವಿಗಳ ಬುದ್ಧಿಯ ಗುದ್ದಾಟವಲ್ಲಿ. ಪ್ರವಚನದಲ್ಲಿ ಸಂವಹನ ಮುಖ್ಯ. ಪ್ರವಾಚಕನು ಬರೀ ತತ್ವ ಬೋಧಕನಲ್ಲ, ಅಧ್ಯಾಪಕನಲ್ಲ. ಪ್ರವಚನಕಾರ ಎಲ್ಲರ ತತ್ತ್ವಸಿದ್ಧಾಂತ ಹೇಳುತ್ತಾನೆ.

ಪ್ರವಚನಕಾರನು ತಮ್ಮ ಅನುಭವಗಳ ಅಭಿವ್ಯಕ್ತಿಗೆ ಹೆಚ್ಚಿನ ಭಾವ ದೀಪ್ತಿಯನ್ನು ಜೀವಂತಿಕೆಯನ್ನು ತರುವುದಕ್ಕೆ ಪ್ರತಿಮೆ–ರೂಪಕಗಳನ್ನು ಪರಿಣಾಮಕಾರಿಯಾಗಿ ಬಳಸುತ್ತಾರೆ. ಹಾಗೇ ಪ್ರವಚನಕಾರನು ತನ್ನ ಪ್ರವಚನ ಸಾಹಿತ್ಯಕ್ಕೆ ಪ್ರತಿಮೆ ರೂಪಕ ಬಳಸಬೇಕು. ಕಾರಣ ಅದು ಹೆಚ್ಚು ಜನರನ್ನು ಆಕರ್ಷಿಸುತ್ತದೆ. ಅಷ್ಟೇ ಅಲ್ಲ, ಅದರಲ್ಲಿ ಜೀವಜಲ ಹರಿದು ಜೀವಂತಿಕೆ ತುಂಬಿಕೊಂಡು ತಕ್ಷಣ ಕೇಳುಗನನ್ನು ಆ ಮಾತೂ ಆವರಿಸುತ್ತದೆ.

'ಪ್ರತಿಮೆ' ಎಂದರೆ ಒಂದು ಶಬ್ಧ ಚಿತ್ರ. ಪ್ರತಿಮೆಗೆ ಸ್ಪಂದನ ಸಾಮರ್ಥ್ಯವಿರಬೇಕು. ಕಾವ್ಯ ಸೌಂದರ್ಯ ಮತ್ತು ಧ್ವನಿ ಎರಡೂ ಇರಬೇಕು.

ಪ್ರತಿಮೆಯು ಕಾವ್ಯದಲ್ಲಿ ಸಂಕ್ಷಿಪ್ತತೆಯನ್ನು, ಸಾಂದ್ರತೆಯನ್ನು ಸಾಧಿಸಿಕೊಳ್ಳುವ ಸಾಧನವಾಗಬೇಕು.

- ಇರುಳಿನ ತಾವರೆಯಂತೆ ಮುಖಬಾಡಿ (– ಹಾವಿನಹಾಳ ಕಲ್ಲಯ್ಯ.)
- ಇರುಳಿನ ನೈದಿಲೆಯಂತೆ ಕಣ್ಣ ಮುಚ್ಚದೆ........(– ಗಜೇಶ ಮಸಣಯ್ಯ.)
- ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ.....(ಬಸವಣ್ಣ)
- ಭಕ್ತನಾದಡೆ ಬಾಳೆ ಹಣ್ಣಿನಂತಿರಬೆಕು........ ( – ಕಾಡಸಿದ್ದೇಶ್ವರ)
- ಕೂಡಲ ಸಂಗನ ಶರಣರ ಬೇವ ಸವಿದಂತೆ.....(ಬಸವಣ್ಣ)

ವಚನಕಾರರು ಬಳಸಿದ ಮತ್ತು ಸೃಷ್ಟಿಸಿದ ಶಬ್ದ ಚಿತ್ರಗಳು ಸಮಾಜೋಭಾಷಿಕ ಮತ್ತು ಸಮಾಜೋಧಾರ್ಮಿಕ ಅಧ್ಯಯನದ ನೆಲೆಯಲ್ಲಿ ಅಪೂರ್ವ ಚಿಂತನೆಗಳನ್ನು ಸೃಷ್ಟಿಸಿದೆ.

ಸತ್ಸಂಗತ್ವೇ...... ನಿಸ್ಸಂಗತ್ವಂ......ನಿಶ್ಚಲಚಿತ್ತೇಜೀವಮ್ಮಕ್ತೆ

ಇದು ಶಂಕರರ ಅದ್ವೈತ. 'ಬುದ್ಧಂ, ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ ಸಂಘಂ ಶರಣಂ ಗಚ್ಛಾಮಿ' ಎನ್ನುವಂತೆ ಈ ತ್ರಿಕರಣ ವಚನಗಳು ಸಂಘ ಸಮೂಹದಿಂದ ನಿರ್ಮಾಣಗೊಂಡಿವೆ. ಅದು ಕರ್ತಾರನ ಕಮ್ಮಟವಾದ ಅನುಭವಮಂಟಪದಲ್ಲಿ ಸಂಘಟಿತ ವಿಚಾರವಾದರೆ ಧರ್ಮವಾಗಿ 'ವೀರಶೈವ ತತ್ತ್ವ'ವು 'ಬಸವತತ್ವ'ವಾಗಿ 'ಲಿಂಗಾಯತ' ಧರ್ಮವಾಗಿ ಬರಹರೂಪದ 'ಧರ್ಮಗ್ರಂಥ' ವಚನಗಳಾಗಿವೆ. ಬುದ್ಧನ ಬೋಧನೆಯ ನಂತರ ತ್ರಿಪಿಟಕಗಳಾದಂತೆ, ವಚನಗಳು ಬಸವಣ್ಣನವರ ಕಾಲದಲ್ಲಿ ಬರಹರೂಪಕ್ಕೆ ಬಂದಿವೆ. ಹನ್ನೆರಡನೇ ಶತಮಾನ ಕಲ್ಯಾಣಕ್ರಾಂತಿಯಿಂದ ವಚನಗಳು ವಿವಿಧೆಡೆ ಹರಿದು ಪ್ರಸಾರಗೊಂಡಿವೆ. ಅವುಗಳಲ್ಲಿ ಸಮಾಜದ ಸರ್ವತೋಮುಖ ಏಳ್ಗೆಯ ಚಿಂತನೆ ಇದೆ. ಬದುಕಿಗೆ ಒಂದು ಸುಗಮ ಮಾರ್ಗವಿದೆ.

ನಿಶ್ಚಯಾತ್ಮಕ ಬುದ್ಧಿಯು- ನ್ಯಾಯಾಧೀಶನಿದ್ದಂತೆ. ಆಲೋಚಿಸುವ ಮನಸ್ಸು- ವಕೀಲನಿದ್ದಂತೆ ಅಂತ:ಸಾಕ್ಷಿಯು-ಸಾಕ್ಷಿ ಇದ್ದಂತೆ. ಭಾವವು-ಕಕ್ಷಿದಾರನಿದ್ದ ಹಾಗೆ ನಮ್ಮ ಭಾವನೆ ಸರಿಯಾಗಿರಬೇಕಾದರೆ ಅದರ ಹಿಂದೆ ಎಲ್ಲಾ ವ್ಯವಸ್ಥೆ ಸರಿಯಾಗಿರಬೇಕು. ಇವೆಲ್ಲವೂ ಅಂದರೆ ಬುದ್ಧಿಯ ಆಲೋಚನೆ. ಮನಸ್ಸು, ಆತ್ಮಸಾಕ್ಷಿಯಿಂದ- ಭಾವನೆಗಳನ್ನು ಮಾತಿನಿಂದ ಹಿಡಿದಿಟ್ಟು ಅಂದರೆ ಈ ಭಾವನೆ ಶುದ್ಧವಾಗಿದ್ದಾಗ ಹೊರಹೊಮ್ಮಿದ ಅಂತಕರಣದ ಮಾತುಗಳೇ' ಅನುಭವದ ಮಂಟಪದಲ್ಲಿ ಬಸವಾದಿ ಪ್ರಮಥರ ಆಶ್ರಯದಲ್ಲಿ, ಅಲ್ಲಮರ ಶೂನ್ಯಪೀಠಾಧ್ಯಕ್ಷತೆಯಲ್ಲಿ ಶರಣರ ನುಡಿಗಟ್ಟುಗಳು ಹೊರ ಹೊಮ್ಮಿ ಕ್ರಾಂತಿಯನ್ನೇ ಮಾಡಿವೆ. ಇವೆಲ್ಲ ಒಂದು ಸಮೂಹ ಸೃಷ್ಟಿ ಎಂದು ಹೇಳಲಾಗುತ್ತದೆ.

ಈ ಶರಣರ ಸೃಷ್ಠಿ ಕಾಯಕ, ದಾಸೋಹ, ಪ್ರಸಾದ, ರೂಪದಿಂದ ಹೊರಹೊಮ್ಮಿದ ಇವೆಲ್ಲವೂ ತಮ್ಮ ತಮ್ಮ ಕಾರ್ಯಕ್ಷೇತ್ರದ ವ್ಯಾಪ್ತಿಯನ್ನು ಅರಿತು ಕಾರ್ಯ ನಿರ್ವಹಿಸಿದರೆ ವ್ಯಕ್ತಿತ್ವದ ಸಮಗ್ರತೆ ಉಂಟಾಗುತ್ತದ. ವ್ಯವಸಾಯಾತ್ಮಕ ಬುದ್ಧಿಯು ಚಿರಜಾಗೃತವಾಗಿದ್ದರೆ ಶರಣ ಸಾಹಿತ್ಯದಲ್ಲಿ ವಚನ ರಚನೆ, ಅನುಭವದ ಅಮೃತವಾಣಿ, ತ್ರಿಕಾಲ ಸತ್ಯದ ನುಡಿಗಳು ಹೊರ ಬಂದವುಗಳೇ 'ಕನ್ನಡ ಕುಲ ಕೋಟಿಯ ಅನರ್ಘ್ಯ ರತ್ನಗಳು'- ಈ ವಚನಗಳು ಇವುಗಳು ಗುರು, ಲಿಂಗ. ಜಂಗಮಕ್ಕೆ ಸಮರ್ಪಿಸುವುದೇ ಶರಣರ ಭಾವ ಅಡಗಿದ ನುಡಿಗಟ್ಟುಗಳು. ಇದನ್ನು ಬಲ್ಲವರು, ಸಾಹಿತಿಗಳು. ಜನಸಾಮಾನ್ಯರೂ ಅರಿಯುವ ಪರಿಯ ಮೇಲೆ ಇವುಗಳ ಒಳ ಅರ್ಥ ಅರ್ಥೈಸಿದಷ್ಟು ಆಳಕ್ಕೆ ಸೆಳೆಯುತ್ತದೆ. ಸಾಮಾನ್ಯರನ್ನು ತನ್ನತ್ತ ಸೆಳೆಯುವ ಮಹಾನ್ ಶಕ್ತಿ ಈ ವಚನಗಳಿಗಿದೆ. ವಚನಗಳು ಗದ್ಯ-ಪದ್ಯ ರೂಪದಲ್ಲಿ ರಚಿತವಾದ ವಿಶೇಷ ಸಮೂಹ ಸೃಷ್ಟಿಗಳಾಗಿವೆ.

ಮಾತು-ವಚನವಾಗಿ, ವಚನ-ನಿರ್ವಚನವಾಗಿ, ನಿರ್ವಚನಗಳೇ- ಪುರಾಣಗಳಾಗಿ, ಪುರಾಣಗಳೇ-ಹಾಡಿನ ಗದ್ಯ ರೂಪದ ಕೀರ್ತನೆಗಳಾಗಿವೆ. ಈ ಕೀರ್ತನೆಯ ಸಾಹಿತ್ಯ ರೂಪವೇ- ಉಪನ್ಯಾಸವಾಗಿದೆ. ಇವೆಲ್ಲವುಗಳು ಕೂಡಿ ತನ್ನದೆ ಆದ ವಿಶೇಷ ಸ್ಥಾನ ಹೊಂದಿರುವಂಥದ್ದೇ- ಪ್ರವಚನವಾಗಿದೆ.

ಬುದ್ಧ, ಬಸವ, ಕ್ರಿಸ್ತ, ಪೈಗಂಬರ ಮಾತುಗಳೇ ಪ್ರವಚನದ ನುಡಿಗಳು. ಆಧುನಿಕ ಕಾಲದಲ್ಲಿ ನಮ್ಮ ನಡುವೆ ನುಸಿಳಿ ಬಂದ ಶ್ರೀ ಸಿದ್ಧೇಶ್ವರ ಸ್ವಾಮಿಗಳ ಪ್ರವಚನಗಳು ಲೋಕ ಕಲ್ಯಾಣದ, ಮನಸ್ಸಿನ ನೋವು ನಿವಾರಿಸಿ, ನೆಮ್ಮದಿ ಬದುಕಿಗೆ ದಾರಿತೋರುತ್ತಿವೆ. ಸಹಜ ಬದುಕಿನ ದಾರಿ ತೋರಿದ ನಡೆದಾಡುವ ದೇವರೇ ಅವರು ಶ್ರೇಷ್ಠ ಜ್ಞಾನಿಗಳಾಗಿದ್ದಾರೆ. ಅವರಿಗೆ ತಿಳಿಯದ ಜ್ಞಾನ ಯಾವುದಿದೆ? ಅವರು ನುಡಿದಂತೆ, ನಡೆದು ತೋರಿದ ಮಹಾತ್ಮರು, ಅವರಂತವರ

ಮಾತುಗಳೇ ಪ್ರವಚನಗಳು. ನಂತರ ಶರಣರ, ಜ್ಞಾನಿಗಳ-ಜ್ಞಾನದ ಮಾತುಗಳನ್ನು ಸುಲಭವಾಗಿ ಬಿಡಿಸಿ, ವಚನ ನಿರ್ವಚನ ಪ್ರವಚಿಸಿ ಪ್ರವಚನ ನೀಡಿದ್ದಾರೆ.

ಪ್ರವಾದಿಗಳು ಪ್ರವಚನ ಮಾಡಿದ್ದನ್ನು ಅನುಯಾಯಿಗಳು ಬರೆದಿಟ್ಟಾಗ ಧರ್ಮಗ್ರಂಥಗಳಾಗಿವೆ. ಹೇಳಿದ್ದೆಲ್ಲಾ ಸತ್ಯವನ್ನೇ ಹೇಳಿದ್ದು ವಚನವಾಗಿವೆ. ಪ್ರವಚನವೆಂದರೆ ವ್ಯಾಪಕವಾದದ್ದು. 'ಪ್ರ' ಎಂದರೆ-ಸುಂದರವಾದುದು. 'ವಚನ' ಎಂದರೆ- 'ಕಾಯಾ ವಾಚಾ ಮನಸಾ' ಮೂರರಿಂದಲೂ ಶುದ್ಧವಾದದ್ದು. 'ಸತ್ಯಂ, ಶಿವಂ, ಸುಂದರಂ' ಎಂಬಂತೆ ಸುಂದರ ಮನಸ್ಸಿನಿಂದ ಹೊಸತನ ತುಂಬುವ ಮಾನವೀಯ ಮೌಲ್ಯ ಬೆಳೆಸುವ ರೀತಿಯೇ ಪ್ರವಚನ. ಭಾಷೆಗೆ, ನುಡಿಗೆ. ಮೌಲ್ಯ ತಂದುಕೊಟ್ಟು ಸಕಲರಿಗೂ ಅರ್ಥವಾಗುವಂತೆ ಬೋಧಿಸುವುದೇ 'ಪ್ರವಚನ'. ತತ್ವಗಳನ್ನು ತಿಳಿಸುವ ಕ್ರಮಬದ್ಧವಾದ ಮಾತುಗಳು ಅರ್ಥವಾಗದ ವಿಷಯ ಅರ್ಥವತ್ತಾಗಿ ತಿಳಿಸುವ ಕ್ರಮವೇ 'ಪ್ರವಚನ'. ಹೇಳುವುದನ್ನು ಕೇಳುವುದು ಪ್ರವಚನವಾದರೆ, ಆ ವಿಷಯ ಮನನ ಮಾಡುವುದೇ-ಸ್ವಾಧ್ಯಾಯ. ಅದು ವಿಶ್ವವನ್ನು, ವಿಶ್ವದಾಚೆಯ ಮಾತನ್ನು ಸತ್ಯವನ್ನು ಅರಿಯಲು ಪ್ರವಚನ ಕೇಳುವುದೇ ಒಂದು ಸುಲಭಮಾರ್ಗವಾಗಿದೆ. ಆಧ್ಯಾತ್ಮಿಕ ಅರಿವು ಮಾಡುವುದೇ ಮಹಾತ್ಮರ ಪ್ರವಚನಗಳಿಂದ. ಪ್ರವಾದಿಗಳ ಮಾತುಗಳೇ ಪ್ರವಚನಗಳಾಗಿವೆ. ಸತ್ಯಶರಣರ ನಿತ್ಯದ ನುಡಿಗಳೇ ಶಿವತ್ವ ಹೊಂದಲು ಸಾಧನಗಳಾಗಿವೆ. ಪ್ರವಚನಕ್ಕೆ ಭಾವ ಸಂಚಲನ ಬೇಕು. ಹಾಸ್ಯಕ್ಕೆ ನಗುವ ಭಾವ ಹೇಗೋ ಹಾಗೆಯೇ ಪ್ರವಚನಕ್ಕೆ ಪ್ರಭಾವ, ಪ್ರಕಾಶ, ಪ್ರಚೋದನೆ, ವಿಕಾಸ, ಬೆಳಕು ನೀಡುವುದೇ ಪ್ರವಚನದ ತಂತ್ರವಾಗಿದೆ. ಈ ಬೆಳಕಲ್ಲಿ ಪೂರ್ಣತ್ವ ಹೊಂದುವುದೇ ಜೀವನದ ಗುರಿಯಾಗಿರಬೇಕು. ಅದಕ್ಕೆ ಸದ್ಗುರುವಿಗೆ ಶರಣಾಗಲು 'ಸತ್‌ಕಥನಂ', 'ಸತ್ ಪ್ರಬೋಧನಂ', ಎಂಬಂತೆ ಸದಾ ಸತ್ಯಾರ್ಥಿ ಆಗಿರು, ಸತ್ಯವಂತರ ಮಾತು ಕೇಳು. ಅದೇ ಪ್ರವಚನದ ಗುರಿ.

ಪ್ರವಚನವು ಗುರುಮಾತೆ ಹೇಳುವ ಲಾಲಿ. ಪ್ರವಚನಗಳು ಮಾನವನ ಕೆರಳಿಸಬಾರದು, ಅರಳಿಸಬೇಕು. ಸಂತಮಹಾಂತರ ಉಪದೇಶ ಆಧ್ಯಾತ್ಮಿಕ ವಸಂತ. ಆತ್ಮ ಕೋಗಿಲೆ ಜ್ಞಾನ ಚಿಗುರು ತಿಂದು ಹಾಯಾಗಿ ಹಾಡುತ್ತದೆ. ಇದು ಪ್ರವಚನ ಯೋಗ. ಪ್ರಜ್ಞಾನೇತ್ರದಿಂದ ಪರಿಶುದ್ಧಮನದಿಂದ ಜೀವನದ ಎಲ್ಲ ಕ್ಷಣಗಳನ್ನು ಅರಿತು ಅನುಭವಿಸುವುದು ಪ್ರವಚನ. ಆಗ ಎಲ್ಲ ಭೇದಭಾವ ಮರೆ. ಆಗ ಗಂಜಿಯು ಅಮೃತ. ಗುಡಿಸಲೇ ಅರಮನೆ. ಎತ್ತೆತ್ತ ನೋಡಿದತ್ತ ನೀನೇ ದೇವಾ ! ಎಂಬ ವಿಶಾಲ ಹೃದಯ ತೆರೆದು ಕೊಳ್ಳುತ್ತದೆ. ಆಗ ದುಃಖವೆಲ್ಲ ನಿವೃತ್ತಿ, ಪರಮಾನಂದ ಪ್ರಾಪ್ತಿ. ಪ್ರವಚನವು ಮಾಯೆಯ ಬಲೆಯಿಂದ ಹೊರಬರುವುದನ್ನು ಧನಾತ್ಮಕ ದೃಷ್ಟಿಯಿಂದ

ಬದುಕುನೋಡುವುದನ್ನು ಕಲಿಸುತ್ತದೆ. ಮಾನಸಿಕವಾಗಿ ಸುಪ್ತವಾದ ಚೇತನ ಬಡಿದೆಬ್ಬಿಸುವ ಕಾರ್ಯ ಮಾಡುತ್ತದೆ.

"ಕರ್ಣಕ್ಕೆ ಶೃಂಗಾರ ಪುರಾತನ ಸುಗೀತಂಗಳ ಕೇಳುವುದು"[೩೩] ಎನ್ನುತ್ತಾಳೆ!; ಶಿವಶರಣೆ ಅಕ್ಕಮಹಾದೇವಿ. ಮಹಾತ್ಮರು ಇದ್ದಾಗ ಕೇಳುವುದು ಪ್ರವಚನ, ಇಲ್ಲದಾಗ ನೆನಪಿಸಿಕೊಳ್ಳುವುದು ಸ್ವಾಧ್ಯಾಯ. ಯಾರು ನಿಜ ಬೆಳಕು ಕಂಡಿರುವರೋ, ಯಾರ ಮಾತು ಕೃತಿಯಲ್ಲಿ ಜ್ಞಾನದ ಜ್ಯೋತಿ ಬೆಳಗುತ್ತದೆಯೋ ಅವರ ದರ್ಶನ ಮಾಡಿಕೊಂಡು ಅವರ ಮಾತು ಕೇಳಿ ಅರಿತು ಆಚರಿಸುವುದೇ ಪ್ರವಚನ. ಎಲ್ಲ ಸಾಧನೆಗಳಿಗೆ ಬಲಿಷ್ಠ ಆಧಾರ ಪ್ರವಚನ. ಪ್ರವಚನಗಳು ಒಂದು ರೀತಿಯಲ್ಲಿ ನೀತಿ, ಆಚಾರ ಮತ್ತು ಮುಗ್ಧತೆಯನ್ನು ಕಲಿಸುತ್ತದೆ. ಸಾಮಾನ್ಯರನ್ನು ಭಕ್ತಿಪಥದತ್ತ ಸೆಳೆದರೆ, ಬೌದ್ಧಿಕರನ್ನು ವೈಚಾರಿಕದತ್ತ ಎಳೆಯುವ ಸೆಳೆವು ಇದಾಗಿದೆ. ಶ್ರವಣಾದಿಗಳಲ್ಲದೇ ಭವಬಂಧನ ಅಳಿಯದು; 'ಲಲಿತಾಂಗಿಣಿ. ನೆರೆ ಕೇಳು, ಕೇಳ್ದುದನ್ನೊಮ್ಮೆ ಅರಿ, ಅರಿತುದದನ್ನೊಮ್ಮೆ ಮರೆಯದಿರು, ಗುರು ಪೇಳ್ದ ತೆರದೋಳ್' ಇದು ಯಾಜ್ಞವಲ್ಕ್ಯರು ಮೈತ್ರೇಯಿಗೆ ಉಪದೇಶಿಸಿದ ಉಪದೇಶಾಮೃತ.

ಆಧ್ಯಾತ್ಮ ವಿಷಯವನ್ನು ಅನುಭವಕ್ಕೆ ಬರುವ ತನಕ ತಿಳಿಯುವುದೇ ಶ್ರವಣ. ಅನುಮಾನ ಯುಕ್ತಿಗಳಿಂದ ಪುನಃ ಪುನಃ ಚಿಂತನ ಮಾಡುವುದೇ ಮನನ. ದೃಢವಾಗುವತ್ತ ಚರ್ಚಿಸುವುದು. ಶ್ರವಣ ಮನನಗಳಿಂದ ನಿಶ್ಚಯಿಸಲ್ಪಟ್ಟ ಅರ್ಥವನ್ನು ತನ್ನ ಅನುಭವಕ್ಕೆ ಬಂದ ನಂತರ ಅದನ್ನು ತನ್ನ ಅಂತಃಕರಣದಲ್ಲಿ ಪ್ರವಚನದಿಂದ ಬಿರಿದ ಮನಸ್ಸುಗಳು ಬೆರೆಯುತ್ತವೆ. ಕೆರಳಿದ ಭಾವನೆಗಳು ಅರಳುತ್ತವೆ. ಎಲ್ಲರನ್ನು ಒಗ್ಗೂಡಿಸುವ ಶಕ್ತಿ ಇದರಲ್ಲಿದೆ.



---

೩೩ " " ಶಿವಶರಣೆಯರ ವಚನ. ಸಂಪುಟ- ಸ. ವ. ಸಂ-೫. ವಚನಸಂಖ್ಯೆ-೧೪೨. ಪುಟಸಂಖ್ಯೆ-೪೫. (೨೦೦೧)

**ಸಂಸ್ಕೃತ – ಹಿಂದಿ ಆಪ್ಟೆ (ವಾಮನ ಶಿವರಾಮ) ಕೋಶ ಪ್ರವಚನದ ಶಬ್ದಾರ್ಥವನ್ನು ಹೀಗೆ ವಿವರಿಸುತ್ತದೆ. ಈ ಬಹ್ವರ್ಥ ಪ್ರವಚನದ ಬಹುಮುಖಿ ಪರಿಣಾಮವನ್ನು ಹೇಳುತ್ತದೆ.**

**ಪ್ರವಚನಮ್**

| | | | |
|---|---|---|---|
| 1 | 1 | 1 | 1 |
| **ಬೋಲನಾ** | **ಘೋಷನಾ** | **ಅಧ್ಯಾಪನ** | **ವ್ಯಾಖ್ಯಾನ** |
| **ಹೇಳುವುದು** | **ಘೋಷಿಸು** | **ಅಧ್ಯಯನ ಮಾಡಿಸುವುದು** | **ಬಿಚ್ಚಿ ತಿಳಿಸುವುದು ಮತ್ತು ಒಡೆದು ಹೇಳುವುದು.** |

**ಕಥನ ಮಾಡಿ ತಿಳಿಸುವುದು. ರೂಪಕ ದೃಷ್ಟಾಂತಗಳ ಮೂಲಕ ತಿಳಿಯಪಡಿಸುವುದು.**

**ಪ್ರವಕ್ತಾ :** ಮಾತನಾಡುವವನು, ವಕ್ತಾ, ಸುಂದರವಾಗಿ ಮಾತನಾಡುವನ ಪ್ರವಚನ ಈತನೇ ಕಾರಣನೆನಿಸುವನು

**ಉದ್ಘೋಷಕ :** ಅಧಿಕಾರಯುತವಾಗಿ ಹೇಳುವುದು. ಅದು ಅಧಿಕಾರವಾಣಿ ಎನ್ನಿಸುವುದು.

**ಸುವಕ್ತಾ :** ಒಳ್ಳೆಯ ಮಾತುಗಾರಿಕೆ ಉಳ್ಳವ, ನಿರರ್ಗಳವಾಗಿ ಮಾತನಾಡುವವ.

ಓದಿ ಅರ್ಥ ವಿವರಣೆ ಮಾಡುವಿಕೆ ಮತ್ತು ಸರಿಯಾದ ನಿರೂಪಣೆ, ಶಾಸ್ತ್ರಜ್ಞಾನ, ಉತ್ತಮ ಉಪನ್ಯಾಸ, ಸನ್ನಡತೆ, ಸನ್ಮಾರ್ಗ ಇವೆಲ್ಲ ಉತ್ತಮ ಪ್ರವಚನಕಾರನ ಸಲ್ಲಕ್ಷಣಗಳು ಒಬ್ಬ ಉತ್ತಮ ಪ್ರವಚನಕಾರ ಉತ್ತಮ ಸಾಹಿತ್ಯ ರಚಿಸಬಲ್ಲ; ಉತ್ತಮ ಸಾಹಿತ್ಯವನ್ನು ಅತ್ಯುತ್ತಮವಾಗಿಯೂ ಪರಿಣಾಮಕಾರಿಯಾಗಿಯೂ ಸಂವಹನಗೊಳಿಸಬಲ್ಲ.

ಪ್ರ–ಸುಂದರ ವಚನ–ಮಾತು ಸುಂದರ ಮಾತು, ಪ್ರವಚನ.

ಪ್ರವಚನ ಸಾಹಿತ್ಯಕ್ಕೆ ನಾವು ಮನ್ನಣೆ ಕೊಡದೇ ಇರುವುದರಿಂದ ಪ್ರವಚನಕಾರನನ್ನು ಸಾಹಿತಿ ಎಂದಾಗಲಿ, ಅವನು ಬರೆದ ಸಾಹಿತ್ಯವನ್ನು ಅದೊಂದು ಸಾಹಿತ್ಯವೆಂದಾಗಲಿ ಗುರುತಿಸಿಲ್ಲ, ಇದಕ್ಕೆ ಕಾರಣ ಸಾಹಿತ್ಯವನ್ನು ಸಾಮಾಜಿಕವಾಗಿ ತಲುಪಿಸುವ ಅವನ ಉದ್ದೇಶವೇನೋ ಸರಿಯೇ,

ಆದರೆ, ಅವನಿಂದ ರಚನೆಯಾದ ಸಾಹಿತ್ಯಕ್ಕೆ ಒಂದು ನಿರ್ದಿಷ್ಟ ಸಾಹಿತ್ಯದ ಕರ್ತೃತ್ವವಿರುವುದಿಲ್ಲ. ಹೀಗಾಗಿ ಅವನದು ಸಂವಹನ ಸಾಹಿತ್ಯಪ್ರಕಾರಕ್ಕೆ ಸಂಬಂಧಿಸುತ್ತದೆಯೇ ವಿನಾ ಸಾಹಿತ್ಯಪ್ರಕಾರಕ್ಕೆ ಸಂಬಂಧಿಸಲಾರದು.

ಸಾಹಿತಿ ನಾಲ್ಕು ಗೋಡೆಗಳ ಮಧ್ಯದಲ್ಲಿ ಕುಳಿತು ಬರೆವ ಸಾಹಿತಿ ತಾನೇರಿದ ಮಟ್ಟದಲ್ಲಿ ಎಲ್ಲರೂ ಬರಬೇಕೆಂದು ಸಾಹಿತ್ಯ ರಚಿಸುತ್ತಾನೆ. ಪ್ರವಚನಕಾರ ಹಾಗಲ್ಲ ಸಮಾಜದ ಮಧ್ಯದಲ್ಲಿ ಶ್ರೀಸಾಮಾನ್ಯನ ಮಟ್ಟಕ್ಕಿಳಿದು ಸಾಹಿತ್ಯ ರಚಿಸುತ್ತಾನೆ. ಉಳಿದವರ ಸಾಹಿತ್ಯವನ್ನು ಸಂವಹನಿಸುತ್ತಾನೆ ಕಥೆ–ಉಪಕಥೆಗಳ ಮೂಲಕ ತಿಳಿಯ ಪಡಿಸುತ್ತಾನೆ. ಈ ನೆಲದ ಮಣ್ಣಿನ ಭಾಷೆಯಲ್ಲಿ ಎಂಥವನಿಗೂ ಅರ್ಥವಾಗುವ ರೀತಿಯಲ್ಲಿ ಬರೆಯುತ್ತಾನೆ ಒಬ್ಬ ಸಾಹಿತಿ ತನ್ನ ಪ್ರೌಢಿಮೆಯನ್ನು ವ್ಯಕ್ತಪಡಿಸಲು ಮಾಡಿದ ಉಪನ್ಯಾಸ ಅಷ್ಟೊಂದು ಫಲಕಾರಿಯಾಗದು. ಆದರೆ ಅದೇ ವೇದಿಕೆಯ ಮೇಲೆ ಒಬ್ಬ ಪ್ರವಚನಕಾರ ಮಾಡಿದ ಪ್ರವಚನ ಅತೀ ಹೆಚ್ಚು ಪರಿಣಾಮ ಕಾರಿಯಾಗುವುದು. ಅಲ್ಲಿ ಸೇರಿದ ಜನಸಾಗರದ ಶಾಂತತೆಯೇ ಅದಕ್ಕೆ ಕಾರಣ.

ಒಬ್ಬ ಸಾಹಿತಿ ಬರೆದ ಪುಸ್ತಕವನ್ನು ಬಿಡುಗಡೆ ಮಾಡುವ ದಿನ ನೂರಾರು ಪ್ರತಿಗಳು ಮಾರಾಟವಾಗುವುದು ಬಹು ದುಸ್ತರ. ಆದರೆ ಸಿದ್ಧೇಶ್ವರ ಸ್ವಾಮಿಗಳಂಥ ಪ್ರವಚನಕಾರರೂ ಬರೆದು ಪ್ರಕಟ ಪಡಿಸಿದ ಪುಸ್ತಕ ಜಮಖಂಡಿ ಪ್ರವಚನದಲ್ಲಿ ಹತ್ತು ಸಾವಿರ ಪ್ರತಿಗಳು ಮಾರಾಟವಾದದ್ದು ಪ್ರವಚನ ಸಾಹಿತ್ಯಕ್ಕೆ ಸಿಕ್ಕ ಮನ್ನಣೆ. ಹಾಗೂ ಪ್ರವಚನದಿಂದ ಸಾಹಿತ್ಯಕ್ಕೆ ಸಾಹಿತಿಗೆ ಸಿಕ್ಕ ಮನ್ನಣೆ.

ಪ್ರವಚನ ಸಾಹಿತ್ಯವೂ Borrowe. ಆದ ಅಂದರೆ, ಕಡ ತಂದ ಸಾಹಿತ್ಯವಲ್ಲ, Creative ಆದ ಅಂದರೆ, ಅಲ್ಲೇ ಸೃಷ್ಟಿಯಾದ ಸೃಜನಶೀಲ ಸಾಹಿತ್ಯ ಪ್ರವಚನಕಾರನ ಪಾಂಡಿತ್ಯದ ಮೇಲೆ ರಚನೆಯಾದ ಸಾಹಿತ್ಯ

ಇದು ಪುರಾಣಸಾಹಿತ್ಯಕ್ಕಿಂತ ಭಿನ್ನವಾದದ್ದು ಪುರಾಣಗಳೇ ಆಧುನಿಕ ಕಾಲದಲ್ಲಿ ಪ್ರವಚನಗಳಾದವು. ಪುರಾಣಗಳು ಒಂದು ಚರಿತ್ರೆ ಮತ್ತು ಒಂದೇ ವಿಷಯವನ್ನು ಕುರಿತು ಹೇಳಿದವು. ಪ್ರವಚನ ಇಡೀ ಬದುಕನ್ನು ಕಟ್ಟಿ ಕೊಡುವ ಕಾರ್ಯ ಮಾಡಿತು. ಹಿಂದೆ ಪುರಾಣ ಹೇಳುವ ಮನೆತನಗಳೇ ಇದ್ದವು. ಅವೇ ಪುರಾಣಿಕ ಮಠ, ಪುರಾಣಿಕ ಎಂಬ ಉಪನಾಮದಲ್ಲಿ ಅಂಥ ಪ್ರಸಿದ್ಧಿಯಾಗಿವೆ.

ಕನ್ನಡದ ಖ್ಯಾತ ಸಾಹಿತಿ ಸಿದ್ಧಯ್ಯ ಪುರಾಣಿಕ (ಕಾವ್ಯಾನಂದ) ಮೂಲತಃ ಅವರ ಮನೆಯಲ್ಲಿ ದ್ಯಾಂಪುರ ಚೆನ್ನಕವಿಗಳಂಥ ಹಿರಿಯರಿದ್ದರು. ಬಡಜಂಗಮರನ್ನು ಓದಿಸುವ

ಮಠಗಳು 'ಓದ್ಸೋ ಮನೆತನ'ಗಳಾದಂತೆ, ಶಾಲೆ ಕಲಿಸುವ ಮನೆತನಗಳು 'ಸಾಲಿಮಠ'ಗಳಾದಂತೆ ಪುರಾಣ ಪರಂಪರೆಯಿಂದ ಮುಂದುವರೆದ ಪುರಾಣ ಹೇಳುವವರು ಮತ್ತು ಪುರಾಣ ಬರೆಯುವವರೇ ಆಗಿದ್ದರು.

ಶ್ರೀ ಶಿವಾನಂದರರದು ಪ್ರವಚನ ಪರಂಪರೆ ಬಿಜಾಪುರ ಮಲ್ಲಿಕಾರ್ಜುನ ಸ್ವಾಮಿಗಳು ಪ್ರವಚನಕಾರರು, ವೇದಾಂತ ಬೇರೆ ಪ್ರವಚನ ಬೇರೆ ಸಿದ್ಧಾರೂಢರ ಪರಂಪರೆ ವೇದಾಂತ ಪರಂಪರೆ. ಆದರೆ ವೇದಾಂತವನ್ನು ಮೀರಿದ್ದು ಸಿದ್ಧಾಂತ. ಪುರಾಣವು ಭಯಾನಕ ಭಾಷೆ, ಕೀರ್ತನವು ರೋಚಕ ಭಾಷೆ, ಮತ್ತು ಉಪನ್ಯಾಸವು ಶುದ್ಧ ಭಾಷೆ, ಈ ಮೂರನ್ನು ಒಳಗೊಂಡು ಜನರಲ್ಲಿ ಜಾಗೃತಿ, ಸಾಮಾನ್ಯರಲ್ಲಿ ಭಕ್ತಿನಿಷ್ಠೆ, ಸಮಾಜದಲ್ಲಿ ಶೀಲವರ್ಧನೆ ಮಾಡಿಕೊಡುವ ಪರಿವರ್ತನೆ ತರುವ ವಿಶಿಷ್ಟ ಭಾಷೆ ಅದು ಪ್ರವಚನದ್ದು.

ಶಕ್ತಿ ಸಾಹಿತ್ಯ, ಜ್ಞಾನ ಸಾಹಿತ್ಯ, ಅನುಭಾವ ಸಾಹಿತ್ಯ, ಕಾಲುಗಳೇ ತಾವಾಗಿ ಯಾವುದು ನಡೆಸುವುದು ಅದು ಶಕ್ತಿ ಸಾಹಿತ್ಯ. ತಲೆಯಾಗಿ ಯಾವುದು ನಡೆಸುವುದು ಅದು ಜ್ಞಾನ ಸಾಹಿತ್ಯ. ಹೃದಯದಿಂದ ಹೊರಹೊಮ್ಮಿದ ಸಾಹಿತ್ಯ ಅನುಭಾವ ಸಾಹಿತ್ಯ. ಪುರಾಣದಲ್ಲಿ ನಾವು ಭಯಾನಕ ಭಾಷೆಯನ್ನು ಬಳಸುತ್ತೇವೆ. ಹಿಂದಿನ ಜನ್ಮದಲ್ಲಿ ನೀನು ಕಳುವು ಮಾಡಿದ್ದಿ ಅದಕ್ಕೆ ನೀನು ಕೈ ಕಳೆದು ಕೊಂಡಿರುವಿ ಹೀಗೆ ಹೇಳುತ್ತ ಅವರಲ್ಲಿ ಭಯಮಿಶ್ರಿತ ನಂಬಿಕೆ ಶ್ರದ್ಧೆ ಬಿತ್ತುವುದೇ ಆಗಿರುತ್ತದೆ. ಜನರಲ್ಲಿ ಜಾಗೃತಿ ಮೂಡಿಸಲು ಆಕರ್ಷಣೆಯ ಮಾತುಗಳನ್ನು ಆಡಬೇಕಾಗುತ್ತದೆ. ಅದು ರೋಚಕ ಭಾಷೆ.

ಒಬ್ಬ ಪ್ರವಚನಕಾರ ಪುರಾಣದಲ್ಲಿ ಬಳಸುವ ವಿಚಾರ ಪ್ರಚೋದಕ ಭಾಷೆಯನ್ನು, ಜನರಿಗೆ ನೇರವಾಗಿ ಹೃದಯಕ್ಕೆ ತಟ್ಟಲು ರೋಚಕ ಭಾಷೆಯನ್ನು ಅನುಭವಿಸಿದ ಅನುಭಾವದ ಭಾಷೆಯನ್ನು ಮೂರನ್ನು ಬಳಸಿ ಜನರಲ್ಲಿ ಬದುಕಿನ ಮೌಲ್ಯಗಳನ್ನು ತುಂಬುತ್ತಾನೆ. ಪುರಾಣ ಕೇವಲ ಒಂದು ಪರಂಪರೆ, ಒಬ್ಬ ವ್ಯಕ್ತಿ ಚಿತ್ರಣ ಕಥೆಯಾಗಿರುತ್ತದೆ. ಆದರೆ ಪ್ರವಚನವು ಬದುಕನ್ನು ಕಲಿಸುತ್ತದೆ. ಸಾಮಾಜಿಕ ಪರಿವರ್ತನೆಗೆ ನಾಂದಿ ಹಾಡುತ್ತದೆ.

ಮಾತಿಗೆ ಮಾತು ಅಂತ ಇತ್ತು, ವಾಕ್ ಅಂತ ಇತ್ತು. ಬಹುತರ ಶರಣರ ವಚನ ಮಾತು ಮೀರಿದ್ದು ಎಂಬುದನ್ನು ಬೆಳೆಸುತ್ತದೆ. ಬಹುತರ ಶರಣರ ವಚನ ಮಾತು ಮೀರಿದ್ದು ಎಂಬುದನ್ನು ತಿಳಿಸುತ್ತದೆ. ಪ್ರ-ಸುಂದರವಾಗಿ ಹೊಸತೊಂದನ್ನು ಕಟ್ಟಿ ಕೇಡುವುದು. ಪ್ರ-ವಚನ ಭಾಷೆಗೆ, ನುಡಿಗೆ ಮೌಲ್ಯ ತಂದುಕೊಟ್ಟು ಸಕಲರಿಗೂ ಅರ್ಥವಾಗುವಂತೆ ನುಡಿಯುವದೇ ಪ್ರವಚನವಾಗಿದೆ.

ವಿಶ್ವವನ್ನು, ವಿಶ್ವದಾಚೆಗಿನ ಸತ್ಯವನ್ನು ನಾವು ಅರಿಯಬೇಕು ಇಂಥಹ ಅರಿವಿಗೆ ಪ್ರವಚನವು ಒಂದು ದಾರಿದೀಪ. ಅದು ಪ್ರವಚನದಿಂದ ಮಾತ್ರ ಸಾಧ್ಯ. ಈ ಪ್ರವಚನ ಸಾಹಿತ್ಯದ ನಿರಂತರ ಮತ್ತು ನಿಯಮಿತ ಆಸ್ವಾದನೆಯಿಂದ ಮನಕ್ಕೆ ಆನಂದವನ್ನು ಹೃದಯದಲ್ಲಿ ಮಧುರ ಭಾವನೆಗಳನ್ನು ತುಂಬುತ್ತವೆ. ಭಾವ ತೀವ್ರತೆಯೂ ಸುಮಧುರ ಭಾವನೆಗಳ ಮೂಲಕ ಚೆಲ್ಲವರಿಯುತ್ತದೆ. ಹೇಳುವುದು, ಕೇಳುವುದು, ನುಡಿವುದು, ನಡೆವುದು, ನೋಡುವುದು ಎಲ್ಲವೂ 'ಯೋಗ'. ಆದ್ದರಿಂದ ಪ್ರವಚನವು ಒಂದು ಯೋಗ.

"ಅರ್ಜುನನದು ಎಂಥ ತನ್ಮಯತೆ! ಸುತ್ತ ಮುತ್ತ ಯುದ್ಧದ ವಾತಾವರಣ. ಲಕ್ಷ-ಲಕ್ಷ ಯೋಧರು ಪ್ರಾಣಿಗಳು ಘೀಳಿಡುತ್ತಲಿವೆ. ರಣಭೇರಿ ಕಹಳೆ ಮೊಳಗುತ್ತಲಿವೆ. ಶ್ರೀ ಕೃಷ್ಣಾರ್ಜುನರು ತತ್ವಾನುಸಂಧಾನದಲ್ಲಿ ತನ್ಮಯರಾಗಿದ್ದಾರೆ! ಅದು 'ಪ್ರವಚನಶ್ರವಣ ಯೋಗ' ಹೀಗೆ ನಾವು ಏನೇ ಮಾಡಲಿ ತನ್ಮಯತೆಯಿಂದ ಮಾಡಿದರೆ ಅದು ಯೋಗವಾಗುತ್ತದೆ. ಭಗವದ್ದರ್ಶನಕ್ಕೆ ಭಗವದಾನಂದಕ್ಕೆ ಕಾರಣವಾಗುತ್ತವೆ."೩೪

ಈ ಜಗತ್ತಿನಲ್ಲಿ ಧನಕನಕಾದಿ ಅನೇಕ ಸಿರಿ, ಸಂಪದಗಳಿವೆ. ಅದರಿಂದ ಮನುಷ್ಯನ ಕೊರತೆ ನೀಗದು, ಬಯಕೆ ಹಿಂಗದು, ಶಾಂತಿ ಸಮನಿಸದು. ಮನುಷ್ಯನ ಕೊರತೆಯಲ್ಲ ಕಳೆದು ಹೋಗಿ ನಿತ್ಯ ತೃಪ್ತನಾಗಲು ನಿಜಾನಂದ ಸವಿಯಲು ಪ್ರವಚನದ ಅವಶ್ಯಕತೆಯಿದೆ. ಬಾಡುವ ಮತ್ತು ಸವೆಯುವ ಈ ಶರೀರದೊಳಗಣ ಪ್ರಾಣಜ್ಯೋತಿ ನಂದುವ ಮುನ್ನ, ಭಾವದ ಬತ್ತಿ ಜಾರುವ ಮುನ್ನ, ವಿಚಾರದ ತೈಲ ಇಲ್ಲವಾಗುವ ಮುನ್ನ ನಾವೆಲ್ಲ ಬಲ್ಲವರ ಬೆಳಕಿನ ಮಾತುಗಳನ್ನು ಆಲಿಸಿ, ಅರಿವಿನ ದೀಪ ನಿತ್ಯ ಬೆಳಗುವಂತೆ ಬಾಳಬೇಕು. ಮನುಷ್ಯ ಸತ್ಯದ ಅರಿವಿಗಾಗಿ ನಿತ್ಯ ಸಾಧನೆ ಮಾಡಬೇಕು. ಒಬ್ಬ ಮನಶಾಸ್ತ್ರಜ್ಞ ಹೇಳುತ್ತಾನೆ. "ಇಂದು ಮನುಷ್ಯ ಜೀವನದಲ್ಲಿ ಅನೇಕ ಒತ್ತಡಗಳಿಗೆ ಒಳಗಾಗಿ ಮಾನಸಿಕ ದಾರಿದ್ರ್ಯದಿಂದ ಅಂತರಂಗದ ಬಡತನದಿಂದ ಬಳಲುತ್ತಿದ್ದಾನೆ. ಈ ಕಾಯಿಲೆ ಕೂಡಲೇ ಹೋಗುವಂತದಲ್ಲ. ಅದಕ್ಕೆ ಮನ ಅರಳುವ ಮಾತುಗಳ ಅವಶ್ಯಕತೆಯಿದೆ. ಆಂತರಿಕ ಅಸಂಖ್ಯ ವಿಚಾರಗಳ, ಕಲ್ಪನೆಗಳ, ಭಾವನೆಗಳ ಭಾರದಿಂದ ಹೊರಬರಲು ಇದು ಅವಶ್ಯ."

---

೩೪ " " ಗುಣಸಂಪದ- ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರ ಪ್ರವಚನಗಳು, ಸಂ. ಡಾ॥ ಶ್ರದ್ಧಾನಂದ ಸ್ವಾಮಿಗಳು. ಪ್ರ- ಜ್ಞಾನಯೋಗ ಫೌಂಡೇಶನ್. ಪುಟಸಂಖ್ಯೆ-೩. (೨೦೧೦)

ವಾದ – ಪ್ರತಿವಾದ – ಸಂವಾದ :

ಪ್ರವಚನಕ್ಕೊಂದು ವ್ಯಾಪಕತೆಯಿದೆ.

- ಯಾಜ್ಞವಲ್ಕ್ಯರು ಮೈತ್ರೇಯೀಗೆ 'ನೆರೆಕೇಳು, ಕೇಳ್ದುದನೊಮ್ಮೆ, ಅರಿ, ಅರಿದುದನೊಮ್ಮೆ ಮರೆಯದಿರು ಗುರುಪೇಳ್ದ ತೆರದೋಳ್' ಎಂಬ ಉಪನಿಷತ್ ಮಾತುಕೂಡ ಪ್ರವಚನವೇ.
- ಬುದ್ಧ ಆಮ್ರವನದಲ್ಲಿ ನಿರ್ವಾಣಪಥಿಕದ ಮಾತುಗಳನ್ನಾಡಿದ ಅವು 'ತ್ರಿಪಿಟಕ' ಮಾತುಗಳು ಆದವು. ಅವೂ ಸಹ ಪ್ರವಚನದ ಮಾತುಗಳೇ.
- ಏಸು ಹೇಳಿದ 'ಬೈಬಲ್ ನುಡಿಗಳು' ಪ್ರವಚನದ ಸೂಕ್ತಿಗಳೇ,
- ಪೈಗಂಬರ ಹೇಳಿದ 'ಕುರಾನದ ಮಾತುಗಳು' ಪ್ರವಚನದ ಮಾತುಗಳೇ. ಆದರೆ ಯಾವ ಪ್ರವಾದಿಯು ಬೋಧಿಸಿದ ಮಾತುಗಳನ್ನು ಬರೆದಿಡಲಿಲ್ಲ. ಆನಂತರದ ಅವರ ಅನುಯಾಯಿಗಳೆಲ್ಲಾ ಅವುಗಳನ್ನು ಬರೆದಿಟ್ಟರು. ಅವೇ ಅವುಗಳ ಧರ್ಮಗ್ರಂಥಗಳಾದವು. ಒಟ್ಟಾರೆ ಪ್ರವಚನ ಸಾಹಿತ್ಯವು ಧರ್ಮಗ್ರಂಥದ ಮಟ್ಟಕ್ಕೆ ಬೆಳೆದಿದೆ.
- ಗುರುನಾನಕರ 'ಸಾಹೀಬ್' ಕೂಡ ಪ್ರವಚನ ಸಾಹಿತ್ಯ.

ಕರ್ಣ ಮಾಧ್ಯಮದಿಂದ ಜ್ಞಾನ ಬೆಳೆಯುತ್ತದೆ. ವೇದ ಪುರಾಣಕಾಲದಿಂದಲೂ ಈ ಪ್ರವಚನವೂ ಇತ್ತು. ಉಪನಿಷತ್‌ನಲ್ಲಿ ಮೈತ್ರೇಯಿಗೆ ಹೇಳಿದ್ದು ಸಹ ಪ್ರವಚನ. ಬೆಳಕು ಇರದಿದ್ದರೆ ಉದಾಹರಣೆಗೆ: ಸೂರ್ಯನೇ ಇರದಿದ್ದರೆ ಲೋಕ ಹೇಗೆ ಬಡವಾಗುವದೋ ಹಾಗೆ ಪ್ರವಚನದ ಮಾತುಗಳು ಇರದಿದ್ದರೆ ಬದುಕು ಬಡವಾಗುತ್ತದೆ.

ಶ್ರೀ ಸಿದ್ಧೇಶ್ವರ ಸ್ವಾಮಿಗಳ ಬಗ್ಗೆ ಡಾ. ಗುರುಲಿಂಗ ಕಾಪಸೆಯವರು ಹೀಗೆ ಹೇಳುತ್ತಾರೆ "ಬಯಲಿನಲ್ಲಿ ನಿರ್ವಯಲ ಕುರಿತು ಬರೆವ ನಿರ್ವಚನ ಸಂತ" ಇಲ್ಲಿ Research ಕ್ಕಿಂತಲೂ Search ಮುಖ್ಯ. ಭಗವದ್ಗೀತೆಯ ಮೇಲೆ ಬಂದವುಗಳೆಲ್ಲವೂ ಪ್ರವಚನ. ವಿಶ್ವದ ಯಾವ ಗ್ರಂಥದ ಮೇಲೂ ಇಷ್ಟೊಂದು ಪ್ರವಚನಗಳು ಬಂದಿಲ್ಲ. ಸ್ವಾಮಿ ವೀವೇಕಾನಂದರು ಮಾಡಿದ ಉಪನ್ಯಾಸಗಳು ಸರಣಿ ಉಪನ್ಯಾಸಗಳು. ವಿನೋಭಾ ಭಾವೆ, ಮಹಾತ್ಮ ಗಾಂಧೀಜಿ, ಅರವಿಂದರು, ಗುರುದೇವ ರಾನಡೆಯವರು ಮಾತಾಡಿದ ಮಾತುಗಳೆಲ್ಲವು ಪ್ರವಚನಗಳು.

ಪ್ರವಚನಗಳಿಂದ ಸಾಮಾಜಿಕ ಪರಿವರ್ತನೆ ಸಾಧ್ಯ. ಪ್ರವಚನ ಸಾಹಿತ್ಯಕ್ಕೆ ದಾಖಲೆಗಳು ಸಿಗುವುದು ವಿರಳ. ಪುಸ್ತಕ ಆಧಾರಿತವಲ್ಲ. ಉಪನಿಷತ್ ಕಾಲದಿಂದಲೂ ನೋಡುತ್ತ ಬಂದಿದ್ದೇವೆ. ಗುರು ಶಿಷ್ಯನಿಗೆ ಹೇಳುವ ಪದ್ಧತಿಯಿತ್ತು ಗುರು ಶಿಷ್ಯರ ಬೋಧನೆ ಧರ್ಮ, ಅಧ್ಯಾತ್ಮ ಬದುಕಿಗೆ ಸಂಬಂಧಿಸಿದ್ದಾಗಿರುತ್ತಿತ್ತು.

ಬ್ರಹ್ಮ ವಿದ್ಯೆ, ಅಧ್ಯಾತ್ಮ, ಜೀವನ ಮೌಲ್ಯ, ಬದುಕು ಇತ್ಯಾದಿಗಳನ್ನು ಶಿಷ್ಯನಿಗೆ ಗುರು ಧರ್ಮದ ಹೆಸರಿನಲ್ಲಿ ವಿಧಿವತ್ತಾಗಿ ಹೇಳುತ್ತಾನೆ. ಇಲ್ಲಿ ಅಧ್ಯಾತ್ಮ ವಿಚಾರಗಳು ಚಿಂತನೆಗಳು ಇರುತ್ತವೆ. ಈ ಪುರಾಣ ಪರಂಪರೆ ಜೈನರಿಂದ ಆರಂಭವಾಯಿತು. ಜೈನರು ಕನ್ನಡದಲ್ಲಿ ಧರ್ಮ ಬೋಧನೆ ಕೃತಿ ರಚನೆ–ಪುರಾಣ ಮೊದಮೊದಲು ಮಾಡಿದರು ಪ್ರಾಕೃತದಲ್ಲಿ ಬರೆದಿದ್ದರು. ಪಂಪನ ನಂತರ ಕನ್ನಡದಲ್ಲಿ ಈ ಪರಂಪರೆ ಪ್ರಾರಂಭವಾಯಿತು. ವಡ್ಡಾರಾಧನೆಯು ಜನರಿಗೆ ತಿಳಿಸುವ ಪ್ರವಚನ ಸಾಹಿತ್ಯದ ಕೃತಿ.

- ಶಾಸನಗಳಲ್ಲಿ ಹತ್ತನೇ, ಹನ್ನೊಂದನೇ, ಹನ್ನೆರಡನೇ ಶತಮಾನದ ವರೆಗೆ ಶೈವಪುರಾಣಗಳು ಕಾಣ ಸಿಗುತ್ತವೆ.
- ಅನುಭಾವದ ಗೊಷ್ಠಿಗಳಿಗೆ ಪ್ರವಚನದ ಸ್ವರೂಪ. ಅನುಭವ ಮಂಟಪ ಪ್ರವಚನ ಶಾಲೆ. ಸಾಮಾಜಿಕ ಕಳಕಳಿ ಬದುಕಿನ ಮೌಲ್ಯ ಹುಟ್ಟಿಕೊಂಡದ್ದೇ ಅನುಭವ ಮಂಟಪದಲ್ಲಿ.
- ಧರ್ಮದ ಮಾನವೀಯ ಮೌಲ್ಯಗಳನ್ನು ತಿಳಿಯಪಡಿಸುವುದು ಪ್ರವಚನ ಉದ್ದೇಶ.
- ಕಾಯಕದ ಮೂಲಕ ಅಧ್ಯಾತ್ಮ ಬೆರೆತದ್ದು ಹನ್ನೆರಡನೇ ಶತಮಾನದಲ್ಲಿರುವ ಶಿವಶರಣರಿಂದ.
- ಹರ್ಡೇಕರ ಮಂಜಪ್ಪನಂಥವರು ಧಾರ್ಮಿಕ ಚೌಕಟ್ಟಿನಲ್ಲಿ ಪ್ರವಚನವೆಂದರೆ ನೀತಿ ಮಾತುಗಳನ್ನು ಹೇಳುವುದು. 'ಬ್ರಹ್ಮಾ ದೇವಾನಾಂ ಪ್ರಥಮ: ಸಂಭವವ'

ಸ್ವಾತಂತ್ರ್ಯ ಚಳುವಳಿಯಲ್ಲಿ ಬಾಲಗಂಗಾಧರನಾಥ ಟಿಳಕ ರಂಥಹ ಅನೇಕ ಜನ ಮಾತನಾಡಿದ ದೇಶ ಪ್ರೇಮದ ಮಾತುಗಳೂ ಸಹ ಪ್ರವಚನ ಮಾತುಗಳು ಭಾರತೀಯ ಪರಂಪರೆಯಲ್ಲಿ ಪ್ರವಚನಗಳಿಗೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ. ಹಳ್ಳಿಯಲ್ಲಿ ದೊಡ್ಡವರು, ಒಂದಿಷ್ಟು ತಿಳಿದವರು ದುಡಿದು ದಣಿದು ಬಂದ ಕೃಷಿಕರಿಗೆ, ಕಾರ್ಮಿಕರಿಗೆ, ಶ್ರೀಸಾಮಾನ್ಯರಿಗೆ ಅಧ್ಯಾತ್ಮದ ಮಾತುಗಳನ್ನು ಉಪದೇಶಿಸುತ್ತಿದ್ದರು. "ಪ್ರವಚನ ಸಾಹಿತ್ಯ ಎಲ್ಲಕಾಲಕ್ಕೂ ಎಲ್ಲರಿಗೂ ಸಲ್ಲುವ ಸಾಹಿತ್ಯ. ಭೂತಕಾಲದ ನೆನಪುಗಳೊಂದಿಗೆ ವರ್ತಮಾನವನ್ನು ಕಟ್ಟಿಕೊಡುವ ಭವಿಷ್ಯತ್ತನ್ನು ರೂಪಿಸುವ ಸಾಹಿತ್ಯ. ಹೊಸ ಅನುಭವಗಳ ಬಗೆಗೆ ಕನಸು ನಿರೀಕ್ಷೆ ಆಸೆ ಕಾತರಗಳ ವಿಭಿನ್ನ ಲೋಕ

ತೆರೆದಿಡುವ ಸಾಹಿತ್ಯ. ಇದು ಇವತ್ತಿನ ಬದುಕಿಗೆ ಸ್ಪಂದಿಸುತ್ತದೆ. ಜೀವನ ಕ್ರಮ ಚಿಂತನೆಯ ರೀತಿ, ಸಂವೇದನೆಯ ತೀವ್ರತೆ, ಭಾಷೆಯ ಅರ್ಥ ಲಯ ಧ್ವನಿಗಳು, ಅಭಿವ್ಯಕ್ತಿ ತಂತ್ರಗಾರಿಕೆ, ವಾಕ್ಪಟುತ್ವ, ಓದುಗರ ಅಭಿರುಚಿ, ಅವರವರ ಗ್ರಹಿಕೆ ತಕ್ಕಂತೆ ಆಯಾ ಕಾಲಘಟ್ಟಕ್ಕನುಗುಣವಾಗಿ ನಿರ್ಮಾಣವಾಗಿರುತ್ತದೆ. ಮಾತುಗಳ ಮೂಲಕ ಸೃಷ್ಟಿಯಾಗಿ ಬಂದ ಅನುಭಾವದ ಜಾಡನ್ನು ಹಿಡಿದು ರಚನೆಯಾದ ಸಾಹಿತ್ಯ. ಒಂದು ಕೃತಿರೂಪದಲ್ಲಿ ಅದ್ಭುತವಾಗಿ ಕೆಲಸ ಮಾಡಬಲ್ಲದು. ಈ ಸಾಹಿತ್ಯ ವೇದಿಕೆ ಮೂಲಕ ಕಣ್ದೆರೆಯುತ್ತದೆ. ಓದುಗರ ಮೂಲಕ ಅರಳಿಕೊಳ್ಳುತ್ತದೆ. ಹಳೆಯಮಾತುಗಳೇ, ಬಲ್ಲವರ ನುಡಿಗಳ, ಸಾಹಿತಿಯ ಕವಿಯ ಸಾಲುಗಳೇ ಶರಣರ ಅನುಭಾವದ ಸೂಳ್ನುಡಿಗಳೇ ಒಂದೆಡೆ ಸೇರಿ ಒಂದು ಹೊಸ ಸಾಹಿತ್ಯ ರಚನೆಗೊಳ್ಳುತ್ತದೆ. ಹೊಸ ಪ್ರಪಂಚ ಸೃಷ್ಟಿಯಾಗುತ್ತದೆ. ಅನುಭವಿಸುವ ಹೃದಯಕ್ಕೆ ಇದು ವ್ಯಕ್ತಿತ್ವ ವಿಕಾಸ".[೩೫]

ಸಮಾಜ ಬದಲಾವಣೆ ಇದರ ಉದ್ದೇಶ. ವ್ಯಕ್ತಿ ವ್ಯಕ್ತಿಯಾಗಿರುವುದೇ ಸಮಾಜದೊಳಗೆ. ಉಳಿದೆಲ್ಲ ಸಾಹಿತ್ಯಕ್ಕಿಂತ ಇದು ಪರಿಧಿಯನ್ನು ದಾಟಿ ಒಂದು ಸಮೂಹಕ್ಕೆ ಏಕಕಾಲದ ಅನುಭವವನ್ನು ತಂದು ಕೊಡುತ್ತದೆ. ಯಾವುದೇ ಒಂದು ಹಂತದಲ್ಲಿ ಒಂದು ಸಮಸ್ಯೆ ಬದಲಾವಣೆಯನ್ನು ತರಬಹುದು. ಬದಲಾವಣೆ ವೈಚಾರಿಕ ತುಮಲವೋ ಭಾವನೆಗಳ ಕೆರಳುವಿಕೆಯೇ ಕ್ರಿಯಾತ್ಮಕ ಚಟುವಟಿಕೆಯೇ ಏನೇ ಆಗಿರಬಹುದು. ಹೊಸ-ಹೊಸ ಒಳನೋಟಗಳು ಸ್ಪಂದಿಸುತ್ತವೆ. ಈ ಒಳನೋಟಗಳ ಗ್ರಹಣ ಗರ್ಭದಲ್ಲಿಯೇ ಮನೋರಂಜನೆ ವ್ಯಕ್ತಿ ವಿಕಾಸ. ಸಮಾಜ ಬದಲಾವಣೆಗಳ ಬೀಜಗಳು ಅಂಕುರಿಸುತ್ತವೆ. ಬೀಜ ಬಿತ್ತುವುದು ಸಾಹಿತಿಯ ಕೆಲಸ ಅದನ್ನು ಬಿತ್ತಿಸಿಕೊಂಡು, ಸರಿಯಾಗಿ ಬಿರಿಸಿಕೊಂಡು ಹೂವು, ಕಾಯ, ಹಣ್ಣು, ಅನುಭವಿಸುವುದು ಓದುಗನ ಜವಾಬ್ದಾರಿ.

ಸಾಹಿತ್ಯ ಜೀವನದ ಪ್ರತಿಬಿಂಬ. ಜೀವನದ ಘಟಾನಾವಳಿಗಳನ್ನು ಪ್ರವಚನಗಳ ಮೂಲಕ ಬಹುಮಾನ ನೀಡಿ ಮತ್ತೊಂದು ಜೀವನ ಕಟ್ಟಿಕೊಡುವುದೇ ಆಗಿದೆ. ಅನುಭವದ ನುಡಿಗಳಿಗೆ ಆಕಾರ ಕೊಡುವುದು.

---

೩೫ " " ನಿತ್ಯವರ್ತಮಾನ. ಲೇ- ಪ್ರೋ. ಚಂದ್ರಶೇಖರ ಮಾಟೀಲ. ಪ್ರ-ಕನ್ನಡ ವಿಶ್ವವಿದ್ಯಾಲಯ ಹಂಪಿ.

೧) ಈ ಬದುಕು ನಿಸರ್ಗ ಕರುಣಿಸಿದ ಅಪರೂಪದ ಕಾಣಿಕೆ. ಪರಮ ಶಾಂತಿಯನ್ನು ಪಡೆದಾಗ ಅದು ಸಾರ್ಥಕ. ಪರಮ ಶಾಂತಿಗೆ ಏಕೈಕ ಸಾಧನವೆಂದರೆ ಅದು ಸತ್ಸಂಗ.

೨) ಸಂತ-ಶರಣರ ಸವಿಮಾತಿನ ಚಿಂತನ-ಮಂಥನ ಅದು ಸತ್ಸಂಗ, ಅದರಿಂದ ನಾವು ನಮ್ಮನ್ನು ನಮ್ಮ ಪ್ರಪಂಚವನ್ನು ಮರೆಯುತ್ತೇವೆ ಮಹಾ ಸತ್ಯವನ್ನು ಅರಿಯುತ್ತೇವೆ.

೩) ನಮ್ಮ ಜೀವನದ ಎಲ್ಲ ಸಮಸ್ಯೆಗಳಿಗೆ ಒಂದು ಉತ್ತಮವಾದ ಪರಿಹಾರವೆಂದರೆ ಸತ್ಸಂಗ. ನಮ್ಮ ಅಂತರಂಗ ನಿರ್ಮಲವಾಗುವದಕ್ಕೆ ಒಂದೇ ಒಂದು ಸರಳ ಸುಂದರ ಉಪಾಯವೆಂದರೆ ಅದು ಸತ್ಸಂಗ.

೪) ಸತ್ಸಂಗದಿಂದ ನಮ್ಮ ಅಂತರಂಗ ಹಾಗೂ ಬಹಿರಂಗ ಎರಡು ಪರಿಶುದ್ಧವಾಗುತ್ತದೆ. ಒಳ್ಳೆಯ ನುಡಿಗಳನ್ನು ಕೇಳುವದು, ಓದುವದು, ಬರೆಯುವದು ಎಲ್ಲವೂ ಸತ್ಸಂಗವೇ.

೫) ನಿಜವಾಗಿಯೂ ಸತ್ಸಂಗವು ನಮ್ಮ ಬದುಕಿನಲ್ಲಿ ಸಂತಸದ ಬೆಳಕನ್ನು ತುಂಬುತ್ತದೆ. ಸತ್ಸಂಗ ಕುರಿತು ಅಕ್ಕನ ಒಂದು ಸುಂದರ ವಚನದಲ್ಲಿ 'ನಿಮ್ಮ ಶರಣರ ಅನುಭಾವ ಸಂಗದಿಂದ ಆನು ಪರಮ ಸುಖಿಯಾಗಿ ಬದುಕಿದೆನಯ್ಯ ಪ್ರಭುವೇ' ಎಂದು ಹೇಳಿದ್ದಾರೆ.

೬) ಮಾನವ ಜೀವನ ಕ್ಷಣಿಕವಾದುದು, ಈ ಕ್ಷಣವರ್ತಿಯಾದ ಬದುಕಿನಲ್ಲಿ ನಾವು ಪ್ರತಿಯೊಂದು ಕ್ಷಣವನ್ನು ವೈಭವ ಪೂರ್ಣವಾಗಿ ಕಳೆಯಬೇಕು. ನಾವು ಎಷ್ಟು ದಿವಸ ಬದುಕಿದೆವು ಎನ್ನುವದಕ್ಕಿಂತಲೂ ಎಷ್ಟು ಅರ್ಥಪೂರ್ಣವಾಗಿ, ಶಾಂತಿಯುತವಾಗಿ ಬದುಕಿದೆವು ಎನ್ನುವುದು ಮುಖ್ಯವಾದುದು. ಆದ್ದರಿಂದ ನಮ್ಮ ಬದುಕಿನ ಪ್ರತಿಕ್ಷಣವನ್ನು ಸಾರ್ಥಕವಾಗಿ, ಶಾಂತಿಯುತವಾಗಿ ಕಳೆಯಬೇಕಾದರೆ ನಾವು ಸತ್ಸಂಗವನ್ನೇ ಆಶ್ರಯಿಸಬೇಕು.

೭) ಸ್ವ-ಅಧ್ಯಾಯ, ಸ್ವಾಧ್ಯಾಯ ತನ್ನ ಹಾಗೂ ವಿಶ್ವದ ಸತ್ಯವನ್ನು ಅರಿಯಲು ಅಭ್ಯಾಸ ಮಾಡುವದು ಸ್ವಾಧ್ಯಾಯ ಗ್ರಂಥಗಳನ್ನು ಅವಲೋಕಿಸುವದು ಸ್ವಾಧ್ಯಾಯ, ಮೂಲ ಕಾರಣಗಳನ್ನು ಸಂಶೋಧಿಸುವದು ಸ್ವಾಧ್ಯಾಯ.

೮) ನಾವು ಜೀವನದಲ್ಲಿ ಅಳಿವು ಉಳಿವಿನ ಪ್ರವಾಹದಲ್ಲಿ ಕೊಚ್ಚಿ ಹೋದರೆ ಎಲ್ಲಿ ಶಾಂತಿ ದೊರೆತೀತು? ಎಂಥ ವಿಪತ್ತು ಬಂದರೂ ಎದೆ ನಡುಗದಿರಬೇಕು. ಮನ ಬಳುಕದಿರಬೇಕು

೧೬) ಜ್ಞಾನವನ್ನು ಗಳಿಸಿದ ನಂತರ ಅದನ್ನು ಅಭ್ಯಾಸ ಮತ್ತು ಅಧ್ಯಯನ, ಚಿಂತನದಿಂದ ವೃದ್ಧಿಪಡಿಸಿ ಸಮಾಜಕ್ಕೆ ಹಾಗೂ ಮುಂದಿನ ಪೀಳಿಗೆಗೆ ಮಾಡುವ ಕರ್ತವ್ಯ ನಿರ್ವಹಿಸುವದು ಋಷಿ ಋಣವನ್ನು ತೀರಿಸುವ ರೀತಿ.

೧೭) ನಮ್ಮ ಪ್ರಾಪಂಚಿಕ ವ್ಯವಹಾರಗಳನ್ನು ಸ್ವಲ್ಪ ಕಡಿಮೆ ಮಾಡಿಕೊಂಡು ನಾವೆಲ್ಲ ಸತ್ಸಂಗ, ಸ್ವಾಧ್ಯಾಯ, ಪ್ರವಚನ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳೋಣ, ಬದುಕಿನ ಸಾರ್ಥಕತೆಯನ್ನು ಪಡೆಯೋಣ.

## ೩.೧. ಪ್ರವಚನ ಮಾದರಿ :

**ಪರಮ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಚಿದಂಬರಾಶ್ರಮ ಬೀದರ. ಇವರ ಪ್ರವಚನ :**

ಓಂ......... ಚಿದಂಬರ ಮಠಾಧೀಶಂ.........

ಸಿದ್ಧಾರೂಢ ಯತೀಶ್ವರಂ ಶಿಷ್ಯ ಪ್ರಶಿಷ್ಯ

ರೂಪೇಣ ಬೋಧಕಂ ಗುರು ಮಾಶ್ರಯೇ

ಯದಂಘ್ರೀ ಕಮಲದ್ವಂದ್ವಂ ।

ತಾಪತ್ರೆಯ ನಿವಾರಕಂ

ಶಾಂತ್ಯೆಕ ಪದದಂ ದೇವಂ । ಸಿದ್ಧಾರೂಢ ಮಹಾಂಭಜೇ.

ಪರಮಪೂಜ್ಯ ಪ್ರಾತಃ ಸ್ಮರಣೀಯ ಸದ್ಗುರುಗಳ ಚರಣಾರವಿಂದಗಳನ್ನು ಹೃದಯಾರವಿಂದದಲ್ಲಿ ಸ್ಮರಿಸಿಕೊಂಡು ಕ್ಷೇತ್ರಾಧಿಷ್ಠಾತ್ರ ದೇವತಾ ಶ್ರೀ ಚರಣಗಳಿಗೆ ಶಿರಬಾಗಿ, ಶಿವಾನುಭವ ಪೀಠವನ್ನು ಅಲಂಕರಿಸಿದ ಎಲ್ಲ ಪೂಜ್ಯರಿಗೂ ವಂದಿಸಿ, ಮಹಾ ನಗರದಲ್ಲಿ ಹಮ್ಮಿಕೊಂಡ ಸತ್ಸಂಗದಲ್ಲಿ ಪಾಲ್ಗೊಂಡ ಸಮಸ್ತ ಪವಿತ್ರಾತ್ಮರಾದ ಶರಣ ಶರಣೀಯರ ಶುದ್ಧಾಂತರಣಕ್ಕೆ ಸಾಕ್ಷಿಯಾಗಿ ಬೆಳಗುವ ಪರಮಾತ್ಮನಿಗೂ ಪ್ರಣಾಮಗಳನ್ನು ಸಮರ್ಪಿಸಿ, ಶಿವ ಸ್ವರೂಪಿಗಳೇ! ನಿಮ್ಮಲ್ಲರಿಗೂ ಶರಣು ಶರಣಾರ್ಥಿ.

ಶ್ರೀಮನ್ ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯ ಒಂದು ಚರಣವನ್ನ ಆಧಾರವಾಗಿಟ್ಟುಕೊಂಡು ಅತೀ ಪ್ರಾಮುಖ್ಯವಾದ ವಿಷಯದ ಬಗ್ಗೆ ಇಲ್ಲಿಯವರೆಗೆ ತಾವೆಲ್ಲರೂ ಕೂಡ ಕೇಳಿದೀರಿ. The millians are Awake Enough for Phisical Labour but only one in hundreds of millian divine life ಇಂಗ್ಲೀಷನೊಳಗ ಒಂದ ಮಾತ ಹೇಳಿದ್ರು ಕೋಟ್ಯಾನು ಕೋಟಿ ಜನ, ಹೊಟ್ಟೆ ಬಟ್ಟೆಗಾಗಿ ಪ್ರಯತ್ನ ಮಾಡತಕ್ಕಂಥವರು ಯಥಸ್ತತಾ ಸಿಗ್ತಾರ, ಸಿಗ್ತಾರ, ನಮ್ಮೆಲ್ಲರನ್ನ ಕೇಳಿದ್ರ ಬಹಳ ಆಶ್ವರ್ಯ ಅನಸ್ತದ ನಾವು ಯಾಕ ಹುಟ್ಟಿದೇವಿ; ಯಾಕ ಬದುಕಿದೇವಿ ಅನ್ನ ತಕ್ಕಂಥ ಪ್ರಜ್ಞೆ, ಅರಿವು, ಬುದ್ಧಿನೂ ನಮಗಿಲ್ಲ! ಅದನ್ನೆ ಹೇಳಿದ್ರು The millians a wake Enough for phisionl labour ತಮ್ಮ ಕಣ್ಣು ಕೈ ಕಾಲುಗಳನ್ನು ತೃಪ್ತಿ ಪಡಿಸುವುದಕ್ಕಾಗಿ ತಮ್ಮ ಇಂದ್ರಿಯಗಳ ಸುಖಕ್ಕಾಗಿ, ಹುಟ್ಟಿ ಸಾಯುವವರು ಕೋಟ್ಯಾನು ಕೋಟಿ

ಜನ. ಅದೆ, ಶರಣರು ಸಂಕ್ಷಿಪ್ತವಾಗಿ ಹೇಳಿದರು, ಹೆಣ್ಣಿಗಾಗಿ ಸತ್ತವರು ಕೋಟಿ, ಹೊನ್ನಿಗಾಗಿ ಸತ್ತವರು ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ ನಿನಗಾಗಿ ಸತ್ತವರನು ಒಬ್ಬರನು ಕಾಣೆ! ಎಷ್ಟು ಮನಸ್ಸು ನೊಂದುಕೊಂಡು ಶರಣರು ಈ ಮಾತನ್ನು ಆಡಿರಬೇಕು ಅನ್ನೊದು ನೋಡಿದ್ರೆ ತಿಳಿದವರಿಗೆ ಬಹಳ ದುಃಖ ಅನ್ನಸ್ತದ. ಆದ್ರ ಪರಮಾತ್ಮನಿಗಾಗಿ ಈ ದೇಹವನ್ನ ತಗದ ಇಡವರು ಬಹಾಳ ಕಡಿಮಿ ಜನ. ಆದ್ರ ಬಟ್, ಒಬ್ರು ಅಂತನಂವಾ, ಹಂಡ್ರೆಡ್ಸ ಆಫ್ ಮಿಲಿಯನ್ ಫಾರ್ ಡಿವೈನ್ ಲೈಫ್ ಜನರೊಳಗ ಯಾರರೇ ಒಬ್ರು, ಭಗವತ್ ಗೀತೆಯಲ್ಲಿ ಹೇಳ್ದಂಗ 'ಮನುಷ್ಯಾನಾಂ ಸಹಸ್ರೇಷು ತತ್ತ್ವತಹಾ' ಅರ್ಜುನ ಕೋಟ್ಯಾನುಕೋಟಿ ಜನರಲ್ಲಿ ಯಾರೋ ಪರಮಾತ್ಮನನ್ನ ತನ್ನನ್ನ ತಾನು ಅರಿಯಬೇಕು ಅಂತ ಅಪೇಕ್ಷೆ ಮಾಡ್ತಾರ, ಇಚ್ಛಾಮಾಡ್ತಾರ ಡಿಸೈರ್ ಮಾಡ್ತರ, ಪರಂತು ಡಿಸೈರ್ ಮಾಡಿದ ಕಾಲಕ್ಕರೆ ಸಿಗೂದಿಲ್ಲ. ಫಸ್ಟ ಡಿಸರ್ವ and ಡಿಸೈಯರ ಮೊದಲ ಅಪೇಕ್ಷೆ ಮಾಡ್ಲಿಕ್ಕೆ ಯೋಗ್ಯನಾಗಿರಬೇಕು. ಅಪೇಕ್ಷೆ ಮಾಡೋರು ಬಹಳ ಜನ ಅದಾರ. ಪರಂತು ಅಪೇಕ್ಷೆ ಪೂರ್ತಿ ಮಾಡ್ಲಿಕ್ಕೆ ದುಡಿಯುವವರು, ಪ್ರಯತ್ನ ಮಾಡುವವರು, ನೂರರಾಗ ಒಬ್ರು......... ಪ್ರಯತ್ನ ಚಾಲೂನು ಬಹಳ ಮಂದಿ ಮಾಡ್ತಾರ......... ಕಡೀಗ ಮುಗುಸೋರು ನೂರರಗ ಮತ್ತ ಅವರು ಒಬ್ರು, ಕಡೀಗ ಮುಟ್ಟುಸುದರನು ಕೂಡ ಆ ಸತ್ಯವನ್ನು ಕಾಣತಕ್ಕಂಥದ್ದು ಅತ್ಯಂತ ಕಠಿಣ ಅಂತ ಗೀತೆಯಲ್ಲಿ ಪರಮಾತ್ಮ ಈ ಮಾತನ್ನು ಹೇಳಿದಾನೆ, ನಾವೆಲ್ಲರೂ ಆ ಸತ್ಯವನ್ನು ಅರಿಯಲಿಕ್ಕೆ ಈ ಪರಮಾತ್ಮ ಈ ಬುದ್ಧಿಯನ್ನು ಕೊಟ್ಟದಾನೆ. ನಾವು ಅದನ್ನ ಉಪಯೋಗ ಮಾಡಾಕ್ಹತೀದಿವಿ. ನೀವು ಯಾರಿಗರೇ ನಾವೊಂದು ಪ್ರಶ್ನೆ ಹಾಕಿದೀವಿ. ನೀವು ಮಕ್ಕೊಂಡಿರತೀರಿ ಹಮೇಶಾ ಹಂಗೆ ಮಕ್ಕೊಂಡ್ರ ಏನ್ ತಪ್ಪಾಗಿತ್ತು. ಯಾಕ ಎದ್ರಿ? ಅಂತ್ ನಾನ ಕೇಳ್ದೆ ಇದಕ್ಕ ಉತ್ತರ ಏನ್ ಕೊಡ್ತೀರಿ. ಸ್ವಲ್ಪ ವಿಚಾರ ಮಾಡ್ರಿ, ನೀವು ಯಾಕ ಎದ್ರಿ ಏಳದಿದ್ರ ಏನ್ ಲುಕ್ಸಾನ ಇತ್ತು, ಎದ್ದ ಏನ್ ಲಾಬೈತಿ. ನಾನು ಹುಡಗಾಟಗಿ ಹೇಳತಿರತಿನಿ. ಇಸ್ಲಾಂ ಕಂಟ್ರಿಯೊಳಗ ಒಬ್ಬ ನಾಸಿರುದ್ದಿನ್ ಅಂತ ರಾಜಾ ಆಗಿ ಹೋಗ್ಯಾನ. ಆ ರಾಜಾ ಒಂದು ದಿವಸ ತನ್ನ ಕುದುರಿ ರಥದೊಳಗ ಕುತ್ಗೊಂಡು ಎಲ್ಲೇ ನಡೆದಿದ್ದ. ಸಾರಥಿ ಕುದರಿ ಹೊಡಿತಿದ್ದ ಆಂವಾ ಹೋಗುವಾಗ ಇದರಿಗೆ ಒಬ್ಬ ಮನಷ್ಯಾ ಬಂದ. ಆ ಮನಷ್ಯಾನ ಡ್ರೆಸ್ ವಿಚಿತ್ರ ಇತ್ತು. ನಿಮಗ ಗೊತ್ತದ ಪೋಲಿಸ್ರ ಡ್ರೆಸ್ ಬ್ಯಾರೆ, ಸಾಧುಗೊಳ ಡ್ರೆಸ್ ಬ್ಯಾರೆ, ರಾಜಕಾರಣಿಗಳ ಡ್ರೆಸ್ ಬ್ಯಾರೆ, ಆಮ್ಯಾಲೆ ಏನಪಾಂದ್ರಾ ಮುತ್ತ ಮಾರೋರ ಮುತಗಾರ ಡ್ರೇಸ್ ಬ್ಯಾರೆ ಬ್ಯಾರೆ, ಜ್ಯೋತಿಷ್ಯ ಹೇಳಾವ್ರು ಹಿಂದಕ ಇದ್ದು ಅವರು ಬಂದ ಕೂಡಲೇ ಮುತ್ತಗಾರ ಬಂದಾನ ನಮ್ಮೂರಿಗಂತ ಕಚ್ಚಿ ಕೆಳಗ ಇಳಿ ಬಿಟ್ಟು ಮ್ಯಾಲ ಕಂಬಳಿ ಹಾಕೊಂಡು ಹೊಂಟಾ ಅಂದ್ರ ಮುತಗಾರಪ್ಪ ಆಂದ್ರದಿಂದ ಬಂದಾನಂತ ತಿಳಕೊತಿದ್ವಿ, ಹಾಂಗ ಜ್ಯೋತಿಷಗಾರ ಮನುಷ್ಯ ಇದರೀಗ ಬರತಿದ್ದ.

ರಾಜಗ ಬಹಳ ಆಶ್ಚರ್ಯ ಆಯ್ತು. ಸಾರಥಿ ಕೇಳದ. ವಹಿ ಏ ಕೋನ್ ಹೈ? ಕೌಂಸೆ ಆಯೆ,? ಇಂವ ಯಾರ? ಎಲ್ಲಿಂದ ಬಂದನ? ಅಂತ ಕೇಳ್ದ ಮಹಾರಾಜ ಏ....... ಜ್ಯೋತಿಷಿ ಹೈ ಇಂವ ಜ್ಯೋತಿಷಿ ಹಾನ. ಅಚ್ಛಾ! ಏ ಕ್ಯಾ ಕರತಾ ಹೈ? ಅಂದ. ಏನ್ ಮಾಡ್ತಾರ್? ಅಂದ ಮಾರಾಜ, ಅಂವ ಕೈ ನೋಡಿ ನಮಗ ಹಿಂದಿಂದು, ಮುಂದಿಂದು ಎಲ್ಲಾ ಹೇಳ್ತಾನಾಂವಾ. ಅಚ್ಛಾ ಅಂದ. ಹಾಂಗಾದ್ರ ನಮ್ಮ ಮನಿಗಿ ಬಾ ಅನ್ನು ಅಂದ. ರಾಜಾಜ್ಞೆ ಅದ. ಹೇಳ್ದ ಸಾರಥಿ, ಏ ಜ್ಯೋತಿಷಿ ನಮ್ಮ ಸಾಹೇಬ್ರು ಕರಿತಾರ, ರಾಜರ ಕರೀತಾರ ಬಾ, ಮನೀಗಿ, ಅಂವ ಅಂದ. ಕೆಟ್ಟ ದುಷ್ಟ ಮನಶ್ಯಾ ಇವನ ಮನೀಗಿ ಏನು ಹೇಳಬೇಕೋ ಮಾರಾಯಾ ಜ್ಯೋತಿಸು, ಚಲೋ ಇದ್ರ ಹೇಳಬೇಕು, ಇಂತ ಕೆಟ್ಟ ಮನಶ್ಯಾನದನ ಅಂತ ತಿಳಕೊಂಡು ಇನ್ ಒಲ್ಲ ಅಂದ್ರುನೂ ಜೀಂವಾ ಹೊಯ್ತೆ! ಏನರ ಇದ್ದಕಿದ್ದಂಗ ಹೇಳಿದರನು ಜೀವ ಹೊಯ್ತೆ! ಆ ಮನಶ್ಯಾನೆ ಶಂಭೋರ ಟಕ್ಕೆ ಕೆಟ್ಟಿದ್ದ. ಅಂತ ಅನಾಚಾರಿ ಅತ್ಯಾಚಾರಿ, ದುರಾಚಾರಿ ರಾಜಾ.

ಇನ್ ಒಲ್ ಅನಾಕ ಬರಲಿಲ್ಲ. ಹೋದ. ಹೋಗಿ ಮನ್ಯಾಗ ಕೂತ. ಕೂತ್ ಕೂಡ್ಲೇ ರಾಜಾರು ಏ ದೇಖೋ ಮೇರೆ ಹಾತ ಅಂದ್ರು; ಅಂವಾ ಅಂದಾ ತಲಿ ತುರುಸಗೊಂಡು ಸಾಹೇಬ್ರ ನಿಮ್ಮ ಕೈಯಾರ ನೋಡಬೇಕು. ಪೂರಾನೆ ನೋಡಾಕ್ಹತ್ತೀನಿ. ನಿಮಗ ಆಂದ ಅಂವ. ಬರೆ ಕೈಯಾನ ನೋಡ್ಲಿ ನಿಮಗ ಮ್ಯಾಗಿನಿಡಿದು ಕೆಳಗ, ಕೆಳನಿಡಿದು ಮ್ಯಾಗ ನೋಡಾಕತ್ತೀನಿ ಈ ಕೈ ಏನ್ ನೋಡೋದಾಂದ. ಏ ಇಲ್ಲಾ ನನ್ನ ಕೈ ನೋಡಿ ಎಲ್ಲಾ ಹೇಳ್ತಿ ಅಂತ ಅಂವ ಅಂದ. ನಿಮಗಾಗಾಕತ್ತೆದೇನು ಕದು ಮೊದಲ ಹೇಳ್ರಿ ಹಿಂದರಗಡೆ ವಿಚಾರ ಮಾಡ್ತಿನಿ ಹೇಳುದು ಅಂದ ಅಂವ. ಬಹಳ ಶ್ಯಾಣೆ ಇದ್ದ ಜ್ಯೋತಿಷಿಗಾರ. ಅವರ ಅನುಕೂಲಾಗೇ ಹೇಳಬೇಕಲ್ಲ. ನನಗೇನಾಗತದೋ 'ಐ ಆ್ಯಮ್ ಕಿಂಗ್ ಆಫ್ ದ ಧಿಸ್ ಕಿಂಗಡಮ್. ಆಯ್ ಹ್ಯಾವ್ ಎವರಿಥಿಂಗ್' ನನಗೇನ ಜರೂರತ ಇಲ್ಲ ಏನ್ ಬೇಕಾಗಿಲ್ಲ. ಪರಂತು ನೀ ಕೈ ನೋಡಿ ಹೇಳತಿನಿ ಅಂದದಕ್ಕ ಕೈ ತೋರಸಾಕ ಹತ್ತೀನಿ ಅಂದಾವ. ಏನಿಲ್ಲ ನಿಮಗ ಏನ್ ಆಗ್ತದ ಹೇಳ್ರಿ ಅಂದ ಅಂವಾ. ಹದಿನೆಂಟು ತಾಸ ನಿದ್ದಿ ಬರ್ತದ ಅಂದ ಅಂವಾ. ದಿವಸ ಎಟ್ಟು ತಾಸ ಇರ್ತದ. ಇಪ್ಪತ್ತು ನಾಲ್ಕು ಇರ್ತದ. ಇಂವಾ ಲೆಕ್ಕಾ ಹಾಕದ. ಆರ ತಾಸ ಎಚ್ಚರಿರಾಂಗ ಕಾಣತಾನಿವ. ಹದಿನೆಂಟು ತಾಸ ಮಲಗಂಗ ಕಾಣತಾನಿವ. ಆರ್ ತಾಸ ಎಚ್ಚರ ಇದ್ರನ ಇಟ್ ಪಾಪಾ ಮಾಡ್ತಾನಿಂವ. ಲೆಕ್ಕ ಹಾಕ್ದ ಅಂವ. ಯಾವ ಮನಶ್ಯಾ ಆರ ತಾಸ ಎಚ್ಚರ ಇದ್ದರನ ಇಷ್ಟ ಪಾಪ ಮಾಡಬಾರದ ಮಾಡ್ತಾನ, ತಿನಬಾರದ ತಿಂತಾನ, ಕುಡಿಬಾರದ ಕುಡಿತಾನ, ಆಡಬಾರದ ಆಡತಾನ. ಸದಾ ಪಾಪಾಚರಣೆಯನ್ನೇ ಮಾಡ್ತಾನ ಈ ಮನುಷ್ಯ ಮತ್ ಇಂವ ಹದಿನೆಂಟು ತಾಸ ಮಕ್ಕೋತೀನಿ ನನ್ನ ಕೈ ನೋಡಿ ಅಂಥಾನಂಥ ಕೂಡಲೇ ಕೈ ನೋಡಿ ಹೇಳ್ದ ಸಾಹೆಬ್ರ ಅದೊಂದು ಆರ ತಾಸ

ನಿಮ್ಮಂಥೋರು ಮಕ್ಕೋದ್ರ ಬಹಳ ಛೊಲೋ ಅಂದ. ಅವೊಂದು ಆರ ತಾಸ ಮಕ್ಕೊಬೇಕ ನೀವು. ಯಾಕ ಬಹಳ ಬೆರಕಿ ಇದ್ದ ಅಂವ. ಅದೊಂದು ಆರ ತಾಸ ಮಕ್ಕೊಬೇಕ ನೀ ಯಾಕ ನಿಮ್ಮಂಥೋರು ಮಕ್ಕೊಂಡ್ರ ನಿಮಗೂ ಒಳ್ಳೇದು ಜಗತ್ತಿಗೊಳ್ಳೇದು. ಯಾಕ ನಿಮಗ್ಯಾಕ ಒಳ್ಳೇದು? ನೀವು ಪಾಪ ಮಾಡಂಗಿಲ್ಲ. ಒಳ್ಳೇದು, ಮಂದಿಗ್ಯಾಕ ಒಳ್ಳೆದೂ ಅಂದ್ರ ಅಂವ ಸಾಯಂಗಿಲ್ಲ ಒಳ್ಳೆದು, ಪಾಪಿ ಮನುಷ್ಯ ಎಚ್ಚರಿರೊದಕ್ಕಿಂತಲೂ ಜಾಸ್ತಿ ಮಲಗುದೇ ಒಳ್ಳೇದು. ಅದಕ್ಕ ಈಗಿನ ಕಾಲಕ್ಕ ಹನ್ನೊಂದಕೇಳ್ತರ ಬಹಳ ಛೊಲೋ. ಜಲ್ದಿ ನಾಲ್ಕಕ ಏಳಂಗಿಲ್ಲ. ಎಂಟಕ್ಕ ಒಂಭತ್ತಕ್ಕ ಹತ್ತಕ್ಕ ಹನ್ನೊಂದಕ್ಕ ಬಡ ಬಡ ಒಂಭತ್ತಕ್ಕ ಎದ್ದವರನೇ ಯಾಕಡೀ ಜಳಕಾ ಮಾಡುದನೋ, ಎಕಡೀ ಉಣ್ಣುದನೋ, ಎಕಡೆ ಚೊಣ್ಣಿ ಸೇರಸಗೊಂಡನೋ, ನಡದ ಆಫಿಸ್ಗೆ, ಕೆಲಸಕ್ಕೆ, ಯಾಕ? ಮನುಷ್ಯ ಪುಣ್ಯಾತ್ಮ ಮನುಷ್ಯ ಎಚ್ಚರಿದ್ರ ಅವನಿಗೂ ಒಳ್ಳೇದು ಜನ್ರಿಗೂ ಒಳ್ಳೇದೂ, ಪಾಪಿ ಮನುಷ್ಯ ಮಕ್ಕೊಂಡ್ರ ಅವನಿಗೂ ಒಳ್ಳೇದು ಜಗತ್ತಿಗೂ ಒಳ್ಳೇದು. ಅದಕ ಮಹಾತ್ಮರು ಹೇಳುದ್ರು ಅವನೀಗ ಬಹಳ ಸಿಟ್ಟ ಬಂತು. ಹಂಗ ಏನೂ ಅಂತ ಕೇಳ್ದ ಅಂವ ರಾಜಾ, ಹದಿನೆಂಟು ತಾಸ ಮಕ್ಕೋತಿನೀ ಮತ ಅಂವ ಆರ್ ತಾಸ ಮಕ್ಕೋ ಅಂತೀ ಹಾಂಗ ಅಂದ್ರ ಏನು ಅಂತ ಕೇಳ್ದ. ನಿಮಗೂ ತಿಳಿದಿರಬೇಕು. ಮತ ಇಪ್ಪತ್ನಾಲ್ಕು ತಾಸ ಮಕ್ಕೊಳುದು ಅಂದ್ರ ಸಾಯುದು. ನಿಮ್ಮಂಥೋರು ಸಾಯುದು ಬಹಳ ಛೋಲೋರಿ ಅಂದ, ರಾಜಾ ಅವನೀಗ ಏನ ಬಹುಮಾನ ಕೊಟ್ಟ ಬರದಿಲ್ಲ ಪುಸ್ತಕದಾಗ, ಇಷ್ಟರೇ ಆಐತತ್ತ. ಬಹುಶ ಅವನೀಗ ಫಾಸೀನೆ ಕೊಟ್ರುಬಹುದು. ಪಾಪಿ ಮನುಷ್ಯ ಎಚ್ಚರ ಇರೊದೊರಳಗ ಯಾವ ಅರ್ಥನೂ ಕೂಡ ಇಲ್ಲ. ಬಹುಶಃ ನಿಮಗ ಮಲ್ಗಿ ಎದ್ರ ನಾವು ನಿಮಗ ಕೇಳ್ದಿವಿ. ಯಾಕ ಏಳ್ತಿ ಅಂತ ಕೇಳಿದ್ರ ಉತ್ರ ಏನ್ ಕೊಡ್ತಿರಿ. ಯಾಕ ಏಳ್ತಿರಿ, ಬಹಳ ಮಂದಿ ಅನತಿರಬೇಕು. ಹಸು ಆಗಿ ಏಳ್ತಿವಿ, ಸ್ವಾಮಿ ಅಂತ. ನಾವೇನು ಮಕ್ಕೋಬೇಕು ಅಂತಿವೇವೆನ್ರಿ ಹೊಟ್ಯಾಗ ಹೆಗ್ಗಣ ಹೆಗ್ಗಣ ಕೆದರಾಕತ್ಯಾವ ಅದಕೆದ್ವಿ, ಅಲ್ಲ ಬಹಳ ಮಂದಿ ಕೇಳದ್ರ ಯಾಕ ಎದ್ರಿ ಆಫೀಸ್ ಹೋಗಬೇಕಲ್ರಿ ಸ್ವಾಮಿಗಳ ಇಲಾಕ್ರ ನೌಕ್ರಿ ಡಿಸ್‌ಮಿಸ್ಸು ಅದಕ್ಕೇಳತಿವಿ. ಮತ್ತೊಬ್ಬಗ ಕೇಳಿದರ ಯಾಕ ಏಳ್ತಿರಿ? ಅಂದ್ರ ಸಾಲಿಗ ಹೋಗಬೇಕು. ಮತ್ತೊಬ್ಬರಿಗ ಯಾಕ ಏಳ್ತಿರಿ? ಅಂದರ ಅಂಗಡಿ ತೆರಿಬೇಕು. ಹೆಣ್ಣ ಮಕ್ಕಳಿಗೆ ಕೇಳಿದ್ರ ಯಾಕs ಚಾ ಮಾಡ್ಬೇಕು. ಅಡಿಗಿ ಮಾಡಬೇಕು ಖಾರಬ್ಯಾಳಿ ಮಾಡಬೇಕು. ಸಾರ ಮಾಡಬೇಕು. ಸಾಯುತನಕ ಇದೇ ಉತ್ರ ಕೊಟ್ರೇ ವಿನಃ ಇದರ ಬಿಟ್ರ ನಿಮ್ಮ ಹತ್ತಿರ ಉತ್ರ ಸಿಗಲಿಲ್ಲ. ನೀವೂ ಯಾಕ ಏಳ್ತಿರಿ ಅಂದ್ರ ಉಣಾಕ, ಸಾಲಿಗಿ, ನೌಕ್ರಿಗಿ, ಅಡಿಗಿ ಮಾಡಾಕ ಏಳ್ತಿರಿ. ಇದು ಮನುಷ್ಯ ಮಡೋಕೆಲ್ಸ ಅಲ್ಲ. ಬಸವಣ್ಣಗ ಕೇಳುದ್ರು ಅಂತ ಬಸವಣ್ಣಗ ನಿಮ್ಮಂಗ ಕೇಳುದ್ರು ಯಾಕ ಏಳ್ತಿ ಬಸವಣ್ಣ.? ಮಕ್ಕೋ ಅಂದ್ರಂತ. ಅಂವ ಅಂದಂತ, ನಾನು ಆರಂಭ ಮಾಡುವೇನಯ್ಯ ಲಿಂಗ

ಪೂಜೆಗೆಂದು। ಯಾಕ ಏಳತ್ಯೊ ಬಸವಣ್ಣ ಅಂದ್ರ ಅರೆರೆ ದೇವರ ಪೂಜಾ ಮಾಡೋದಾದ ಅದಕ ಜಲ್ದಿ ಏಳತೀನಿ, ಅಂತ ಬಸವಣ್ಣ ಹೇಳ್ದ. ವಿನಹ ಮನುಷ್ಯರ್ಯಾರೂ ಕೂಡ ಪರಮಾತ್ಮನ ಭಕ್ತಿಗಾಗಿ ನಾವು ಏಳ್ತೀವಿ ಅಂತ ಯಾರು ಅನಲಿಲ್ಲ. ಅದಕ್ಕ ಬಸವಣ್ಣ ಬಸವಣ್ಣಾದ. ಬಸವಣ್ಣ ಜಗತ್ ಪೂಜ್ಯನಾಗಬೇಕಾದ್ರ ಸುಮ್ನ ಆಗಿಲ್ಲ. ನಾವು ಎಚ್ಚರಾಗುದು ಪರಮಾತ್ಮನಿಗ, ಸಂಸಾರಕ್ಕಾಗಿ ಎಚ್ಚರಾಗೋದು ಜರುರತ್ತಿಲ್ಲ. ಸಂಸಾರ ಆಗ್ಯಾದ ನೀ ಬಂದ ಮಾಡಾಕ್ಷತ್ತಿಲ್ಲ. ಪ್ರಾರಬ್ಧಪಹಲೇರಚಾ ಪೀಚೆ ರಚಾ ಶರೀರ, 'ತುಳಸಿ ಚಿಂತಾ ಕ್ಯುಂಕರೆ, ಭಜಲೆ ಶ್ರೀ ರಘುವೀರ' ತುಳಸೀದಾಸರ ಹೇಳತಾರ ತಮ್ಮಾ ನೀ ಏನ್ ಗಳಿಸಬೇಕು ಏನು ಇಡಬೇಕು ಏನು ಓದಬೇಕು Every thing is free planed ಪ್ರಾರಬ್ಧ ಅದ ಪ್ರಾರಬ್ಧ ಮೊದಲ ಮಾಡಿರುವಂಥದ್ದು. ಮೊದಲ ನಕ್ಷೆ ಆಗತದ ಆ ಮ್ಯಾಲ ಬಿಲ್ಡಿಂಗ್ ಕಟ್ಟತಾರ. ಹಾಂಗ ಮೊದಲ ನಿನ ಹಣೆಬರ, ತಯಾರಾದ ಆ ಮ್ಯಾಲ ನೀ ಹುಟ್ಟಿದಿ ಕೂಳ ಮುಂದ ಕಾಲ ಹಿಂದ...... ನೀ ಹುಟ್ಟಿದಕಿನ ಮೊದಲೇ ನಿಮ್ಮವನ ಮಲ್ಯಾಗ ಮಲಿ ಹಾಲ ಕೊಟ್ಟಾನ ಪರಮಾತ್ಮಾ. ಏನೇನು ಸಿಗಬೇಕು, ನಾ ಪ್ರಯತ್ನ ಮಾಡಿ ಗಳಿಸೇನಿ ಹುಚ್ಚತನ ಅದ, ಬುದ್ಧಿಗೇಡಿತನ ಅದ. ನಿನ್ನ ಪ್ರಾರಬ್ಧಕ್ಕನುಕೂಲಾಗಿ ಪ್ರಯತ್ನ ಮಾಡು, ಪ್ರಯತ್ನಕ್ಕ ಫಲಾ ಅದ. ಪ್ರಾರಬ್ದ ಬಿಟ್ಟು ಮನುಷ್ಯನಿಗೆ ಫಲಾ ಇಲ್ಲ, ಆದ್ರ ಬಸವಣ್ಣ ಕೇಳದ್ರ ಯಾಕ ಏಳ್ತಿ ಬಸವಣ್ಣ ಅಂದ್ರು, ಭಗವಂತನ ಪೂಜೆ. ಭಗವಂತನ ಜಪ. ಭಗವಂತನ ಧ್ಯಾನ ಮಾಡುದದ ಅದಕ್ಕ ನಾ ಏಳ್ತಿನಿ ಅಂದ್ರು ವಿನಃ ಸಂಸಾರಕ್ಕಾಗಿ ಏಳ್ತಿನಿ ಅಂತ ಬಸವಣ್ಣ ಅನ್ನಿಲ್ಲ. ಸಂಸಾರ ಯಾಕ ಮಾಡ್ತಿರಿ, ಬಸವಣ್ಣ ಕೇಳಿದ್ರು, ಯಾಕ! ಯಾಕ ನೌಕರಿ ಹೋಗ್ತಿ.? ಯಾಕ ವ್ಯಾಪಾರ ಮಾಡ್ತಿದಿ.? ಯಾಕ ಅಡಿಗಿ ಮಾಡಾಕ ಹತ್ತಿದಿ? ಕೇಳದ್ರ ಯಾಕ ಹೊಲಕ್ಕ ಹೋಗತಿ? ಅಂದ್ರ, ಯಾಕ ನೌಕರಿ ಮಾಡ್ತಿರಿ ಸಾಹೇಬ್ರ? ಸುಮ್ಮ ಆರಾಮ ಮಲಗಾಕ. ನಡ್ರಿ ನಮ ಮಠದಾಗ ಇರಾಕಹತ್ತಿರಿ ಹಾಂಗ್ಯಾಂಗ್ರಿ ಸ್ವಾಮಿಗಳ್ರ ಹುಡುಗ್ಯಾರು ದೊಡ್ಡು ಆಗ್ಯಾವಲ್ರಿ, ಮನ್ಯಾಗ ಆಕಿ ಒಬ್ಬಾಕಿ ಅದಾಳಲ್ರಿ, ಬಿಟ್ಟ ಬರಬೇಕಂತ ನಾ ಎಲ್ಲಾ ಮಾಡಿನಿ ಅಕಿ ಒಂದೊದಾಳ ಒಂದು ಅದಾಳ ಅಕಿ ಒಂದು ಅದಾಳಲ್ಲ. ಹುಡುಗ್ರರ್ನ ಇನ್ನೂ ದಾರಿಗಚ್ಚಬೇಕು. ಸ್ವಾಮಿಗಳ ದಾರಿಗೆ ಹಚ್ಚಿದಮ್ಯಾಲ ಬರಾಕ ಏನ್ ಅಡ್ಡಿ ಇಲ್ಲ ನಿಮ ಮಠಕ್ಕ ಆವಾಗ ಮಠಕ್ಕ ಬರಾಂಗಿಲ್ರಿ ಅಂವ. ಅವರ್ನದಾರಿ ಹಚ್ಚುದ್ರೊಳಗ ಅಂವ್ನ ದಾರಿ ತಯ್ಯಾರ ಇರ್ತದ. ಅವ್ಯಾಂಗ ಮಠಕ್ಕ ಬರ್ತಾನಾಂವಾ. ದಿನಾ ಬಸವಣ್ಣನವರ್ಗೆ ಒಂದು ಮನಾ ಬಂಗಾರ ಪಗಾರ ಇತ್ತಂತ್ತ ಡೆಲಿ ಒಂದು ಮನಾ ನೀ ಯಾರೆ ಎದಿ ಒಡಕೊಂಡೆರ್ರಿ ಮತ್ತ. ಒಂದು ಮನಾ ಬಂಗಾರ ಅಂದ್ರ ಏಯವ್ವಾ ಅತ್ತ. ಮನಾ ಬಂಗಾರಂದ್ರ ಎಟ್ಟಾಗಬೇಕ. ಆತು ಡೇಲಿ ಒಂದು ಮನಾ, ಬಂಗಾರ. ಬಸವಣ್ಣ ನೀಯಾಕ ನೌಕರಿ ಮಾಡ್ತಿ ಬಸವಣ್ಣ ಪ್ರಧಾನ ಮಂತ್ರಿ ಯಾಕ ಆಗೇರಿ ಅಂತ ಕೇಳಿದ್ರ, ನಿಮಗ

ಕೇಳಿದ್ರ ಹೆಂಡ್ರದಾರ, ಮಕ್ಕಳದಾರ, ಮನಿಕಟ್ಟೂದದ, ಅವರಿಗೆ ಸಾಲಿಕಲಿಸೂದದ ಅವರ ಮದುವಿನೂ ಮಾಡೂದದ ಮತ ಎಲ್ಲಾ ಮಾಡೂದದ ಸ್ವಾಮಿಗಳ ನಾ ಮಾಡದಿದ್ರ ಹ್ಯಾಂಗ ಆಗ್ತದ್ರಿ ಅಂತ ನೀಂವ ಅಂತಿರಿ. ಬಸವಣ್ಣಗ ಕೇಳಿದ್ರಂತ ಯಾಕ ನೌಕ್ರಿ ಮಾಡ್ತಿ. ಬಸವಣ್ಣಗ ಒಬ್ಬ ಹೆಂಡ್ರಲ್ಲ, ಇಬ್ರ ಇದ್ರ. ಗಂಗಾಂಬಿಕೆ, ನೀಲಾಂಬಿಕೆ. ಮಗಾನೂ ಮುದ್ದು ಸಂಗಯ್ಯನಿದ್ದ. ಬಸವಣ್ಣನ ಕೇಳಿದ್ರ ಯಾಕ ನೌಕರಿ ಮಾಡ್ತಿ? ಅಂದ್ರ ನನ್ನ ಮಕ್ಕಳ್ಗಿ ನನ್ನ ಹೆಂಡರ್ಗಿ ಅಂತ ಅನಲಿಲ್ಲ ಬಸವಣ್ಣ. ನೀ ಯಾಕ ಮಾಡ್ತಿ ನೌಕರಿ ಅಂತ ಕೇಳಿದ್ರ, ಜಂಗಮ ದಾಸೋಹಕ್ಕೆಂದು ನನ್ನ ಮನಿಗಿ ದಿನಂಪ್ರತಿ ಜಂಗಮರು ಬರ್ತಾರ ನೌಕರಿ ಅದಕ್ಕ ಮಾಡ್ತೀನಿ ಅಂದ. ಇಲ್ಲಂದ್ರ ನಾಯಾಕ ನೌಕರಿ ಮಾಡ್ತಿದ್ದೆ ಅಂದ. ನನ್ನ ಹೆಂಡ್ರು ಮಕ್ಳು ಅಂತ ಬಸವಣ್ಣ ಎಂದೆಂದೂ ಅನ್ನಿಲ್ಲ. ಎಚ್ಚರಾದ ಬಸವಣ್ಣ ಲಿಂಗಕ್ಕ. ಕರ್ತವ್ಯ ಮಾಡಿದ ಬಸವಣ್ಣ ಜಂಗಮಕ್ಕ, ಆ ಬಸವಣ್ಣ ಪೂಜ್ಯ ಆದ. ಆರಾಧ್ಯನಾದ ಜಗಜ್ಯೋತಿ ಆದ. ಆ ಬಸವಣ್ಣ ದೇವರೇ ಆದ. ಆದ್ರ ನಮಗ ಎಂಥಾದ್ದು ಇರಬೇಕು! ಎಂದರೆ ಹಿಂಗ ಎಂದರೇ ಹಿಂಗ ನಂಬಾಯಾಗ ಬಂದದ. ಯಾಕ ಅಂದಿರಿ ಅಂತ ಹೇಳಿ, ಯಾಕ ಎದ್ರ ಅಂತ ಹೇಳಿ ನೌಕರಿ– ಪಾಕರಿ ಇದು ಚಲೋ ನಿಮಗ. ಯಾಕ ಎದ್ದಿ ಅಂದ್ರ ಹೊಟ್ಟಿ ಗಡಬಡ ಆತ್ರಿ ಸ್ವಾಮಿಗಳ ಅದಕ್ಕದೀನಿ ಅನ್ನೂ ಪೈಕಿ ನೀವು. ಅದಕ್ಕೆ ಅಂದ್ರು ಅವ್ರು ಕೋಟ್ಯಾಂತರ ಜನರೊಳಗ ಯಾವುನೋ ಒಬ್ಬ ಮಹಾಪುರುಷ ಪುಣ್ಯಾತ್ಮ, ಆತ ಈ ಭಗವಂತನಿಗಾಗಿ ಬದಕ್ತಾನೆ. ದೇವರಿಗಾಗಿ ಜೀವಿಸ್ತಾನೆ. ಪುಣ್ಯಕ್ಕಾಗಿ ಆ ಮನುಷ್ಯ ಎಚ್ಚರಾಗ್ತಾನೆ. ಅದು ಅದ. ನಮನ್ನ ನಿಮ್ಮನ್ನ ಕೇಳದ್ರ ಯಾಕ ಎಚ್ಚರಾದಿ ಅಂತ ಕೇಳಿದ್ರ ಏನು ಉತ್ತರ ಕೊಡ್ತಿವಿನಾವ್. ನಾಂವ ಕೇಳ್ದಿನಿ ಯಾಕ ಎಚ್ಚರಾದೆಪಾ! ಯಾಕ! ಮಲಗಾಕ, ಮತ್ತೇನೈತಿ. ಅಂಗಡಿ ಮಾಡ್ದೆ ಉಂಡೆ, ಹೊತ್ತ ಮುಳುಗಿ ಉಂಡೆ. ಮತ್ತೇನ ಮಾಡ್ದಿ. ಮತ್ತ ಮಕ್ಕೊಂಡೆ ಯಾಕ, ಮಕ್ಕೊಂಡೀ ಏಳಾಕ, ಯಾಕ ಎದ್ದಿ ಮತ್ ಮಕ್ಕೊಳಾಕ ನಮ ದಂಧಾನ ಇದೆ ಸುಳ್ಳಲ್ಲ ಯಾಕ ಹುಟ್ಟಿದೀ ಅಂತ ಕೇಳಿದ್ರಿ ಸಾಯಾಕ! ಸಾಯಾಕ ಅದಬಿಟ್ಟ ಮತ್ತೆನ ನಡಬರಕಿಂದು ಸುಳ್ಳದ, ಕಟ್ಟ ಕಡಿಗೆ ಹೇಳ್ರಿ ನೀವು. ವಿವೇಕಾನಂದಗ ಯಾವನೋ ಒಬ್ಬ ಕಲ್ಕತ್ತದ ಹುಡುಗ ಫಾರೆನ್‌ದಿಂದ ಕಲ್ತ ಬಂದಿದ್ದ, ಸ್ವಾಮಿಗೊಳ ಕಾಣಲಿಲ್ಲ ಅವಂಗ, ಯಾಕ ಕಣ್ ಫಾರೆನ್‌ದಾಗ ಇದ್ದು, ಅಂವುನು ಕಾಲ ಇಂಡಿಯಾದಾಗ ಇದ್ದು, ಮತ್ ಹ್ಯಾಂಗ ಇಂಡಿಯಾ ಮಂದಿ ಹ್ಯಾಂಗ ಕಾಣತನ ಅವನಿಗೆ ಅಂವ ಸ್ವಾಮಿಗೊಳು ಕುಂತಾರ ತಿರಗ್ಯಾಡತಿದ್ದ ಒದಕೋತ ಒದಕೋತ ಹಂಗ ತಿರಗಾಡ್ತಿದ್ದ. ವಿವೇಕಾನಂದರು ಪ್ರೀತಿಯಿಂದ ಕೇಳಿದ್ರು My Boy come here in seat ಅಂದ್ರು, ತಮ್ಮಾ ಬಾ ಇಲ್ಲಿ ಕೂಡ್ರು ಅಂತ ಕೇಳಿದ್ರು, Then Please what is your name? ನಾ ಹಿಂಗ ಇದ್ದಿನಿ I am studied for Forign contry on londn also. I got forign is agree

ಹಾಂಗ ಹಿಂಗ ಎಲ್ಲಾ ಹೇಳ್ದ, ಯೆಸ್ ಯೆಸ್, ok ok, ಬಹಳ ಚಲೊ ಆಯ್ತು ಇಷ್ಟೆಲ್ಲಾ ಕಲ್ತು ಏನ್ ಮಾಡತಿದ್ಧಿ ಅಂದ್ರೂ ತಮಾಷೆ ಏನು? ಏನ್ ಮಾಡ್ತಿ ಅಂದ್ರ ಏನ್ ಸ್ವಾಮಿಗಳ Enjoy, ಯಾವದರೆ ಒಂದ ನೌಕರಿ ಸಿಗ್ತಾವ, ನೌಕರಿ ಸಿಗ್ತಾವಂತ ತಿಳಕೋ ಮುಂದೇನ ಮಾಡ್ತಿ? ಮುಂದೇನ ಮಾಡ್ತಿ? ಅಂದ್ರ ಉಣಲಾದರೆ ಉಡುವ ಚಿಂತೆ, ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡರ ಚಿಂತೆ, ಏನ ಮಾಡ್ತಿ ಮದುವೆ ಮಾಡ್ಕೋತಿನ್ರಿ ಸ್ವಾಮಿಗಳ ಹುಂ! ಮಾಡ್ಕೋ ಮಾಡ್ಕೋ, ಮದುವೆ ಮಾಡ್ಕೊಂಡು ಮುಂದೇನು? ಅಂದ್ರೂ ನೀವು ಸಾಧುಗಳು ನಿಮಗೇನ ಹೇಳಬೇಕ್ರಿ! ಅದೆಲ್ಲಾ, ಇದು ಕೇಳುವ ಪ್ರಶ್ನೆನೂ ಅಲ್ಲ, ನಾವು ಹೇಳುವ ಉತ್ತರನೂ ಅಲ್ಲ. ಏನ ಮಾಡ್ತಿ ಅಂದ್ರ ಏನ್ ಏನ್ ಹೇಳಬೇಕ್ರಿ ಸ್ವಾಮಿ? ಎಲ್ಲಾರೂ ಹ್ಯಾಂಗ ಮಾಡ್ತರ ಹಂಗ ನಾನು ಎರಡು ಮೂರು ಮಕ್ಕಳು ಹಡಿತಿನಿ. ಅಚ್ಯಾ ಅಚ್ಯಾ ಎರಡ್ಮೂರು ಯಾಕ, ಏಳೆಂಟು ಹಡಿ ಅಂದ್ರು ಹಡೆಂವ ನೀ ನಮಗೇನು ಗಂಟ ಹೋಗೂದದ ಹಡಿ.

ಹಡದು ಮುಂದೇನು ಮಾಡ್ತಿ? ಅಂದ್ರು, ಅವರು ಅಂದ್ರು ಯಾಕೋ ಈ ಪ್ರಶ್ನೆ ಮುಂದೆ ಹೋದಂಗ ಕಾಣ್ತದ ಏನ್ ಮಾಡ್ತಿ, ಏನ್ ಮಾಡ್ತಿ ಅಂದ್ರ ಅಲ್ರೀ ಸ್ವಾಮಿಗೊಳ ಏನ ಮಾಡ್ತರ ಅವುಕ ಛೊಲೊದು ಸ್ಕೂಲ್ ನೋಡಂಡ ಸಾಲಗೀ ಹಚ್ಚತಿನಿ, ಅವುಕ ಸಾಲಿ ಕಲಸ್ತಿನಿ, ದೊಡ್ಡವರ ಮಾಡತೀನಿ, ಅಚ್ಛಾ! ದೊಡ್ಡವರ ಮಾಡ್ದಿ ದೊಡ್ಡವರ ಮಾಡಿ ಮುಂದೇನು ಮಾಡ್ತಿ? ಅಂದ್ರು, ನಾ ಹ್ಯಾಂಗ ಮದುವಿ ಮಾಡ್ಕೊಂಡಿನಿ ಅವಕ ಇಷ್ಟು ಮದುವಿ ಮಾಡ್ತಿನಿ, ಆಯ್ತು ಮದುವಿ ಮಾಡು ಬಹಳ ಛೋಲೋ ಆಯ್ತು. ಮದುವಿ ಮಾಡಿ ಮುಂದೇನು ಮಾಡ್ತಿದಿ? ಏನ್ರಿ ಸ್ವಾಮಿಗಳಾ ಮುಂದ ಏನ್ ಮಾಡ್ತಿ ಅಂದ್ರ ನನಗೂ ಐವತ್ತು ಐವತ್ತೈದು ಆಗ್ತಾವ ರಿಟಾಯರ್ ಆಗ್ತಿನಿ ಆರಾಮ ಕುಂಡರತೀನಿ. ಮನ್ಯಾಗ ಕುಂತು ಮೊಮ್ಮಕ್ಕಳು ಆಗಿರ್ತವ ಅವುಕ ಆಡಸಗೊತ ಇರತೀನಿ ಮಮ್ಮಕ್ಕಳೀಗ. ಆಯ್ತು ಬಹಳ ಛೋಲೋ, ಆಯ್ತು ಮುಂದೇನು ಮಾಡ್ತಿ? ಏನ್ರಿ ಮ್ಯಾಲ ಮ್ಯಾಲ ಮುಂದೇನು ಮಾಡ್ತಿ ಮುಂದೇನು ಮಾಡ್ತಿ ಕೇಳ್ತಿರಿ ಅರೇ,! ಮುಂದೇನು ಮಾಡ್ತಾರ್ರಿ ಸತ್ತು ಗೋಡಿಗ ಕುಂಡ್ರತಿನಿ ಅಂದ ಅಂವ. ಅಬಾಬಾ ಸತ್ತ ಗೋಡಿಗ ಕುಂಡ್ರಾಕ ಲಂಡನ್‌ಕ ಹೋಗಬೇಕೇನು? ಸತ್ತು ಗೋಡಿಗ ಕುಂಡ್ರಕ ಇಷ್ಟ ಡಿಗ್ರಿ ಪಡಿಬೇಕೇನು? ಸತ್ತು ಗೋಡಿಗ ಕುಂಡ್ರಕ ಹೆಂಡ್ತಿಗಿ ಮಾಡ್ಕೊಬೇಕೇನು? ಸತ್ತು ಗೋಡಿಗ ಕುಂಡ್ರಕ ಎಂಟು ಮಕ್ಕಳು ಹಡಿಬೇಕೇನು? ಸತ್ತು ಗೋಡಿಗ ಕುಂಡ್ರಕ ಅವುಕ ಸಾಲಿ ಕಲಿಸಬೇಕೇನು? ಹಂಗೇ ಸಾಯಕ ಬರತದ ಇಲ್ಲ ಅಂತ ಕೇಳುದ್ರು, ಅಂವ ಅಂದ ಬರತದ ಬಿಡ್ರಿ ಅಂದ ಅಂವ. ಏನು ಉತ್ರ! ಉತ್ರ ಏನದ? ಏನದ ಕಡೀಗ ಸತ್ತು ಗೋಡಿಗ ಕುಂಡರತೀನಿ ಅನೊದೆ ಉತ್ರ ಅದ. ಇದ್ದ ಬಳಿಕ ಯಾಕ ಇಷ್ಟ ಗಳಿಸ್ದೆ ಅಷ್ಟ ಗಳಿಸ್ದೆ ಮುಂದ ಹಾಂ ಮತ್ತ ಮುಂದ ಮುಂದ ಮುಂದೇನು ಕಣ್

ಮುಚ್ಚಿ ಕುಂಡ್ರುದು ಸಾವು. ಇದರ ಬಗ್ಗೆ ನಾವು ವಿಚಾರ ಮಾಡಿಲ್ಲ. ಇದರ ಬಗ್ಗೆ ಮಹಾತ್ಮರು ಅದನ್ನೇ ಅಂತಾರ ಸತ್ಪುರುಷರು, ಸಜ್ಜನರು, ನಮಗ ಏನ್ ಹೇಳತಾರಂಥ ಕೇಳಿದ್ರ, ನೀ ಮಾಡ್ತಿ ಏನು ಅನ್ನತಕ್ಕಂಥದ್ದು ವಿಚಾರ ಮಾಡಿಲ್ಲ. ಸಾವು ಹುಟ್ಟು ಬದುಕು ಅದವ ಯಾಕ ಹುಟ್ಟವೀ? ಸಾಯ್ತಿ ಯಾಕ,? ಹುಟ್ಟು ಸಾವು 'ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನಿ ಜಠರೇ ಶಯನಂ ಎ ಸಂಸಾರೆ ಕಡುದುಸ್ತಾರೆ ಕೃಪೆಯಾ ಪಾಹಿ, ಪಾಹಿ ಮುರಾರೆ ಭಜೆ ಗೋವಿಂದಂ ಭಜೆ ಗೋವಿಂದಂ, ಗೋವಿಂದಂ ಭಜೆ ಮೂಢಮತೆ! ಏ ಮೂರ್ಖ ಮನುಷ್ಯ! ವಿಚಾರ ಮಾಡಲಿಲ್ಲ ಅದಕ್ಕ ಮಹಾತ್ಮರು ಆಹಾರ ನಿದ್ರಾ ಭಯ ಮೈಥುನಂಚ. ಜ್ಞಾನೊ ಪಶುಭೀ ಸಮಾನಃ' ನೀನು ಬರೆ ಊಟ ಮಾಡುದುರೊಳಗ, ನಿದ್ರಿ ಮಾಡುದುರೊಳಗ, ಮಕ್ಕಳನ್ನ ಹಡಿಯುದರೊಳಗ, ಇದರಾಗೆ ಕಾಲ ಕಳ್ದಿ ಅಂತ ಕೇಳದ್ರ, ನೀನೊಬ್ಬ ವಿಚಾರಹೀನನಾಗಿರಕ್ಕಂಥ ಮನುಷ್ಯ ಅಲ್ಲ, ನೀನು ಒಬ್ಬ ಪಶು ಅಂತ ತಿಳುಕೋ. ಬೇರೇ ವಿನಃ ವಿಚಾರ ಮಾಡಬೇಕು. ವಿಚಾರ ಮಾಡಬೇಕು, ಅದಕ್ಕೆ ಶಾಸ್ತ್ರದೊಳಗ ಯಾವ ಮನುಷ್ಯ ವಿಚಾರ ಮಾಡೋದಿಲ್ಲ ಅವನು ಸಮಾಧಾನ ಆಗೋದಿಲ್ಲ. ಪ್ರಪಂಚದೊಳಗ ವಿಚಾರ ಮಾಡಿಲ್ಲ, ಅವನ ವಿಚಾರ ಎಟ್ಟದಾವಂದ್ರ ನಮ್ಮ ಶಾಸ್ತ್ರದೊಳಗ ಹೇಳಿದ್ರ ಎರಡು ವಿಚಾರ, ನಿತ್ಯ ಅನಿತ್ಯ ವಿಚಾರ. ಆತ್ಮಾನ ಆತ್ಮಾ ವಿಚಾರ. ಎರಡು ವಿಚಾರ ಅದಾವ ವಿಚಾರ ಮಾಡದ್ರಿ ಅಂದ್ರ ಗುರುತಾಗತದೆ.

ಸಮರ್ಥ ರಾಮದಾಸರು ಮದುವಿಯೊಳಗ ಕುಂತಿದ್ರು, ಶಿವಾಜಿ ಮಹಾರಾಜರ ಗುರು, ಅಪ್ಪಟ ಬ್ರಾಹ್ಮಣ. ಹಿಂದೂ ಸಾಮ್ರಾಜ್ಯ ಸ್ಥಾಪನೆ ಮಾಡಿರತಕ್ಕಂಥ ಮಹಾಪುರುಷ, ಯಾರು ಸಮರ್ಥ ರಾಮದಾಸ? ಮಹಾಸ್ವಾಮಿಗಳು ರಾಮಚಂದ್ರನ್ನ ಪ್ರತ್ಯಕ್ಷ ಮಾಡಿಕೊಂಡಿರತಕ್ಕಂಥ ಮಹಾತ್ಮರು. ವಿಭೂತಿ ಅವನೇನು ಕೂಡ ಬಹಳ ವಿದ್ವಾವಂತ ಸಂಸ್ಕೃತದ ಪಂಡಿತ. ಮದ್ವಿ ನಡಿದಿತ್ತು, ಮದ್ವಿ ಮಂಟಪದೊಳಗ ಕುಂತಿದ್ರು, ಹ್ಯಾಂತಿ ಆಕಡಿ ರಾಮದಾಸಸ್ವಾಮಿ ಈ ಕಡೆ ಇನ್ ಪಾಣಿ ಗ್ರಹಣ ಕೈಯಾಗ ಕೈ ಹಿಡಿಯುದದ, ಗಂಡನ ಕೈಯಾಗ ಹೆಣ್ತಿ ಕೈ ಕುಡೋರು ಅದಾರ, ಫಕ್ತ ಈಗ ಮಂತ್ರ ಅನ್ನೋರು ಅದಾರ ಧರ್ಮೇಚ, ಕಾಮೇಚ, ಅರ್ಥೇಚ ನಾತುಚರೆಣಿ ನಾತುಚರಸ್ಸೇ ಧರ್ಮ ಅರ್ಥ ಕಾಮವನ್ನು ನಾನು ಹೆಣ್ತಿ ಬಿಟ್ಟು ಬೇರೆ ಕಡಿ ಮಾಡುದಿಲ್ಲ. ಹೆಣ್ತಿ ಜೊತೆಗೆನೆ ಧರ್ಮ ಮಾಡ್ತಿನಿ, ಹೆಣ್ತಿ ಜೊತೆಗೆನೇ ರೊಕ್ಕಗಳಸ್ತಿನಿ ರೊಕ್ಕ ಎಟ್ಟಗಳಿಸ್ತಿನಿ, ಹ್ಯಾಂತಿಗಿ ಗೊತ್ತ ಇದ್ದಂಗಾತ. ತಂದ ಇವ್ರ ಕೈಯಾಗ ಕೊಡ್ತಿನಿ ಮತ ಮುಂಜಾನೆದ್ದು ಭಿಕ್ಷಾ ಬೇಡತಿನಿ, ನೌಕರಿ ಮಾಡೋರು ಹಂಗ ಮಾಡತರ ಪಗಾರ ತಂದು ಬರೊಬರಿ ಕೈಯಾಗ ಕೊಡಬೇಕು ಹೆಣ್ತಿ ಕೈಯಾಗ. ಎರಡ ತಾರೀಖ ಮೂರು ತಾರೀಖ ಮತ ಮುಂಜಾನೆದ್ದು ಹೊಂಟ್ರ ಹತ್ತ ರೂಪಾಯಿ ಅದಾವೆನ ಅಕೀ ಅಂತಾಳ ಯಾಕ ನಿನ್ನೆ ಐದು ಒಯ್ದಿರಿ, ಇವತ ಹತ್ಯಾಕ? ಸ್ವಲ್ಪ ಬೇಕಾಗ್ಯಾವ,

ಹತ್ತು ಸಾವಿರ ಪಗಾರದಾಂವ ಐದು ರೂ ಭಿಕ್ಷಾ ಪಾತ್ರಿ ಮುಂದ ನಿಂತಾನ ನೋಡ್ರಿ, ಅದಕ ಹೇಳ್ತಾರವರು ಅಂಥ ಮಹಾತ್ಮ ಅಂವಾ ಕೈಯಾಗ ಅರ್ಥವನ್ನು, ಧರ್ಮವನ್ನು, ಕಾಮವನ್ನು, ಪ್ರಜೋತ್ಪತ್ತಿಯನ್ನ ನಿನ್ನ ಬಿಟ್ಟು ನಾ ಅನ್ಯಥಾ ಅನ್ಯ ಹೆಣ್ಣನ್ನು ನೋಡುದಿಲ್ಲ ಪರವಧುವ ಮಾದೇವಿ ಎಂಬೆ ಕೂಡಲ ಸಂಗ ಅಂತ, ಬಸವಣ್ಣ ಹೇಳದಂಗ, ಹಂಗ ನೀ ಸಾಯೂತನ ನಿನ್ನ ಜೊತೆ ಗಿರ್ತಿನಿ ಅಂತ ಮಂತ್ರ ಓದಿ ಕೈಯಾಗ ಕೈ ಕುಡುವವ್ರ ಇದ್ರು! ಕುಡುವಾಗ ಕೈಯಾಗ ಕೈ ಕೊಟ್ರು ಅಕ್ಷತಾ ಹಾಕಾಕ ಹತ್ತಿದ! ನಿಮಗ ಗೊತ್ತದ ಏನಪಾ, ಅಂತ ಹೇಳಿದ್ರ 'ತದೇವ ಲಗ್ನಂ ಸುದಿನಂತು ದೇವಾ, ತಾರಾ ಬಲಂ ಚಂದ್ರ ಬಲಂತು ದೇವಾ, ವಿದ್ಯಾ ಬಲಂ ದೈವ ಬಲಂತು ದೇವಾ, ಗೌರಿ ಪತಿ ತಂ ನಮಾಮಿ' ಅಂದ್ರು ಎಲ್ಯಾರ ಲಗ್ನ ಇರ್ಲಿ ಸುಮ್ಮ ನಾ ಮಂತ್ರ ಅನ್ನಕ್ಹತ್ತೀನಿ ಮತ್ತ ನಿಮ್ಮ ಸ್ವಾಮಿಗಳ ಮದ್ವಿ ಮಾಡ್ತಾರಂತ ಅಂದೀರಿ. ಇಷ್ಟ ಅಂದ ಸುಮೂರ್ತೇ ಸಾವಧಾನಂ! ಅಂತ ಅನ್ನಾಕತಿದ್ರು ಅಕ್ಕಿಕಾಳ ಅವ್ರು ಅಂದ್ರು, ಹೋ ಪಂಡಿತ ಥೋಡಾ ಥಾಂಬಾ,! ಮಲಾಥೋಡಾ ವಿಚಾರ. ಪಂಡಿತರೇ! ಸ್ವಲ್ಪ ತಡಿರಿ, ವಿಚಾರ ನಂದು ಮಾತಾಡೋದು ಅದ ಆ ಮ್ಯಾಲ ಹೇಳಾಖತ್ರಿ ಮಂದಿಯಲ್ಲಾ ಕೈಯಾಗ ತಗೊಂಡ ನಿಂತಿದ್ರು ಥಾಂಬಾ! ನಿಂದ್ರಿ ಎಲ್ಲಾರು, ಯಾರು ಒಗಿ ಬ್ಯಾಡ್ರಿ ಅಕ್ಕಿಕಾಳು? ಅವರೆಲ್ಲ ಹಿಂಗ್ಯಾಕಪ್ಪ ಹಿಂಗ್ಯಾಕ ಅಲ್ಲಾ ಏನೋ ಒಂದು ಶಬ್ದ ಅಂದಿ ಸಾವಧಾನಾ ಅಂದ್ರಿ ಸಾವಧಾನ ಅಂದ್ರ ಏನ್ ಅರ್ಥ? ಮೊದಲ ಹೇಳ್ರಿ, ಆಮ್ಯಾಲೆ ಅಕ್ಕಿಕಾಳ ಒಗಿರಿ. ನೋಡ್ರಿ ಎಷ್ಟು ಮಜಾ ಅದ ನಿಮ್ಮ ಲಗ್ನಗಾದರೂ ಅಂತರ ಖರೇ ಬಹಳ ಬೆರಕಿ ಇರತಾರ ಮಂದಿ ಆ ಟೈಮಕ ಬಾಜಾ ಬಾರಸಾಕ ಹೇಳತಾರ ಅದನ್ನ ನೀವು ಕೇಳಿರಬಾರದು ಒಟ್ಟ ಡಮ್ ಡಮ್ ಡಮ್ ಬಾರಿಸಕ್ಕೂಡ್ಲೆ ಅಕ್ಕಿಕಾಳ ಒಗದ ಹೊಂಟ್ರ ಮತ್ ಏನ ಕೇಳದ್ರಿ ಅಂತ ಸಮರ್ಥ ರಾಮದಾಸರು ಕೇಳ್ಯಾರ ಅಂತ ತಿಳಕೊಂಡು ಮುಂದ ಆಗಿಂದಾಗ ಈ ಬಾಜಾ ಸುರು ಆಯ್ತು. ಯಾಕ? ಆ ಮಂತ್ರ ಶುರು ಆಯ್ತ ಜೋರಲೇ ಬಾಜಾ ಬಾರಸುದ್ರು. 'ಅಶ್ವತ್ಥಾಮಾ ಹತೋ ಕುಂಜರಾ' ಅಂತ ಅಂದ್ಹಂಗ ಕೇಳಬಾರದು ನಿಮ್ಮ ಕಿವಿನ ಅಂತ ಈ ಪ್ಲಾನ್ ಮಾಡ್ಯಾರ್ರೀ; ಲಗ್ನ ಮಾಡೋ ಅವ್ವ ಅಪ್ಪಗೊಳು, ಹುಂ ಸಮರ್ಥರಾಮದಾಸರು ಕೇಳಿದ್ರು, ಸಾವಧಾನ ಮಂತ್ರ ಕಹಾಂ ಹೈ? ನಂತರ ಮೀ ಅಕ್ಷತ್ ಗೇತೋ. ಅಕ್ಷತ ಅಮ್ಯಾಲ ತಗೋತೀನಿ, ಪಂಡಿತರು ಸ್ವಲ್ಪ ಕಲತವರಿದ್ರು ಈಗಿನ ಪೂಜಾರಿ ಹಂಗ ಹೇಳಿದ್ರ ಸುಮ್ ಹಾಕೋರೋ ಮಾರಾಯಾ ಎಲ್ಲಿದ ಕಿರಿಕಿರಿ ಅಂತಿದ್ದ. ಮತ್ತ ಇನ್ನೊಂದು ಮದ್ವಿ ಅದ ನಮಗ ಗಡಬಡದಾಗ ಬಡಾ–ಬಡಾ ಯಾಕ ಡೆರೆ ಹಾಕಿ ಹೋಗು ಸಲುವಾಗಿ ಕೂತಿದ್ರು. ಅಂವ ಬ್ರಾಹ್ಮಣ ಬಾಳಾ ಶಾಣ್ಯಾ ಇದ್ದ ಅಂವಾ ಅಂದ, ಸಾವಧಾನ ಅಂದ್ರ Beaware from Danger (ಬೀ ಅವೇರ ಫ್ರಾಂ ಡೇಂಜರ್) ಅಂದವ. ಏನೋ ಸಾವಧಾನ ಅಂತ ಯಾರ ಅಂತಿರಿ,

ಸಾವಧಾನ ಅಂತ ಎಲ್ಲಿ ಬರದಿರತಾರ ನೋಡಿರೇನು? ನೀವು ಇಲೆಕ್ಟ್ರಿಕ್ ಇರ್ತಾದ ನೋಡ್ರಿ ಪೋಲ್ಸಗೊಳು ಇಲೆಕ್ಟ್ರಿಕ್ ಪೋಲ್ಸದೊಳಗ ಎರಡು ಕಂಬದೊಳಗ ಕಂಭದಾಗ ಏನಪಾ ಅಂದ್ರ! ಒಂದು ಬೋರ್ಡ್ ಹಾಕಿರತಾರ ಯಾಡ ಎಲಿವಿನ ತುಂಡ ಅದರ ಮ್ಯಾಲ ಡೋಗಿ, ಕೆಳಗ ಸಾವಧಾನ. ಅಂದ್ರ ಈ ಇಲೆಕ್ಟ್ರಿಕ್ ಯಾರರೇ ಮುಟ್ಟಿದ್ರ ನಿಮ್ಮ ತಲೀನು ಕೋಪಡಿ ಕಿಂಗೆ ಆಗ್ತದ. ಅದಕ ಸಾವಧಾನ ಮುಟ್ಟಬ್ಯಾಡಿ ಅಂತ ಬರಿದಿರತಾರ. ಎಲ್ಲಿ ಡೇಂಜರ ಅದ ಅಲ್ಲಿ ಸಾವಧಾನ ಅಂವ ಅಂದ, "ಇಲ್ಲೆರೆ ಡೇಂಜರ ಕಾಣತದ, ಯಾವಾಗ ಸಾವಧಾನ ಅಂತಿ ಅಂದ್ರ, ಡೇಂಜರ ಕಾಣತದ ನನಗ. ಡೇಂಜರ ಏನದ ಮೊದಲ ಹೇಳು. ಆ ಮ್ಯಾಲ ಅಕ್ಕಿಕಾಳ ಹಾಕು" ಅಂದ ಅಂವ. ಅವ್ರು ಅಂದ್ರು ತಮ್ಮಾ ಡೇಂಜರ್ ಹೇಳಿದ್ರ ನೀ ಅಕ್ಕಿಕಾಳ ಹಾಕ್ಕೊಳದಿಲ್ಲೊ, ಹ್ಯಾಂಗ ಮಾಡಬೇಕ. ಹಾಕೊಳುದುಬಿಡುದು ಆಮ್ಯಾಲ ಮದಲ ಹೇಳ ಅಂದವ. ಅವಾಗ ಅಂದ್ರ "ತಮ್ಮಾ ಸಾವಧಾನ! ಇದು ಸಂಸಾರದ ಒಳಗ ಹ್ವಾದಿ, ಹೊರಗ ಬಂದೋರು ಯಾರು ಇಲ್ಲೋ ತಮ್ಮಾ! ಈ ಸಂಸಾರ ಅಂದ್ರ ಇಲಿ ಪಂಜರ ಇದ್ದಂಗ ಅದ ಇದು, ನಿನಗ ಒಳಗ ಹೋಗೊದು ಬಹಳ ಆರಾಮ ಅನ್ಸ್ತದ ತಮ್ಮಾ, ಘರಂತೂ ಹೊರಗ ಬರಾಕ ಯಾರಿಂದಲೂ ಸಾಧ್ಯ ಇಲ್ಲ. ಆದ್ರ ಈಗೇ ವಿಚಾರ ಮಾಡು ಸಂಸಾರದೊಳಗ ಹೋಗಬೇಕ ಹೋಗಬಾರದ. ಮಾಡ್ಕೊಂಡಿ ಅಂದ್ರ ಅಕಿದು ಜೀವನ ಪ್ರಾಣ, ಮಾನ ಎರಡು ರಕ್ಷಣ ಮಾಡಂಗಿದ್ರ ಮಾತ್ರ ಹೋಗಬೇಕು. ಅನ್ಯಥಾ ಮಾಡ್ಕೋಳಾಕ ಸಾಧ್ಯ ಇಲ್ಲ. ಒಳಗ ಹ್ವಾದಿ ಅಂದ್ರ ಹೊರಗ ಬರಾಕ ಆಗಂಗಿಲ್ಲ. ಇದ ನಿಂದ ಲಾಸ್ಟ ಚಾನ್ಸ ಅದ, ಬಿದ್ದು ಅಕ್ಕಿಕಾಳ ಏನೂ ಮಡಾಕ ಬರಾಂಗಿಲ್ಲ. ಅದಕ ಈಗ ವಿಚಾರ ಮಾಡು ಅಂತ ತಿಳ್ಕೊಂಡೇ ಸಾವಧಾನಂ" ಅಂದ ಅಂವ. ಅಂವ ಅಂದ 'ಭಾಳ ಛೊಲೋ ಹೇಳ್ದಿ ಮತ್ತ ಒಳಗ ಇಷ್ಟ ಪಿಂಜ್ರಾ ಇತ್ತಂದ್ರ ನಾಯಾಕ ಮದ್ವಿ ಮಾಡ್ಕೊಳ್ಯೊ ಮಾರಾಯಾ' ಅಂತ ಹೆಣತಿ ಕೈಯಾಂದ ಕೈ ಕಸಗೊಂಡು ಹ್ಯಾಂಗ ಮಾರೀ ಕುಂತೀದ್ದ, ಹಂಗೆ ಮಾರಿಲೇ ಎದ್ದು ಹೋದ. ರಾಮದಾಸ ಸ್ವಾಮಿ ಪರಮ ಸನ್ಯಾಸಿ ಆದ ಜಗತ್ತಿನೊಳಗ ಅಂವ. ಸಾವಧಾನಂ ಸಾವಧಾನಂ ಮನುಷ್ಯ ಹಿಂಗ ವಿಚಾರ ಮಾಡಿದಾ ಅಂದ್ರ ಗೊತ್ತಾಕ್ಕಾದ. ಕೇಳ್ದ ಅಂದ್ರ ಗೊತ್ತಾಕ್ಕಾಗ. ಶಾಸ್ತ್ರದೊಳಗ ಅದಕೆ ಮಹಾತ್ಮರು ಏನು ಅಂದ್ರು ಅಂತ ಕೇಳಿದ್ರ, ವಿಚಾರ ಮಾಡಬೇಕು. ಏನ್ ಆಗ್ಲೀ ವಿಚಾರ ಮಾಡಬೇಕು. ವಿಚಾರ ಇಲ್ದಾನೆ ಯಾವ ಕೆಲಸಕ್ಕನೂ ಕೈ ಹಾಕಬಾರದು. "ಪರಮೋ ಪದ ಪದಂ ಅವಿವೇಕಃ" ಶಾಸ್ತ್ರದೊಳಗ ಹೇಳ್ಯಾರ ಕಾವ್ಯದೊಳಗ ಅವಿವೇಕ ಅನಂತ ದುಃಖಗಳ ತವರಮನಿ ಅದ. ವಿಚಾರ ಮಾಡಲಾರದೆ ಕೈ ಹಾಕಬಾರದು. ವಿಚಾರ ಮೊದುಲು ಮಾಡಬೇಕು. ಒಂದು ಸಲ ಅಲ್ಲ, ನಾಲ್ಕು ಸಲ ವಿಚಾರ ಮಾಡಬೇಕು. ಬಹಳ ಕೇಳಬೇಕು. ಎಂದರೆ ವಿಚಾರ ಮಾಡಿರೇನು.? ಮದುವಿ ಮಾಡ್ಕೋಬೇಕೋ

ಮಾಡ್ಕೋಬಾರದು ಅಂತ ವಿಚಾರ ಯಾರಿಗರೇ ಮಾಡಿರೇನು? ಮಾಡಿರಿ, ಆ ಹುಡುಗಿ ಹ್ಯಾಂಗ್ರಿ? ಹುಡುಗಿಂದೇ ವಿಚಾರ ಮಾಡಿದಿರಿ, ಹುಡುಗುಂದೇ ವಿಚಾರ ಮಾಡಿದಿರಿ, ಏನ ಕಲ್ತಾನ, ಏನ್ ಉಣ್ತಾನ, ಏನ್ ತಿಂತಾನ, ಏಟಗಳಸ್ತಾನ ಇದೇ ವಿಚಾರೇ ಮಾಡಿದ್ರಿ, ಮದುವಿ ಮಾಡ್ಕೋಬೇಕೋ ಮಾಡ್ಕೋಬಾರದು ವಿಚಾರ ಯಾರರೇ ಮಾಡಿಲ್ಲ, ಅದುರ ಜರೂರತ್ತನು ಬಿದ್ದಿಲ್ಲ ಬಿಡ್ರಿ. ಮಾಡ್ಕೋಬೇಕು ಗ್ಯಾರಂಟಿ! ಮೊದಲ ಫಿಕ್ಸ ಮಾಡಿದಿರಿ ಈಗ್ಯಾಕ ಅದು. ಯಾರ ಜೊತೆಗೆ ಮಾಡ್ಕೋಬೇಕು ಯಾವಕ್ಕೀ ಜೊತೆಗೆ ಮಾಡ್ಕೋಬೇಕು. ಇವೇ ವಿಚಾರ ಮಾಡಿದ್ವೆ ವಿನಹ, ಯಾಕ ಮಾಡ್ಕೋಬೇಕು,? ವಿಚಾರ ನಾವು ಮಾಡಿಲ್ಲ. ಮಾಡೋ ನಮ್ ತಲೀನೂ ಅಲ್ಲ. ಅದು ವ್ಯವಹಾರಕ್ಕ ಹೋಗೆ ಇಲ್ಲ. ಅದಕ ಮಹಾತ್ಮರು ಅಂತಾರ, 'ಜಗತ್ತಿನೊಳಗ ವಿಚಾರ ಮಾಡಬೇಕು. ಕೆಲವೊಂದು ವಿಚಾರ ಹಿಂಗ ಅದವ ಪ್ರಪಂಚದೊಳಗ ಮಾಡೇಬಾರದು. ಕೆಲವೊಂದು ವಿಚಾರ ಮಾಡಕ ಹೋಗಬಾರದು. ಕೆಲವೊಂದು ವಿಚಾರ ಎಟ್ಟರ ಪೂರ್ತೆ ಅಟ್ಟರ ಪೂರ್ತೆನ ಮಾಡಬೇಕು. ಕೆಲವೊಂದು ವಿಚಾರ ಸತತ ಸತತ ಸತತ ಮಾಡಬೇಕು.' ಹ್ಯಾಂಗದರಿ ಕೆಲವೊಂದು ವಿಚಾರ ಸತತ ಮಾಡಬೇಕು ಕೆಲವೊಂದು ವಿಚಾರ ಮಾಡಬಾರದು, ಯಾವುದು? ಪಾಪದ ವಿಚಾರ ಮಾಡಬಾರದು. 'ದುರಿತ ಕರ್ಮವನೊಲ್ಲದಿರು' ನಿಜಗುಣ ಹೇಳಿದ್ರು ಪಾಪದ ಬಗ್ಗೆ ವ್ಯರ್ಥ ವಿಚಾರ ಮನುಷ್ಯ ಯಾವಾಗಲೂ ಮಾಡಬಾರದು. ಇಂಥ ವಿಚಾರನೇ ಮಾಡಬೇಕು, ಯಾವ ವಿಚಾರ ಮಾಡದ್ರ ನಿಮ್ಮ ಆತ್ಮಕ ಶಾಂತಿ, ನಿಮ್ಮ ಮನಸಿಗ ಪುಣ್ಯ ಬರತದ ಅಂಥ ವಿಚಾರ ಮಾಡಬೇಕೇ ವಿನಃ 'ಹಾಲಿ ಶೇಖ ಚಿಲ್ಲಿ ಅಂಥಾರಲ್ಲ' ಮನೋರಥಾ ಅಂತಾರಲ್ಲ, ಅಂಥ ವಿಚಾರ ಯಾವಾಗಲೂ ಮನುಷ್ಯ ಮಾಡಾಕ ಹೋಗಬಾರದು. ಮಾಡಾಕ ಹೋಗಬಾರದು. ಖಾಲಿ ತಲ್ಯಾಗ ವಿಚಾರ ಬರ್ತಾವ, ಯಾವ ವಿಚಾರ ಮಾಡೇಬಾರದು, ಮನುಷ್ಯ ಆ ವಿಚಾರ ಮಾಡತನ.

ನಾನು ಹುಡುಗಾಟಗಿ ಹೇಳತಿರತಿನಿ, 'ಯಾವುದೋ ಒಬ್ಬ ಮನುಷ್ಯ ರಿಟಾಯರಡ ಆಗಿದ್ದನಂತ, ರಿಟಾಯರ್ಡ ಆದ ಅಂದ್ರ ಮನಷ್ಯಾ ಬಾಳ ಬೇಚೈನಿ ಇತತಾನ್ರೀ ಅಫಸೆಟ್ ಇರತಾನ. ನಿಮಗ ಗೊತ್ತಿರಬೇಕು? ಯಾಕಂದ್ರ ಆಫಿಸದೊಳಗ ಐವತ್ತೆಂಟು ವರ್ಷತಕ ಗದ್ಲಾ ಮಾಡುದ ಕಂಪನಿ ಇರತಾವ, ಸುಮ್ನ ಇರಾಂಗಿಲ್ಲ. ಕೆಳ್ಗ ಮ್ಯಾಲ ಮಾಡುದ ಮಂದೀ ಈ ಸುಮ್ಮ ಕುಂಡ್ರುಬೇಕಲ್ಲ! ಇದ ದೊಡ್ಡ ಸಮಸ್ಯೆ ಶಿವ ಶಿವಾ ಅಂತಾನ ಹಾಂ! ಬಹಳ ಛಲೋ ಆಯ್ತಪ್ಪಾ ನೋಕ್ರಿ ಹೋಯ್ತು. ಎಲ್ಲಾ ಹೋಯ್ತು ಮುಂಜಾನೆದ್ದು ಎಂಟುಕ ಯಾಡ ತಾಸ ಜಪಾ ಮಾಡೂನು ಮಧ್ಯಾಹ್ನಕಿಷ್ಟ ಪುರಾಣ ಓದೂನು, ಸಾಯಂಕಾಲ ಆಹಾಂ! ಅವರಪ್ಪನ ಮನಸಿನೊಳಗೂ ಬರ್ಥಂಗಿಲ್ಲ. ಅದು, ಸಾಧ್ಯಾನೇ ಇಲ್ಲ! ಯಾಕ? ಇಡೀ ಐವತ್ತೆಂಟು ವರ್ಷ ಆ

ಕೆಲ್ಸ ಮಾಡಿಲ್ಲ, ಈಗ ಹ್ಯಾಂಗ್ ಆಗ್ತದ. ಮನಸ ಬಹಳ ಬೆರಕಿ ಇರತದ. ಅದು ಸಾಧ್ಯವೇ ಇಲ್ಲ.? ಐವತ್ತೆಂಟು ವರ್ಷ ಆಯ್ತು ಮನ್ಯಾಗ ನಾಕು ಮಂದಿ ಮಕ್ಕಳು, ಒಬ್ಬ ಕಲೆಕ್ಟರ, ಒಬ್ಬ ದೊಡ್ಡ ಸಾಹೇಬ, ಎಲ್ಲರೂ ಶ್ರೀಮಂತರು ಒಬ್ಬ ಅಂಗಡಿ ದೂಕಾನ, ಅವರಪ್ಪಗ ಮನಿ ಮುಂದ ಯಾಕ ರೋಡಿಗ ದೊಡ್ಡ ಮನಿ ಶಂಭೋರ ಬೈ ಶಂಭೋರ ಕಟ್ಟಿಸಿದ್ರು ಮ್ಯಾಲ ಮಾಡಿ ಇತ್ತು. ಅವರಪ್ಪ ನಾ ಅಂಗಡಿಗ ಬರಲೇನಪ್ಪ ಅಂತ ಕೇಳದ. ಯಪಾ! ಬ್ಯಾಡ, ಇಷ್ಟ ದಿನ ನೌಕ್ರಿ ಮಾಡಿದಿ, ಮತ್ಯಾಕ ಅಂಗಡಿ. ನಮಗೆಲ್ಲ ಮಾಹಿತಿ ಅದ ಸುಖ ಅದ ನೀ ಸುಮ್ಮ ಆರಾಮ ಮಹಡ್ಯಾಗ ಕುಂಡ್ರು, ಶಿವ ಶಿವ ಅನ್ನು ಶಿವ ಶಿವ ಅನ್ನು, ಅಂದ್ರು ಅವ್ರು, ಅಂವ ಅಂದ ಇವ ಶಿವ ಶಿವ ಅನ್ನು ಅಂತ ನನಗ ನಾ ಅಂಗಡಿಗ ಬರಬೇಕು ಅಂದ್ರ, ಪರಂತು ಮಕ್ಕಳು ಯಾರು ಬರಬ್ಯಾಡ ಅಂತಾರ. ಮ್ಯಾಲ ಕುಂತ ಎಷ್ಟು ಪುರಾಣ ಓದಬೇಕು, ಎಷ್ಟು ಜಪ ಮಾಡಬೇಕು, "ಮನಯೆಂಬ ಮರ್ಕಟವ ತಡೆಯಲಾರೆನೋ ದೇವ" ಒಂದಿಟ್ಟ ಓದಿದಂಗ ಜಪಮಾಡಂಗ ಮಾಡಿ ಮುಂದ ಪಡಸಾಲ್ಯಾಗ ಬಂದು ಕುಂತ್ರು, ಹೋಗವರ್ನ ಬರವರ್ನ ನೋಡ್ಕೋತ ಕೂಡ್ತಿದ್ದ. ಮಂದಿಹೋಗೋದು ಮಂದಿಬರೋದು ಅವರ ಹಾಂಗ ಮಾಡ್ತಾರ, ಅವರ ಹಿಂಗ ಮಾಡ್ತಾರ, ಸುಮ್ ಕುಂಡ್ರು ಪೈಕಿ ಅಲ್ಲ, ಹೋಗೋರಿಗುನು ರೋಡ ಬ್ರೆಕ್. ಕಾಕಾ ಎಲ್ಲಿಗ ಬಂದಿ ಇಲ್ಲಗ್ಹೊಂಟಿ.? ಚಿಕ್ಕಮ್ಮ, ಯಾಕಡಿ ಹೋಗಿದ್ದಿ? ಇದ್ದಂಗ ಸುಮ್ಮ ಹೋಗೋರಿಗರೆ ಹೋಗಬಿಡಬೇಕಲ್ಲ. ಅವುರ ಕೆಲಸಗೊಳು ಇರ್ತಾವ, ಮ್ಯಾಲಕುಂತ ಕರೆಂವಾ, ಮಾತಾಡಸಾಂವ, ಮಂದಿ ಆಯ್ತು ಭಾವಾ, ಆಯ್ತು ಕಾಕಾ, ಆಯ್ತು ಮಾಮಾ ಅನಕೂತ ದಿನಾ ಏನು ಆಗತಿತ್ತು ಅಂದ ಕೇಳಿದ್ರ, ಅವ್ರು ಮನಿ ಮುಂದ ಗೌಳಗೇರ ಎಮ್ಮಿ ಭಾರಿ ಎಮ್ಮಿ ಇದ್ದು ಆನಿ ಆನಿ ಇದ್ದಂಗ ಇದ್ದುವು. ವಿನಾ ಎಮ್ಮಿಗ ಗೌಳಿಗ ಎಣ್ಣಿ ಹಚ್ಚತಿದ್ದ್ ಮಿಣಿ ಮಿಣಿ ಮಿಂಚತಿದ್ದು ಆನಿ ಕಂಡಂಗ ಖಾಣತಿದ್ದು ವಿನಾ ಹೋಗೋದು ನೋಡತಿದ್ದ ಅಂವ. ಅಂವನ ಮನಸ ಅಂತಿತ್ತು! ಈ ಎಮ್ಮಿ ಮ್ಯಾಲ ಹಾರಿ ಕುಂತ್ರ ಹ್ಯಾಂಗs ಮ್ಯಾಲ ಮಾಡ್ಯಾಗ ಮ್ಯಾಲ ವಿಚಾರ ಮಾಡತಿದ್ದ. ಕೆಳಗಿಂದು ಎಮ್ಮಿ ಹಾರದ್ರ ಅಂವ ಮತ್ತ ಅನ್ನಾವ ಕಾಲ ಮುರದ್ರ, ಏನರೆ ಆದ್ರ, ಏ ಹುಚ್ಚಿ ಅಂತ ಮತ್ ಸುಮ್ಮ ಬಿಡಂವ. ಮತ ಮರುದಿವಸ ಎಮ್ಮಿ ಹೋಗತಿದ್ದು ಮತ ಅಂವನ ಜಿಂವಾ ತಡಿತಿದ್ದಿಲ. ತಲ್ಯಾಗ ವಿಚಾರ ಬರತಿತ್ತು, ಎಮ್ಮಿ ಮ್ಯಾಲ ಹಾರಿ ಕುತ್ರ ಹ್ಯಾಂಗ! ನಿಮಗ ಹೇಳ್ತಿನಿ ದಿನಾ ವಿಚಾರ ಬರುವ. ಮಾಡಿ ಮಾಡಿ ನಾಲ್ಕೈದು ತಿಂಗಳ ಹೋದ ಕೂಡಲೇ ಒಂದು ದಿವಸ ಮುಂಜಾನೆ ಸಾಡೆ ದಸಕ, ಹತ್ತು ಹತ್ತೂವರಿಗ ಎಮ್ಮಿ ಮೇಯಾಕ ನಡಿದಿದ್ದು, ಜಿಂವಾ ತಗದ ಮ್ಯಾಲಿಂದ್ ಟಣ್ ಅಂತ ಹಾರ್ದ ತೀರ್‍ತು. ಎಮ್ಮಿ ಹಾರ್ದ ಹೆಡಕಿನ ಮ್ಯಾಲ, ದೊಡ್ಡ ಎಮ್ಮಿ ತಿರಬೀಸಿ ಝಾಡ್ಸಿ ಒದೀತು. ಘಟಾರದಾಗ ಬಿತ್ತು ಮುದುಕ, ಘಟಾರದಾಗ ಬಿತ್ತು ತಲೀ

ಒಡೀತೂ! ಟೊಂಕ ಮುರಿತೂ ಎಮ್ಮಿ ಹೊಳ್ಳಿ ನಿಂತು ನೋಡ್ಕೋತ ನಿಂತು. ಏನು ಮತ್ತ ಮತ್ತೊಮ್ಮೆ ಹಾಯಿಬೇಕು ಅಂತ ಮಾಡಿತ್ತು ಏನೋ ಹಿಂಗ್ಯಾಕ ಮಾಡದ ಹುಚ್ಚ ಇಂವ ಅಂತ ನೋಡತೆ ಏನು? ಹೊಳ್ಳಿ ನಿಂತು ನೋಡಾಕತ್ತು. ಮಂದಿಯಲ್ಲಾ ಬಾಳ ದೊಡ್ಡ ಶ್ರೀಮಂತರು ದೊಡ್ಡ ಸಾಹೀಬ ಇದ್ದ, ನೌಕ್ರಿ ಮಾಡದಂವ ದಾರಿ ಮುಂದ 'ಅರೆರೆ ಕಾಯ ಜಾಲೆ, ಕಸಾ ಜಾಲೆರೆ' ಅಂತ ಎಲ್ಲಾ ಮಂದಿ ಕೂಡುದ್ರು, ಹೀಗ್ಯಾಂಗ ಮಾಡದ್ರಿ ಸಾಹೇಬ್ರ ನೀವು ದೊಡ್ಡ ಸಾಹೇಬ್ರು ದೊಡ್ಡ ಶಣ್ಯಾರು, ಎಂಥಾ ಪೋಸ್ಟದಾಗ ಇದ್ದಿರಿ? ಇದು ಎಂಥ ಕೆಲ್ಸ ಮಾಡಿದ್ರಿ ಸಾಹೇಬ್ರ, ಸ್ವಲ್ಪರೇ ವಿಚಾರ ಮಾಡಬೇಕಿಲ್ಲ. ಇಂಥ ಎಮ್ಮಿ ಮ್ಯಾಲ ಹಾರತಾರ ಎಂದರೆ ನಿಮ್ಮಂಥ ಶಾಣ್ಯಾರು ಸ್ವಲ್ಪರೇ ವಿಚಾರ ಮಾಡಬೇಕಿಲ್ಲ.? ಅಂತ ಕೇಳಿದ್ರು, ಅಂವ ಅಂದ ಹೆಚ್ಚಿಗಿ ಮಾತಾಡಬೇಡ ಒಂದಲ್ಲ ಆರು ತಿಂಗಳ ವಿಚಾರ ಮಾಡಿ ಹಾರಿದೀನಿ ಅಂದ. ಹಾರ್ಲೆ ಬಿಡ್ಲೆ, ಹಾರ್ಲೆ ಬಿಡ್ಲೆ ಹಾರ್ಲೆ ಬಿಡ್ಲೆ ಅಂತ ಒಂದ ತಿಂಗಳಲ್ಲ ಆರ ತಿಂಗಳ ವಿಚಾರ ಮಾಡಿ ಹಾರೇನಿ. ಹಿಂಗ ಆಗೇದ ಕಾಲಮುರದದ, ಅಂದ ಮುದಕ. ಅವ್ರು ಅಂದು ವಿಚಾರ ಅಂತರೇನ್ರಿ? ಇದಕ ಹಾಂ! ಮೂರ್ಖತನ ಅಂತಾರದಕ. ವಿಚಾರ ಮಾಡಬಾರದ್ದು ಹಿಂತವು. ಹಿಂತ ವಿಚಾರ ಮಾಡಬ್ಯಾಡಾ ಅಂತ ಶಾಸ್ತ್ರದಾಗ ಯಾವುದು ಅನರ್ಥ? ಪಾಪ? ದುಃಖೋವ ಅದರ ಬಗ್ಗೆ ಎಂದೆಂದೂ ವಿಚಾರ ಮಾಡಬಾರ್ದ ಜಗತ್ತಿನೊಳಗ ಕೆಲವೊಂದು ವಿಚಾರ ಮಾಡೇಬಾರದು ಅಂತಾವಿರ್ತಾವ. ಇನ್ ಕೆಲವೊಂದು ವಿಚಾರ ಮಾಡುವು ಇರತಾವ;, ಎಟ್ಟ ಪೂರ್ತೆ, ಅಟ್ಟ ಪೂರ್ತನೆ. ಯಾವ್ಯಾವು?

ಶಾಸ್ತ್ರದೊಳಗ ಹೇಳಿರು ಯಾವ ಯಾವಪಾ ಅಂದ್ರ ಒನ್ನೆದ್ದು ಸಂಗತಿ. ಎರಡನೆದ್ದು ಸಂಪತ್ತು, ಮೂರನೆದ್ದು ಸಂತತಿ. ಈ ಮೂರರ ಬಗ್ಗೆ ವಿಚಾರ ಮಾಡ್ಬೇಕು. ಎಟ್ಟಬೇಕ ಅಟ್ಟರ ಪೂರ್ತೇಕ. ಏನು? ಸಂಗತಿ ಬಗ್ಗೆ ವಿಚಾರ ಮಾಡಬೇಕು ನಿನ್ನೇ ಕೇಳಿನಿ. ಎಂಥವದ ಗೆಳೆತನ ಮಾಡಬೇಕು. 'ಸತ್ಸಂಗಶ್ಚೆ, ವೀವೇಕಶ್ಚ ನಿರ್ಮಲಂ ನಯನ ದ್ವಯಂ.' ಶಾಸ್ತ್ರದೊಳಗ ಹೇಳ್ಯಾರ ಮನುಷ್ಯನಿಗೆ ಮಹಾನುಭಾವ ಸಂಸರ್ಗ ತಾರಕಃ. ಸಂಗತಿ ಯಾರಿಗೆ ದೊಡ್ಡದು ಮಾಡ್ಲಿಕ್ಕಿಲ್ಲ,? ಗಟಾರ ನೀರೂನುಮ ಗಂಗಾಕ ಸೇರಿ ಆಚಮನ ಮಾಡ್ತಿ. ತಲಿಮ್ಯಾಲ ಹಾಕೋತೀವಿ. ಅಪವಿತ್ರೋ ಪವಿತ್ರ ಭಾವದಿಂದ, ಗಟಾರದ ನೀರಿದು ಗಂಗಾದಾಗ ಕೂಡ್ತು ಅಂತ ಕೇಳದ್ರ ಪವಿತ್ರಾಗ್ತದ ಹಾಲದಾಗ ನೀರ ಸೇರಿದ್ರ ಹದಿನಾಕ ರೂಪಾಯಿಗೆ ಮಾರ್ತದ. ಹಾಂ.! ಅಕ್ಕ್ಯಾಗ ಹಳ್ಳ ಸೇರಿದ್ರ ೧೭.ರೂಪಾಯಿಗೆ ಕಿಲೋ ಮಾರ್ತದ. ಹಳ್ಳ ತಗೊಂಡ ಹೋದ್ರ ಕಪಾಳ ಗೆಡ್ಡಿಗಿ ಬೀಳತಾವ. ಪರಂತು ಅದೇ ಹಳ್ಳ ಅಕ್ಕಿ ಸಂಗ ಮಾಡ್ತು, ನೀರ ಹಾಲಿನ ಸಂಗ ಮಾಡ್ತು, ೧೭ ರೂಪಾಯಿಗೆ ಕಿಲೋ, ೧೪.ರೂಪಾಯಿಗೆ ಲೀಟರು, 'ಸಂಗ ಕಸ್ಯನೋನ್ನತಿ ಕಾರಕಃ'

'ಜೀವನದೊಳಗ ಇವೆರಡು ಕಣ್ಣು ಅಂತ ತಿಳ್ಕೋರ್ರಿ "ವಿಚಾರ ಒಂದ ಕಣ್ಣೈತಿ, ಮಾಹಾತ್ಮರ ಜೊತೆ ಇರೂದ ಒಂದ ಕಣ್ಣದ." ಇವೆರಡ ಕಣ್ಣು ಇದ್ದು ಅಂದ್ರ ಆ ಮನುಷ್ಯ ಎಚ್ಚರದಾನ ಅಂತ ತಿಳ್ಕೋಬೇಕು. ಹಾಗ ಎಂಥವರ ಜೊತೆ ಕೂಡ್ರಬೇಕು. ಅಂಥವರ ಜೊತೆ. ಏನಪಾ ಅಂದ್ರ! ಇರಬೇಕು ಅಂತಕ್ಕಂತಾದ್ದು ಅರಿಯಬೇಕು. ಇದರ ವಿಚಾರ ಮಾಡಬೇಕು. ವಿಚಾರ ಮಾಡಿ ಸಂಪರ್ಕ ಮಾಡಬೇಕು. ಸಿಕ್ಕವರ ಜೊತೆ ಕೂಂಡ್ರಾಕ ಕಲಿಬಾರ್ದ, ಕಲಿಬಾರ್ದ. ಯೋಗ್ಯ ಮನುಷ್ಯರ ಜೊತೆ ಇರಬೇಕು. ಇದರ ವಿಚಾರ ಮಾಡಿ ಸಂಗಮಾಡಬೇಕು.

ಎರ್ಡನೆದ್ದು ಸಂಪತ್ತು. ರೊಕ್ಕ, ಹಾಂ! ರೊಕ್ಕಾನು ಗಳಿಸಬೇಕು. ದುಡ್ಡಾ ಒಳ್ಳೆಯ ಸೇವಕಾಗಿರಬೇಕು. ದುಡ್ಡ ಮಾಲಕಾಯಿತೂ ಅಂದ್ರ ನೀ ಸೇವಕಾಗತಿ. ನೌಕರ ಎಷ್ಟ ಚಲೊನ ಇರ್ಲಿ, ಚಪ್ಪಲ ಇವತ್ತು ೫೦೦೦/- ರೂಪಾಯಿ ಚಪ್ಪಲ ಇದ್ರುನೂ ಕೂಡ, ಅದರ ಜಾಗಾನೆ ಬ್ಯಾರೆ ಐತಿ. ಜಗಲಿ ಮ್ಯಾಲ ಇಡಾಕ ಚಪ್ಪಲ ಬರೂದಿಲ್ಲ. ನಿಮ್ಮನ್ಯಾಗ ದೇವ್ರು ಹತ್ತರೂಪಾಯಿ ಇರ್ತಾವ. ಚಪ್ಪಲ ಐದಸಾವಿರ ರೂಪಾಯಿ ಇರ್ತಾವ. ಎಲ್ಲಿ ಇಡ್ತಿರಿ ಅವು. ೫೦೦೦/- ರೂಪಾಯಿದು ಚಪ್ಪಲ ಅದಾವ್ರಿ ಸ್ವಾಮಿಗಳಂತ ಹೇಳಿ ದೇವರ ಜಗಲಿ ಮ್ಯಾಲ ಇಡ್ತಿರಿ! ಬರೂದಿಲ್ಲ ಇಡಾಕ. ಎಷ್ಟಕಿಮ್ಮತ್ತಿನಿಂದ ಯಾಕ ಇರವಲ್ದಾಕ ಅದರ ಜಾಗಾನೇ ಅಲ್ಲೆ. ಎಲ್ರಿ ಬಾಗಿಲ್ದಾಗೆ, ಬಾಗಿಲ್ದಾಗೆ. ಜಗಲಿಗಿ ಬರೂದಿಲ್ಲ. ಹಂಗ ದುಡ್ಡೂನೂ ಕೂಡ ಎಷ್ಟ್ಯಾಕ ಇರವಲ್ದ್ಯಾಕ ಅದರ ಜಾಗಾನೆ ಎಲ್ಲೈತಿ ಅಲ್ಲೆ ಇರಬೇಕ. ವಿಷ್ಣು ಪರಮಾತ್ಮಶಯನ ಮಾಡ್ಯಾನ ಎಲ್ಲಿ? ಕ್ಷೀರ ಸಾಗರದೊಳಗ, ಸರ್ಪದ ಮ್ಯಾಲ ಪರಮಾತ್ಮ ಮಲಗ್ಯಾನ. ಲಕ್ಷ್ಮೀ ಎಲ್ಲಿ ಕುಂತಾಳ ನೋಡ್ರಿ ಲಕ್ಷ್ಮೀನ ಎಲ್ಲಿಟ್ಟಾನ ಆ ವಿಷ್ಣು? ಕಾಲ ಒತ್ಕೋತ ಕಾಲಿನ ಹಂತೇಕ ಕುಂತಾಳ. ತೆಲಿ ಹಂತೇಕ ಕುಂತಿಲ್ಲಾ. ನೀವ ಹಂಗಲ ಲಕ್ಷ್ಮೀನ ತಲಿಮ್ಯಾಲ ಇಟ್ಕೋತೀರಿ. ಚಪ್ಪಲ ತಲಿಮ್ಯಾಲ ಇಟ್ಕೊಂಡಾಂಗ ಆಗ್ತಾದ. ಮಹಾತ್ಮರ ಹೇಳದ್ರು! ಅದ ಎಲ್ಲಿರಬೇಕ ಲಕ್ಷ್ಮೀ ಅಲ್ಲೇ ಇರಬೇಕ, ಆ ಲಕ್ಷ್ಮೀಗಿ ಎಷ್ಟಕಿಮ್ಮತ್ತ ಕೊಡ್ತಿರಿ, ಅಷ್ಟ ಕಿಮ್ಮತ್ತ ಕೊಟ್ರ ಒಳ್ಳೆದದ, ಅಧಿಕ ಕಿಮ್ಮತ್ತ ಕೊಟ್ರ ಲಕ್ಷ್ಮೀಗೆ! ನಿಮ್ಮ ಬುದ್ಧಿಭ್ರಷ್ಟ ಆಗ್ತದ. ದುಡ್ಡಿದ್ದ ಮನುಷ್ಯ ಬಾಳ ಭ್ರಷ್ಟಾ ಆಗ್ತಾನ. ಅಧಿಕಾರ ಬಂದ ಮನುಷ್ಯಾ ಭ್ರಷ್ಟ ಆಗ್ತಾನೆ. ಅದಕೆ ತುಳಸಿ ರಾಮಾಯಣದಲ್ಲಿ ಪ್ರಭು ಕಾ.... ಮದನಾಹೀ ಹೇ ಪ್ರಭು! ಯಾರಿಗಿ ರೊಕ್ಕ ಬಂದ ಕಾಲಕ್ಕ, ಅಧಿಕಾರ ಬಂದ ಕಾಲಕ್ಕ ಯಾವ ಮನುಷ್ಯನಿಗೆ ಸೊಕ್ಕಾ ಬರೂದಿಲ್ಲ, ಅಧಿಕಾರ ಸೊಕ್ಕ ತರುದಿಲ್ಲ. ಆ ರೊಕ್ಕ ಅವನಿಗಿ ಅಭಿಮಾನ ತರೂದಿಲ್ಲ. ಆ ಮನುಷ್ಯ ಮನುಷ್ಯಾ ಅಲ್ಲ ರಾಮಚಂದ್ರನ ಸ್ವರೂಪ ಅಂತ ತಿಳ್ಕೋಬೇಕೂ ಅಂತ ಅಂದ. ರೊಕ್ಕ ಸುಮ್ಮ ಎಂಥವರ ಬುದ್ಧಿ ಕೆಡಸ್ತದೆ, ಅದಕ್ಕ ಸಂಪತ್ತ ಅದಹ್ಯಾಂಗದ ಅಂತ ಕೇಳಿದ್ರ, ಗಳಸಬೇಕ ಗಳಸಬೇಕು ಇದ ಉಪ್ಪಿನ ನೀರಿದ್ಹಂಗ ರೊಕ್ಕ ಅಂದ್ರ. ಉಪ್ಪಿನ ನೀರ ಕುಡದವರ್ಗಿ ಎಂದೂ ನೀರಡಿಕಿ ಹೋಗೋದಿಲ್ಲ.

ಇನ್ನಿಟ್ಟಬೇಕ–ಇನ್ನಿಟ್ಟಬೇಕ ಅಂತದ ಹಂಗ ರೊಕ್ಕ ಇದ ಉಪ್ಪಿನ ನೀರ. ಎಷ್ಟ ಎಷ್ಟು ಈ ಊರಲ್ಲ, ಮತ್ತೊಂದ ಜಿಲ್ಲಾ ಅಲ್ಲ. ಮತ್ತೊಂದ ದೇಶ ಅಲ್ಲ ಯಾ ದೇಶದಾಗ ಗಿಟ್ರ ಸಾಕು ಅನ್ನಂಗಿಲ್ಲ. ಊಹುಂ. ಇದ ಉಪ್ಪ ನೀರ ಇದ, ರೊಕ್ಕ ಅದಕ್ಕ ವಿಚಾರ ಮಾಡಬೇಕ. ದುಡ್ಡಾ ವಿಚಾರ ಮಾಡಬೇಕ. ಗಳಸಬೇಕ ದುಡ್ಡ. ದುಡ್ಡಿಲ್ದೆ ಯಾವ ಕೆಲಸ ನಡ್ಯಾಂಗಿಲ್ಲ. ಮನ್ನೆ ಹೇಳೇನಾ, ಈ ಸಪ್ತಾಹ ದುಡ್ಡಿನಿಂದ ನಡ್ಯಾಕ ಹತ್ಯೆದ, ನೀವ ಕುಂತೀರಿ ದುಡ್ಡದಾಗ ಕುಂತೀರಿ. ನೀವಿಲ್ಲಿ ಬರಾಕ ಬಸ್ಸಿಗೆ ದುಡ್ಡಬೇಕ. ಮತ್ತ ಹೊಳ್ಳ ಹೋಗಾಕ ದುಡ್ಡಬೇಕ. ದುಡ್ಡಿಲಾದ್ರ ಮತ್ತ ವಾಪಸ್ಸ ಬರ್ತಿರಿ ಮತಕ್ಕ. ದುಡ್ಡಿಂದೇ ನಡೀತದ ಪರಂತು ವಿಚಾರ ಮಾಡಬೇಕ. ಆ ದುಡ್ಡಿಗೆ ಏನ ಗೌರವ ಕಿಮ್ಮತ್ತು ಜಯಾ ಏನರ ಆ ಜಯಾ ಕೊಡಬೇಕು. ಒಂದ ವೇಳೆ ಅದರ ಬಗ್ಗೆ ವಿಚಾರ ಮಾಡ್ದೆ ಹೋದಿ? ಅಂತ ಕೇಳದ್ರ ನೀನು ಪಾಪಗಳಸ್ತಿ. ಅದಕ ವಿಚಾರು ಮಾಡ ಅಂತಾರ, ದುಡ್ಡಿನ ವಿಚಾರ ಮಾಡು, ಅದಕ್ಕ ವಿಚಾರ ಮಾಡು. ಹ್ಯಾಂಗ ಗಳಸಬೇಕ, ಹ್ಯಾಂಗ ಖರ್ಚು ಮಾಡಬೇಕ ವಿಚಾರ ಮಾಡಬೇಕ. ಬಾಳ ಮಂದಿ ಗಳಸ್ತಾವ ಖರೆ. ಅವಕ ಉಳಸಾಕ ಬರ್ಲಾಂಗಿಲ್ಲ. ಆಯ್ತು! ಸುಗ್ಗಿ ಮಾಡ್ದಂಗನ ಮತ್ತ ಹಾಂ! ಸುಗ್ಗಿ ಮಾಡ್ದಂಗ ಗಳಸೂದು. ಯಾವ ಮನುಷ್ಯ ಗಳಿಕೆಯೊಳಗ ದಿನ ಒಂದ ಪೈಸೆ ಹತ್ತರ ರೂಪಾಯಿಂದ ಉಳಸಾಂಗಿಲ್ಲ, ಅಂವ ಸಂಸಾರ ಮಾಡಾಕ ಯೋಗ್ಯ ಇಲ್ಲ ಮನುಷ್ಯ. ನಾಲೈಕ ಅಂವಾ. ಶಾಸ್ತ್ರದೊಳಗ ಹೇಳ್ತಾರ, ವಿದ್ಯಾ ಮತ್ತಂಚ ಕ್ಷಣಶಚ್ಛೈವ, ಕ್ಷಣಶಚ್ಛೈವ. ಕ್ಷಣ–ಕ್ಷಣಕ್ಕೂ, ಕಣ–ಕಣಕ್ಕೂ ದುಡ್ಡಗಳಸಬೇಕ ದುಡ್ಡಗಳಸೋದು ಎಲ್ಲಾರಿಗೂ ಬರೂದಿಲ್ಲ. ಸಿದ್ಧಾರೂಢ ಅಪ್ಪಾ ಅವ್ರು ಒಂದ ಕತಿ ಹೇಳಿದ್ರಂತ.

ಸಿದ್ಧಾರೂಢ್ರ ಮಠದೊಳಗ ಶಿವರಾತ್ರಿ ಜಾತ್ರಿ ಆಯ್ತು ಅಂತ ಕೇಳದ್ರ, ಒಂದ ದಿವಸಕ್ಕ ೧೨ ಚೀಲ ಅಕ್ಕಿ ಕರಚಾಕ್ಕಿದ್ದುವಂತ. ಇಟ ಬಸೀತಿ ಹ್ಯಾಂಗ ಅಂತ ಕೇಳರಿ.! ಹ್ಯಾಂಗ ಅನ್ನ ಮಾಡ್ತಿದ್ರ ಇಪ್ಪತ್ತ–ಮೂವತ್ತ ಚೀಲ ಅನ್ನ ಬಸದ ಹಾಕಬೇಕಂತ, ಆ ಮ್ಯಾಲ ಹತ್ತ ಹದನೈದ ಚೀಲ ಅಕ್ಕೀನ ಹಾಕಬೇಕಂತ. ಬಸ್ಯಾಂಗಿಲ್ಲ ತೊಳದ ಅಕ್ಕೀನ ಹಾಕಬೇಕಂತ. ಅದರ ಮ್ಯಾಲ ಮತ್ತ ಹತ್ತಿಪ್ಪತ್ತ ಚೀಲ ಬಸದ ಮ್ಯಾಗ ಹಾಕಬೇಕು. ಆ ಕಾವಿಗೆ ನಡಬಾರ್ಕಿಂದು ತಾನೇ ಅನ್ನ ಅಕ್ಕಿತ್ತಂತ. ಸಣಕೀಲೆ ಪಾವಡೀಲೆ ಕಡದ ಕೊಡ್ತಿದ್ರಂತ ಅನ್ನಾ ಸಿದ್ಧಾರೂಢ್ರ ಮಠದೊಳಗ. ಇದ ಅಲ್ದೇನೆ ಜಮಖಂಡಿ ಮೊದಲಾದ ಒಂಬತ್ತ ದೇಶದ ರಾಜ್ರು ಶಿಷ್ಯರವರಿಗೆ. ಇಂಥವ ೩೬೮ ದಾಸೋಹ ಇಡ್ತಿದ್ದರಂತ ಬ್ಯಾರೆ. ಆಯಾ ಊರದವರು ಇದಬ್ಯಾರೆ. ಇಂಥದ್ದ ಖರ್ಚಾಗ್ತಿತ್ತು. ಸಾವಿರಾರು ಚೀಲ ಅಕ್ಕಿ ಬರ್ತಿದ್ದು. ಸಿದ್ಧಾರೂಢ್ರು ಮಕ್ಕೊಂಡ ಮೂರ ಗಂಟೆಗೆ ಎದ್ರು ಅಂದ್ರ, ಹೆಣ್ಮಕ್ಕಳ ಅಕ್ಕಿ ಹಸನ ಮಾಡುವಾಗ ಚಂದಾಗಿ ಹಾಡ್ಕೊಂತ ಹಸನ ಮಾಡ್ತಿದ್ರು. ಸಿದ್ಧಾರೂಢ್ರರೊಟ್ಟಿ ಉಂಡವರೆಲ್ಲಗಟ್ಟಿ, ಸಿದ್ಧಾರೂಢ್ರ ಸಾರ ಉಂಡವರೆಲ್ಲಪಾರ, ಸಿದ್ಧಾರೂಢ್ರ ಜೋಳಗಿ ದೇಶಕ್ಕೆಲ್ಲ

ಹೋಳ್ರಿ. ಇವು ಹಾಡಿದ್ದು. ಅಪ್ಪಾನ ಮಠದಾಗ ದಿನಂಪ್ರತಿ 'ಓಂ ನಮಃ ಶಿವಾಯ' ಅಂತ ಅಡಿಗಿ ಮಾಡಬೇಕ. ಹೆಣ್ಮಕ್ಕಳಗೂ ಬೇಜಾರ ಆಗಬಾರದಂತ ತಿಳ್ಕೊಂಡು ಅವ್ರು ಅಕ್ಕಿ ಹಸನ ಮಾಡುವಾಗ ಸಿದ್ಧಾರೂಢ್ರ ಬಂದ ಕೂಡ್ತಿದ್ರಂತ. ಫರಸ್ಯಾಗ ಏನರೆ ಸಿಮೆಂಟು ಹೊಗಿತ್ತು ಅಂದ್ರ ಅದರಾಗ ಅಕ್ಕಿ ಹೋಗಿ ಕುಂಡ್ರತಿದ್ದು ಅಂತ. ಅಕ್ಕಿ ಹೋಗಿ ಕುಂತ್ರ ಸಿದ್ಧಾರೂಢ್ರ ಕಡ್ಡಿತಗೊಂಡ ಅವರ ಆರಸ್ತಿದ್ರಂತ. ಎಪ್ಪಾ! ಸಾವಿರಾರ ಚೀಲ ಅಕ್ಕಿ ಬರ್ತಾವಪ್ಪ. ಏನ ಅದರಾಗ ಆರಸ್ತಿ ಅಂದ್ರ, ಸಿದ್ಧಾರೂಢ್ರು ಒಂದು ಕತಿ ಹೇಳದ್ರಂತ; ನೀವು ಕೇಳ್ರಿ ಸಂಸಾರ ಮಾಡುದು ಕಲಿರಿ. ಬಾಳ ಮಂದಿಗಿ ಸಂಸಾರ ಮಾಡಾಕ ಬರೂದಿಲ್ಲ. ಸಂಸಾರ ಸಾಧುಗಳಂತೇಕ ಕಲಿರಿ. ಕಲಿಬೇಕು. ಸಿದ್ಧಾರೂಢ್ರ ಮಠದಾಗ ಏನಪಾ ಅಂತ ಕೇಳದ್ರ ಶಿವರಾತ್ರಿ ಜಾತ್ರಿ ಮಾಡಿ ಅನ್ನ, ಬಸದ್ರ ಆ ಗಂಜಿ ಹೋಗಿ ನಿಲುದ ಕೆರಿಹಂಗ. ಆ ಹೆಸರನ ಗಂಜಿ ಕೆರಿ ಅಂತ. ಎಟ್ಟು ಅನ್ನ ಬಸೀತಿದ್ರ ಲೆಕ್ಕಾಹಾಕ್ರಿ. ಏಕ್ರಿ. ಆ ಗಂಜಿ ನಿಲ್ಲಾಕ ಒಂದ ಕೆರಿ ಅದ ಹುಬ್ಬಳ್ಯಾಗ ಗಂಜಿ ಕೆರಿ ಅಂತ. ಗಂಜಿ ನಿಂದ್ರತೀತ್ತ. ಬಸಿಯುವಾಗ ಬಾಯಿಕಟ್ಟಿದ ಅರಿಬಿ ಬಂದ ಹರಕ್ಕೊಂಡ ಹೋಗಿ ಒಂದ ೨೫ ಕಿಲೋ ಅನ್ನ ನಡೀತಂತ. ಸಿದ್ಧಾರೂಢ್ರಗಿ ಅಂದರಂತ, ಎಪ್ಪಾ! ಹೋಯ್ತಿಂತ. 'ಏ ಹೋಗಲಿ ನಡಿ ಅಂದ್ರ, ದಾನ ಮಾಡುಟ್ಯೆಂಕ ನೋಡಬಾರ್ದ, ಗಳಸುಟ್ಯೆಂಕ ಹಂಗ ನೋಡಬೇಕ. ದಾನ ಮಾಡುಟ್ಯೆಂಕ ಹಿಂದ ಮುಂದ ನೋಡಬಾರ್ದು, ಹೋಗಲಿ ದಾನ ಮಾಡಾಕ ಹತ್ತಿವಿ. ಹೋಗಲಿ ೨೫ ಕಿಲೋ. ಪರಂತು ಗಳಿಸುವಾಗ ಸುಮಾರ ನಾಂವ ಹಂಗ ಮಾಡಾಂಗಿಲ್ಲ. ಗಳಿಸುವಾಗ ಯಾಕಡೆರೆ ಮಾಡ್ತಿವಿ.

## ೩.೨. ಪ್ರವಚನ ಮಾದರಿ :

### ಪರಮ ಪೂಜ್ಯಶ್ರೀ ಬಸವಾನಂದ ಸ್ವಾಮಿಗಳು ಮನಗುಂಡಿ. ಇವರು ಮಾಡಿದ ಆರೋಗ್ಯದ ಮಹತ್ವ ಪ್ರವಚನ :

ಶ್ರೀಗುರುವೆ ದೀಕ್ಷಾಗುರುವೆ,। ಶಿಕ್ಷಾಗುರುವೆ,॥

ರಕ್ಷಾಗುರುವೆ ಸರ್ವಾಂಗ ಮೊಕ್ತ ಕಳಾಗುರುವೆ,

ಶಿವಯೋಗ ಧರ್ಮಾರ್ಥ ಭೋಗಗುರುವೆ, ತ್ಯಾಗಗುರುವೆ, ಸುಧೀಗುರುವೆ,

ವಾಚಾಗುರುವೆ ಭವರೋಗ ಹರ ಶರಣಾದೆ,। ಬಸವ ಮಹಾಗುರುವೆ ನಿಮಗೆ.

ವಿಶ್ವಗುರು ಮಹಾಮಾನವತಾವಾದಿ ಬಸವಣ್ಣನವರನ್ನು ಹೃದಯ ಮಂದಿರದಲ್ಲಿ ಸ್ಮರಿಸುತ್ತಾ, ಮಹಾಮಹಿಮರು, ವ್ಯೋಮಕಾಯ ಸಿದ್ಧರು, ಶೂನ್ಯಪೀಠಾಧ್ಯಕ್ಷರೂ ಆದಂತಹ ಅಲ್ಲಮಪ್ರಭುದೇವರನ್ನು, ಪ್ರಪಂಚದ ಎಲ್ಲ ದಾರ್ಶನಿಕ ಮಹಾತ್ಮರನ್ನು ಸ್ಮರಿಸಿ, ಇಲ್ಲಿ ಸೇರಿರುವ ಎಲ್ಲ ಸದ್ಭಕ್ತ ಬಂಧುಗಳೇ! ತಾಯಂದಿರೇ! ಮಕ್ಕಳೇ! ಎಲ್ಲರಿಗೂ ಶರಣು-ಶರಣಾರ್ಥಿಗಳು.

ಇಂದು ನಾವು ಆರೋಗ್ಯ ಮತ್ತು ಆಧ್ಯಾತ್ಮ ವಿಷಯವಾಗಿ ತಿಳಿದುಕೊಳ್ಳವರಿದ್ದೇವೆ. ಆರೋಗ್ಯ ಅಂದಾಕ್ಷಣ ಇವತ್ತು ಎಲ್ಲರ ಕಿವಿ ನಿಮರುತ್ತೆ. ಹೃದಯ ಅರಳುತ್ತೆ. ಮನಸ್ಸು ಕುತೂಹಲದಿಂದ ಆಕಡೆ ಗಮನ ಕೊಡುತ್ತೆ. ಯಾಕೆ ಅಂತಂದ್ರೆ? ಅಷ್ಟರಮಟ್ಟಿಗೆ ಆರೋಗ್ಯದ ಸಮಸ್ಯೆ ಉಂಟಾಗಿದೆ. ಮನುಷ್ಯ ನಾಗರಿಕತೆಯಲ್ಲಿ ಮುಂದುವರಿದ್ದಾನೆ. ವಿಜ್ಞಾನ ಅತ್ಯಂತ ಮುಂದುವರೆದಿದ್ದಾನೆ. ದೊಡ್ಡ-ದೊಡ್ಡ ಕೈಗಾರಿಕೆಗಳನ್ನು ಸ್ಥಾಪನೆ ಮಾಡಿದಾನೆ ಆದ್ರೆ! ದೈಹಿಕವಾಗಿ ಅಸ್ವಸ್ಥನಾಗಿದ್ದಾನೆ. ಮಾನಸಿಕವಾಗಿ ಉದ್ವಿಘ್ನನಾಗಿದಾನೆ. ಅಧ್ಯಾತ್ಮಿಕವಾಗಿ ತುಂಬಾ ಸಂಕುಚಿತವಾಗಿದ್ದಾನೆ. ಇಂತಹ ಮನುಷ್ಯನಿಗೆ ಶಾಂತಿ-ಸಮಾಧಾನ ಮತ್ತು ದೈಹಿಕ ಸ್ವಾಸ್ಥ್ಯ ಯಾವಾಗ ಸಿಗಬೇಕು? ಆ ಸ್ವಾಸ್ಥ್ಯವನ್ನ ಕಾಪಾಡೋದಕ್ಕೆ ಅಂವ ಯಾವ ಮಾರ್ಗವನ್ನು ಅನುಸರಿಬೇಕು? ಈ ವಿಷಯವಾಗಿ ನಾವು ಒಂದು ತಿಂಗಳ ಪರಿಯಂತರ ತಿಳಿದ್ಕೋಳ್ಳೊದಕ್ಕೆ ನೀವು ಈ ಭಾಗಗಳನ್ನೆಲ್ಲ ಕೇಳಿ ಈ ಪ್ರವಚನ ಧಾರಾವಾಹಿಯಲ್ಲಿ ಪಾಲ್ಗೊಳ್ಳಬೇಕು. ಈಗ ಈ ಟಿವ್ಹಿ ಧಾರಾವಾಹಿಗಳು ಅತ್ಯಂತ ಪರಿಚಿತ. ಆದ್ರೆ ಪ್ರವಚನದ ಧಾರಾವಾಹಿಗಳು ತುಂಬಾ ವಿರಳವಾಗಿವೆ, ಮತ್ತು ಧಾರ್ಮಿಕ ಪ್ರವಚನಗಳನ್ನು ಹೇಳ್ತಾರೆ ಅಂತದ್ರೆ ಅದಕ್ಕೆ ಮೂಗುಮುಯೋ ಸನ್ನಿವೇಶ ಉಂಟಾಗಿದೆ. ಇವತ್ತಿನಿಂದ ನಾನು ನಿಮಗ ಕೇವಲ ಧಾರ್ಮಿಕ ಅಲ್ಲ. ಮೊದಲು ನಮ್ಮ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳತಕ್ಕಂತದ್ದು. ಪ್ರವಚನದಲ್ಲಿ ಶಾಂತಿ ನೆಲೆಸುವ ಮತ್ತು ನೀವೆಲ್ಲರೂ

ಸದೃಢವಾಗಿ ಬದುಕತಕ್ಕಂತಾ ಒಂದು ಮಾರ್ಗವನ್ನು ಹೇಳಿಕ್ಕೆ ನಾನು ಪ್ರಾರಂಭಿಸ್ತಾ ಇದ್ದೀನಿ. ನಿರಂತರವಾಗಿ ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡು ನಿಮ್ಮ ಎಲ್ಲಾ ರೀತಿಯ ಆರೋಗ್ಯವನ್ನು ಕಾಪಾಡಿಕೊಳ್ಳಬೇಕು, ಅನ್ನುವಂತಹ ವಿನಂತಿಯೊಂದಿಗೆ ಈ ಕಾರ್ಯಕ್ರಮವನ್ನು ನಾವು ಪ್ರಾರಂಭಿಸೋಣ.

'ಆರೋಗ್ಯ' ಅಂದರೆ ಏನು? ಅನ್ನುವ ಪ್ರಶ್ನೆಗೆ ನೀವೆಲ್ಲ ಒಂದೇಸಾಲಿನಲ್ಲಿ ಉತ್ತರಿಸಬಹುದು. ರೋಗವಿಲ್ಲದ ಸ್ಥಿತಿಯೇ ಆರೋಗ್ಯ. ರೋಗ ಇದ್ರೆ ಅದಕ್ಕೆ ಅನಾರೋಗ್ಯ ಅಂತ ಕರಿತಾರೆ. ರೋಗಾ ಇಲ್ಲದೆ ಹೋದ್ರೆ ಅದಕ್ಕೆ ಆರೋಗ್ಯ ಅಂತಾ ಕರಿತಾರೆ. ಇಂಗ್ಲೀಷನಲ್ಲಿ 'ಡಿಸೀಜ್' ಅನ್ನುವಂತಾ ಒಂದು ಶಬ್ದ ಇದೆ. ಇಂಗ್ಲೀಷನಲ್ಲಿ ಡಿಸೀಜ್ ಅಂದ್ರೆ ರೋಗ. Ease ಅನ್ನುವಂತ ಶಬ್ದದ ಮೇಲೆ ಆರೋಗ್ಯ ಸುಖ ಸುಲಭಾ ಅಂತಾ ಅರ್ಥಾ ಆಗುತ್ತೆ. ಅದ್ಯಾವಾಗ ತಪ್ಪುತ್ತೋ ಆವಾಗ ಡಿಸೀಜ್, ಸರಿ ಇಷ್ಟ ಅಂದಾಕ್ಷಣಕ್ಕೆ ಆರೋಗ್ಯದ ಪರಿಕಲ್ಪನೆ ನಮಗೆ ಸಂಪೂರ್ಣವಾಗಿ ಬರೋದಿಲ್ಲ. ಇನ್ನು ಆರೋಗ್ಯದ ಪರಿಕಲ್ಪನೆಗಳನ್ನು ತಿಳಿದಕೊಳ್ಳೋಕೆ ಮುಂಚೆ, ಆರೋಗ್ಯಕ್ಕೆ ಇಷ್ಟ ಮಹತ್ವ ಕೊಡುವುದಿದೆಯಾ? ಅಂತಾ ಕೆಲವರು ನನಗೆ ಕೇಳ್ತಾರೆ. ನಾನು ಒಂದು ತಿಂಗಳು ಆರೋಗ್ಯದ ಬಗ್ಗೆ ಆರೋಗ್ಯದ ಹೆಸರನ್ನಿಟ್ಟುಕೊಂಡು ಪ್ರವಚನ ನಡೆಸುವಾಗ ಕೆಲವರಿಗೆಲ್ಲ ವಿಚಿತ್ರ ಅನ್ಸುತ್ತೆ. ಏನು? ಮೂವತ್ತು ದಿವಸಾ ಆರೋಗ್ಯ ಬಗ್ಗೆ? ಆರೋಗ್ಯ ಅಂತಾ ಅನ್ನುವ ಒಂದು ಶಬ್ದದ ಮೇಲೆ ನಾವೆಲ್ಲ ಚನ್ನಾಗಿ ಇರಬಹುದಲ್ಲ. ಇವತ್ತು ಮನುಷ್ಯ ಆರೋಗ್ಯವನ್ನ ಕೆಡ್ಸಿಕೊಳ್ಳೊದಕ್ಕೆ ಈ ಚಿಂತನೆಯೇ ಕಾರಣವಾಗಿರತಕ್ಕಂತದ್ದು.

ಇವತ್ತು ಸರಕಾರಗಳು ಬೇರೆ-ಬೇರೆ ವಿಷಯದಲೆಲ್ಲ ಚಿಂತನೆ ಮಾಡ್ತಿವೆ. ಆರೋಗ್ಯ ಖಾತೆಯಂತಾ ಡಿಪಾರ್ಟಮೆಂಟ ಸರಕಾರದಲ್ಲಿ ಇದೆ. ಆರೋಗ್ಯಕ್ಕಿಂತಲೂ ಹೆಚ್ಚಾಗಿ ರಕ್ಷಣೆಗೆ ದೇಶದ ರಕ್ಷಣೆಗೆ ಹೆಚ್ಚಿನ ವೆಚ್ಚಾ ಆಗ್ತಾ ಇದೆ. ಶಿಕ್ಷಣಕ್ಕೆ ಹೆಚ್ಚಿನ ವೆಚ್ಚಾ ಆಗ್ತಾ ಇದೆ. ಕೈಗಾರಿಕೆಗಳ ಸ್ಥಾಪನೆಗೆ ಹೆಚ್ಚಿನ ಖರ್ಚುಗ್ತಾಯಿದೆ. ಆರೋಗ್ಯದ ವಿಷಯಕ್ಕೆ ಸರಕಾರ ಏನ ಖರ್ಚ ಮಾಡ್ತಾ ಇದೆ? ಅಂದಾಗ ಅದು ಸ್ವಲ್ಪಾ ಕಡಿಮೇನೆ ಅಂತಾ ಹೇಳಬೇಕು. ಜನ್ರೂ ಮಾತ್ರ ತಮ್ಮ ಪ್ರತಿನಿತ್ಯದ ಬಜೆಟ್‌ನಲ್ಲಿ ಆರೋಗ್ಯಕ್ಕೆ ನಿರ್ದಿಷ್ಟವಾದ ಪಾಲನ್ನು ತೆಗೆದಿಡ್ಲೆಬೇಕಾಗಿದೆ. ಇವತ್ತು ಮನೆಯಲ್ಲಿ ಅನೇಕ ಜನರಿಗೆ ಸಮಸ್ಯೆ. ಒಂದ ಐದ ಜನ ಅಥವಾ ಹತ್ತ ಜನ ವಾಸಮಾಡ್ತಾ ಇದ್ದಾರಂತಂದ್ರೆ ಅವರಲ್ಲಿ ಆರೋಗ್ಯವಾಗಿರೋರು ಎಷ್ಟು ಜನ? ಸಂಪೂರ್ಣ ಆರೋಗ್ಯ! ಒಂದು ಮಾತ್ರೆಯನ್ನು, ನುಂಗ್ತಾ ಇಲ್ಲಾ, ಮತ್ತೇ ದೈಹಿಕವಾಗಿ, ಗಟ್ಟಿಮುಟ್ಟಾಗಿದ್ದಾನೆ, ಮಾನಸಿಕವಾಗಿ ಖುಷಿಯಾಗಿದಾನೆ, ಮತ್ತು ಆಧ್ಯಾತ್ಮಿಕ ಚಿಂತನೆಯನ್ನ ಮಾಡುವ ಶಕ್ತಿಯಿದೆ, ಮತ್ತು ಕಷ್ಟಾ ಪಟ್ಟು ದುಡಿದು ಸಮಾಜದ ಏಳಿಗೆಗಾಗಿ ಅಂವ ಶ್ರಮಿಸ್ತಾ ಇದ್ದಾನೆ. ಈ ಎಲ್ಲಾ ಗುಣಗಳು ಒಬ್ಬನೇ ವ್ಯಕ್ತಿ ಹತ್ರ ಇವೆ, ಅಂತ

ಹೇಳಿ! ತುಂಬಾ ಕಷ್ಟಾ ಆಗುತ್ತೆ. ಒಂದು ಪಕ್ಷ ದೈಹಿಕವಾಗಿ ಮಾನಸಿಕವಾಗಿ ಸಾಮಾಜಿಕವಾಗಿ ಆಧ್ಯಾತ್ಮಿಕವಾಗಿ ಆರೋಗ್ಯಕರವಾಗಿ ೫೦ ವರ್ಷ ಕಾಲ ಕಳದೆ, ಇವಾಗ ಎಂತಾ ಭಾವನೆ ಉಂಟಾಗಿದೆ ಅಂದ್ರೆ, ಅವನನ್ನ ತಗೊಂಡ ಹೋಗಿ ಮ್ಯುಜಿಯಂನಲ್ಲಿಡ್ರಿ, ಯಾಕಂದ್ರೆ ಅಷ್ಟು ಆರೋಗ್ಯ ಕೆಡಿಸಿಕೊಂಡು ಬಿಟ್ಟಿದ್ದಾನೆ, ಮನುಷ್ಯ. ನಲವತ್ತು ವರ್ಷ ಆಗಿದೆ. ಅವನಿಗೆ ಬಿಪಿ ಇಲ್ಲ, ಶುಗರ ಇಲ್ಲ ಹಾರ್ಟಪ್ರಾಬ್ಲಂ ಇಲ್ಲ ಅಂತ ಅಂದ್ರೆ, ಓಹೋ! ಅದ್ಯಾವುದೇ ವಿಚಿತ್ರ ಪ್ರಾಣಿ ಇರಬೇಕು. ಮಾನವ ರೂಪಿ ಪ್ರಾಣಿ ಅನ್ನುವ ಕಾಲಬಂದ್ರು ಬರಬಹುದು. ಬರ್ತಾ ಇದೆ ಅಂತ ಅನ್ನುತ್ತೆ. ಅಷ್ಟರ ಮಟ್ಟಿಗೆ ಆರೋಗ್ಯವನ್ನ ಕೆಡ್ಸಿಕೊಳ್ತಾ ಇದ್ದಾನೆ ಮನುಷ್ಯ. ಹಾಗಾದ್ರೆ ಮನುಷ್ಯ ಮಹತ್ವ ಕೊಟ್ಟಿದ್ದೇದಕ್ಕೆ? ಹಣ ಸಂಪಾದನೆಗೆ ಅಧಿಕಾರ ಸಂಪಾದನೆಗೆ ಮತ್ತು ಭೋಗ ಸಂಪಾದನೆಗೆ. ಅಧಿಕಾರ ಭೋಗಕ್ಕಾಗಿ ಮನುಷ್ಯ ತನ್ನ ಜೀವನವನ್ನೆಲ್ಲ ಕಳದಾನೆ. ಒಂದು ನಲವತ್ತು ವರ್ಷದವರೆಗೆ ಹಣ ಸಂಪಾದನೆಗಾಗಿ ಕಾಲಕಳಿತಾನೆ. ೪೦ ವರ್ಷದ ನಂತರ ಆರೋಗ್ಯ ಕೆಟ್ಟಹೋಗುತ್ತೆ. ಈಗಂತೂ ೩೦ ವರ್ಷಕ್ಕೆ ಕೆಡ್ತಾ ಇದೆ ಬಿಡಿ. ಪರವಾಗಿಲ್ಲ ನಲವತ್ತು ಐವತ್ತರ ಮೇಲೆ ಕೆಡುತ್ತೆ ಆದ್ರೆ ಅವಾಗ ತಾನು ಗಳಿಸಿರುವ ಹಣವನ್ನೆಲ್ಲ ಆರೋಗ್ಯ ಸರಿಪಡಿಸಿಕೊಳ್ಳೋಕೆ ಕರ್ಚಮಾಡ್ತಾನೆ. ಆದ್ರೆ ಯಾವ ಕಾರಣಕ್ಕೂ ಆರೋಗ್ಯ ಮಾತ್ರ ವಾಪಸ್ಸ ಬರೂದಿಲ್ಲ. ಸಾಧ್ಯ ಇದೆಯಾ ಬರ್ಲಿಕ್ಕೆ? ಕಳೆದುಕೊಂಡ ಆರೋಗ್ಯವನ್ನ ಎಂದೂ ಪಡೆದುಕೊಳ್ಳೋಕೆ ಸಾಧ್ಯವಿಲ್ಲ? ಅಲ್ವಾ

ಆದ್ದರಿಂದ ಬಂಧುಗಳೇ! ಆರೋಗ್ಯ ಮಹತ್ವವನ್ನ ನಾವು ಸರಿಯಾಗಿ ಅರ್ಥ ಮಾಡಿಕೋಬೇಕು. ನೀವು ಕಲ್ಪಸಿಕೊಳ್ಳಿ ನಿಮಗೊಂದರವತ್ತ ವರ್ಷ ವಯಸ್ಸಾಗಿದೆ. ಈಗಾಗಲೇ ನೀವು ಕೋಟ್ಯಾಧೀಶರಾಗಿ ಹೋಗಿದ್ದಿರಾ. ಹಿಂದೆ ಬಡುರು ಇದ್ರಿ, ಈಗ ಕೋಟ್ಯಾಧೀಶರಾಗಿದ್ದೀರಾ. ಆದ್ರೆ ಏನ್ಮಾಡೊದು ಬಿಪಿ ಬಂದಿದೆ, ಶುಗರ ಬಂದಿದೆ, ಹಾರ್ಟ ಪ್ರಾಬುಲಂ ಬಂದಿದೆ. ನಿಮ್ಮ ಸುತ್ತಮುತ್ತ ನೂರಾರು ಜನ ಬಂಧುಗಳಿದ್ದಾರೆ. ಹತ್ತಾರು ಕೋಟಿ ರೂಪಾಯಿ ಹಣ ಇದೆ. ದೊಡ್ಡ-ದೊಡ್ಡ ಬಂಗ್ಲೆಗಳಿವೆ. ಇವು ಯಾವು ಕೂಡ ನಿಮ್ಮ ನೋವನ್ನು ನಿವಾರಣೆ ಮಾಡ್ಲಿಕ್ಕೆ ಸಾಧ್ಯವಿಲ್ಲ. ಪ್ರತಿ ನಿತ್ಯ ಅಥವಾ ವಾರಕ್ಕೆ ಎರಡು ಸಾರಿನೋ-ಮೂರು ಸಾರಿನೋ ಡೈಯಾಲಿಸಿಸ್ ಮಾಡಿಸಿಕೊಳ್ಳತಕ್ಕಂಥವರನ ನೀವ ಮಾತಾಡಸರ್ರಿ, ಅವರು ಕೋಟ್ಯಾಧೀಶರಿದ್ದರೂ ಕೂಡ ಅವರ ಮುಖ ಬಾಡಿದ ಮುಖ. ಬಾಡಿದ ಮನಸ್ಸು. ನಿರಾಸೆಯ ಜೀವನ. ಎದಕ್ಕ ಬೇಕ? ಇನ್ನೊಂದು ಕಡೆ ನೋಡಿ ಒಬ್ಬ ಭಿಕ್ಷುಕ ಇದ್ದಾನೆ, ಅವನಿಗೆ ಏನೂ ಇಲ್ಲ. ಮೈ ಮೇಲೆ ಹರಿದ ಬಟ್ಟೆ, ತಿನ್ಲಿಕ್ಕೆ ಹೊಟ್ಟೆ ತುಂಬ ಊಟಾ ಇಲ್ಲಾ, ತಲೆ ಸ್ವಚ್ಛಾ ಇಲ್ಲಾ, ಮೈ ಸ್ವಚ್ಛಾ ಇಲ್ಲ, ಆದ್ರೆ ಅವನನ್ನ ಮಾತಾಡಿಸಿ, ಅಥವಾ ಅಂವ ಮಲಗಿರೋ ರೀತಿ ನೋಡಿ ಒಂದ

ರೈಲ್ವೆ ಸ್ಟೇಷನ್ನಲ್ಲೋ ಮಲ್ಕೊಳ್ಳಿ ಒಂದ ಬಸ್ಸ್ಟ್ಯಾಂಡನಲ್ಲೇ ಮಲಕ್ಕೊಳ್ಳಿ ನೆಮ್ಮದಿಯಾಗಿ ನಿದ್ದೆ ಮಾಡ್ತಾನೆ. ಅವನಿಗೆ ನಿದ್ದೆಯಲ್ಲಿ ಅತ್ಯಂತ ಸುಖ ಸಿಕ್ತಾ ಇದೆ. ಜೊತೆಗೆ ನಾಳೆಯ ಚಿಂತೆ ಇಲ್ಲಾ ಅವನಿಗೆ. ಗೊತ್ತು ಅವನಿಗೆ ನಾಳೆ ಬೆಳಗಾದ್ರೆ ಭಿಕ್ಷಾಪಾತ್ರೆ ಇದೆ. ಹತ್ತಾರು ಜನರಿಗೆ, ನೂರಾರು ಜನರಿಗೆ ಬೇಡಿದ್ರೆ ಹೊಟ್ಟೆ ತುಂಬುವಷ್ಟು ಸಿಗುತ್ತೆ. ಅವನು ನಿಶ್ಚಿಂತ, ನಿರೋಗಿ, ಆದ್ರ ನೆಮ್ಮದಿಯ ಜೀವನವನ್ನು ನಡಿಸ್ತಾ ಇದ್ದಾನೆ. ಭಿಕ್ಷೆಬೇಡಿದ್ರೂ ಕೂಡ ನೆಮ್ಮದಿ ಜೀವನವನ್ನು ನಡಿಸ್ತಾ ಇದ್ದಾನೆ. ಲಕ್ಷಾಧಿಪತಿ, ಕೋಟ್ಯಾಧಿಪತಿ ದುಃಖಿಯಾಗಿದ್ದಾನೆ. ಹಾಗಾದ್ರೆ ನಾವ್ ಏನ ಯೋಚನೆ ಮಾಡಬೇಕಾಗಿದೆ? ಎಲ್ಲದಕ್ಕಿಂತಲೂ ಹೆಚ್ಚಾಗಿ ಆರೋಗ್ಯಕ್ಕೆ ಮಹತ್ವ ಕೊಡಬೇಕಾಗಿದೆ.

ಒಬ್ಬ ಈ ಮೈಲ್ಸ ಅನ್ನುವಂತ ಒಬ್ಬ ಪಂಡಿತ ಒಂದು ಕಡೆ ಹೇಳ್ತಾನೆ. ಪಾಶ್ಚಿಮಾತ್ಯ ವಿದ್ವಾಂಸ, ಅದ್ಭುತವಾದಂತಹ ಒಂದು ಮಾತ ಹೇಳ್ತಾನೆ. ಅವನೇ ಒಂದು ಪ್ರಶ್ನೆ ಹಾಕ್ಕೊಂತಾನೆ, What is the prosperity of the Nation.? ಒಂದು ರಾಷ್ಟ್ರದ ಸಂಪತ್ತು ಅಂದ್ರೆ ಯಾವುದು? ಅವನೇ ಹೇಳ್ತಾನೆ, The health of People is the Prosperity of the Nation. ಇವತ್ತು ನಮ್ಮ ರಾಜಕಾರಣಿಗಳಿಗೆ ಕೇಳಿ, What is Prosperity of the Nation.? ರಾಷ್ಟ್ರದ ಸಂಪತ್ತು ಯಾವದು? ಅಂತ ನಮ್ಮ ರಾಜಕಾರಣಿಗಳಿಗೆ ಕೇಳಿ ಅವರ ಹೇಳ್ತಾರೆ, Exise duty (ಅಬಕಾರಿ ಸುಂಕ) Income Tax ಅಥವಾ NRI is Capital. ಅಂದ್ರೆ ಏನ ವಿದೇಶಿಯರ ಬಂಡವಾಳ ನಮ್ಮ ದೇಶದವರೆ ಏನ ವಿದೇಶಿಕ್ಕೆ ಹೋಗಿರ್ತಾರೆ ಅಂತವರ ಒಂದು ಬಂಡವಾಳ ಇದೆ ನಮ್ಮ ರಾಷ್ಟ್ರದ ಸಂಪತ್ತು ಅಂತ ತಿಳಕೊಂಡಿದಾರೆ. ಆದ್ರೆ ಈ ಮೈಲ್ಸ ಹೇಳ್ತಾನೆ, The health of the People is the Prosperity of the Nation. ಆದ್ರೆ ಜನರ ಆರೋಗ್ಯವೇ ಒಂದು ರಾಷ್ಟ್ರದ ಸಂಪತ್ತು. ಒಂದು ರಾಷ್ಟ್ರದಲ್ಲಿ ಆರೋಗ್ಯವಾಗಿದ್ದಾರೆ ಜನ ಸಮೃದ್ಧವಾಗಿ ದುಡಿತಾರೆ, ಸಂತೃಪ್ತಿಯಾಗಿ ಬದುಕ್ತಾರೆ. ಮತ್ತೆ ಯಾರಿಗೂ ಬೇರೆಯವರಿಗೆ ತೊಂದರೆ ಕೊಡೋದಿಲ್ಲ, ಅಂತಂದ್ರೆ ಆ ರಾಷ್ಟ್ರ ಬಡತನದಲ್ಲಿಯೇ ಇರಲಿ ಪರವಾಗಿಲ್ಲ. ಆದ್ರೆ ಆರೋಗ್ಯವಂತರನ್ನ ಹೆಚ್ಚಾಗಿ ಹೊಂದಿದ್ರೆ ಅದೇ ನಿಜವಾದ ಸಂಪದ್ಭರಿತ ರಾಷ್ಟ್ರ ಅಂತಾ ಹೇಳ್ತಾನೆ. ನಮ್ಮ ದೇಶದ ಸ್ಥಿತಿ ಏನಾಗಿದೆ? ಸ್ವಾತಂತ್ರ್ಯ ಬಂದು ೬೩, ೬೪ ವರ್ಷಗಳಾಗಿವೆ. ನಾವೆಲ್ರೂ ಬಹಳ ಸಾಧನೆ ಮಾಡಿದಿವಿ ಅಂತ ಅನಕೊಳ್ತಾ ಇದಿವಿ. ಮಂಗಳನ ಅಂಗಳಕ್ಕೆ ನಾವು ಸ್ಯಾಟಲೈಟ್ ಕಳಸ್ತಾ ಇದಿವಿ, ಆ ಮೇಲಿಂದ ಬೇರೆ ದೇಶಗಳ ಪೈಪೋಟಿಗೆ ಬಿದ್ದು ಪರಮಾಣು ಮಾಡಿಕೊಂಡಿದ್ದಿವಿ. ಪರಮಾಣು ಅಸ್ತ್ರಗಳನ್ನು ತಯಾರಮಾಡ್ಕೊಂಡಿದ್ದಿವಿ. ಯಾರೇ ವೈರಿ ಬಂದ್ರು ಎದುರಿಸುವಂತಾ ಶಕ್ತಿ ಇದೆ. ನಮ್ಮ ವಿಜ್ಞಾನಿಗಳು ಏಂಜನೀಯರ್ಸ ಎಲ್ಲಾ ದೇಶಗಳಲ್ಲೂ ಇದ್ದಾರೆ. ಆದ್ರೆ ಭಾರತದಲ್ಲಿ ಸುಖಾ ಇದೆಯಾ? ನಮ್ಮ ಜನ ಸುಖಿಗಳಾಗಿದಾರಾ? ಇವತ್ತೂ ಮುಖ್ಯವಾಗಿ ಹೆಚ್ಚಾಗ್ತಾ ಇರುವ

ಡಯಾಲಿಸೀಸ್ ಸಣ್ಣ ಮಕ್ಕಳನ್ನು ಸಹ ಕಾಡ್ತಾ ಇರುವ ಸಕ್ಕರೆ ರೋಗ, ಮತ್ತೆ ನಾಲ್ಕು ಐದು ವರ್ಷದ ಮಕ್ಕಳು ಡಯಾಲಿಸಿಸ್ ಮಾಡಿಸಿಕೊಳ್ಳುವದಕ್ಕಾಗಿ ಬೆಡ್ಡ ಮೇಲೆ ಮಲಗಿರತಕ್ಕಂತಾ ದೃಶ್ಯಾ ಮತ್ತೆ ಒಂದು ಕಡೆ ಅತಿಯಾಗಿ ದಪ್ಪವಾಗಿ ಅಟ್ಯಾಸಿಟಿ ಪ್ರಾಬ್ಲಂನಿಂದ ಬಳಲತಕ್ಕಂತಾ ಜನ, ಇನ್ನೊಂದು ಕಡೆ ತಿನ್ನೊದಕ್ಕೆ ಅನ್ನ ಇಲ್ದೆ ಸವಕಲಾಗಿ, ನಡಿಯೋದಕ್ಕೂ ತ್ರಾಣಾ ಇಲ್ದೆ ಬದುಕದಕ್ಕೆ ಉಸಿರಾಟ ಮಾಡ್ತಾ ಇದ್ದಾರೇನೋ ಅನ್ನೋ ಹಾಗೆ ಬದುಕ್ತಾ ಇರತಕ್ಕಂತಾ ಜೀವಿಗಳು. ಇದು ಒಂದು ರಾಷ್ಟ್ರದ ಪ್ರಗತಿಯೇ? ಯೋಚನೆ ಮಾಡಬೇಕು ನಾವೆಲ್ಲ! ಇವತ್ತು ಇಡೀ ವಿಶ್ವದ ಜನ ಈ ನಿಟ್ಟನಲ್ಲಿ ಯೋಚನೆ ಮಾಡಬೇಕಾಗಿದೆ. ಏನು! ಪ್ರಪಂಚ ಯಾವ ಕಡೆ ಸಾಗ್ತಾ ಇದೆ, ವಿಶ್ವಸಂಸ್ಥೆಯವರು ಒಂದು ಗುರಿಯನಿಟ್ಟುಕೊಂಡಿದ್ರು ೨೦೦೦ ದ ಇಸ್ವಿ ಒಳಗಾಗಿ ಎಲ್ಲರಿಗೂ ಆರೋಗ್ಯದ ಜವಾಬ್ದಾರಿಯನ್ನ ಹೊರತಕ್ಕಂತದ್ದು World helth Orgnasation. ಅವರೊಂದು ಗುರಿ ಇಟ್ಕೊಂಡಿದ್ರು ಸಕ್ಸಸ್ ಆಯ್ತೋ ಇಲ್ಲೋ ಅಂತ ನಿಮಗೆ ಗೊತ್ತಿದೆ. ವಿಶ್ವ ಆರೋಗ್ಯ ಸಂಸ್ಥೆಯರಿಗೂ ಕೂಡ ಗೊತ್ತಾಗಿದೆ. ಅದಕ್ಕಾಗಿಇ ವಾಗೇನ ಮಾಡ್ತಾ ಇದ್ದರಂತಂದ್ರೆ ೨೦:೨೦ ೨೦೨೦ ಕ್ಕೆ ೨೦ ರ ಒಳಗಾಗಿ ಎಲ್ಲರಿಗೂ ಆರೋಗ್ಯವನ್ನ ಕೋಡ್ತಿವಿ ಅನ್ನೋ ಘೋಷಣೆಯನ್ನು ಒಂದು ಸಂಕಲ್ಪವನ್ನ ಇಟ್ಕೊಂಡಿದ್ದಾರೆ. ಆದ್ರೆ ಬಂಧುಗಳೇ! ನಾವೆಲ್ಲ ತಿಳ್ಕೊಬೇಕು ೨೦೨೦ ಯಾಕೆ? ಇನ್ನು Two Hundred years ಹೀಗೆ ಹೋದ್ರೂ ಕೂಡ ನಾವು ಈಗ ಅನುಸರಿಸ್ತಾ ಇರತಕ್ಕಂತಾ ಈ ಮಾರ್ಗದಲ್ಲಿ ಖಂಡಿತವಾಗಿಯೂ ನಮಗೆ ಆರೋಗ್ಯ ಸಂಪೂರ್ಣ ಆರೋಗ್ಯ ಪ್ರಾಪ್ತ ಆಗೋದಿಲ್ಲ. ಕಾರಣ ಏನು? ಗಾಂಧೀಜಿ ಒಂದ ಮಾತ ಹೇಳ್ತಾನೆ, ಏನೂ ಅಂತಂದ್ರೆ 'ಜಬ್ ಆದಮಿ ರೋಗಿ ಬಂತಾ ಹೈ' ಅಂದ್ರೆ ಯಾವಾಗ ಒಬ್ಬ ವ್ಯಕ್ತಿ ರೋಗಿಷ್ಟ ಆಗ್ತಾನೋ "ಕಬ್ ಉನ್ನಕೋ ನಹಿ ದಾವಾಕಿಜರೂರತ ಹೈ, ನದವಾಕಿ ಜರೂರತ್ ಹೈ, ನ ದುವಾಕಿ ಜರೂರತ್ ಹೈ" ಅಂದ್ರೆ ಔಷಧಿಯ ಅಗತ್ಯವೂ ಇಲ್ಲಾ; ಆಶೀರ್ವಾದದ ಅಗತ್ಯವೂ ಇಲ್ಲಾ. ಹಾಗಾದ್ರೆ ಏನ ಕೊಡಬೇಕಾಗ್ತದೆ? ಅವರ ಹೇಳ್ತಾರೆ. "ಆರೋಗಿ ಕಾ ಜ್ಞಾನ ಏ ದೇವಾಚಾಹಿಯೇ" ಆರೋಗ್ಯದ ಬಗ್ಗೆ ಅವನ ಖಾಯಿಲೆ ಬಗ್ಗೆ ಅವನ ವ್ಯಕ್ತಿತ್ವದ ಬಗ್ಗೆ, ಅವನ ಇರುವಿಕೆ ಬಗ್ಗೆ, ಪ್ರಕೃತಿ ನಿಯಮಗಳ ಬಗ್ಗೆ ಸರಿಯಾದಂತಹ ತಿಳುವಳಿಕೆಯನ್ನ ಕೊಟ್ರೆ! ಸಾಕು ಅಂತಾ. ಅವರಿಗೆ ಸರಿಯಾಗಿ ತಿಳುವಳಿಕೆಯನ್ನ ಕೊಟ್ರೆ ಅವನು ತನ್ನ ಆರೋಗ್ಯವನ್ನ ಕಾಪಾಡಿಕೊಳ್ಳಬಹುದು. ಈಗ ನೀವೆಲ್ಲಾ ಹೇಳಬಹುದು ಕುಟುಂಬ ಕಲ್ಯಾಣ ಇಲಾಖೆಯವರು, ಆರೋಗ್ಯ ಇಲಾಖೆಯವರು ಬೇಕಾದಷ್ಟು ಸೆಮಿನಾರಗಳನ್ನು ಮಾಡ್ತಾರೆ, ಪ್ರಚಾರದ ಕಾರ್ಯಕ್ರಮಗಳನ್ನು ಮಾಡ್ತಾರೆ, ಆವು ಆರೋಗ್ಯದ – ಜಾಗೃತಿಯನ್ನ ಮಾಡ್ತಾ ಇದ್ದಾರಲ್ಲಾ, ಆರೋಗ್ಯದ ಜ್ಞಾನ ಕೊಡ್ತಾ ಇದ್ದಾರಲ್ಲಾ? ನೋ ನೋ, ಅವರು ಕೊಡ್ತಾ ಇರೋದು ಆರೋಗ್ಯದ

ಜ್ಞಾನಾ ಅಲ್ಲ. ಔಷಧಿಯ ಜ್ಞಾನ. ಕಾಯಿಲೆ ಬಂದ ಮೇಲೆ ಎಂಥಾ ಔಷಧಿಯ ತಗೋಬೇಕು; ಅಥವಾ ಕಾಯಿಲೆ ಬರಲಾರದಂತಹ ಸುತ್ತಲಿನ ಪರಿಸರವನ್ನು ಹೇಗೆ ಇಟ್ಕೋಬೇಕು? ಅದರ ಬಗ್ಗೆ ಹೇಳಿಕೊಡಬಹುದು ಅಷ್ಟೇ. ಆದ್ರೆ ಪ್ರಮುಖವಾಗಿ ವ್ಯಕ್ತಿಯನ್ನೇ ಬದಲಾಯಿಸತಕ್ಕಂತ, ವ್ಯಕ್ತಿಯ ವ್ಯಕ್ತಿತ್ವನ್ನ ರೂಪಿಸತಕ್ಕಂತ ಆರೋಗ್ಯದ ಜ್ಞಾನವನ್ನ ಅವರ ಕಡೆ ಕೊಡೋದಕ್ಕೆ ಸಾಧ್ಯವಿಲ್ಲ. ಕಾರಣ ಏನೂ ಅಂತ ಅಂದ್ರೆ ಅವರಿಗೆ ಸಂಪೂರ್ಣ ಆರೋಗ್ಯದ ಕಲ್ಪನೆನೇ ಇನ್ನೂ ಬಂದಂತೆ ಕಾಣ್ಸೋದಿಲ್ಲ. ಕೇವಲ ಎಲ್ಲರಿಗೂ ಔಷಧಿಯನ್ನ ಒದಗಿಸಿ, ಎಲ್ಲಾ ಆಸ್ಪತ್ರೆಗಳಲ್ಲಿ ಮಾತ್ರೆಗಳನ್ನು ಸ್ಟಾಕಿಟ್ಟು ಬೇಕಾದಷ್ಟು ಕಾಯಿಲೆ ಆದ ಕೂಡ್ಲೆ ಮಾತ್ರೆ ಕೊಡೋದ ವ್ಯವಸ್ಥೆ ಮಾಡಿ ಮನೆ-ಮನೆಗೆ ನೀವೆ ಉಚಿತವಾಗಿ ಮಾತ್ರೆಯನ್ನ ತಲುಪಿಸಿದ್ರೂ ಕೂಡಾ ಆರೋಗ್ಯವನ್ನ ಸಂಪೂರ್ಣವಾಗಿ ಕೊಡೋದಕ್ಕೆ ಸಾಧ್ಯವಾಗೋದಿಲ್ಲ. ಹಾಗಾದರೆ ಏನ ಮಾಡಬೇಕ ಅಂತ ಅಂದ್ರೆ!.

ಮೊದಲನೆಯದಾಗಿ ನಾವು ಆರೋಗ್ಯದ ಮಹತ್ವವನ್ನ ತಿಳಕೋಳ್ಳೋಣ. ಆರೋಗ್ಯ ಎಲ್ಲದರಕ್ಕಿಂತಲೂ ಶ್ರೇಷ್ಠವಾಗಿರತಕ್ಕಂತದ್ದು. ಸ್ವಸ್ಥ ಜೀವನವೇ ನಿಜವಾದ ಪರಮಾತ್ಮನ ಒಲಿಸುವಂತಾ ಮಾರ್ಗ ಅನ್ನು ಅಂತಾ ಒಂದ ವಿಷಯವನ್ನ ನಾವೆಲ್ಲ ತಿಳ್ಕೋಬೇಕು. ಹಾಗೆ ತಿಳಕೊಂಡು ಆರೋಗ್ಯಕ್ಕೆ ಮಹತ್ವ ಕೊಡೋದಕ್ಕೆ ಶುರುಮಾಡಿ. ಮನುಷ್ಯ ತನ್ನ ದೌರ್ಬಲ್ಯಗಳನ್ನ, ತನ್ನ ದುರ್ಗುಣಗಳನ್ನ, ತನ್ನ ದುರಾಲೋಚನೆಗಳನ್ನ ಕಮ್ಮಿ ಮಾಡಿಕೊಳ್ಳತಕ್ಕಂತ ಒಂದು ವ್ಯವಸ್ಥೆಯನ್ನ ಮಾಡ್ಕೋಬೇಕು. ಅದಕ್ಕೆ ಇದರ ಮಹತ್ವ ಏನಿದೆ? ಒಂದು ಸಂಸ್ಕೃತ ಸುಭಾಷಿತ ಬಾಳ ಚನ್ನಾಗಿ ಹೇಳುತ್ತೆ, ಏನೂ ಆರೋಗ್ಯದ ಮಹತ್ವ ಆರೋಗ್ಯದ ಎಂಥಾ ಸ್ಥಾನವನ್ನ ಅವರು ಕೊಡ್ತಾರೆ ಆ ಒಂದು ಸುಭಾಷಿತದಿಂದ ಗೊತ್ತಾಗುತ್ತೆ! "ಆರೋಗ್ಯಂ ವಿದ್ವತ್ತಾ ಸಜ್ಜನ ಮೈತ್ರಿ ಮಹಾಕುಲೇ ಜನನಿ, ಸ್ವಾಧೀನತಾ ಚಾ ಪುಂಸಾಃ ಮಹದೈಶ್ವರ್ಯಂ ವಿನಾತ್ಯಕ್ತಯ್ಯಹಿಃ" ಅಂದ್ರೆ ಆರೋಗ್ಯ, ವಿದ್ವತ್ತು, ಸಜ್ಜನಸ್ನೇಹ, ಮತ್ತು ಶ್ರೇಷ್ಠಳಾದವಳ ಗರ್ಭದಲ್ಲಿ ಜನನ ಮತ್ತು ಸ್ವಾತಂತ್ರ್ಯ ಇವು ಏನ ಇದಾವೆ ಇವು ಮನುಷ್ಯಾನಿಗೆ ಐಶ್ವರ್ಯವಿಲ್ಲದೆ ಇದ್ರೂ ದೊರೆಯುಂತಾ ಸಂಪತ್ತುಗಳು. ಅಂದ್ರೆ ಹಣ ಇಲ್ಲದೆ ತನ್ನ ಪೂರ್ವಜನ್ಮದ ಪುಣ್ಯದಿಂದ ಅಥವಾ ತನ್ನ ಸ್ವಪ್ರಯತ್ನದಿಂದ ಸಿಗತಕ್ಕಂತಾ ಐಶ್ವರ್ಯಗಳು ಅಂತಾ ಹೇಳುವಾಗ, ಆರೋಗ್ಯ ಏನ್ನೋ ಮೊದಲನೇ ಐಶ್ವರ್ಯವಾಗಿ ಸೇರಸ್ತಾರೆ ಅವರು. ಆರೋಗ್ಯದ ಮಹತ್ವ ಎಷ್ಟಿತ್ತು; ನಮ್ಮ ಪೂರ್ವಜರು ಆರೋಗ್ಯಕ್ಕೆ ಎಷ್ಟೊಂದು ಮಹತ್ವ ಕೊಟ್ಟಿದ್ರು ಅನ್ನುವಂತದ್ದು, ಈ ಒಂದು ವಾಕ್ಯದಿಂದ ನಮಗೆ ತಿಳಿಯುತ್ತೆ. ನಿಮಗೂ ಹೇಳೂದು ಇಷ್ಟೆ. ಇವತ್ತೂ ಆಧುನಿಕತೆಯ ಬೆನ್ನ ಹತ್ತಿ ಇನ್ನೊಬ್ರು ಏನೇ ತಗೊಂಡ ಬಂದ್ರು ನಾವು ತಗೊಂಡ ಬರಬೇಕು. ಇನ್ನೊಬ್ರ ಯಾರಿಗೇ ಪ್ರಮೋಶನ್ ಸಿಕ್ತು ನಮಗೂ ಸಿಗಬೇಕು. ಮತ್ತ್ಯಾರೇ ಶ್ರೀಮಂತರಾದ್ರೂ ನಾವು ಶ್ರೀಮಂತರಾಗಬೇಕು, ಇಂತಹ ಅನರ್ಥ ಪೈಪೋಟಿ

ಅಥವಾ ಅನಾರೋಗ್ಯಕರ ಪೈಪೋಟಿಯನ್ನ ಬಿಟ್ಟು ಒಬ್ರೂ ಸ್ವಸ್ಥವಾಗಿದ್ದಾರೆ, ನಾನು ಸ್ವಸ್ಥವಾಗಿರಬೇಕು, ಒಬ್ರು ದುರ್ಗಣಗಳನ್ನ ಬಿಟ್ಟಿದ್ದಾರೆ ನಾನು ದುರ್ಗಗಳನ್ನ ಬಿಡಬೇಕು. ಒಬ್ಬ ಪ್ರಫುಲ್ಲಿತವಾಗಿ ಬದುಕ್ತಾನೆ. ಪರೋಪಕಾರ್ಥವಾಗಿ ಬದುಕ್ತಾನೆ, ನಾನೂ ಹಾಗೆ ಬದುಕಬೇಕು ಅನ್ನುವಂತಹ ಛಲ ನಮಗೆ ಬರಬೇಕಾಗಿದೆ.

ಇನ್ನು ಈ ಆರೋಗ್ಯದ ವಿಷಯವನ್ನ ನಾವು ಎಲ್ಲಿಂದ ಪ್ರಾರಂಭಿಸೋಣ! ಆರೋಗ್ಯ:- ನಾವು ಆರೋಗ್ಯವಾಗಿ ಇರಬೇಕು ಅಂತ ಅನ್ಸತ್ತೆ, ನಿಮಗೆಲ್ಲ ಈಗ ಪ್ರವಚನ ಕೇಳೋಕೆ ಶುರುಮಾಡಿದ ಮೇಲೆ ನಾವು ಆರೋಗ್ಯವಾಗಿ ಇರಬೇಕು ಅಂತೆಲ್ಲ ನಿಮಗೆ ಯೋಚನೆ ಬರಬಹುದು. ಹಾಗಾದ್ರೆ ಈ ಆರೋಗ್ಯವನ್ನ ನಾವು ಎಲ್ಲಿಂದ ಪ್ರಾರಂಭಿಸೋಣ? ಆರೋಗ್ಯವಾಗಿ ಇರೋದಕ್ಕೆ ನಾವು ಎಲ್ಲಿಂದ ಪ್ರಾರಂಭಿಸೋಣ. ಏನ ಉಪವಾಸ ಮಾಡೋದ್ರಿಂದಾನೋ ಊಟದಲ್ಲಿ ಮಿತಿಯಾಗಿ ಇರೋದ್ರಿಂದಾನೋ ಮತ್ತ ಇರುವ ಕಾಯಿಲೆಯನ್ನ ಕಳಕೊಳ್ಳೋಕೆ ಏನ ಪ್ರಯತ್ನ ಮಾಡೋಣೋ ಏನು? ಮೊದಲು ಜ್ಞಾನವನ್ನ ಪಡಕೊಳ್ಳೋಣ. ಆರೋಗ್ಯ ಅಂದಕೂಡ್ಲೆ ನಮಗೆ ಯಾವ ಆರೋಗ್ಯ ಅಂತ ಯಾರು ಪ್ರಶ್ನೆ ಮಾಡಲ್ಲ. ಆರೋಗ್ಯ ಅಂದ್ರೆ ಏನಂದಕೂಡ್ಲೆ ರೋಗವಿಲ್ಲದ ಸ್ಥಿತಿ ಅಂತಾರೆ. ಅಂದ್ರೆ ವಿಶ್ವ ಆರೋಗ್ಯ ಸಂಸ್ಥೆಯವರು ಆರೋಗ್ಯ ಅಂದ್ರೆ ಏನು? ಪರಿಪೂರ್ಣ ಆರೋಗ್ಯದ ಪರಿಕಲ್ಪನೆಯನ್ನ ಕೊಡೋದಕ್ಕೆ ಪ್ರಯತ್ನ ಪಟ್ಟಿದ್ದಾರೆ. ಕೆಲವು ಮೊದ-ಮೊದ್ಲು ಈ ವಿಶ್ವ ಆರೋಗ್ಯ ಸಂಸ್ಥೆಯವರು ಏನ ಹೇಳಿದ್ರು ಅಂದ್ರೆ ದೈಹಿಕವಾಗಿ ಸ್ವಸ್ಥವಾಗಿರತಕ್ಕಂತದ್ದು. ದೈಹಿಕವಾಗಿ ರೋಗವಿಲ್ಲದೆ ಇರತಕ್ಕಂತದ್ದು, ದೈಹಿಕ ಆರೋಗ್ಯವೇ ಆರೋಗ್ಯ ಅಂತ ತಿಳ್ಕೊಂಡಿದ್ರು, ಆದ್ರೆ ಕೆಲವು ವರ್ಷಗಳ ನಂತ್ರ ಅದಕ್ಕೆ ಗೊತ್ತಾಯ್ತು ಕೇವಲ ದೈಹಿಕ ಆರೋಗ್ಯ ಅಷ್ಟೇ ಸಾಕಾಗೊದಿಲ್ಲಾ ಮಾನಸಿಕ ಆರೋಗ್ಯವೂ ಬೇಕು. ನೀವೆಲ್ಲ ಗಮನಿಸಿರಬೇಕು, ಇಂದಿನ ಬುದ್ಧಿ ಮಾಂಧ್ಯರು ಹುಚ್ಚರು ಬಹಳ ದಷ್ಟಪುಷ್ಟರಾಗಿರ್ತಾರೆ ಅಲ್ವಾ? ಅಂದ್ರೆ ದೈಹಿಕವಾಗಿ ಅವ್ರು ಬಹಳ ದಷ್ಟಪುಷ್ಟರೇ, ಆದ್ರೆ ಮಾನಸಿಕವಾಗಿ ಬಹಳ ದುರ್ಬಲರಾಗಿರ್ತಾರೆ. ಇನ್ನ ಕೆಲವರು ಇರ್ತಾರೆ, ಅವ್ರು ದೈಹಿಕವಾಗಿಯೂ ದಷ್ಟಪುಷ್ಟರಾಗಿರ್ತಾರೆ, ಮಾನಸಿಕವಾಗಿಯೂ ಒಂದು ರೀತಿ ಸ್ವಸ್ಥದಂಗೆ ಕಾಣಸ್ತಾರೆ. ಆದ್ರೆ ಸಾಮಾಜಿಕ ಸಂಬಂಧಗಳು ಚನ್ನಾಗಿರೋದಿಲ್ಲ. ಇನ್ನ ಕೆಲವರಿಗೆ, ಸಾಮಾಜಿಕ ಸಂಬಂಧಗಳೂ ಚನ್ನಾಗಿರುತ್ತೆ, ದೈಹಿಕವಾಗಿಯೂ ಚೆನ್ನಾಗಿರ್ತಾರೆ, ಮಾನಸಿಕವಾಗಿಯೂ ಅಷ್ಟೋ ಇಷ್ಟೋ ಸ್ವಸ್ಥವಾಗಿರ್ತಾರೆ ಅವ್ರು ದೇವರ ಬಗ್ಗೆ ಚಿಂತನೆನೆ ಮಾಡೋದಿಲ್ಲ, ಧರ್ಮದ ಕಡೆ ಗಮನನೇ ಕೊಡೊದಿಲ್ಲ, ತಮ್ಮ ಆತ್ಮೋದ್ಧಾರದ ಕಡೆಗೆ ಯೋಚನೆನೆ ಮಾಡೋದಿಲ್ಲ. ಕೇವಲ ಉಣ್ಣೋದು, ತಿನ್ನೋದು, ಸಂಸಾರ ಮಾಡೋದು. ಸತ್ತ ಹೋಗೋದು ಇಷ್ಟೇ ಅವರ ಗುಣ ಏನೋ ಅನ್ನುಹಂಗ ಬದಕತಿರತಾರ.

ವಿಶ್ವಸಂಸ್ಥೆಯವರು ಯೋಚನೆ ಮಾಡಿ ಮೊದಲು ದೈಹಿಕವಾಗಿ ಅಂತ ಇದ್ದವು ಮುಂದೆ ಮಾನಸಿಕ ತಗೊಂಡ್ರು, ಈಗ ಸಾಮಾಜಿಕವಾಗಿ ಚನ್ನಾಗಿರೋದು ಅಂತ ಮಾಡ್ತಾ ಇದಾರೆ. ದೈಹಿಕವಾಗಿ ಮಾನಸಿಕವಾಗಿ ಮತ್ತು ಸಾಮಾಜಿಕವಾಗಿ, ಒಬ್ಬ ಮನುಷ್ಯ ಕೇವಲ ದೈಹಿಕವಾಗಿ ಅಷ್ಟೇ ಸಶಕ್ತನಾಗಿದ್ರೆ ಅವನನ್ನ ಸಂಪೂರ್ಣ ಮಾನವ ಅಂತ ಕರಿಯಾಕ್ಕಾಗಲ್ಲ. ಯಾಕಂದ್ರೆ ಬೇರಡೆ ಪ್ರಾಣಿಗಳು ಮನುಷ್ಯನಿಗಿಂತೂ ಬಹಳ ಬಲಶಾಲಿಯಾಗಿರ್ತಾವೆ ದೈಹಿಕವಾಗಿ, ಅನೆ ಕುದುರೆ ಆಮೇಲಿಂದ ಬೇರೆ–ಬೇರೆ ಪ್ರಾಣಿಗಳು ನಮಗಿಂತಲೂ ಬಹಳ ಶಕ್ತಿಶಾಲಿಯಾಗಿರ್ತಾವೆ. ನಾವೆಂದು ಕೂಡ ಅವುಗಳಷ್ಟು ಗಟ್ಟಿಯಾಗಿರಲ್ಲಕ್ಕೆ ಸಾಧ್ಯವಿಲ್ಲ. ಹಾಗಾದ್ರೆ ಮಾನಸಿಕ ಆರೋಗ್ಯ ಪ್ರಾಪ್ತಿಮಾಡ್ಕೊಂಡ ಬಿಟ್ರೆ? ಶಾಂತವಾಗಿ ಬಿಟ್ರೆ ಸಾಕಲ್ಲಾ? ಇಲ್ಲಾ! ಅದು ಸಂಪೂರ್ಣ ಮಾನವನ ಲಕ್ಷಣವಲ್ಲ. ಯಾಕಂದ್ರೆ! ಎಲ್ಲಾ ಪ್ರಾಣಿ ಪಕ್ಷಿಗಳು ಮಾನಸಿಕ ಒಂದು ರೀತಿ ಸ್ವಸ್ಥವಾಗಿರ್ತಾವೆ, ನೋಡಿದಿರಿ? ಪಕ್ಷಿಗಳು ಪ್ರಾಣಿಗಳು ಎಷ್ಟು ಖುಷಿಯಾಗಿರ್ತಾವೆ. ಅದರಲ್ಲೂ ವಿಶೇಷವಾಗಿ ಪಕ್ಷಿಗಳು, ಏನ ಚಂದ ಹಾಡ್ತಿರ್ತಾವೆ, ಹಾರ್ತಿರ್ತಾವೆ, ಖುಷಿಯಾಗಿ ಒಂದಕ್ಕೊಂದು ಚಲ್ಲಾಟ ಮಾಡ್ತಿರ್ತಾವೆ, ಆನಂದ ಪಡ್ತಿರ್ತಾವೆ, ಸಾಮಾನ್ಯವಾಗಿ ಯಾವುದೇ ಪ್ರಾಣಿಗಾಗಿ ಪಕ್ಷಿಗಾಗಿ ಹುಚ್ಚು ಹಿಡಿದಿರೋದು ನೀವು ಕೇಳದಿರಾ? ಇಲ್ಲಾ. ಆದ್ರೂ ಪ್ರಾಣಿ ಪಕ್ಷಿಗಳಿಗೆ ಹುಚ್ಚು ಹಿಡಿದಿದೆ ಅಂತ ತುಂಬಾ ಯೋಚನೆ ಮಾಡಿದ್ರೆ, ಒಂದು ಪ್ರಾಣಿಗೆ ಹುಚ್ಚು ಹಿಡಿಯುತ್ತೆ ಯಾವ ಪ್ರಾಣಿ ಗೊತ್ತಾ? ನಾಯಿ ನಾಯಿಗೆ ಮಾತ್ರ ಹುಚ್ಚು ಹಿಡಿಯುತ್ತೆ ಯಾಕಗೊತ್ತಾ? ಇದು ಹುಚ್ಚನ ಸಮೀಪ ಇರುತ್ತೆ, ಬೇರೆ ಪ್ರಾಣಿ ಎಲ್ಲಕ್ಕಿಂತಲೂ ಈ ಹುಚ್ಚನ ಸಮೀಪ ಇರುತ್ತೆ ಅದಕ್ಕ ನಾಯಿಗೆ ಹುಚ್ಚು ಹಿಡಿಇತ್ತೆ. ಹಸುವಿಗೆ ಹುಚ್ಚು ಹಿಡಿಯೊಲ್ಲಾ, ಆನೆಗೆ ಹುಚ್ಚು ಹಿಡಿಯೊಲ್ಲಾ, ಅದಕ್ಕೆ ಮದಾ ಬರಬಹುದಷ್ಟೇ, ಅದು ಮೂರು ತಿಂಗಳಿಗೋ ನಾಕ ತಿಂಗಳಿಗೋ ಮದಬರಬಹುದು ಸ್ವಲ್ಪ ಎರಡು ದಿವಸ ಹುಚ್ಚುಚ್ಚಾಗಿ ಆಡಬಹುದಷ್ಟೇ. ಆದರೆ ಪಕ್ಷಿಗಳಗಂತೂ ಸಾಮಾನ್ಯವಾಗಿ ನಾವು ಹುಚ್ಚು ಪಕ್ಷಿಗಳನ್ನ ನಾವು ನೋಡ್ಲಿಕ್ಕೆ ಸಾಧ್ಯವಿಲ್ಲ. ಹಾಗಾದ್ರೆ ಮನುಷ್ಯನ ಸ್ಪೆಷಾಲಿಟಿ ಏನು? ಆರೋಗ್ಯ, ಮಾನಸಿಕ ಆರೋಗ್ಯ, ಇಷ್ಟೇ ಸಾಧ್ಯ ಇಲ್ಲಾ. ಸಾಮಾಜಿಕ ಆರೋಗ್ಯವಾಗಿರಬೇಕು, ಸಾಮಾಜಿಕವಾಗಿಯೂ ಕೂಡ ಸಂಬಂಧಗಳೂ ಕೂಡ ಚನ್ನಾಗಿರಬೇಕು. ಅಂತ ಹೇಳದ್ರು ವಿಶ್ವ ಆರೋಗ್ಯ ಸಂಸ್ಥೆಯವರು. ಆದ್ರೆ ಕೇಂದ್ರ ಆರೋಗ್ಯ ತಜ್ಞರು ಇನ್ನೂ ಮುಂದೆ ಹೋದ್ರು, ಇಲ್ಲಾ! ಸಮಾಜಿಕವಾಗಿಯೂ ಕೂಡಾ ಜೀವನ ನಡೆಸೋದ್ರಲ್ಲಿ ಮನುಷ್ಯನನ್ನು ಮೀರಿಸಿವೆ ಪ್ರಾಣಿಗಳು ಅಂತ ಹೇಳದ್ರು, ಕೊಕ್ಕರೆಗಳ ಸಾಲು, ಇರುವೆಗಳಲ್ಲಿ ಕಂಡಬರತಕ್ಕಂತ ಒಂದು ಚಾಕಚಕ್ಯತೆ ಏನಾದ್ರು ಭಾರವಾದ ವಸ್ತು ಬಿದ್ದಿದ್ರೆ ಬೇರೆ ಇರುವೆಗಳನ್ನೆಲ್ಲ ಕರಕೊಂಡು ಬಂದು ಅದನ್ನು ಹೊತ್ತಕೊಂಡ ಹೋಗಕ್ಕಂತಾ ಬುದ್ಧಿಮತ್ತೆ ಎಲ್ಲಿರುತೆ? ಆ ಮೆದುಳು ಅದಕ್ಕೆ? ಆ ಎಲ್ಲಿದ್ರೂ ಮಧುರತೆಯ

ಆವಾಸನೆ ಕಂಡ ಹಿಡಿತಕ್ಕಂತಾ ಮೂಗು ಚುರುಕಾದ ಮೂಗು, ಎಲ್ಲಿದೆ ಆ ಮೂಗು? ಇರುವೆಯಲ್ಲಿ! ನಮ್ಮ ಮೂಗಿನ ತುದಿಯ ಹತ್ತನೆಯ ಒಂದಭಾಗದಷ್ಟು ಇಲ್ಲಾ ಅದು. ಆದ್ರೆ ಎಂಥಾ ಅದ್ಭುತವಾದ ಮೂಗು, ಎಂಥಾ ಅದ್ಭುತವಾದ ಮೆದಳು ಮತ್ತೆ ಎಂಥಾ ಸಾಂಘಿಕ ಜೀವನ. ಮನುಷ್ಯ ಬದುಕ್ತಾ ಇರೋದೆ ವಿಶೇಷ ಅಲ್ಲ. ಯಾಕಂದ್ರೆ ಮನುಷ್ಯ ಎಲ್ಲಾ ಪಕ್ಷಾ ಮಾಡ್ಕೊಂಡಿದಾನೆ, ರಾಜಕೀಯ ನಡಸ್ತಾನೆ, ಎಲ್ಲಾ ಶಾಲಾ ಕಾಲೇಜುಗಳನ್ನ ಕಟ್ಟಿದಾನೆ. ಎಲ್ಲಾ ಮಾಡಿದ್ರೂ ಕೂಡ ನೆಮ್ಮದಿಯನ್ನ ಕಳಕೊಂಡಿದಾನಲ್ಲ! ಹಾಗಾದ್ರೆ ಮುಂದೆ ಹೇಳಿದ್ರು ಅಮೇರಿಕದ ಒಬ್ಬ ಪ್ರಕೃತಿ ಚಿಕಿತ್ಸಜ್ಞ ಹೆನ್ರಿ ಲಿಂಗ್ಲರ್ ಅಂತಿದ್ರು, ಅವ್ರು ಬಾಳ ವಿಶೇಷ. ನಮ್ಮ ಭಾರತೀಯ ಒಬ್ಬ ಯಾರಾದ್ರು ಈ ಮಾತ ಹೇಳದ್ರ ನಮಗೆ ವಿಶೇಷ ಆಗ್ತಿರ್ಲಿಲ್ಲಾ. ಹೆನ್ರಿ ಲಿಂಗ್ಲರ್ ಅಂತಕ್ಕಂತವರು ಹೇಳ್ತಾರೆ, 'ಆಧ್ಯಾತ್ಮಿಕ ಆರೋಗ್ಯ ಒಬ್ಬ ಮನುಷ್ಯಾ ಸಂಪೂರ್ಣ ಮಾನವನಾಗಬೇಕಾದ್ರೆ ಕೇವಲ ದೈಹಿಕ ಅಲ್ಲ. ಮಾನಸಿಕ ಅಲ್ಲಾ, ಸಾಮಾಜಿಕಷ್ಟೇ ಅಲ್ಲ. ಇನ್ನೊಂದು ಕೊನೆದ್ಯಾವ್ದು? ಆಧ್ಯಾತ್ಮಿಕ ಆರೋಗ್ಯ. ಇದನ್ನ ನಮ್ಮ ಋಷಿಮುನಿಗಳು ಯೋಚ್ನೆ ಮಾಡಿದ್ರು, ಬಹಳ ಹಿಂದೇನೇ ಹೇಳುತ್ತಿದ್ದವರು. "ಉದಾರಚರಿತಾನಾಂ, ವಸುದೈವ ಕುಟುಂಬಕಂ." ಒಬ್ಬ ಉದಾರ ಚರಿತೆ ಇದ್ದಂತವನಿಗೆ, ಒಬ್ಬ ಆಧ್ಯಾತ್ಮ ಜೀವಿಯಾದಂತವನಿಗೆ ಭೂಮಿಯೇ ಕುಟುಂಬ ಆಗುತ್ತೆ, ಒಂದು ಊರಲ್ಲ ಒಂದು ಜಿಲ್ಲೆಯಲ್ಲ ಒಂದುರಾಜ್ಯ ಅಥವಾ ರಾಷ್ಟ್ರ ಅಲ್ಲ, ಇಡೀ ಭೂಮಿಯೇ ಅವನಿಗೆ ಕುಟುಂಬ ಆಗುತ್ತೆ. ಇದು ಆಧ್ಯಾತ್ಮಿಕ ಆರೋಗ್ಯ. ಬಸವಣ್ಣನವರು ಹೇಳ್ತಾರೆ ನೋಡಿ, ನಿಮಗೆಲ್ಲಾ ಗೊತ್ತಿರೋ ವಚನಾ ಅದು, 'ಇವನಾರವ-ಇವನಾರವ-ಇವನಾರವ ಎಂದೆನಿಸದಿರಯ್ಯಾ ಇವನಮ್ಮವ-ಇವನಮ್ಮವ-ಇವನಮ್ಮವ ಎಂದೆನಿಸಯ್ಯಾ ಕೂಡಲಸಂಗಮದೇವಾ ನಿಮ್ಮ ಮನೆಯ ಮಗನೆಂದೆನಿಸಯ್ಯಾ' ಜಾತಿಯಿಂದಾಗಲಿ, ವರ್ಣದಿಂದಾಗಲಿ, ವರ್ಗದಿಂದಾಗಲಿ, ಲಿಂಗದಿಂದಾಗಲಿ ಇವನಾರು, ಇವನಾರು ಅಂತ ಪ್ರಶ್ನೆ ಮಾಡಬೇಡ? ಇವನಮ್ಮವ. ಇವನಮ್ಮವನು ಇವನುನಮ್ಮವನು ಅಂತಾ ಅಂದಕೊಳ್ಳಿ. ಇದನ್ನೇ ಋಷಿ 'ವಸುದೈವ ಕುಟುಂಬಕಂ' ಅಂತಾ ಎಚ್ಚರಿಸಿದ್ರು. ಭೂಮಿಯೇ ಪರಮಾತ್ಮನ ಒಂದು ಮಹಾಮನೆ. ಇಲ್ಲಿರತಕ್ಕಂತಾ ಎಲ್ಲರೂ ಸಹೋದರರು. ಇದು ಆಧ್ಯಾತ್ಮಿಕ ಆರೋಗ್ಯ. ಆವಾಗ ಅವನು ಯಾರನ್ನು ಕೊಲ್ಲಬೇಕು, ಅಂತ ಅವನು ಬಯಸೋದಿಲ್ಲ. ಇನ್ನೊಬ್ಬರ ಹಣವನ್ನು ಅನ್ಯಾಯವಾಗಿ ಕಿತ್ಕೊಂಡು ತಾನ ಬದುಕಬೇಕು, ಐಶಾರಾಮ ಜೀವನ ನಡೆಸ್ಬೇಕು ಸುಖದ ಸುಪ್ಪತ್ತಿಗೆಯಲ್ಲಿ ಓಲಾಡಿ ರೋಗಬರಸ್ಕೋಬೇಕಂತ ಯಾರೂ ಬಯಸೋದಿಲ್ಲಾ. ಯಾರು ಸ್ವಾರ್ಥಿಯಾಗಿರ್ತಾನೋ, ಯಾರು ಸಂಕುಚಿತ ಮನಸ್ಕನಾಗಿರ್ತಾನೋ, ಅವನು ಮಾತ್ರ ಇಂಥಾ ರೀತಿಯಲ್ಲಿ ಯೋಚನೆ ಮಾಡ್ಲಿಕ್ಕೆ ಸಾಧ್ಯ. ಆದ್ದರಿಂದ ಬಂಧುಗಳೇ ಆಧ್ಯಾತ್ಮಿಕ ಆರೋಗ್ಯ ಅನ್ನುವಂಥದ್ದು ಅತ್ಯಂತ

ಮುಖ್ಯವಾಗಿ ನಾವೆಲ್ಲೂ ರೂಢಿಸಿಕೊಳ್ಳಬೇಕಂತಾ ಆರೋಗ್ಯವಾಗಿದೆ. ಆಧ್ಯಾತ್ಮಿಕ ಆರೋಗ್ಯದ ಒಳಗಡೆ ಎಲ್ಲವೂ ಬಂದ ಬಿಡುತ್ತೆ ಇದನ್ನ ನಮ್ಮ ಶರಣ್ರು ಎಂಥಾ ಅದ್ಭುತವಾಗಿ ಚಿಂತನೆ ಮಾಡಿದ್ರು ನೋಡಿ. ಇನ್ನೂ ವಿಶ್ವ ಆರೋಗ್ಯ ಸಂಸ್ಥೆಯವರು ಸ್ಪಿರ್ಯುಚ್ಯುವೆಲ್ ಹೆಲ್ತ ಅಂತಾ ಸೇರಿಸಕೊಂಡಿಲ್ಲ, ಯಾಕಂತಂದ್ರೆ ಅವರಿಗೇನ ಭಯಾ ಇರಬೇಕಂದ್ರೆ, ಸ್ಪಿರ್ಯುಚ್ಯುವೆಲ್ಲ ಅಂತ ಅಂದ ಮೇಲೆ ರೀಲಿಜೀಯನ್ ಬಂದ ಬಿಡುತ್ತೆ ರಿಲಿಜಿಯನ್ಸ ಬರ್ತಾವೆ. ಆದ್ದರಿಂದ ಯಾವ ಸ್ಪಿರ್ಯುಚ್ಯುವೆಲ್, ರಿಲಿಜಿಯನ್‌ಗೆ ಸೇರ್ರ್ಕೋಬೇಕು ಕ್ರೈಸ್ತ ಧರ್ಮ ಇದೆ, ಇಸ್ಲಾಂ ಧರ್ಮ ಇದೆ, ಹಿಂದೂ ಸಂಸ್ಕೃತಿ, ಹಿಂದೂ ಧರ್ಮ ಅಂತಾ ನೀವೇನ ಕರೀತಿರಾ ಅದಿದೆ. ಬೌದ್ಧ ಧರ್ಮಾ ಇದೆ. ಇಂತದ್ರ ನಡುವೆ ನಾವೆಲ್ಲ ಸೇರ್ರ್ಕೋಬೇಕು ಅದಕ್ಕೆ ಬೇಡ ಈ ಸ್ಪಿರ್ಯುಚ್ಯುವೆಲ್ಲವೇ ಬೇಡಾ ಅಂತಾ ತೀರ್ಮಾನ ಮಾಡಿದ್ದಂಗಿದೆ.

ಆದ್ರೆ ಬಂಧುಗಳೇ ಯೋಚನೆ ಮಾಡಿ, ಸ್ಪಿರ್ಯುಚ್ಯುವ್ಯಾಲಿಟಿ (Spirituality) ಎನ್ನುವಂತದ್ದು, ಆಧ್ಯಾತ್ಮಿಕತೆ ಅನ್ನತಕ್ಕಂತಾ ಯಾವುದೇ ಒಂದು ಧರ್ಮಕ್ಕೆ ಸಂಬಂಧ ಪಟ್ಟದ್ದಲ್ಲ. ಹಾಲು ಗೊತ್ತಿದೆ ನಿಮಗೆಲ್ಲ. ಹಾಲು ಬೇರ್ಬೇರೆ ಹಸುವಿನ ಹಾಲು ಬೇರ್ಬೇರೆ ತರ ಇರಬಹುದು. ಅಲ್ವಾ! ಝರ್ಸಿ ಆಕಳ ಹಾಲ ಒಂಥರಾ ಇರಬಹುದು. ನಾಟಿ ಹಸುವಿನ ಹಾಲ ಒಂಥರಾ ಇರಬಹುದು. ಹುಲ್ಲು ತಿಂದಂತಾದ್ದು ಪಾರ್ಥೇನಿಯಂ ತಿಂದಂತಾದ್ದು, ಬೇರೆ-ಬೇರೆ ಹಸುಗಳ ಹಾಲಿನಲ್ಲೂ ಸ್ವಲ್ಪ ಭಿನ್ನತೆ ಬರಬಹುದು. ಆದ್ರೆ ತುಪ್ಪಾ ಅಂತ್ ಆದಾಗ. ಅದಕ್ಕೆ ಯಾವುದೆ ರೀತಿಯಾಗಿರತಕ್ಕಂತ ಭಿನ್ನ ಭೇದವನ್ನ ತೆಗಿಲಿಕ್ಕೆ ಸಾಧ್ಯವಿಲ್ಲ. ಬೆಣ್ಣೆ ತುಪ್ಪದಲ್ಲಿ ಇಂಥ ಬೆಣ್ಣೆ ಇಂಥಾ ತುಪ್ಪಾ ಅಂತಾ ತೆಗೆಯೋದ ಕಷ್ಟಾ ಆಗಬಹುದೇನೋ ಅಂತ ಅನ್ಸುತ್ತೆ. ಹಾಗೆ! ಈ Spirituality ಅಂತಕ್ಕಂತದ್ದು ಎಲ್ಲಾ ಧರ್ಮಗಳ ಸಾರ, ಎಲ್ಲಾ ಯೋಗಗಳ ಸಾರ. ಎಲ್ಲಾ ಆಧ್ಯಾತ್ಮಿಕ ಜೀವಿಗಳ ಒಟ್ಟು ಸಾರವೇ ಅಧ್ಯಾತ್ಮ ಜೀವನ. ಅಂಥಹ ಅಧ್ಯಾತ್ಮ ಜೀವನವನ್ನು ನಡಿಸಿದ್ದೇ ಆದ್ರೆ, ಎಲ್ಲಾ ಆರೋಗ್ಯವೂ ಪ್ರಾಪ್ತಿಯಾಗುತ್ತೆ. ಅದನ್ನ ೧೨ನೇ ಶತಮಾನದ ಶರಣ್ರು ಎಷ್ಟು ಅದ್ಭುತವಾಗಿ ಚಿಂತಿಸಿದ್ರು, ಚಿಂತನೆ ಮಾಡಿದ್ರು ಅಂತ ಅಂದ್ರೆ! ಅಕ್ಕ ಮಹಾದೇವಿಯವರು ತಮ್ಮ ಒಂದು ವಚನದಲ್ಲಿ ಇದನ್ನೇ ಹೇಳ್ತಾರೆ. ಇದು ಒಂದು ಪರಿಚಿತವಾದ ವಚನ ಅಲ್ಲಾ. ಇನ್ನು ಪರಿಚಿತವಾದ ವಚನಾ ಇದ್ರು ಕೂಡಾ ಈ ವಚನದ ಕಡೆ ತುಂಬಾ ಜನ ಗಮನಾ ಹರಿಸಿಲ್ಲಾ. ಅಂಥಾ ಒಂದು ವಿಶೇಷವಾದ ವಚನಾ ತುಂಬಾ ಸರಳವಾಗಿತಕ್ಕಂತಾ ವಚನ ತುಂಬಾ ಸರಳವಾಗಿರುವಂತ ವಚನ. ಮಹಾದೇವಿಯಕ್ಕ ಹೇಳ್ತಾಳೆ, "ನಡೆಶುಚಿ ನುಡಿಶುಚಿ ತನುಶುಚಿ ಮನಶುಚಿ ಭಾವಶುಚಿ ಇಡೀ ಪಂಚತೀರ್ಥವನ್ನೊಳಗೊಂಡು ಮರ್ತ್ಯದಲಿದಿಂದ ನಿಮ್ಮ ಶರಣರ ತೋರಿ ಎನ್ನನ್ನೂಳಹಿಕೊಳ್ಳು ಚೆನ್ನಮಲ್ಲಿಕಾರ್ಜುನಾ" ಎಂಥಾ ಅದ್ಭುತವಾದಂತಹ ವಚನವಿದು.!

ಇಂಗ್ಲೀಷಿನಲ್ಲಿ ಒಂದು ಮಾತಿದೆ, ನಿಮಗೆಲ್ಲ ಗೊತ್ತಿರಬೇಕ ಅದ. ಬಾಳ ಜನ ಜನಿತವಾದ ಮಾತು, 'Cleeneness is Next to Gardiness', (ಕ್ಲಿನಿನೆಸ್ ಇಜ್ ನೆಕ್ಸಟು ಗಾರ್ಡಿನೆಸ್) Cleeneness ಅಂದ್ರೆ ಸ್ವಚ್ಛತೆ, is Next to Gardiness ಅದು ಪರಮಾತ್ಮನಿಗೆ ಅತ್ಯಂತ ಸಮೀಪವಾಗಿರತಕ್ಕಂತದ್ದು. ಯಾವದು? ಸ್ವಚ್ಛತೆ. ಸ್ವಚ್ಛತೆ ಪಾಶ್ಚಿಮಾತ್ಯರು ತುಂಬಾ ಇಷ್ಟ ಪಡತಕ್ಕಂತ ಗುಣಾ ಅದು. ಹಾಗಾಗಿನೇ ಅವರು ಸ್ವಚ್ಛತೆಗೆ ಬಹಾಳ ಮಹತ್ವಾ ಕೊಟ್ರು, ಭಾರತೀಯರು ಸ್ವಚ್ಛತೆಯ ಕಡೆಗೆ ಗಮನ ಸ್ವಲ್ಪ ಕಡಿಮಿನೇ ಕೊಟ್ಟಿದಾರಂತ ಹೇಳಬೇಕೇನೋ. ಇವರಿಗೆ ಮುಖ್ಯ ಸತ್ಯದ ಕಡೆ ಗಮನಾ ಹೆಚ್ಚು. 'ಸತ್ಯಮೇವ ಜಯತೇ' ಅಂತ ಇವರ ಇಟ್ಕೊಂಡಿದ್ದಾರೆ. ಧ್ಯೇಯ ವಾಕ್ಯ. 'Cleeneness is Next to Gardiness' ಅಂತ ಅಂದ್ಕೊಂಡಿದಾರೆ. ಅತ್ಯಂತ ಪರಮಾತ್ಮನಿಗೆ ಸಮೀಪವಾದುದು. ಹಾಗಾದ್ರೆ ಅದನ್ನೇ ಆ ಸ್ವಚ್ಛತೆ ಮಹಾದೇವಿಯಕ್ಕ ಆರೋಗ್ಯ ಸಂಪೂರ್ಣ ಪರಿಕಲ್ಪನೆಯನ್ನ ಕೊಟ್ಟಿದ್ದಾಳೆ. ಎಷ್ಟು ಅದ್ಭುತವಾಗಿ ಹೇಳ್ತಾಳೆ! ನೋಡಿ. ನಡೆಶುಚಿ, ನಡೆಯಲ್ಲಿ ಸ್ವಚ್ಛತೆ, ಏನ ನುಡಿತಾನೇ ಅದನ್ನೇ ನಡಿತಾನೆ ಅಥವಾ ಅಂವ ಅದೇನ ನಡಿತಾನೋ ಅದನೇ ನುಡಿತಾನೆ. ಸುಳ್ಳ ಹೇಳೋದಿಲ್ಲಾ ಅಂತ ಅರ್ಥ. ನುಡಿಶುಚಿ ಅಂದ್ರೆ ಅತಿಯಾಗಿ ಮಾತ್ನಾಡೋದಿಲ್ಲ ಅಥವಾ ವ್ಯರ್ಥವಾಗಿ ಮಾತಾಡೋದಿಲ್ಲ, ಹರಟೆ ಹೊಡೆಯೋದಿಲ್ಲ. ಶುಚಿ ಅಂದ್ರೆ ನುಡಿಯಲ್ಲಿ ಶುಚಿ, ಮೃದುವಾಗಿ ಬಸವಣ್ಣವರು ಹೇಳ್ತಾರಲ್ಲಾ ನುಡಿದರೆ ಮುತ್ತಿನ ಹಾರದಂತಿರಬೇಕು. ಆ ರೀತಿಯಲ್ಲಿ ಸ್ಪಟಿಕದ ಶಿಲಾಕೆಯಂತೆ ಒಳಗೆ ಹೊರಗೆ ಶುದ್ಧವಾಗಿ ನುಡಿತಾನೆ, ಇದು ನುಡಿ ಶುಚಿ. ಇದು ಕೂಡ ಆರೋಗ್ಯವೇ. ಇದು ಸಾಮಾಜಿಕ ಆರೋಗ್ಯ ಅಂತೆ. ನಡೆ-ನುಡಿ ಸ್ವಚ್ಛವಾಗಿದ್ರೆ ಸಮಾಜದಲ್ಲಿ ನಮಗೆ ಒಂದು ಒಳ್ಳೆಯ ಸ್ಥಾನ ಅಥವಾ ಒಂದು ಭರವಸೆ ನಂಬಿಕೆ ಬರುತ್ತೆ. ಸುಳ್ಳ ಹೇಳಬೇಕಂತ ನೀವ ಯಾರ್ನಾದ್ರೂ ನಂಬತೀರಾ? ಈ ರಾಜಕಾರ್ಣಿಗಳು ಬರ್ತಾರೆ, ಬೇಕಾದಷ್ಟು ಭಾಷಣ ಮಾಡ್ತಾರೆ, ನಿಮ್ಮ ರಸ್ತೆಗಳಿಗೆ ಬೆಳ್ಳಿಯನ್ನೇ ಹಾಕ್ತೀವಿ ಅಂತಾರೆ, ಎಲ್ಲಿ ತನಕ? ಚುನಾವಣೆ ಮುಗಿಯೋ ತನಕ. ಆಮ್ಯಾಲೆ ಡಾಂಬರಕ್ಕೂ ಗತಿ ಇಲ್ಲಾ, ಆತರಾ ಆಗುತ್ತಲ್ಲಾ? ಅಂದ್ರೆ, ಇದು ನುಡಿ ಶುಚಿ ಅಲ್ಲ ಇದು. ನುಡಿ ಶುಚಿ ಅಂದ್ರೆ ಏನು? ನನ್ನ ಕೈಯಿಂದ ಏನಾಗುತ್ತೊ ಅಷ್ಟೇ. ನನ್ನ ಕೈಲಿ ಏನ ಸಾಧ್ಯವೋ ಅದನ್ನ ಮಾಡೋದಕ್ಕೆ ಒಪ್ಪಿಕೊಳ್ಳೊದು, ಅದನ ಪೂರ್ಣಮಾಡೋದು. ನಡೆಶುಚಿ-ನುಡಿಶುಚಿ. ಇನ್ನೂ ತನುಶುಚಿ ಅಂದ್ರೆ ಅದು ದೈಹಿಕ ಆರೋಗ್ಯ ಬಹಳ ಜನಾ ದೈಹಿಕ ಆರೋಗ್ಯದ ವಿಷಯದಲ್ಲಿ ತಪ್ಪು-ತಪ್ಪ ತಿಳಕೋತಾರೆ. ನೋಡ್ಲಿಕ್ಕೆ ಒಂದಾರಡಿ ಉದ್ದ ಆಮೇಲೆ ಒಂದ ತೋಂಭತ್ತ ಕೆ.ಜಿ. ತೂಕ, ಆಮ್ಯಾಲೆ ಚನ್ನಾಗಿ ಊಟ ಮಾಡ್ತಾನೆ, ಚನ್ನಾಗಿ ನಿದ್ರೆ ಮಾಡ್ತಾನೆ, ಇವನು ಆರೋಗ್ಯವಂತಾ? ಕೊನೆಗೆ ಇಪ್ಪತ್ತು ವರ್ಷಕ್ಕೂ, ಮೂವತ್ತು ವರ್ಷಕ್ಕೂ ನಲವತ್ತ ವರ್ಷಕ್ಕೂ

ಹಾರ್ಟ್ ಆಗಿ ಹೋಗಿಬಿಡ್ತಾನೆ. ಅಂದ್ರೆ ಒಳಗಡಿ ದ್ವೇಷ ಇರುತ್ತೆ ಮೇಲ್ಗಡೆ ಏನ ಕಾಣ್ಸೊಲ್ಲಾ. ಅಂದ್ರೆ ಒಳಗಡೆ ದ್ವೇಷ ಇರ್ತದೆ. ಅದಕ್ಕೆ ನಾವಿಲ್ಲಿ ತಿಳ್ಕೋಬೇಕ! ದೈಹಿಕ ಆರೋಗ್ಯ ಅಂತಂದ್ರೆ ದೇಹ ದಪ್ಪ ಮಾಡೋದಲ್ಲಾ ಅಥವಾ ದೇಹಾ ಉದ್ದಾ ಆಗೋದಂತನೂ ಅಲ್ಲ. ಪ್ರಕೃತಿದತ್ತವಾಗಿ ಎಷ್ಟು ಇರ್ತದ ಇರ್ಲಿ. ಆದ್ರೆ ದೈಹಿಕ ಆರೋಗ್ಯ ಅಂದ್ರೆ ಅದರ ಅರ್ಥ ನಮ್ಮ ಎಲ್ಲಾ ಕ್ರಿಯೆಗಳು ಸೂತ್ರವಾಗಿ ನಡೆಯುವ ಹಾಗೆ ನಮ್ಮ ದೇಹ ಹಗುರವಾಗಿರಬೇಕು. ನಮ್ಮ ದೇಹ ಸ್ವಚ್ಛವಾಗಿರಬೇಕು. ಕುತುಕೊಳ್ಳೋದಕ್ಕೆ, ಏಳೋದಕ್ಕೆ ಕಷ್ಟಪಡಬಾರ್ದು, ಆಮೇಲಿಂದಾ ಎದೆಗಿಂತಲೂ ಒಂದೆರಡು ೫ ಇಂಚು ಆರ ಇಂಚು ಹೊಟ್ಟೆ ಮುಂದಕ್ಕ ಬಂದಿರಬಾರ್ದು ಗೊತ್ತಾಯಿತಲ್ಲಾ? ಎಷ್ಟಿರಬೇಕು ಎಲ್ಲಾ ಅಂಗಾಂಗಳು ಹೇಗಿರಬೇಕು ಹಾಗೆ ಜೊತೆಗೆ ನಮ್ಮ-ನಮ್ಮ ಕಾಯಕ ಕೆಲಸಕ್ಕ ನಮ್ಮ ಶರೀರ ಅನುಕೂಲ ಆಗುವ ಹಾಗೆ, ಆಮೇಲೆ ಒಳಗಡೆ ಯಾವುದೇ ರೀತಿಯ ಕಾಯಿಲೆ ಬರದಿರೋ ಹಾಗೆ ನಮ್ಮ ಶರೀರವನ್ನ ಆರೋಗ್ಯ ಪೂರ್ಣ ಇಟ್ಕೋಬೇಕು. ಇದು ತನುಶುಚಿ. ಯಾವುದೇ ಒಂದ ಕಾಯಿಲೇ ಒಂದೇ ದಿವಸದಲ್ಲಿ ನಮ್ಮನೇನ ಅಟ್ಯಾಕ ಮಾಡೋದಿಲ್ಲ. ಒಂದೇ ದಿವಸದಲ್ಲಿ ಹೃದಯಾಘಾತಾ ಆಗೋದಿಲ್ಲ, ಒಂದೇ ದಿವಸದಲ್ಲಿ ಕ್ಯಾನ್ಸರ ಬರೋದಿಲ್ಲಾ. ಆದ್ರೆ ನಮ್ಮ ಶರೀರವನ್ನ ನಾವು ಗಮನಿಸೋದೆ ಇಲ್ಲಾ. ಒಳಗಡೆ ಎಷ್ಟೋ ದಿವಸದಿಂದ ದ್ವೇಷ ಆಗ್ತಾನೇ ಇರ್ತದೆ, ಅದನ್ನ ನಾವ್ ಗಮನಿಸಬೇಕು, ಗಮನಿಸಿ ನಾವು ಅದನ್ನ ಪರಿಹಾರ ಮಾಡ್ಕೊಬೇಕ. ಇದು ತನುಶುಚಿ.

ಮನಶುಚಿ ಮನಸ್ಸು ನಿರ್ಮಲವಾಗಿರಬೇಕು. ದೇಹವನ್ನೇನೋ ನಾವ್ ಸೋಪ ಹಚ್ಚಿ ಸ್ನಾನಾ ಮಾಡಿಸ್ತೀವಿ, ಕೊಬ್ಬರಿ ಎಣ್ಣೆ ಹಚ್ಚಿ ಮಸಾಜ್ ಮಾಡ್ತೀವಿ, ಮತ್ತೆನೋ-ಮತ್ತೇನೋ ಮಾಡಿಕೊಳ್ಳತಿರ್ತೀವಿ. ಆದ್ರೆ ಮನಸ್ಸಿನ ಆರೋಗ್ಯಕ್ಕೆ ಏನ ಮಾಡಬೇಕು. ಮನಸ್ಸು ಯಾರ ಕೈಗೂ ಸಿಗೋದಲ್ಲಾ, ಯಾವ ಸೋಪಿನಿಂದಲೂ ತೊಳ್ಯಾಕ ಬರೂದಿಲ್ಲ. ಹಾಗಾದ್ರೆ ಮಾನಸಿಕ ಆರೋಗ್ಯ ಅಂದ್ರೆ ಏನು? ಹ್ಯಾಗೆ? ಮನಸ್ಸನ್ನು ಶುಚಿಗೊಳಿಸೋದು ಹೇಗೆ? ಚೆನ್ನಬಸವಣ್ಣವರು ಹೇಳ್ತಾರೆ, ಮನವು ಮೈಲಿಗೆಯಾದರೆ, ಏನ ಮಾಡಬೇಕು ಅಂತಾರೆ ಕೂಡಲಚೆನ್ನಸಂಗನ ಶರಣರ ಅನುಭಾವ ಮಾಡುವುದು. ಶರಣರ ಸಂಗದಲ್ಲಿ ಸತ್ಸಂಗದಲ್ಲಿ ಸದ್ಭಕ್ತರ ಗೋಷ್ಠಿಯಲ್ಲಿ ಈ ಮನಸ್ಸನ್ನು ತೊಳಕೊಳ್ಳೋಕೆ ಬರುತ್ತೆ. ಎಲ್ಲಿ ಪ್ರೀತಿ ಇರ್ತದೋ. ಎಲ್ಲಿ ಭಕ್ತಿ ಇರ್ತದೋ. ಎಲ್ಲಿ ಒಂದು ರೀತಿ ಆನಂದ ಇರ್ತದೋ ಅಲ್ಲಿ ನಾವು ಹೋಗಿ ಕೂತ್ರೆ ಅಂತಂದ್ರೆ ನಮ್ಮ ಮನಸ್ಸು ಸ್ವಚ್ಛವಾಗುತ್ತೆ. ಇದು ಮನಶುಚಿ. ಅದಕ್ಕೆ ಶರಣ್ರು ಎಷ್ಟರ ಮಟ್ಟಿಗೆ ಅಂತಂದ್ರೆ ನೀನು ಕಾಡಿನಲ್ಲಿ ಕೂತ್ಕೊಂಡು ಹತ್ತಾರು ವರ್ಷ ಕೋಡಗಲ್ಲಿನ ಮೇಲೆ ತಪಸ್ಸು ಮಾಡೋದಕ್ಕಿಂತಲೂ ಶರಣರ ಸಂಗದಲ್ಲಿರು ಸಾಕು. ಅರಘಳಿಗೆ ಶರಣರ ಸಂಗದಲ್ಲಿ ಇದ್ದು ಬಿಡು, ನಿನ್ನ ಉದ್ಧಾರ

ಸಾಧ್ಯವಾಗುತ್ತೆ. ಯಾಕಂದ್ರೆ ಅವರ ಮಾತು ನಡೆ-ನುಡಿ ಕೃತಿ ಎಲ್ಲವೂ ಒಂದುರೀತಿ ನಮ್ಮನ್ನು ಉದ್ಧಾರ ಮಾಡುವಂತಾ ಮಾರ್ಗದರ್ಶಕವಾಗಿರುತ್ತೇ, ಆದ್ದರಿಂದ ಅಂತವರ ಸಂಗವನ್ನ ಮಾಡು. ಆವಾಗ ಮನಸ್ಸು ಸ್ವಚ್ಛ ಆಗುತ್ತೆ.

ಭಾವಶುಚಿ ಈ ನಾಲ್ಕು ಸ್ವಚ್ಛತೆಗಳು ಶುಚಿತ್ವ ಅಳವಟ್ರೆ ಭಾವಶುಚಿ ಇದ್ದೆ ಇರುತ್ತೆ. ಭಾವವೇ ಶುಚಿಯಾಗಿಬಿಟ್ರೆ ಈ ನಾಲ್ಕು ರೀತಿಯ ಸುಚಿತ್ರ ನಡೆ-ನುಡಿ-ತನು-ಮನ ಶುಚಿ ನಮಗೆ ಪ್ರಾಪ್ತಿಯಾಗುತ್ತೆ. ಆದ್ದರಿಂದ ಈ ಭಾವ ಶುಚಿ ಅನ್ನುವಂತದ್ದು ಆಧ್ಯಾತ್ಮಿಕ ಆರೋಗ್ಯವನ್ನು ಹೇಳ್ತಾ ಇದೆ. 'ಯದ್ಭಾವಂ ತದ್ಭವತಿ' ಅಂತ ಹೇಳ್ತಾನೆ ಬಸವಣ್ಣ. ನಮ್ಮ ಭಾವ ಹೇಗಿದೆಯೋ ಆಗೆ ನಮಗೆ ಘಟನೆಗಳು ಸಂಭವಿಸ್ತಾವೆ. ನಾನು ಮನಸ್ಸಿನಲ್ಲಿ ಒಂದಿಟ್ಕೊಂಡು ಅಥವಾ ಭಾವದಲ್ಲಿ ದುರ್ಭಾವ ಇಟ್ಕೊಂಡು ಮೇಲೆ ಏನೋ ಒಂದು ನಾಟ್ಕಾ ಮಾಡಾಕ ಹೋದ್ರೂನೂ ಕೂಡಾ ಅದು ಗೊತ್ತಾಗಿಬಿಡತ್ತೆ. ಅದಕ್ಕೆ ಭಾವಶುಚಿ ಅಂತಂದ್ರೆ ಹೃದಯ ಸಂಪೂರ್ಣವಾಗಿ ಶುಚಿಯಾಗತಕ್ಕಂತದ್ದು. ಈ ವಯಸಿನಲ್ಲಿಯೂ ಕೂಡ ಕೆಟ್ಟದ್ದನ್ನು ಬಯಸೋದಿಲ್ಲ ಇನ್ನೊಬ್ರಿಗೆ ಇದು ಭಾವಶುಚಿಯ ಲಕ್ಷಣ. ಕನಸ್ಸಿನಲ್ಲೂ ಕೂಡಾ ಇನ್ನೊಬ್ರಿಗೆ, ಕೆಟ್ಟದ್ದನ್ನ ಬಯಸೋದಿಲ್ಲಾ. ಅವನಿಗೆ ದುಃಸ್ವಪ್ನಗಳು ಬೀಳೋದಿಲ್ಲಾ. ದುಷದಟದುರಾಲೋಚನೆಗಳು ಬರೋದಿಲ್ಲಾ, ಒಂದು ಪಕ್ಷ ಆವಾಗಾವಾಗ ಈ ಸಮಾಜದ, ಪರಿಸರದ ದ್ವೇಷದಿಂದ ಅದರ ಒಂದು ಸಹವಾಸದಿಂದ ಬಂದ್ರೂ ಕೂಡಾ ಅದನ್ನು ಅಥವಾ ಅವುಗಳನ್ನು ಸುಲಭವಾಗಿ ನಿಯಂತ್ರಿಸಬಲ್ಲ. ಇಂತಹ ಒಂದು ಶಕ್ತಿ ಅವನಿಗಿರತ್ತೆ. ಆದ್ದರಿಂದ ನೀವು ತಿಳ್ಕೋಬೇಕು ಬಂಧುಗಳೇ! ಈ ಭಾವಶುಚಿಯಾಗಿರಬೇಕು ಅಂತಂದ್ರೆ ನಮ್ಮ ಆಲೋಚನೆಗಳು ಬಹಳ ವಿಶಾಲವಾಗಿರಬೇಕು. ಅಧ್ಯಯನ ಸಾಧನೆ ಜೊತೆಗೆ ಎಲ್ಲಾ ಜನರ ಜೊತೆ ನಾವು ಹೊಂದಿಕೊಂಡು ಹೋಗತಕ್ಕಂತದ್ದನ್ನ ನಾವು ಅಭ್ಯಾಸ ಮಾಡಿಕೊಳ್ಳಬೇಕು. ದೇಶ ಭಾಷೆ ಸಂಸ್ಕೃತಿ ಎಲ್ಲವನ್ನು ದಾಟಿ, ಎಲ್ಲವನ್ನು ಮೀರಿ ಏನು ಹೇಳ್ತಾರಲ್ಲಾ, ಕುವೆಂಪು ಹೇಳ್ತಾರೆ, 'ಓ ನನ್ನ ಚೇತನ ಆಗು ಅನಿಕೇತನ, ಆಗು, ನೀ ಅನಿಕೇತನ ಆಗು'. 'ಎಲ್ಲೂ ಯಾವ ಮನೆಗಳಿಗೂ ಅಂಟಕೋಬೇಡ. ಯಾವ ದೇಶಕ್ಕೂ ಅಂಟಕೋಬೇಡ'. 'ನೂರ ಮತದ ಹೊಟ್ಟ ತೂರಿ ಎಲ್ಲ ತತ್ತ್ವದೆಲ್ಲೆ ಮೀರಿ ನಿರ್ದಿಗಂತವಾಗಿ ಏರಿ, ಓ ನನ್ನ ಚೇತನ, ಆಗು ನೀ ಅನಿಕೇತನ'. ಇದು ಭಾವ ಶುಚಿತ್ವ, ಆ ಭಾವಾ ವಿಸ್ತರಣೆ ಆಗ್ತಾ-ಆಗ್ತಾ-ಆಗ್ತಾ ಹೇಳದ್ನೆಲ್ಲಾ ಮೊದಲೇ 'ವಸುದೈವಕುಟುಂಬಕಂ' ಅಂತಾ ಒಂದು ಅದ್ಭುತವಾಂತಹ ಶಕ್ತಿ ಭಾವಕ್ಕೆದೆ ಆ ಭಾವದಿಂದ ಇಡೀ ಪ್ರಪಂಚವನ್ನೇ ನಾವು ಅಪ್ಪಿಕೊಳ್ಳಬಹುದು. ಅಂತಹ ಭಾವಶುಚಿತ್ವ, ಇಂತೀ ಸುಚಿತೀರ್ಥವನ್ನ ಒಳಗೊಂಡು 'ಮರ್ತ್ಯದಲ್ಲಿ ನಿಂದ ಶರಣರ ತೋರಿ ಎನ್ನನುಳಿಹಿಕೊಳ್ಳ ಚೆನ್ನಮಲ್ಲಿಕಾರ್ಜುನಾ,? ಇಂತಹ ಒಂದು ಏನು

ಭಾವಶುಚಿ ಅಳವಟ್ಟಂತಾ ಐದು ಶುಚಿ ಅಳವಟ್ಟಂತಾ, ಅಂತವರನ್ನ ತೋರಿ ನನ್ನನ್ನ ಬದುಕಿಸಿಕೊಳ್ಳಪ್ಪಾ' ನನ್ನನ್ನ ಉದ್ಧಾರ ಮಾಡು? ಅಂತ ಮಹಾದೇವಿ ಅಕ್ಕ ದೇವರಲ್ಲಿ ಪ್ರಾರ್ಥಿಸ್ತಾಳೆ. ಎಂತಹ ಅದ್ಭುತವಾದ ಪರಿಕಲ್ಪನೆ ಅಲ್ವಾ, ಇದು ನನಗ ಎನಿದಂಗೆ ಎಂಥಹ ಅದ್ಭುತವಾದ ವಚನಾ ಅಂದ್ರೆ,? ನಮ್ಮ ಕರ್ನಾಟಕದ ಆರೋಗ್ಯ ಮಂತ್ರಿಗಳು ಒಂದಾದ್ರು ವಚನಾ ಓದಿದಾರೊ ಇಲ್ಲೋ ನನಗೊತ್ತಿಲ್ಲಾ. ಇಡೀ ಆರೋಗ್ಯ ಇಲಾಖೆಗೆ, ಕರ್ನಾಟಕಕ್ಕಲ್ಲ ಅಥವಾ ಭಾರತದೇಶಕ್ಕಲ್ಲ ಇಡೀ ವಿಶ್ವ ಸಂಸ್ಥೆ ವಿಶ್ವ ಆರೋಗ್ಯ ಸಂಸ್ಥೆನೇ ಅದರ ಧ್ಯೇಯವಾಕ್ಯ ಆಗುವ ಹಾಗಿದೆ ಈ ವಚನ. ಆದ್ರೆ ದುರ್ದೈವಾ ಅಂದ್ರೆ, ಕರ್ನಾಟಕದಲ್ಲಿ ಅಥವಾ ಯಾವುದಾದರೂ ಒಂದು ಜಿಲ್ಲಾ ಪಂಚಾಯತಿಯವರಾದ್ರನೂ ಧ್ಯೇಯವಾಕ್ಯ ಮಾಡ್ಕೊಂಡಗ ಕಾಣಿಸೋದಿಲ್ಲ. ಅದಗೊತ್ತೇ ಇಲ್ಲಾ ಬಹಳ ಜನರಿಗೆ. ಶುಚಿತ್ವ ಅಂದ್ರೆ ಏನು? ನಡೆ ಶುಚಿತ್ವ–ನುಡಿಶುಚಿತ್ವ ಭಾವಶುಚಿತ್ವ ತನುಮನಶುಚಿತ್ವ ಇದು ಸಂಪೂರ್ಣ ಆರೋಗ್ಯದ ಪರಿಕಲ್ಪನೆಯನ್ನು ಕೊಡ್ತಾಯಿದೆ.

ಆದ್ದರಿಂದ ಬಂಧುಗಳೇ! ಮುಖ್ಯವಾಗಿ ಇರೋದು ಅಂತ ಅಂದ್ರೆ ದೈಹಿಕ ಆರೋಗ್ಯ ಅಷ್ಟೇ ಅಲ್ಲ, ದೈಹಿಕವಾಗಿ, ಮಾನಸಿಕವಾಗಿ, ಸಾಮಾಜಿಕವಾಗಿ, ಮತ್ತು ಆಧ್ಯಾತ್ಮಿಕವಾಗಿ, ಹೀಗೆ ನಾಲ್ಕೂ ರೀತಿಯಿಂದ ಯಾರು ಆರೋಗ್ಯವನ್ನ ಸಂಪಾದಿಸ್ತಾರೋ ಅದರ ಪರಿಪೂರ್ಣತೆಯನ್ನ ಸಂಪಾದಿಸ್ತಾರೋ ಅವನೇ ನಿಜವಾದ ಆರೋಗ್ಯವಂತಾ.

ಇನ್ನೂ ಆಯುರ್ವೇದದಲ್ಲಿ ಸಂಪೂರ್ಣ ಸ್ವಾಸ್ಥ ವ್ಯಕ್ತಿ ಯಾರು? ಅವನಿಗೇನ ಗುಣಗಳಿರಬೇಕು? ಅನ್ನೋದರ ಬಗ್ಗೆ ಒಂದು ಶ್ಲೋಕಾ ಬರುತ್ತೆ ಚರಕ ಹೇಳ್ತತಕ್ಕಂತದ್ದು! ಅಂತ ಅನ್ಸತ್ತೆ, ಬಹಳ ಅದ್ಭುತವಾದಂತಹ ಶ್ಲೋಕ ಯಾವದು.? ನಾವ ತಿಳ್ಕೋಬೇಕು.

'ಸಮದೋಷ ಸಮಾಗ್ನಿಶ್ಚಾ! ಸಮಧಾತು ಮಲಕ್ರಿಯಾಃ ॥

ಪ್ರಸನ್ನಾತ್ಮೇಂದ್ರಿಯ ಮನಃ ।

ಸ್ವಸ್ಥ ನಿತ್ಯ ಅಭಿದಿತಿಯೆ ॥

ಬಹಳ ಅದ್ಭುತವಾದಂತಹ ಶ್ಲೋಕಾ ಇದು. 'ಸಮದೋಷ ಸಮಾಗ್ನಿಶ್ಚಾ, ಸಮಧಾತುಮಲಕ್ರಿಯಾಃ ಯಾರನ್ನು ನಾವು ಸಂಪೂರ್ಣ ಆರೋಗ್ಯವಂತಾ ಅಂತ ಕರಿಬಹುದು? ಅದರ ಚಿಂತನೆ ಬಹಳ ಅದ್ಭುತವಾಗಿದೆ. ಆಯುರ್ವೇದದ ಚಿಂತನೆ ಬಹಳ ಅದ್ಭುತವಾಗಿದೆ. 'ಸಮದೋಷ' ಅಂದ್ರೆ 'ವಾತ ಪಿತ್ತಾ ಕಫಾ' ಅನ್ನುವಂತಾ ತ್ರಿದೋಷಗಳು. ಆಯುರ್ವೇದದ ಚಿಂತನೆ ನಿಂತಿರೋದೆ ಈ ದೋಷಗಳ ಮೇಲೆ. ಇವುಗಳು ಸಮವಾಗಿರಬೇಕು ಅಂದ್ರೆ ವಾತ ಯಾವ ಪ್ರಮಾಣದಲ್ಲಿರಬೇಕು, ಪಿತ್ತ ಯಾವ ಪ್ರಮಾಣದಲ್ಲಿರಬೇಕು, ಕಫ ಯಾವ

ಪ್ರಮಾಣದಲ್ಲಿರಬೇಕು ಅದೇ ಪ್ರಮಾಣದಲ್ಲಿರಬೇಕು. ಏನಾದ್ರೂ ವ್ಯಾತ್ಯಾಸ ವಾದ್ರೆ ವಾತ ಜಾಸ್ತಿ ಆದ್ರೆ ಅದೊಂದು ರೋಗ ಆಗುತ್ತೆ. ಮೈ ಹರಿತಕ್ಕಂತದ್ದು, ಕೈಕಾಲು ಹರಿತಕ್ಕಂತದ್ದು ಒಂದು ರೀತಿ ನೋವು ಹಿಂಸೆ ನಿದ್ದೆ ಬರಾಂಗಿಲ್ಲ, ಇದ ವಾತ ದೋಷ. ಪಿತ್ತ ದೋಷದಿಂದ ನಿಮಗೆ ಎಪಿಡಿಟ್ ಅಂತಾ ಕರಿಬಹುದು. ಪಿತ್ತ ವಾಂತಿ ಆಗ್ತತಕ್ಕಂತದ್ದು, ಜೀರ್ಣಕ್ರಿಯೆ ಸರಿ ಇರದೇ ಇರತಕ್ಕಂತದ್ದು ಕೊನೆಗೆ ಜಾಂಡೀಸ್ ತನಕಾನೂ ಆ ಪಿತ್ತ ಪ್ರಕೋಪದಿಂದ ಅದು ಕೂಡಾ ಬರಬಹುದು. ಹೀಗೆ ಅದರಲ್ಲಿ ಅನೇಕ ದೋಷಗಳು. ಕಫಾ! ಕಫಾದಿಂದ ಬರತಕ್ಕಂತದ್ದು ಅಂತೂ ಗೊತ್ತಿದೆ. ಧ್ವನಿ ತೊಂದರೆ ಬರಬಹುದು. ಕೊನೆಗೆ ಅಸ್ತಮಾ ಬರಬಹುದು. ಈ ಮೂರೂ ಸಮಾತವಾಗಿದ್ರೆ ಮತ್ತು ಇಲ್ಲದೇ ಇದ್ರು ಜೀವನಾ ಅಲ್ಲಾ. ವಾತಪಿತ್ತಕಫಗಳಿಂದಲೇ ನಾವು ಬದುಕ್ಲಿಕ್ಕೆ ಸಾಧ್ಯ ಇದೆ. ಇರಬೇಕು ಆದ್ರೆ ಸಮವಾಗಿರಬೇಕು. ಸಮದೋಷ ಸಮಾಗ್ನಿಶ್ಚಾ, ಪಂಚಾಗ್ನಿಗಳೂ ಅಂತ ಬರುತ್ತೆ! ಕಾಮಾಗ್ನಿ ಕ್ರೋಧಾಗ್ನಿ ಮತ್ತೆ ಚಿತಾಗ್ನಿ ಮತ್ತು ಶೋಕಾಗ್ನಿ ಬಡವಾಗ್ನಿ ಅಂತಾ ಹೇಳ್ತಾರೆ, ಇನ್ನೂ ಆಯುರ್ವೇದದಲ್ಲಿ ಹೇಳ್ತಾರೆ, ೫೫ ಅಥವಾ ೫೭ ಅಗ್ನಿಗಳಿವೆ ಅಂತಾ ಹೇಳ್ತಾರೆ, ಇವೆಲ್ಲ ಸಮವಾಗಿರಬೇಕು. ಅಂದ್ರೆ ಯಾವಯಾವದು ಯಾವ ಪ್ರಮಾಣದಲ್ಲಿರಬೇಕು ಆ ಪ್ರಮಾಣದಲ್ಲಿ ಇರಬೇಕು. ಸಮಧಾತು ಸಪ್ತ ಧಾತುಗಳು ಸಮವಾಗಿರಬೇಕು. ಈಗ ಸಾಮಾನ್ಯವಾಗಿ ಕೆಲವರು ಹೇಳ್ತಿರ್ತಾರೆ, ನಾವು ಏನ ಊಟಾನೆ ಮಾಡೊಲ್ರಿ, ತುಂಬಾ ಏನ ಊಟಾ ಮಾಡೊಲ್ಲಾ. ಕೆಲವು ಸಣಕ್ಲು ಇರ್ತಾರೆ, ಎಷ್ಟೊಂದು ಊಟ ಮಾಡ್ತಾರ! ಅವ್ರು ದಪ್ಪನೆ ಆಗೊಲ್ಲ. ನಾವ ದಪ್ಪ ಆಗ್ತಿವಿ ಯಾಕೆ ಅಂದ್ರೆ ಊಟ ಮಾಡಿದ್ದೆಲ್ಲಾ ಕೊಬ್ಬು ಆಗ್ತಾ ಇದೆ. ಊಟ ಮಾಡಿದ್ದೆಲ್ಲ ಸಂಪೂರ್ಣವಾಗಿ Obesity (ಓಬೆಸಿಟಿ) ಯಾಗಿ, ಕೊಬ್ಬ-ಕೊಬ್ಬಾಗಿ ದಪ್ಪಾಗಿ ಕೂತ್ಕೊಳ್ತಾ ಇದೆ. ಸ್ವ-ಸ್ವಲ್ಪನೆ ಊಟ ಮಾಡಿದ್ರೂ ಅವರು ದಪ್ಪಾ ಆಗ್ತಾರೆ ಅಂದ್ರೆ! ಅಲ್ಲಿ ಕೊಬ್ಬು ಮೇದಸ್ಸು ಜಾಸ್ತಿ ತಯಾರಾಗ್ತಾ ಇದೆ. ಇನ್ನ ಕೆಲವರು ಬಹಳಾ ಊಟ ಮಾಡಿದ್ರೂ ಅವರಿಗೆ ಮೂಳೆ ಗಟ್ಟಿಯಾಗಬಹುದು. ಅಂದ್ರೆ ಏನು ಅಸ್ಥಿ ಗಟ್ಟಿಯಾಗ್ತತಕ್ಕಂತದ್ದು, ರಕ್ತ ಚನ್ನಾಗಿ ತಯಾರಾಗ್ತಾ ಇರಬಹುದು. ಜೀರ್ಣಕ್ತಿಯೆ ಚನ್ನಾಗಿ ನಡೆದು. ಅಂದ್ರೆ ಈ ಸಪ್ತ ಧಾತುಗಳು ಸಮವಾಗಿರಬೇಕು. ಯಾವ್ವ ಕಡಿಮೆ ಇರಬೇಕು, ಯಾವ್ವ ಹೆಚ್ಚಿರಬೇಕು ಯಾವ್ವು ಎಷ್ಟು? ಎಷ್ಟ ಇರಬೇಕು? ಅದೇ ಪ್ರಮಾಣದಲ್ಲಿ ಅದ ಸಪ್ತಧಾತು.

ಮಲಕ್ರಿಯಾಃ ಅಂದ್ರೆ ಶೌಚಾದಿ ಕ್ರಿಯೆಗಳು. ಮಲಮೂತ್ರ ವಿಸರ್ಜನೆಗಳು ಸರಿಯಾಗಿ ನಡಿತಾ ಇರಬೇಕು. ಬಹಳ ಜನಕ ನಾವು ನೋಡ್ತಿವಿ. ಇತ್ತೀಚೆಗೆ ನನ್ನತ್ರ ಫೇಸೆಂಟಗಳು ಬಂದಾಗ ಹೇಳ್ತಿರ್ತಾರ, ಏಳು ದಿವಸಾದ್ರು ಇನ್ನು ಹೊಟ್ಟೆ ಸ್ವಚ್ಛ ಆಗಿಲ್ಲ ಏನ್ಮಾಡ್ಬೇಕು? ಇಂಗ್ಲೀಷನಲ್ಲಿ ಹೇಳ್ತಾರೆ ಒಂದು ಮಾತು, 'ಕಾನ್ಸಿಕ್ಯೂಶೆನ್ ಇಜ ದಿ ಮದರ ಆಫ್ ಆಲ್ ಡೀಸೀಜೆಸ್'. ಅಂದ್ರೆ ಮಲಬದ್ಧತೆ ಅನ್ನುವಂತದ್ದು ಎಲ್ಲಾ ರೋಗಗಳ ತವರು ಅದು. ಆದ್ದರಿಂದ ಮಲಬದ್ಧತೆಯನ್ನ

ನಾವು ನಿವಾರಣೆ ಮಾಡಿಕೊಳ್ಳಬೇಕು, ಅಥವಾ ಶ್ರಮಪಟ್ಟು ಕೆಲ್ಸ ಮಾಡಬೇಕು. ನಮ್ಮ ದೇಹ ಶ್ರಮ ಪಡತಾ ಇದ್ರೆ ದೊಡ್ಡ ಕರುಳು ಚನ್ನಾಗಿ ಕೆಲ್ಸಾ ಮಾಡ್ತದೆ. ನಮ್ಮ ದೇಹಕ್ಕೆ ಶ್ರಮವು ಇಲ್ಲವೆಂದಾಗ ಅದು ಸರಿಯಾಗಿ ಕೆಲ್ಸಾ ಮಾಡೂದಿಲ್ಲಾ. ಹಾಂ! ಮಲಕ್ರೀಯಾಃ ಈ ಸಂದರ್ಭದಲ್ಲಿ ಸುಮ್ನೆನಾ ಒಂದ ಜೋಕ ಹೇಳ್ತಿನಿ. ನಿಮಗೆಲ್ಲ ವಿಚಿತ್ರಾ ಅಂತ ಅನ್ನಸಬಹುದು. ಆದ್ರೆ ಯೋಚನೆ ಮಾಡಿ. ಬೀಚಿ ಎಂತಾ ನಿಷ್ಠುರವಾದಿ, ಎಂಥಾ ಸತ್ಯವಾದಿ ಹಾಸ್ಯದಲ್ಲೂ ಕೂಡಾ ಎಂಥಾ ಸತ್ಯವನ್ನು ಇಟ್ಟಿರ್ತಾರೆ. ಆಮೇಲೆ ಅವರ ಚಿಂತನೆ ಎಷ್ಟ ವಿಶೇಷವಾಗಿರುತ್ತೆ ನಮಗಿಂತಲೂ ಅಂತ ಅನ್ಸುತ್ತೆ. 'ಒಂದ್ಸಾರಿ ಯಾರೋ ಒಬ್ರು ಕೇಳ್ತಾರೆ ಅತ್ಯಂತ ಮಧುರ ಕ್ಷಣ ಅಂದ್ರೆ ಯಾವ್ದು? ನೀವು ಯಾವುದಾದ್ರೂ ಹೇಳ್ತಿದ್ದಿರೇನೋ, ನನ್ನ ಮದುವೆಯಾಗಿದ್ದು ಅತ್ಯಂತ ಮಧುರ ಕ್ಷಣ. ಅಥವಾ ಎಸ್.ಎಸ್.ಎಲ್.ಸಿ. ಪಾಸಾಗಿದ್ದು, ಅಥವಾ ಏನೋ ಯಾರೋ ಲಾಟ್ರಿ ಹೊಡೆದದ್ದು ಮತ್ತೇನೆನೋ ಹೇಳ್ತಿದ್ರು ಗೊತ್ತಿಲ್ಲಾ. ಬೀಚಿಯವರು ಹೇಳ್ತಾರೆ ಅತ್ಯಂತ ಮಧುರ ಕ್ಷಣ ಅಂತ ಅಂದ್ರೆ ಏನಪ್ಪಾ ಅಂದ್ರೆ! ಶೌಚ್ಯ ಕ್ರಿಯೆಗೆ ಅರ್ಜಂಟಾದಾಗ, ಅಂದ್ರೆ ಮಲವಿಸರ್ಜನೆಗೆ ಒತ್ತಡ ಬಂದಾಗ ಒಂದ ಒಳ್ಳೆ ಬಯಲು ಜನವಿರದ ನಿರ್ಜನ ಪ್ರದೇಶ. ಒಂದ ಚಂಬು ನೀರಸಿಕ್ರೆ ಅದಕ್ಕಿಂತ ಮಧುರಕ್ಷಣ ಇನ್ನಾವುದಿಲ್ಲಾ ಅಂತ ಹೇಳ್ತಾರೆ. ಅಂದ್ರೆ ಯೋಚನೆ ಮಾಡಿ ನೀವು ಬೇರೆ ಎಲ್ಲಾ ಫೋರ್ಸಗಳನ್ನೂ ನೀವು ತಡಿಬಹುದು. ಅಂದ್ರ ಇಪ್ಪತ್ತೆಂಟು, ಮೂವತ್ತು ಐವತ್ತು ವರ್ಷ ಮದುವೆ ಆಗದೇನು ಇರಬಹುದು. ಮಲವಿಸರ್ಜನೆ ಮಾಡಲಾರ್ದೆ ಯಾರಿರ್ತಾರಪ್ಪಾ! ಸಾಧ್ಯ ಇಲ್ಲಾ. ಅತ್ಯಂತ ಮಧುರಕ್ಷಣಾ ಅಂದ್ರೆ ಮಲವಿಸರ್ಜನಾ ಕ್ರೀಯೇ. ಬೆಳಿಗ್ಗೆ ಎದ್ದಕೊಲ್ಲೆ ಹೊಟ್ಟೆ ಸ್ವಚ್ಛಾ ಆಯ್ತು ಅಂದ್ರೆ ಆನಂದ. ಬರೀ ಬೀಚಿಯವರು ಅಷ್ಟೇ ಅಲ್ಲ, ವಿನೋಬಾಜಿಯವರೂ ಒಂದು ಕಡೆ ಹೇಳ್ತಾರೆ. ನಿಮಗೆ ಗೊತ್ತಿರಬೇಕು, ಏನೋ ಒಂದು ಶ್ಲೋಕ ಇದೆಯೆಲ್ಲಾ ಬಹಳ ಪ್ರಸಿದ್ಧಾದದ್ದು. 'ಕರಾಗ್ರೇ ವಸತೇ ಲಕ್ಷ್ಮೀ, ಕರಮಧ್ಯೇಸರಸ್ವತೀ, ಕರಮೂಲೇತಥಾ ಗೌರೀ, ಪ್ರಭಾತೇ ಕರದರ್ಶನಂ' ಅಂದ್ರೆ ಏನು? ಕೈಯಲ್ಲಿ ಲಕ್ಷ್ಮೀ ಸರಸ್ವತಿ ಪಾರ್ವತಿಯರು ಇದ್ದಾರೆ, ಬೆಳಿಗ್ಗೆ ಎದ್ದ ಕೂಡ್ಲೆ ಕೈನೊಡ್ಕೊಂಡು ಬಿಡಿ. ಅದಕ್ಕೆ ಎಲ್ಲಾ, ಕೆಲವರು ಕೈ ಉಜ್ಜಿ ಬಿಟ್ಟು ಕೈ ದರ್ಶನ ಮಾಡ್ಕೊಂತಾರೆ. ನಾವು ಲಿಂಗದರ್ಶನಾ ಮಾಡ್ತೀವಿ. ಬೆಳಗ್ಗೆ ಎದ ಕೂಡ್ಲೆ ಇಷ್ಟಲಿಂಗ ಇರ್ತದೆ ಎದೆ ಮೇಲೆ, ಇಷ್ಟಲಿಂಗ ದರ್ಶನ ಮಾಡಿಕೊಳ್ಳೋದನ್ನ ರೂಢಿಸಿಕೊಳ್ಳಿ ಸಾಮಾನ್ಯವಾಗಿ ಇಲ್ಲಿ ವಿನೋಭಾಜೀಯವರು ಏನ ಹೇಳ್ತಾರೆ ಅಂದ್ರೆ? ಪ್ರಭಾತೇ ಕರದರ್ಶನಂ ಇದೆಯಲ್ಲಾ, ಸ್ವಲ್ಪ ಪರಿವರ್ತನ ಮಾಡ್ತಾರವರು. ಪ್ರಭಾತೇ ಮಲದರ್ಶನಂ ಬೆಳಗ್ಗೆ ಎದ್ದ ಕೂಡ್ಲೆ ಮಲ ವಿಸರ್ಜನೆಗೆ ಹೊಗ್ರೆಪ್ಪಾ! ಅಂದ್ರೆ ಹ್ಯಾಗಾಗ್ತಾ ಇದೆ ಅಂದ್ರೆ ಮಲವಿಸರ್ಜನೆ ಸರಿಯಾಗಿ ಆಗ್ತಾ ಇದೇನೋ ನೋಡಿ! ತಂದೆ-ತಾಯಿ ಮಕ್ಕಳ ಕಡೆ ಗಮನಾ ಕೊಡುವಾಗ ಈ ಕಡೆ ಗಮನಾನೇ ಹರ್ಸ್ಲೋದಿಲ್ಲ.

ಊಟಾ ಮಾಡೋದ ಕಡೆ ಗಮನಾ ಹರಸ್ತಾರೆ, ಮಗುತಿಂತಾನೆ ಇಲ್ಲಾ, ಮಗುತಿಂತಾನೆ ಇಲ್ಲಾ ಯಾಕ ತಿಂತಾ ಇಲ್ಲಾ? ಅದಕ್ಕೆ ಹಸಿವೆ ಆಗ್ತಾ ಇಲ್ಲಾ. ಹೋಗುತ್ತೆ ಟೈಲೆಟ್ ರೂಂಗೆ ಹೀಗೆ ವಾಪಸ್ಸ ಬರುತ್ತೆ ಸ್ವಚ್ಛ ಆಗ್ತಾ ಇದೆಯೇ ಇಲ್ಲೊ ಅಂತ ಗಮನಸಬೇಕಲ್ಲಾ ಅಥವಾ ಹೊಟ್ಟೆಯಲ್ಲಿ ಏನು ಯಾಕ ತ್ರಾಸ ಇದೆ. ಹೊಟ್ಟೆ ನೋವು ಯಾಕ ಬಂದಿದೆ, ಇದೆಲ್ಲಾ ವಿಚಾರ ಮಾಡಬೇಕು ಮಲವಿಸರ್ಜನೆ ಕಾರ್ಯ ಬಹಳ ಪ್ರಮುಖ ಬೇಕು. ಆರೋಗ್ಯವನ್ನ ಬಯ್ಸತಕ್ಕಂತವರಿಗೆ ಹೀಗೆ 'ಸಮದೋಷ ಸಮಾಗ್ನಿಶ್ಚಸಮಧಾತು ಮಲಕ್ರೀಯಾ ಪ್ರಸನ್ನಾತ್ಮೇಂದ್ರಿಯ ಮನಃ' ಸ್ವಸ್ಥ್ಯ ಇತ್ಯ ಬಿಧೀಯತೇ'. ಪ್ರಸನ್ನ ಅಂದ್ರೆ ಸಂತೋಷ. ಸಂತೋಷವಾದಂತಹ ಪ್ರಸನ್ನವಾದಂತಹ ಮನ ಆತ್ಮ ಇಂದ್ರಿಯ, ಪ್ರಸನ್ನಾತ್ಮೇಂದ್ರಿಯ ಮನ. ಆತ್ಮ ಇಂದ್ರಿಯ ಮನಸ್ಸು ಎಷ್ಟು ಅದ್ಭುತವಾಗಿದೆ ನೋಡಿ! ಪ್ರಸನ್ನವಾದ ಆತ್ಮ, ಪ್ರಸನ್ನವಾದ ಇಂದ್ರಿಯಗಳು, ಪ್ರಸನ್ನವಾದ ಮನಸ್ಸು ಇದ್ರೆ ಅವನು ಪೂರ್ಣ ಸ್ವಚ್ಛ ವ್ಯಕ್ತಿ. ಆರೋಗ್ಯವಂತ ವ್ಯಕ್ತಿ ಅಂತ ಕರಿತೀವಿ ಅಂತ ಹೇಳ್ತಾರೆ. ಆಯುರ್ವೇದದಲ್ಲಿ ಹೇಳ್ತಕ್ಕಂತ ಮಾತು ಬಹಳ ಅದ್ಭುತವಾದಂತಹ ಚಿಂತನೆ ಇದು. ಬಹಳ ಅದ್ಭುತ ಚಿಂತನೆ ಇವತೂ ನೀವು ಎಷ್ಟು ಜನ ಡಾಕ್ಟರಗಳ ಹತ್ರ ಹೋಗ್ತಿರಲ್ಲಾ ಯಾರಾದ್ರು ಡಾಕ್ಟರು ನೀವು, ಎಲ್ಲೋ ಒಬ್ಬಬ್ಬ ಒಳ್ಳೆಯ ಡಾಕ್ಟರು ಕೇಳಬಹುದು. ನಾಲಗೆ ನೋಡ್ತಾರೆ, ಮತ್ತೆ ಏನ ನಿಮ್ಮ ಕಂಕಳಲ್ಲೋ ನಾಲಗೆ ಕೆಳಗೊ ಥರ್ಮಾಮೀಟರ ಇಟ್ಟು ನಿಮ್ಮ ಜ್ವರ ಚೆಕ್ ಮಾಡ್ತಾರೆ. ಶಾಕ್ ಎಷ್ಟದೆ ಅಂತೆ ಚೆಕ್ಕ ಮಾಡ್ತಾರೆ. ನಿಮ್ಗೆ ಔಷಧಿ ಕೋಡೊದಕ್ಕ ಮುಂಚೆ ನಿಮಗೆ ಮಲವಿಸರ್ಜನೆ ಸರಿಯಾಗಿ ಆಗ್ತಾ ಇದೆಯಾ? ಎಷ್ಟ ಸಾರಿ ಊಟಾ ಮಾಡ್ತಿರಾ,? ಎಷ್ಟಸಾರಿ ಮಲವಿಸರ್ಜನೆಗೆ ಹೋಗ್ತಿರಾ? ಅಂತ್ಹೇಳಿ ಕೇಳ್ತಾರಾ! ಸಾಮಾನ್ಯವಾಗಿ ಕೇಳೋದಿಲ್ಲ. ನೀವೇ ಹೇಳಿದಾಗ ಪರಿಹಾರ ಕೊಡಬಹುದಷ್ಟೇ. ಎಲ್ಲಾ ಕಾಯಿಲೆಗಳ ಹಿಂದೆ ಬದ್ಧತೆ ಮತ್ತು ಅಜೀರ್ಣ ಏನ ಇದೆ ಬಹಳ ಮುಖ್ಯವಾಗಿ ಇರ್ತಕ್ಕಂತಹದ್ದು.

ಆದ್ದರಿಂದ ಬಂಧುಗಳೇ! ಆ ವಿಷಯದಲ್ಲಿ ನಾವು ಎಚ್ಚರವಾಗಿರಬೇಕು. ಮಲವಿಸರ್ಜನೆ ಸರಿಯಾಗಿ ಆಗೋಹಾಗೆ ನೋಡ್ಕೊಬೇಕು ಜೊತೆಗೆ ಆತ್ಮವನ್ನ ಪ್ರಸನ್ನವಾಗಿ ಇಟ್ಕೋಬೇಕು ಅಂದ್ರೆ ಈಗಾಗಲೇ ಆಧ್ಯಾತ್ಮಿಕ ಆರೋಗ್ಯದ ಬಗ್ಗೆ ಹೇಳಿದಿನಿ. ಭಾವಶುಚಿ ಅಂತ ಹೇಳಿದ್ನೆಲ್ಲಾ ಆಧ್ಯಾತ್ಮಿಕ ಆರೋಗ್ಯ. ಅದನ್ನ ನಾವು ಸರಿಯಾಗಿ ಇಟ್ಕೋಬೇಕು. ಅದನ್ನ ಸರಿಯಾಗಿ ಇಟ್ಕೋಳ್ಳೊವಾಗ ಆತ್ಮ ಪ್ರಸನ್ನವಾಗಿರುವಾಗ ಏನ ಮಾಡಬೇಕ ಹಾಗಾದ್ರೆ? ಸತ್ಸಂಗವನ್ನ ಮಾಡಬೇಕು. ಸತ್ಸಂಗ ಮಾಡಬೇಕು. ಆಮೇಲೆ ಇಂದ್ರಿಯ ಮನಸ್ಸುಗಳು ಆತ್ಮ ಸ್ವಚ್ಛವಾಗಿದ್ರೆ, ಆತ್ಮ ಪ್ರಸನ್ನವಾಗಿದ್ರೆ ಇಂದ್ರಿಯ ಮನಸ್ಸುಗಳು ಸ್ವಚ್ಛವಾಗಿರ್ತಾವೆ. ಪ್ರಸನ್ನವಾಗಿರ್ತಾವೆ. ಅಥವಾ ಇಂದ್ರಿಯ ಮನಸ್ಸುಗಳು

ಸ್ವಚ್ಛವಾಗಿದ್ರೆ ಪ್ರಸನ್ನವಾಗಿದ್ರೆ ಆತ್ಮ ಪ್ರಫುಲಿತವಾಗಿರ್ತದೆ. ಇದಕ್ಕೆ ಒಂದಕ್ಕೊಂದಕ್ಕೂ ಲಿಂಕ ಇದೆ, ಸಂಬಂಧ ಇದೆ. ಹಾಗೇ ಅವುಗಳನ್ನ ಸ್ವಚ್ಛವಾಗಿಟ್ಕೋಳ್ಳಬೇಕು. ಇದನ್ನ ಸ್ವಚ್ಛ ಅಂತ ಕರಿತಾರೆ.

ಓಶೋ ಒಂದ ಕಡೆ ಹೇಳ್ತಾರೆ, ಈ ಸ್ವಸ್ಥ ಅನ್ನೊದಕ್ಕೆ ಸಮಾನಾರ್ಥಕವಾದ ಪದ ಇಂಗ್ಲೀಷನಲ್ಲಾಗಲಿ, ಲ್ಯಾಟಿನಲ್ಲಾಗಲಿ ಇಲ್ಲಾ ಅಂತ ಹೇಳ್ತಾರೆ. ಸ್ವಯಂ ಸ್ಥಿತಾ, ತನ್ನಲ್ಲಿ ತಾನು ಯಾರು ಸ್ಥಿತವಾಗಿರ್ತಾನೋ ಅವನು ಸ್ವಸ್ಥಾ, ಇಲ್ಲಾ ಹೆಲ್ತ ಅಂತ ಪದ ಇರಬಹುದು. 'ಹೆಲ್ತ' ಅನ್ನೋ ಶಬ್ಧವಾಗಲಿ ಆರೋಗ್ಯ ಅನ್ನೋ ಶಬ್ಧವಾಗಲಿ ರೋಗವನ್ನ ಮುಖ್ಯವಾಗಿ ಇಟ್ಕೊಂಡು ಬಂದಿರತಕ್ಕಂತದ್ದು. What is health? Health is Called the state of lead ಅಂದ್ರೆ ವಾಸಿಯಾದ ಸ್ಥಿತಿಯೇ ಹೆಲ್ತ. ಅಂದ್ರೇ ಅಲ್ಲಿ ಮುಖ್ಯವಾದದ್ದು ಯಾವ್ದು ಪ್ರಧಾನವಾಯ್ತಲ್ಲಿ ರೋಗ. ಡಿಸೀಜೇ. ಆದ್ರೆ ಸ್ವಸ್ಥ ಅನ್ನೋದ್ರಲ್ಲಿ ರೋಗ ಪ್ರಧಾನವಾಗಿರಲಿಲ್ಲ ಸ್ವಯಂನಲ್ಲಿ ಸ್ಥಿರವಾಗಿರತಕ್ಕಂತದ್ದು. ತನ್ನಲ್ಲಿ ತಾನು ನೆಲೆಸಿರತಕ್ಕಂತದ್ದು. ಇದೆ ಉಪವಾಸ ಅನ್ನೊದು. ಉಪವಾಸ ಅನ್ನೋದಕ್ಕೇ ಸದ್ಯ ಊಟ ಬಿಡೋದು ಮತ್ತೆ ಏಕಾದಶಿ, ಶಿವರಾತ್ರಿ ನಾವ ತಿಳ್ಕೋಂಡಿವಿ. ಆದ್ರೆ ನಿಜವಾಗಿಯೂ ಉಪವಾಸ ಅಂದ್ರೆ ನಮ್ಮ ಸಮೀಪದಲ್ಲಿ ನಾವ ಇರೋದು. ನನ್ನೊಳಗ ನಾನಿರೋದು. ನನಗೆ ಏನಾಗ್ತಾ ಇದೆ ನನ್ನಲ್ಲಿ ಏನ ನಡೀತಾ ಇದೆ ವಿಚಾರ ಮಾಡಿಕೊಳ್ಳತಕ್ಕಂತಾದ್ದು. ಇದಕ್ಕೆ ಸ್ವಸ್ಥ ಅಂತ ಕರಿತಾರೆ.

ಅದಕ್ಕೆ ಬಂಧುಗಳೇ,! ನಾವು ಆರೋಗ್ಯವನ್ನ ಕಾಪಾಡಿಕೊಳ್ಳಬೇಕಾದ್ರೆ ನಾವು, ಔಷಧಿ ತಗೊಂಡ್ರೆ ಔಷಧಿಯನ್ನು ಖರೀದಿ ಮಾಡಬಹುದು ನೀವು. ಸಾವಿರ ಕೊಟ್ಟು ಖರೀದಿ ಮಾಡಬಹುದು ಹತ್ತು ಸಾವಿರ ಕೊಟ್ಟು ಖರೀದಿ ಮಾಡಬಹುದು, ಲಕ್ಷಾ ಕೊಟ್ಟು ಆಫರೇಶನ್ನು ಮಾಡಿಸ್ಕೋಬಹುದು ಆದ್ರೆ ಸ್ವಾಸ್ಥ್ಯ ಪ್ರಾಪ್ತಿಯಾಗತ್ತಾ! ಆರೋಗ್ಯ ಪ್ರಾಪ್ತಿ ಆಗುತ್ತಾ! ಯೋಚನೆ ಮಾಡಬೇಕು, ನಾವೆಲ್ಲಾ. ಆರೋಗ್ಯ ಪ್ರಾಪ್ತಿಯಾಗಬೇಕು ಅಂದ್ರೆ ನಾವು ನಮ್ಮ ಆತ್ಮ ಇಂದ್ರಿಯಾ ಮನಸ್ಸುಗಳ ಸ್ವಚ್ಛವಾಗಿಟ್ಕೊಬೇಕು. ಅದಕ್ಕೆ ದೇಹ ಮೊದಲು ಸ್ವಚ್ಛವಾಗಿರಬೇಕು. ಮಲಕ್ರಿಯೆಗಳು ಸ್ವಚ್ಛವಾಗಿ ನಡಿಬೇಕು ಸಮವಾಗಿ ಇರಬೇಕು. ಕಫಾ ವಾತಾ ಪಿತ್ತಗಳು ಅದನ್ನೆಲ್ಲ ತಿಳ್ಕೊತ್ತಿರು. ಸರಿ! ಇನ್ನ ಕೆಲವ್ರು ಏನ ಕೇಳ್ತಾರಂತಂದ್ರೆ, ಅಲ್ರಿ! ಏನ ಬಿಡ್ರಿ ಮತ್ತೆ, ಕೆಲವರ್ಷ ಆರೋಗ್ಯವಾಗಿರ್ತೀವಿ, ಈ ದೇಹ ಧರ್ಮ ರೊಗ. ರೋಗ ಬಂದ್ರೆ ಏನಾಗುತ್ತೆ? ರೊಗಬರ್ಲಿಬಿಡಿ. ಹರ್ಡೆಕರ ಮಂಜಪ್ಪನವರು ರೋಗಿಗಳ ಬಗ್ಗೆ ಒಂದ ಮಾತ ಹೇಳ್ತಾರೆ ಅದನ್ನ ತಿಳ್ಕೊಂಡ ಬಿಡೋಣ ಸಾಕು. ನಾಳೆ ಧರ್ಮವನ್ನ ಕುರಿತು ಹೇಳ್ತಿನಿ. ರೋಗ ಬರಬೇಕೋ ಬರಬಾರದೋ ಅನ್ನೊ, ವಿಷಯ ಬಂದಾಗ ಹರ್ಡೆಕರ ಮಂಜಪ್ಪನವರ ಮಾತು ಕೇಳಿಬಿಡೋಣ. 'ಆರೋಗ್ಯ ಜೀವನ' ಅನ್ನೋ ಪುಸ್ತಕದಲ್ಲಿ ಅವರೊಂದು ಎರಡ ಮಾತುಗಳನ್ನು ಹೇಳ್ತಾರೆ ಅದ್ಭುತವಾಗಿ

ಹೇಳ್ತಾರೆ, ರೋಗಿಯಾಗೊಂದಂದ್ರೆ ಅಪಮಾನಾ ಅಂತ ಹೇಳ್ತಾರೆ, ಅಥವಾ ರೋಗಿ ಆಗೋದ್ರಿಂದ ಸಮಾಜಕ್ಕೆ ಎರಡು ರೀತಿ ಲುಕ್ಸಾನ ಆಗುತ್ತೆ, ಹಾನಿ ಆಗುತ್ತೆ ಅಂತ ಹೇಳ್ತಾರೆ. ಹ್ಯಾಗೆ? ಈಗ ನಾನು ರೋಗಿ ಆದೆ ಅಂತ ಇಟ್ಕೊಳ್ಳಿ, ನನಗ ಹುಷಾರಿಲ್ಲಪ್ಪಾ, ಮಲಕ್ಕೊಂಡಿನಿ ಹಾಸಿಗೆ ಮೇಲೆ ಹಾಗಾದ್ರೆ ಏನಾಗುತ್ತೆ ಇವಾಗ ನಾನು ಸಮಾಜಕ್ಕೆ ಮಾಡ್ತಾ ಇರತಕ್ಕಂತಾ ಸೇವೆ ತಪ್ಪಿತು. ನಾನು ಏನೋ ಪ್ರವಚನ ಹೇಳ್ತಿದ್ನಿನೋ, ಅಥವಾ ಮತ್ತ್ಯಾರಿಗೋ ಒಂದು ಒಳ್ಳೆಯ ಮಾತ ಹೇಳ್ತಾ ಇದ್ನೋ, ಮತ್ತ್ಯಾರಿಗೋ ರೋಗದ ಬಗ್ಗೆ ಸಲಹೆ ಕೊಡ್ತಾ ಇದ್ನೋ, ತಪ್ಪಿ ಹೋಯ್ತು. ಇನ್ನ ನನ್ನ ಸೇವೆಗೊಬ್ರು ನಿಲ್ಲಬೇಕಲ್ಲ! ಅವ್ರು ಮಾಡ್ತಾ ಇರತಕ್ಕಂತಾ ಕೆಲ್ಸಾ ಕೂಡ ತಪ್ಪಿಹೋಯ್ತು. ಎರಡ ರೀತಿ ಹಾನಿಯಂತಾ ಹೇಳಬಹುದು. ಅದಕ್ಕೆ ರೋಗಿಯಾಗೋದಕ್ಕೆ ಹಿಂಜರಿಯಬೇಕು. ನಾವು ನಾಚಿಕೊಳ್ಳಬೇಕು. ಇನ್ನೊಂದು ರೀತಿ ಹೇಳ್ತಾರೆ ಮಂಜಪ್ಪನವರು ಏನೂ ಅಂತಂದ್ರೆ? ರೋಗಿ ಯಾಗೋದಂತದ್ರೆ ಅವರು ಹೇಳುವ ಪ್ರಕಾರ ಪರಮಾತ್ಮನಿಗೆ ವಿರುದ್ಧವಾಗಿ ನಡೆದಿರೋದೆ ರೋಗ, ನಡಿತಾ ಇದ್ದಿವಲ್ಲಾ ಅದಕ್ಕೆ ರೋಗ ಬಂದಿದೆ. ಹೀಗ ಒಂದು ಉದಾಹರಣೇ ಕೋಡ್ತಾರವರು. ಈಗ ಯಾರಾದ್ರೂ ಜೈಲಿಗೆ ಹೋಗಿದಾರಂತಂದ್ರೆ ಅವರನ್ನ ನೋಡಾಕ ಯಾರೂ ಹೋಗಲ್ಲ. ಅಲ್ವಾ, ಹೋಗ್ತಿರಾ? ನಿಮ್ಮ ಸಂಬಂಧಿಕರು ಯಾರೋ ಜೈಲಿಗೆ ಹೋಗ್ಯಾರಪ್ಪ. ಅಯೋ ಪಾಪ ಜೈಲಿಗೆ ಹೋಗಿ ಬಿಟ್ನಲ್ಲಾ ಅಂತ ಹಣ್ಣು ಕಾಯಿ ಎಲ್ಲಾ ತಗೊಂಡ ಹೋಗೊಲ್ಲ. ಅವನ ನೋಡ್ರಿ ಎಷ್ಟ ಒಳ್ಳೆಮನುಷ್ಯ ಅಂತ ತಿಳಕೊಂಡಿದ್ದಿವಿ ಇಂಥಾ! ಅವನು ಅಯೋಗ್ಯ ಅದಾನ ಇಂಥಾ ಮನೆಹಾಳ ಅದಾನ ಅಂತ ಬೈಯ್ಕೊಂತೀವಿ. ಅದೇ ನಿಮ್ಮ ಬಂಧುಗಳು ಆಸ್ಪತ್ರೆಗೆ ಸೇರ್ಕೊಂಡಬಿಟ್ರೆ! ನೋಡಾಕ ಹೋಗ್ತಿರಲ್ಲಾ, ಆಸ್ಪತ್ರೆಗೆ ನಿಮ್ಮ ಬಂಧುಗಳಾಗಲಿ ಮಿತ್ರರಾಗಲಿ ಹಾಸ್ಪಿಟ್ಲಗೆ ಹೋಗ್ತಿರಿ, ಆಮೇಲೆ ಮಂಜಪ್ಪನವರು ಹೇಳ್ತಾರೆ ಜೈಲಲ್ಲಿರೋ ಖೈದಿಗಿಂತಲೂ ಆಸ್ಪತ್ರೆಯಲ್ಲಿರೋ ರೋಗಿ ಏನೋ ದೊಡ್ಡ ಅಪರಾಧ ಮಾಡಿದಾನೆ,? ನಮ್ಮ ದೃಷ್ಟಿಯಲ್ಲಿ ಅವನು ಅಪರಾಧ ಮಾಡಿಲ್ಲ; ನಮ್ಮ ದೃಷ್ಟಿಯಲ್ಲಿ ಅವನು ಒಳ್ಳೆಯವನೇ; ಅಂದ್ರೆ ದೇವರ ದೃಷ್ಟಿಯಲ್ಲಿ ಅವನು ಏನೋ ದೊಡ್ಡ ಅಪರಾಧ ಮಾಡಿದಾನೆ, ಮಂಜಪ್ಪನವರು ಏನ ಹೇಳ್ತಾರೆ ಅಂದ್ರೆ? ನೋಡಪ್ಪಾ! ಜೈಲಲ್ಲಿರೋ ಖೈದಿಗೆ ಇನ್ನೊಬ್ರು ಶಿಕ್ಷೆ ಕೊಡಬೇಕಲ್ವಾ? ಪೋಲೀಸರೋ, ಅಥವಾ ಮತ್ಯಾರೋ ಬಂದು ಹೊಡಿಯೋದೋ, ಬಡಿಯೋದೋ ಮಾಡಬೇಕು. ಆದ್ರೆ ಆಸ್ಪತ್ರೆಯಲ್ಲಿರೋ ರೋಗಿಗೆ ಯಾರು ಶಿಕ್ಷೆಕೊಡ್ತಾ ಇಲ್ಲಾ, ಆದ್ರೆ ಹೆಚ್ಚಾಗಿ ನರಳವರು ಯಾರು? ಆಸ್ಪತ್ರೆಯಲ್ಲಿರುವವರು. ಅಯ್ಯೋ! ಅಮ್ಮಾ, ದೇವ್ರೆ ನನಗ್ಯಾಕಪ್ಪಾ ಇಂಥದ್ದ ತಂದೆ ಅಂತಹೇಳಿ ನರಳ್ತಿರ್ತಾರೆ. ಎಲ್ಲರೂ ಅಯ್ಯೋ ಪಾಪ ಅಂತಿರ್ತಾರೆ. ಅವರು ನರಳ್ತಿರ್ತಾರೆ. ಆದ್ರೆ ಜೈಲಲ್ಲಿರೋ ಖೈದಿ ನರಳ್ತಾಇಲ್ಲಾ, ಅವನೇನೋ ಹೊಟ್ಟೆಡಪಾಡಿಗಾಗಿ

ತಪ್ಪು ಮಾಡಿರಬಹುದು. ಯಾರ್ದೋ ಕದ್ದಿರಬಹುದು. ಅಥವಾ ಏನೋ ಸುಳ್ಳು ಹೇಳಿರಬಹುದು, ಏನೋ ಸಿಕ್ಕಹಾಕೊಂಡಿರಬಹುದು, ಆದ್ರೆ ದೇವರ ದೃಷ್ಟಿಯಲ್ಲಿ ರೋಗಿ ಏನೋ ದೊಡ್ಡ ಅಪರಾಧ ಮಾಡಿದಾನೆ. ಏನೋ ತಿನ್ನೊದ್ರಲ್ಲೋ, ಏನೋ ಗಳಿಸಿ ಇಟ್ಕೊಳ್ಳೊದ್ರಲ್ಲೋ, ಜಿಪುಣತನದಲ್ಲೊ ಮತ್ತೇನೋ ತಪ್ಪ ಮಾಡಿರಬಹುದು. ಅದಕ್ಕೆ ಅವನಿಗೆ ಅಂತಾ ಶಿಕ್ಷೆ. ಮತ್ತೆ ನಾವು ರೋಗಿಗಳನ್ನ ತಕ್ಷಣ ನೋಡ್ಲಿಕ್ಕೆ ಹೋಗ್ತಿವಲ್ಲಾ ರೋಗಿಗಳಾದ ಕೂಡ್ಲೆ. ಜೈಲಿಗ್ಹೋದವರ ಬಗ್ಗೆ ನಮಗೆ ಸಿಟ್ಟಿರ್ತದೆ. ಆಸ್ಪತ್ರೆಗೆ ಹೋಗುವಾಗ ಅವರ ಬಗ್ಗೆ ಅನುಕಂಪ ಇರುತ್ತೆ ಅಷ್ಟೇ ಅಲ್ಲ. ಆಸ್ಪತ್ರೆಗೆ ಹೋಗುವಾಗ ಹೆಮ್ಮೆಯಿಂದ ಹೋಗ್ತಾರವರು, ರೋಗಿಯಾಗಿದಿವಿ ರೆಸ್ಪತಗೊಳ್ಳೋಕೆ ಹೋಗ್ತಿನಿ, ಮತ್ತ್ಯಾವುದೋ ಹೃದಯಾಲಕ್ಕೆ ಹೋಗ್ತಿವಿ. ಅಪೋಲೋಕ ಹೋಗ್ತಿವಿ. ಅಂತಾ ಹೋಗ್ತಾರೆ, ಅವರಿಗೆ ಖುಷಿ. ದೊಡ್ಡ-ದೊಡ್ಡ ಆಸ್ಪತ್ರೆಗೋಗುವಾಗ ಏನೋ ಒಂಥರಾ ಖುಷಿ. ಅದನ್ನ ಸ್ಟೇಟಸ್ ಅಂತ ತಿಳಕೊಂಡ ಬಿಟ್ಟಿದಾರಂತ ಕಾಣಸ್ತದ. ಆದ್ರೆ ನಾನ್ನೊಂದು ಆಸ್ಪತ್ರೆಗೆ ಹೋಗಿರೋರ್ನ ತಕ್ಷಣ ಯಾಕೆ ನೋಡಾಕ ಹೋಗ್ತಿವಿ ಗೊತ್ತಾ? ಅದರಲ್ಲೂ ಒಂದು ಮಾನಸಿಕ ಒಂದ ಮನಶ್ಯಾಸ್ತ್ರವಿದೆ, ಏನು? ನೀ ನನಗೆ ನನ್ನ ಸ್ನೇಹಿತ ಯಾರೋ ಮಲಕ್ಕೊಂಡ ಬಿಟ್ಟಿದಾನೆ, ಆ ತಕ್ಷಣ ನೋಡಾಕ ಹೋಗ್ತಿವಿ ಯಾಕ ಹೋಗ್ತಿವಿ? ಈ ಅದಕೊಂದು ಉದಾಹರಣೆ ಕೊಡ್ತಿರ್ತಿನಿ ನಾನು ಪ್ರವಚನದಲ್ಲಿ. ನೀವು ಈ ಮದುವೆಯಲ್ಲಿ ಹೆಣ್ಣು ಗಂಡಿಗೆ ಹಾಕ್ತಿರಲ್ಲಾ ದುಡ್ಡು ಪಾತ್ರೆನೋ ಅಥವಾ ಮತ್ತೆನೋ ಮಾಡ್ತಿರಲ್ಲಾ! ಅದಕ್ಕೇನಂತ ಕರೀತಿರಿ.! ಮುಯ್ಯಿ. ಕರೆಕ್ಟ, ಮುಯ್ಯಿ, ಇಂಗ್ಲೀಷನಲೆಲ್ಲ 'ಪ್ರಜೇಂಟೇಶನ' ಅಂತಾರೆ ಹುಡುಗುರು. ಏನಂತಿರಿ ಕನ್ನಡದಲ್ಲಿ? ಆದ್ರೆ ನಿಜವಾಗಿಯೂ ನಮ್ಮ ಹಳ್ಳಿ ಭಾಷೆನಲ್ಲಿ ಇದಕ್ಕೇನಂತ ಕರೀತಿವಿ ಮುಯ್ಯಿ. ಅಂದ್ರೆ ಅದರ ಅರ್ಥ ಏನು? ಇವತ್ತು ನಾನು ನಿನ್ನ ಮಗನಿಗೆ ಕೊಟ್ಟಿದಿನಿ, ನಾಳೆ ನೀನು ನನ್ನ ಮಗನ ಮದುವೆಗೆ ಕೊಡಬೇಕು ಅಂತ ಅರ್ಥ. ಮುಯ್ಯಿ ತಿರ್ಸೋದು. ಹಾಗೆ ಆಸ್ಪತ್ರೆಗೆ ಹೋಗುವ ಹಿನ್ನಲೇನು ಅದೆ. ಇವತ್ತು ನೀನು ಮಲಗಿದೆಯಾ ಬಂದಿದಿನಿ. ನಾಳೆ ನಾನು ಮಲಕೊಂಡಾಗ ನೀನು ಬರಬೇಕೂ ಅಂತ. ಗೋತ್ತಾಯಿತ್ತಲ್ವಾ, ಅದಕ್ಕ ಸಿದ್ಧತೆ ಮಾಡಕೊಳ್ತಾ ಇದ್ದಿವ ನಾವು. ಆಸ್ಪತ್ರೆಯವರಿಗೆ ಹೋಗಿ ಹೇಳ್ತಿರ್‍ತಾರೆ, ಅಯ್ಯೋ ಪಾಪ ನೀ ಹಿಂಗಿಂಗಾಗಿ ಹೋಗಿ ಬಿಡ್ತಾ, ಹಿಂಗಾಂಗಬಾರದಿತ್ತು, ಮತ್ತ ಇನ್ಯಾರಿಗೆ ಆಗಬೇಕಾಗಿತ್ತು. ಏನೋ ತಪ್ಪ ಮಾಡ್ತೀವಿ ನಾವು, ಪ್ರಕೃತಿ ವಿರುದ್ಧವಾಗಿ ನಡ್ಕೊಳ್ಳತೀವಿ ನಾವು. ವಿಪರೀತ ತಿಂತೀವಿ. ಏನೋಮಾಡ್ತಿವಿ ಅಥವಾ ವ್ಯಾಯಾಮ ಇಲ್ಲಾ. ಅಥವಾ ಚಿಂತನೆ ಸರಿಇಲ್ಲಾ ಅದಕ್ಕೆ ನಮಗೆ ಇಂಥಾ ರೋಗಗಳೆಲ್ಲಾ ಬರುತ್ತೆ.

ಅದಕ್ಕೆ ಬಂಧುಗಳೇ! ನಾವು ಇಲ್ಲಿ ತಿಳ್ಕೋಬೇಕು, ಸರಿಯಾದ ಆರೋಗ್ಯ ಪ್ರಾಪ್ತಿ ಮಾಡ್ಕೊಬೇಕಂತಂದ್ರೆ ನಾವು ನಮ್ಮ ಜೀವನವನ್ನು ಸರಿಯಾಗಿ ಇಟ್ಕೊಳ್ಳೋಣ, ಕೊತೆಗೆ ನಮ್ಮ 'ಪಂಚ್ಯುನೇಶನ್' ಏನ ಬೆಳಿಗ್ಗೆ ಏಳತಕ್ಕಂತದ್ದು, ಮಲಗತಕ್ಕಂತದ್ದು, ಇದನ್ನೆಲ್ಲ ಸರಿಯಾಗಿಟ್ಟುಕೊಳ್ಳೋಣ, ಪೂರ್ಣ ಆರೋಗ್ಯವಂತರಾಗಿ ಬದುಕುವದು ನಮ್ಮ ಗುರಿ. ಅಂದ್ರೆ ಸಂಪೂರ್ಣ ಆರೋಗ್ಯ ಪ್ರಾಪ್ತಿ ಮಾಡ್ಕೋಬೇಕು. ಅಂದ್ರೆ! ಎಲ್ಲಿಂದ ಶುರುಮಾಡೋಣ ನಾವು? ಎಲ್ಲಿಂದ ತಿಳ್ಕೋಳಾಕ ಶುರು ಮಾಡಬೇಕು. ಅದಕ್ಕೆ ನಮ್ಮ ಭಾರತ ದೇಶದಲ್ಲಿ ಯಾವುದನ್ನೋ ಚಿಂತೆ ಮಾಡಿದ್ರೂ ಕೂಡ ಯಾವುದರ ಬಗ್ಗೆ ಆಲೋಚನೆ ಮಾಡಿದ್ರು ಕೂಡಾ ಮೊಟ್ಟ ಮೊದಲು ಅವರು ವಿಚಾರ ಮಾಡೋದೇನು ಅಂದ್ರೆ ಧರ್ಮ. ಮನುಷ್ಯ ಸಾಧಿಸಬೇಕಾದಂತಾ ಪುರುಷಾರ್ಥಗಳ ಬಗ್ಗೆ ಹೇಳ್ತಾರೆ, ಗೊತ್ತಲ್ವಾ ನಿಮಗೆ ಚತುರ್ ಪುರುಷಾರ್ಥಗಳು ನಾಲ್ಕು ಪುರುಷಾರ್ಥಗಳು, ಧರ್ಮ, ಅರ್ಥ, ಕಾಮ, ಮೋಕ್ಷ ಅಲ್ಲುಧರ್ಮಾನೇ. ಐಷ್ವರ್ಯದ ವಿಷಯದಲ್ಲಿ ಬಂದಾಗಲೂ ಅಷ್ಟೇನೆ. ಆರೂ ಐಷ್ವರ್ಯಗಳನ್ನ ಹೇಳುವಾಗ ಮೊದ್ಲು ಧರ್ಮದ ಬಗ್ಗೇನೇ ಹೇಳ್ತಾರೆ, ಧರ್ಮ ಜ್ಞಾನ, ಹೀಗೆ ಶುರು ಆಗುತ್ತೆ. ಧರ್ಮದ ಬಗ್ಗೆ ನಾವು ಸರಿಯಾಗಿ ತಿಳ್ಕೋಬೇಕು.

ನಾಳಿನ ದಿವಸ ಧರ್ಮ ಅಂದ್ರೆ ಏನು? ಧರ್ಮದ ಪರಿಕಲ್ಪನೆ ಯಾವದೋ ಒಂದು ಜಾತಿಯ ಬಗ್ಗೆ ಅಲ್ಲಾ ನಾ ಹೇಳತಕ್ಕಂತದ್ದು ಮತ್ತು ಯಾವುದೇ ಒಂದು ನೀವು ಕರಕೊಳ್ಳತಕ್ಕಂತ ಧರ್ಮದ ಬಗ್ಗೆ ಅಲ್ಲಾ, ಹೇಳೋದು. ನಿಜವಾದ ಧರ್ಮ ಅಂದ್ರೆ ಯಾವದು? ಈ ವಿಶ್ವಧರ್ಮ ಅಂದ್ರೆ, ವಿಶ್ವದ ನಿಯಮಗಳು, ಪರಮಾತ್ಮ ಮಾಡಿರತಕ್ಕಂತಾ ನಿಯಮಗಳ ಬಗ್ಗೆ ನಾವು ಎಲ್ರೂ ಸಂತೋಷವಾಗಿ ಇರಬೇಕಾದ್ರೆ ಯಾವ ಧರ್ಮವನ್ನ ಅನುಸರಣೆ ಮಾಡಬೇಕು. ಇದರ ಬಗ್ಗೆ ನಾವೆಲ್ರೂ ಸರಿಯಾಗಿ ತಿಳ್ಕೋಳೋಣ ಅದಕ್ಕೋಸ್ಕರವಾಗಿ ನಾಳೆ ನಾವೆಲ್ಲ ಸಿದ್ಧರಾಗಿ ಬರೋಣ ಅಂತ ತಿಳ್ಕೊಂಡ ಹೇಳ್ತಾ. ಇಲ್ಲಿಗೆ ನನ್ನ ಮಾತುಗಳನ್ನ ಮುಗಿಸ್ತಾ ಇದ್ದಿನಿ. ಸರ್ವರಿಗೂ ಶರಣು ಶರಣಾರ್ಥಿ.

# ಅಧ್ಯಾಯ–೪:
# ಪ್ರವಚನ ಪರಂಪರೆ

೪.೧. ಪ್ರವಚನ ಪರಿಣಾಮ

೪.೨. ಪ್ರವಚನಕಾರರು ಸ್ವಾತಂತ್ರ್ಯ ಅಭಿವ್ಯಕ್ತಿ

೪.೩. ಪ್ರವಚನದ ಅವಶ್ಯಕತೆ

೪.೪. ಪ್ರವಚನ ಪ್ರಯೋಜನ

೪.೫. ವಿವಿಧ ಪರಂಪರೆಯ ಪ್ರವಚನಕಾರರು

# ಅಧ್ಯಾಯ-೪

## ಪ್ರವಚನ ಪರಂಪರೆ

ಪ್ರವಚನ-ಇದೊಂದು ಜ್ಞಾನವಾಹಿನಿ. ವಿಶೇಷವಾಗಿ ಮಠ, ಆಶ್ರಮ, ಸಂಘಸಂಸ್ಥೆಗಳು ಹಾಗೂ ವಯಕ್ತಿಕ ಹಿತಾಸಕ್ತಿಯಲ್ಲಿ ಸಂವಹನಗೊಳ್ಳುವ ಪ್ರವಚನಗಳು ಧನಾತ್ಮಕವಾಗಿ ಮನಪರಿವರ್ತನಾಶೀಲ ಗುಣವನ್ನು ಪಡೆದಿರುತ್ತವೆ. ಒಂದು ಪೂಜ್ಯ, ಪವಿತ್ರ, ಭಾವುಕ ಹಾಗೂ ತಾದಾತ್ಮ್ಯಗಳನ್ನೊಳಗೊಂಡ ಪ್ರವಚನದ ವಲಯವು ಆಕರ್ಷಕವಾಗುವದಕ್ಕೆ ನಮ್ಮ ಪಾರಂಪರಿಕ ಹಿನ್ನೆಲೆಯೂ ಸಾಕ್ಷಿಯಾಗಿದೆ.

ಆಹಾರ ಎರಡು ರೀತಿಯದು-ದವಸ ಧಾನ್ಯಗಳ ಆಹಾರ ದೇಹಪುಷ್ಟಿಗೆ; ಜ್ಞಾನದ ಆಹಾರ ನೆತ್ತಿಗೆ. ದವಸಧಾನ್ಯಗಳ ಆಹಾರವನ್ನು ಒಲೆಯ ಮೇಲೆ ಇಟ್ಟು ತಯಾರಿಸಿ, ಉಂಡರೆ ಜ್ಞಾನವು ತಲೆಯೊಳಗಿಟ್ಟು ತಯಾರಿಸಿ ಉಣ್ಣುವ ಆಹಾರ. ಒಂದರಿಂದ ಶಾರೀರಿಕ ಶಕ್ತಿ ಪ್ರಾಪ್ತವಾದರೆ, ಇನ್ನೊಂದರಿಂದ ಆತ್ಮಶಕ್ತಿ ಜಾಗ್ರತವಾಗುತ್ತದೆ. ಮನುಷ್ಯ ಕೇವಲ ಅನ್ನದಿಂದ ಮಾತ್ರ ಬದುಕಲಾರನು. ಜ್ಞಾನವು ಆತನಿಗೆ ಅವಶ್ಯವಿದೆ. ಮನುಷ್ಯ ತಿನ್ನುವುದರ ಜೊತೆಗೆ ವಿಚಾರ ಮಾಡಬೇಕು ಎಂಬುದನ್ನು-ನಮ್ಮ ಹೊಟ್ಟೆ ಕೆಳಗೆ, ತಲೆ ಮೇಲೆ ಇರುವುದೇ ಗಟ್ಟಿಗೊಳಿಸುತ್ತದೆ. ಮಾತು ಮತ್ತು ಆಹಾರ ನಮ್ಮ ಭಾವನೆಗಳಿಗೆ ಸಂಬಂಧಿಸಿದ್ದಾಗಿದೆ. ಉತ್ತಮ ಪರಿಸರದಲ್ಲಿ ಅಲೆಅಲೆಯಾಗಿ ಬರುವ ವಿಚಾರ ಪ್ರವಾಹವು, ಉತ್ತಮ ಪರಿಸರದಲ್ಲಿ ಪ್ರಸಾದವೆಂಬ ಪರಿಭಾವನೆಯಲ್ಲಿ ಉಣ್ಣುವ ಆಹಾರವು ಮನುಷ್ಯನ ವ್ಯಕ್ತಿತ್ವವನ್ನು ವಿಕಸನಗೊಳಿಸುವುದಲ್ಲದೇ, ಉತ್ತಮ ದೇಹ-ಮನಸ್ಸಿನ ಗುಣವನ್ನು ರೂಪಿಸುತ್ತದೆ.

ಮಾತುಗಾರಿಕೆಯನ್ನು ಪುರಾಣ, ಕೀರ್ತನ, ಭಾಷಣ, ಉಪನ್ಯಾಸ ಸ್ಥೂಲವಾಗಿ ಪ್ರವಚನಗಳೆಂದು ವಿಂಗಡಿಸಬಹುದು. ಪುರಾಣ ನಿರೂಪಣೆಯಲ್ಲಿ ಹರಿಕಥೆ, ಶಿವಕಥೆಗಳೆಂದೂ ಅದರಲ್ಲಿಯೂ ಪ್ರಧಾನ-ಪೂರಕಗಳೆಂಬ ಅಂಶಗಳೂ ಕೂಡಿದ್ದು ತತ್ತ್ವಕೇಂದ್ರವಾದ ಅಂಶಗಳನ್ನು ಅವು ಪ್ರತಿಪಾದಿಸುತ್ತಿರುತ್ತವೆ.

ಇದು ಕತೆಗೆ, ತತ್ತ್ವಜ್ಞಾನಕ್ಕೆ ಆಸ್ಪದ ನೀಡುತ್ತದೆ. ಹೂಗಳನ್ನು ದಾರದಿಂದ ಪೋಣಿಸಿ ಹಾರ ಮಾಡಿದ ಹಾಗೆ! ಇಲ್ಲಿ ಆತ್ಮ-ಪರಮಾತ್ಮ ಬಂಧ-ಮೋಕ್ಷ, ದೇವರ ಅಸ್ತಿತ್ವ-ದೇವರ ಸ್ವರೂಪ ಮುಂತಾದ ತಾತ್ವಿಕ ವಿಷಯಗಳನ್ನು ಒಳಗೊಂಡ ಕತೆಗಳಿರುತ್ತವೆ. ಹಾರದಲ್ಲಿ ದಾರ ಗೌಣವಾಗಿರುವಂತೆ, ಪ್ರವಚನದಲ್ಲಿ ಕತೆ ಇರುತ್ತದೆ. ದಾರವಿರದೆ ಹಾರವಿಲ್ಲ; ಕಥೆಯಿರದೆ ಪ್ರವಚನವಿಲ್ಲ. ಕಥೆ ನಿಮಿತ್ತ ಮಾತ್ರವಾಗಿ ಮಾತಿಗೆ ತತ್ತ್ವಪ್ರಧಾನವಾಗಿರುವುದೇ ಪ್ರವಚನ.

ಜೀವನ ಕೇವಲ ವೈಚಾರಿಕತೆಯಿಂದ ಸಾಗದು. ವ್ಯಕ್ತಿ ಸುಳಿದೆಗೆದು ಬೆಳೆಯಬೇಕಾದರೆ, ಸದ್ಭಾವನೆ, ಸುಜ್ಞಾನ, ಸದಾಚಾರಗಳ ಅವಶ್ಯಕತೆ ಇದೆ. ಕೊಂಚ ಮಟ್ಟಿನ ಭಾವುಕತೆಯೂ ಬೇಕಾಗುತ್ತದೆ. ಆಪ್ತಸಂಬಂಧಗಳನ್ನು ಮಧುರಗೊಳಿಸಲು ಭಾವುಕತೆಯೆಂಬುದು ಒಂದು ಅವಶ್ಯಕ ಪರಿಭಾವನೆಯಾಗಿದೆ. ಈ ಬಗೆಯ ಮಾನಸಿಕ, ನೈತಿಕ, ಅಂಶಗಳು ಪ್ರವಚನ ರೂಪದಲ್ಲಿ ಎಲ್ಲರಿಗೂ ದೊರೆಯುತ್ತವೆ.

**ಪ್ರವಚನ ಪರಂಪರೆ :**

ಪರಂಪರೆ ಎಂಬುದು ಮಾನವನ ವಿಕಾಸದೊಂದಿಗೆ ಬೆಳೆದುಬಂದಿದೆ. 'ಪರಂಪರೆ', ಎಂಬ ಶಬ್ದಕ್ಕೆ ವಿಶಿಷ್ಟವಾದ ಅರ್ಥವಿದೆ. ಅದು ಸರ್ವವ್ಯಾಪಿ ಯಾಗಿರುವದರೊಂದಿಗೆ ಸರ್ವರಿಗೂ ಸಮ್ಮತವಾಗಿರುವುದು. ಪರಂಪರೆ ಎಂಬುದು ಹರಿಯುವ ನೀರಿನಂತೆ. ಅದು ಸಂಪ್ರದಾಯದಂತೆ ಮಡುಗಟ್ಟಿರುವದಿಲ್ಲ. ನಿರಂತರ ಚಲನ ಶೀಲ ಗುಣ ಪರಂಪರೆಯದು. ಇದು ಜೀವಂತಿಕೆಗೆ ಸಾಕ್ಷಿ. ಹಾಗಾಗಿಯೇ ಪರಂಪರೆಯೊಂದಿಗೆ ಗುರುತಿಸಿಕೊಂಡು ಕಾಲಕಾಲಕ್ಕೆ ಬೇಕಾದ ಬದಲಾವಣೆಗಳೊಂದಿಗೆ, ಸೇರ್ಪಡೆಗಳೊಂದಿಗೆ ಪ್ರವಚನವು ಕನ್ನಡದ ಜೀವಂತ ಸಾಹಿತ್ಯ ಪ್ರಕಾರವಾಗಿದೆ. ಇದು ಮುಖ್ಯವಾಗಿ ಮೌಖಿಕ ಪರಂಪರೆಯಾಗಿ ಬಂದಿದೆ. ಅಪೌರುಷವೆಂದು ಹೇಳಲಾಗುತ್ತಿರುವ 'ವೇದ'ಗಳಿಗೆ ಪರಂಪರೆಯಿದೆ. ಅವು ಬರವಣಿಗೆಗೆ ಬರುವ ಮುನ್ನ ಅಥವಾ ಇಂದಿಗೂ ಬಾಯಿಂದ ಬಾಯಿಗೆ ಸಾಗಿ ಬಂದವು. ಋಗ್ವೇದ, ಯಜುರ್ವೇದ, ಸಾಮವೇದ, ಕಾಲಾಂತರದಲ್ಲಿ ಅಥರ್ವವೇದ ಹೀಗೆ ನಾಲ್ಕು ವೇದಗಳು ಹುಟ್ಟಿಕೊಂಡವು. ಇವು ಮಾನವೀಯ ಮೌಲ್ಯಗಳನ್ನು ಒಳಗೊಂಡಿದ್ದು, ಲೌಕಿಕ-ಅಲೌಕಿಕ ವಿಚಾರಗಳನ್ನು ತುಂಬಿಕೊಂಡಿವೆ. ಅಂದಿನ, ಇಂದಿನ, ಮುಂದಿನ ಮಾನವರ ಜೀವನ ಕ್ರಮಗಳನ್ನು, ಮಾನವನ ಜನನದ ಮೂಲ ಉದ್ದೇಶಗಳನ್ನು ಈ ವೇದಗಳಲ್ಲಿ ಕಾಣಬಹುದಾಗಿದೆ. ಇದನ್ನು ಉಚ್ಚರಿಸುವ ಒಂದು ಪರಂಪರೆಯೇ ಇದೆ. ಅವು ವೇದವನ್ನು ಇಂದಿಗೂ ರಕ್ಷಿಸಿವೆ. ಇಲ್ಲಿ ಮುಖ್ಯವಾದ ಅಂಶವೆಂದರೆ ಆಧುನಿಕವಾಗಿ ಒಂದು ವಿಶಿಷ್ಟ ಸಮೂಹ ಸಂವಹನ ಮೌಖಿಕ ಪರಂಪರೆ ಎನಿಸಿರುವ ಪ್ರವಚನ ಪರಂಪರೆಯ ಆರಂಭಿಕ ನೆಲೆಯನ್ನು ಇದು ಸಾರುತ್ತಿದೆ. ಸಾರ್ವಜನಿಕವಾಗಿ ಮುಟ್ಟಿಸಲು ಹಲ-ಕೆಲವರು ಈ ಕಾರ್ಯಕ್ಕಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟರು. ಅಂಥವರಿಗೆ ಸಮಾಜದಲ್ಲಿ ಉನ್ನತ ಸ್ಥಾನ ಲಭಿಸಿತು. ವೇದಗಳನ್ನು ಕಂಠಪಾಠ ಮಾಡಿ ಜನರಿಗೆ ಹೇಳುವ ಕಲೆ ಸಾಮಾನ್ಯವಾದುದೇನಲ್ಲ! ಕಂಠಪಾಠದ ಕಾಲ ಮುಗಿಯುತ್ತ ಬಂದಾಗ ಅವುಗಳನ್ನು ಬರೆದಿಡುವ ಪ್ರಯತ್ನ ನಡೆದು ಯಶಸ್ವಿಯಾಯಿತು. ಹೀಗೆ ವೇದಗಳನ್ನು ಬರೆದಿಡುವ ಪರಂಪರೆ ಬಂದು ಮುಂಬರುವ ಜನಾಂಗಕ್ಕೆ ವೇದಗಳ ಸಾರವನ್ನು ಅರಿಯಲು ಅನುಕೂಲವಾಯಿತು.

ವೇದಗಳನ್ನು ಅವುಗಳಲ್ಲಿಯ ಕೆಲವು ಮಹತ್ವದ ಮಂತ್ರಗಳನ್ನು ಅವುಗಳ ನಂತರ ಬಂದಂತಹ ಉಪನಿಷತ್ತುಗಳನ್ನು, ಭಗವದ್ಗೀತೆಯನ್ನು ಕಂಠಪಾಠ ಮಾಡಿ ನಿರ್ದಿಷ್ಟ ಜನರಿಗೆ ನಿರ್ದಿಷ್ಟ ಜನರು ಬೋಧಿಸಲು ಪ್ರಾರಂಭಿಸಿದರು. ಹೀಗೆ ಹೇಳುವವರಿಗೆ 'ಆಚಾರ್ಯ'ರೆಂದು, 'ಪುರೋಹಿತ'ರೆಂದೂ, ಗುರುಗಳೆಂದೂ ಕರೆಯಲು ಪ್ರಾರಂಭಿಸಿದರು. ಗ್ರಂಥಗಳಲ್ಲಿಯ ಮಂತ್ರಗಳನ್ನು ಕಂಠಪಾಠ ಮಾಡುವದು, ಅವುಗಳನ್ನು ಜನರಿಗೆ ಹೇಳುವುದೇ ಒಂದು ಸೋಜಿಗದ ಸಂಗತಿ ಎಂದು ಇಂದಿನವರಿಗೆ ಅನ್ನಿಸಬಹುದು. ಕಂಠಪಾಠ ಮಾಡಿದ ಮಹಾನುಭಾವರು ಅಂದು ಇದ್ದದು ಅಷ್ಟೇ ಸತ್ಯ. ಇಂದಿಗೂ ಸಹ ಭಗವದ್ಗೀತೆಯನ್ನು, ಬಸವಣ್ಣನವರ, ಅಕ್ಕಮಹಾದೇವಿ, ಅಲ್ಲಮಪ್ರಭು ಮುಂತಾದ ಶರಣರ ವಚನಗಳನ್ನು, ದಾಸರ ಪದ್ಯಗಳನ್ನು, ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯನ್ನು ಕಂಠಪಾಠ ಮಾಡಿ ಹೇಳುತ್ತಿರುವರು ಇರುತ್ತಾರೆ. ಒಂದೇ ಒಂದು ವೇದವನ್ನು ಕಂಠಪಾಠ ಮಾಡಿದವರಿಗೆ 'ವಂಗಪಾಠಿ' ಎಂದೂ, ಎರಡು ವೇದಗಳನ್ನು ಕಂಠಪಾಠ ಮಾಡಿದವರಿಗೆ "ದ್ವಿಪಾಠಿ"ಗಳೆಂದೂ, ಮೂರು ವೇದಗಳನ್ನು ಕಂಠಪಾಠ ಮಾಡಿದವರಿಗೆ "ತ್ರಿಪಾಠಿ"ಗಳೆಂದೂ, ನಾಲ್ಕು ವೇದಗಳನ್ನು ಕಂಠಪಾಠ ಮಾಡಿದವರಿಗೆ "ಚೌಪಾಠಿ"ಗಳೆಂದು ಕರೆಯುತ್ತಾರೆ. ಉತ್ತರ ಭಾರತದಲ್ಲಿ ಮೇಲಿನ ಅಡ್ಡಹೆಸರಿನ ಜನರಿರುವುದನ್ನು ಕಾಣಬಹುದು. ವೇದಗಳನ್ನು ಅವುಗಳ ಅಂಗಗಳನ್ನು "ಪಠಣ" ಮಾಡಿದವರಾಗಿದ್ದರಿಂದ ಆ ರೀತಿ ಹೆಸರುಗಳು ಬಂದವು.

ಹೀಗೆ ಹೇಳುವ-ಕೇಳುವದಕ್ಕೆ ಪ್ರವಚನದ ಪರಂಪರೆಯೆಂದು ಕರೆಯಲು ಸಾಧ್ಯವೆ ? ಎಂಬುದನ್ನು ಸ್ವಲ್ಪ ವಿಚಾರಿಸಬೇಕಾಗುವದು. ವೇದಗಳಲ್ಲಿಯ ಹಾಗೂ ಅವುಗಳಿಂದ ಉಲ್ಲೇಖಿತಗೊಂಡ ಇತರ ಗ್ರಂಥಗಳ ವಿಚಾರಗಳನ್ನು ಹೇಳುವುದನ್ನು ನೋಡಿದರೆ ಅದೊಂದು ರೀತಿಯ ಪ್ರವಚನವೆಂದು ಒಪ್ಪಿಕೊಳ್ಳಬಹುದು. ಆದರೆ ಈ ರೀತಿ ಹೇಳುವದು-ಕೇಳುವದು ನಿರ್ದಿಷ್ಟವಿದ್ದ ಜನರಿಗೆ ಅದು ಕಟ್ಟುನಿಟ್ಟಾಗಿ ಸಾಗುತ್ತಿತ್ತು, ಅದು ಸಾರ್ವತ್ರಿಕವಾಗಿರಲಿಲ್ಲ. ಆದ್ದರಿಂದ ಇದಕ್ಕೆ ಅಧ್ಯಯನ ಎಂದು ಕರೆಯಬೇಕಾಗುವದು. ಆದ್ದರಿಂದ ಇದಕ್ಕೆ ಅಧ್ಯಯನ ಪರಂಪರೆಯೆಂದು ಹೆಸರಿಸುವದು ಯೋಗ್ಯ. ಪ್ರವಚನವು ಸಾರ್ವತ್ರಿಕವಾಗಿರುವದರಿಂದ ಇಲ್ಲಿ ಅದು ದೊರೆಯಲಾರದು ಒಟ್ಟಿನಲ್ಲಿ "ಪ್ರವಚನದ ಸುಳುಹು" ಇಲ್ಲಿದೆ!

ನಂತರದಲ್ಲಿ ಪ್ರಚಲಿತಕ್ಕೆ ಬಂದವುಗಳೇ ಉಪನಿಷತ್ತುಗಳು. ಮಹಾಮುನಿಗಳು ಆಧ್ಯಾತ್ಮಿಕ ಸಾಧನೆ ಮಾಡಿ ಅವುಗಳಿಂದೊದಗಿದ ಅನುಭವನ್ನುಹಿಡಿದಿಟ್ಟ ವಿಚಾರಗಳು ಉಪನಿಷತ್ತುಗಳಲ್ಲಿವೆ. ಇವೆಲ್ಲವೂ ಆಧ್ಯಾತ್ಮ ಮಾರ್ಗಕ್ಕೆ ಪೂರಕವಾಗಿದ್ದವು. ಇಲ್ಲಿಯೂ ಸಹ ಬೋಧನೆ ಸಾರ್ವತ್ರಿಕವಾಗಲಿಲ್ಲ. ಆದರೆ ಪ್ರವಚನದ ರೂಪುರೇಷೆ ಇಲ್ಲಿ ಸಿದ್ಧವಾದವು.

ಯೋಗವನ್ನರಿತ ಋಷಿ ಮುನಿಗಳು ಯೋಗದ ಕುರಿತು ವಿಚಾರ ವಿಷಯಗಳನ್ನು ಪ್ರತಿಪಾದಿಸಲು ಪ್ರಾರಂಭಿಸಿದರು. ಅದರಂತೆ ಯೋಗಗಳನ್ನು ಮಾಡುವ ವಿಧಿ-ವಿಧಾನಗಳನ್ನು ತಿಳಿಸಿ ಯೋಗಗಳನ್ನು ಮಾಡಿಸಿದರು. ಯೋಗಗಳನ್ನು ಮಾಡುವುದರಿಂದಾಗುವ ಪ್ರಯೋಜನೆಗಳನ್ನು ಜನರಿಗೆ ಬೋಧಿಸಿದರು. ಪ್ರಮುಖ ಯೋಗಗಳಾದ ೧) ಮಂತ್ರಯೋಗ ೨) ರಾಜಯೋಗ ೩) ಹಠಯೋಗ ೪) ಲಯಯೋಗ ೫) ಶಿವಯೋಗ ಇವುಗಳ ಗುಟ್ಟುಗಳನ್ನು ಹೇಳಲು ಪ್ರಾರಂಭಿಸಿದರು. "ಚಿತ್ತ ವೃತ್ತಿ ನಿರೋಧ; ಯೋಗ;" ಎಂಬುದನ್ನು ಸ್ಪಷ್ಟಪಡಿಸಿದರು. ಶಾರೀರಿಕ, ಮಾನಸಿಕ, ಬೌದ್ಧಿಕ ಸಮಾಧಾನವು ಇದರಿಂದಾಯಿತು. ಯೋಗಗಳನ್ನು ಕಟ್ಟುನಿಟ್ಟಾಗಿ ಕಲಿಸುವದರೊಂದಿಗೆ ಯಾವ-ಯಾವ ಯೋಗಗಳನ್ನು ಯಾವಾಗ ಮಾಡಬೇಕು, ಅವುಗಳಿಂದಾಗುವ ಪರಿಣಾಮಗಳನ್ನು ಹೇಳಲು ಪ್ರಾರಂಭಿಸಿದರು. ಯೋಗಗಳನ್ನು ಮಾಡಿ ತೋರಿಸಿ, ಯೋಗ ಮಾಡಿಸಿ ಅವುಗಳ ವಿವರಣೆ ಕೊಡುವವರಿಗೆ "ಯೋಗ ಗುರುಗಳೆಂದು" ಕರೆದರು. ಇದರಿಂದ ಶಾರೀರಿಕ ಸದೃಢತೆ, ಮಾನಸಿಕ ನೆಮ್ಮದಿ, ಬೌದ್ಧಿಕ ವಿಕಾಸವಾಗಲು ಸಹಕಾರಿಯಾಯಿತು. ಇದರಿಂದಾಗಿ ಯೋಗಪ್ರವಚನದ ಪರಂಪರೆಯು ಬೆಳೆದು ಬಂದಿತು. ಯೋಗಗಳನ್ನು ಅನುಸರಿಸುವವರಿಗೆ ಈ ಪ್ರವಚನವು ಅಪ್ಯಾಯಮಾನವಾಯಿತು. ಯೋಗಗಳ ಕುರಿತು ಮಾಡಿದ ಪ್ರವಚನಗಳು ಪುಸ್ತಕ ರೂಪದಲ್ಲಿ ಮೂಡಿ ಬಂದವು. ರಾಜಯೋಗವು ಪತಂಜಲಿ ಋಷಿಯ "ಯೋಗ ಸೂತ್ರಕ್ಕೆ" ಒಳಪಟ್ಟಿರುತ್ತದೆ.

ಷಟ್‌ಶಾಸ್ತ್ರಗಳಲ್ಲಿ ಕೊನೆಯದೇ ವೇದಾಂತ. ಸ್ವ-ಸ್ವರೂಪ ಜ್ಞಾನವನ್ನು ವಿವರಿಸುವದೇ ವೇದಾಂತವೆನ್ನಿಸಿಕೊಳ್ಳುವದು. ಇಲ್ಲಿ ಶ್ರೋತ್ರೀಯ ಬ್ರಹ್ಮನಿಷ್ಠಗುರು ಉತ್ತಮ ಅಧಿಕಾರಿಗೆ ಬೋಧನೆ ಮಾಡಿದರ ವಿವರಣೆ ಇಲ್ಲಿರುತ್ತದೆ. ನಾನು ಯಾರು? ದೇವರು ಅಂದರೆ ಯಾರು? ಜಗತ್ತು ಅಂದರೆ ಏನು? ಇವುಗಳೇ ಇಲ್ಲಿಯ ವಿಷಯಗಳಾಗಿವೆ. ಜೀವ, ಜಗತ್ತು ಈಶ ಈ ಮೂರನ್ನು ಒಳಗೊಂಡಿರುವದೇ ವೇದಾಂತದ ಮೂಲ ವಿಷಯ. ಮೇಲಿನ ಮೂರು ವಿಷಯಗಳನ್ನು ಅರಿಯಬೇಕೆಂದು ಗುರುಗಳ ಒಳಗೆ ಹೋಗಿ ಅವರ ಸೇವೆ ಮಾಡಿ ವೇದಾಂತದೊಳು ಅತಿ ರಹಸ್ಯವಾದುದನ್ನು ತಿಳಿದುಕೊಳ್ಳಬೇಕಾಗುವದು. "ಇದು ವೇದ-ವೇದಾಂತದೊಳು ಗೌಪ್ಯವಾದರ್ಥ-ವಿದು ಪುರಾಣ ಸ್ಮೃತಿಗಳಸಾರ" ಇದು ಪರಮಾರ್ಥದ ತಿರುಳು ತತ್ತ್ವರಹಸ್ಯ-ವಿದು ಪ್ರಾಕೃತವೇ ಎಲ್ಲ ತಿಳಿಯಲ್ಕೆ."೩೬ ಎಂದು ಯಾಜ್ಞವಲ್ಕ್ಯರು ಸತಿಯಳಾದ ಮೈತ್ರೇಯಿಗೆ

---

೩೬ " " ಪರಮಾನುಭವಬೋಧೆ. ಶ್ರೀಮನ್ನ ನಿಜಗುಣಶಿವಯೋಗಿಗಳು. ಶ್ರೋ.ಬ್ರ ಶಿವಪುತ್ರ ಮಹಾಸ್ವಾಮಿಗಳು ಪುಟಸಂಖ್ಯೆ-೩೮೫. ಪದ್ಯನುಡಿ-೨ ಸಂಧಿ-೬ (೧೯೫೦)

ವಿವರಿಸುವದನ್ನು ನೋಡಿದರೆ ಇದು ಎಲ್ಲರಿಗೂ ಬೋಧ ಮಾಡುವ ವಿಷಯವಲ್ಲ ಎಂಬುದು ಖಚಿತವಾಗುತ್ತದೆ. "ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿ" ಮಾಡಿಕೊಳ್ಳಬೇಕೆಂಬ ಹಂಬಲದ ಶಿಷ್ಯನಿಗೆ ಗುರುಗಳು ಈ ವಿಷಯವನ್ನು ಬೋಧಿಸುತ್ತಾರೆ. ಇದು ಒಬ್ಬನಿಗೆ ಬೋಧನೆ ಮಾಡುವಂತಹದ್ದಾಗಿದೆ. ಒಬ್ಬನಿಂದ ಒಬ್ಬರಿಗೆ ಸಾಗುವ ವಿಚಾರವಾಗಿದೆ. ಯಾಜ್ಞವಲ್ಕ ಋಷಿಗಳು ಸತಿಯಳಾದ ಮೈತ್ರೇಯಿಗೆ, ಪರಮಹಂಸರು ವಿವೇಕಾನಂದರಿಗೆ ಚೂಡಾಲಿಯೂ ಶಿಖಿಧ್ವಜನಿಗೆ, ವಸಿಷ್ಠರು ರಾಮನಿಗೆ, ಯಮನು ನಚಿಕೇತನಿಗೆ, ನಾರದರಿಗೆ ನವಕ್ಕುಮಾರರಿಂದ, ರಾಮದಾಸರು ಶಿವಾಜಿಗೆ, ಗಜದಂಡಸ್ವಾಮಿಗಳು ಸಿದ್ಧಾರೂಢರಿಗೆ, ಶಿವಾನಂದರಿಗೆ ರುದ್ರಪ್ಪ ಸ್ವಾಮಿಗಳು, ಶಿವಾನಂದರು ಮಲ್ಲಿಕಾರ್ಜುನ ಸ್ವಾಮಿಗಳಿಗೆ, ಮಲ್ಲಿಕಾರ್ಜುನ ಶಿವಯೋಗಿಗಳು ಜ್ಞಾನಯೋಗಿ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳಿಗೆ ಆಧ್ಯಾತ್ಮಿಕ ವಿಷಯವನ್ನು ಬೊಧಿಸಿರುವದು ಕಂಡು ಬರುವದು. ಈ ರೀತಿ ಹೇಳುವುದಕ್ಕೆ ಪ್ರವಚನ ಎಂದು ಕರೆಯಲಿಲ್ಲ. ಇಲ್ಲಿ ಕೇವಲ ಒಬ್ಬ ವ್ಯಕ್ತಿಗೆ ಅದೂ ಆಸಕ್ತಿ ಇದ್ದವರಿಗೆ ಮಾತ್ರ ಹೇಳಲ್ಪಟ್ಟಿತು. ಇದಕ್ಕೆ ಪ್ರವಚನವೆನ್ನದೆ, 'ಗುರೂಪದೇಶ' ಎಂದು ಕರೆಯಬೇಕಾಯಿತು. ಗುರುವಿನಿಂದ ಪಡೆದ ಉಪದೇಶವನ್ನು ಮನನ ಮಾಡಿಕೊಂಡು, ಅನುಭವಿಸಿ ಶಿಷ್ಯನಾದವನು ಸಾಮಾನ್ಯ ಜನರಿಗೆ ಬೋಧಿಸಲು ಪ್ರಾರಂಭಿಸಿದಾಗ "ಪ್ರವಚನ"ವಾಗಿ ಅದು ಮಾರ್ಪಡುತ್ತದೆ. ಆದರೆ ಗುರುವಿನಿಂದ ಉಪದೇಶ ಪಡೆದವರೆಲ್ಲರೂ ಪ್ರವಚನ ಮಾಡಿದರೆಂದು ಹೇಳುವದು ಕಷ್ಟ. ಕೆಲವರು ಮಾತ್ರ ಪ್ರವಚನ ನೀಡಿ ಸಮಾಜಕ್ಕೆ ಧಾರ್ಮಿಕ–ಆಧ್ಯಾತ್ಮಿಕ ವಿಚಾರ ವಿಷಯಗಳನ್ನು ಅರುಹಿದರು. ಪರಮಹಂಸರಿಂದ ಪಡೆದ ಉಪದೇಶದಿಂದ ದೇಶ–ವಿದೇಶಗಳಲ್ಲಿ ಪ್ರವಚನ ನೀಡಿದ ಶ್ರೇಯಸ್ಸು ಸ್ವಾಮಿವಿವೇಕಾನಂದರಿಗೆ ಸಲ್ಲಬೇಕು. ಅದರಂತೆ ಬಸವಣ್ಣನವರ ಇತರ ಶರಣರ ವಚನಗಳು ಪ್ರವಚನದ ರೂಪದಲ್ಲಿ ಹರಿದು ಬಂದವು. ಶಿವಾನಂದರು, ಸಿದ್ಧಾರೂಢ ಮುಂತಾದವರು ತಾವು ಪಡೆದ ಜ್ಞಾನವನ್ನು ಸರ್ವರಿಗೂ ಪ್ರವಚನದ ಮೂಲಕ ತಿಳಿಸಲು ಸಮರ್ಥರಾದರು. ಕೆಲವರು ಉಪದೇಶ ಪಡೆದರೂ ಪ್ರವಚನ ಮಾಡದೇ ಸ್ವತಃ ಅನುಭವಿಸಿ ಮುಕ್ತರಾದರು. ಉದಾಹರಣೆಗೆ– ಮೈತ್ರೇಯಿ, ಶ್ರೀರಾಮ, ಶಿಖಿಧ್ವಜ, ಮುಂತಾದವರು. ಗುರುಗಳಿಂದ ಪಡೆದ ಉಪದೇಶ ಸಾರವನ್ನು ಪ್ರವಚನದ ಮೂಲಕ ತಿಳಿಸಿದ ವಿಷಯಗಳು ಸರ್ವಕಾಲಕ್ಕೆ ಸತ್ಯವಾದವುಗಳಾಗಿವೆ. ಆತ್ಮ ಸಾಕ್ಷಾತ್ಕಾರಕ್ಕೆ ದಾರಿದೀಪವಾಗಿವೆ. ಪ್ರವಚನದ ಪರಂಪರೆಯು ಗದ್ಯರೂಪದಲ್ಲಿಯೇ ಇರಬೇಕೆಂದೇನೂ ಇಲ್ಲ. ಅದು ಪದ್ಯರೂಪದಲ್ಲಿಯೂ ಇರಬಹುದು. 'ಸಾಂದೀಪಿನಿ' ಋಷಿಯಲ್ಲಿ ಅಭ್ಯಾಸ ಮಾಡಿ ಅವರಿಂದ ಉಪದೇಶ ಪಡೆದುಕೊಂಡವ ಶ್ರೀಕೃಷ್ಣ. ಕಾಲಾಂತರದಲ್ಲಿ ಮಹಾಭಾರತದ ಯುದ್ಧದ ಸನ್ನಿವೇಶದಲ್ಲಿ ಅರ್ಜುನನಿಗೆ 'ಭಗವದ್ಗೀತೆ' ಬೋಧಿಸಿರುವುದು ಪದ್ಯ ಪ್ರವಚನವೆಂದರೆ

ತಪ್ಪಾಗಲಾರದು.! ಮನಸ್ಸಿನ ಪರಿವರ್ತನೆ ,ಮಾಡಲು ಗದ್ಯವಾದರೂ ಅಷ್ಟೆ ಪದ್ಯವಾದರೂ ಅಷ್ಟೆ! ವೇದಗಳ ಉಪನಿಷತ್ತುಗಳು, ಆಗಮಗಳ ಎಲ್ಲ ವಿಚಾರ-ವಿಷಯಗಳು ಭಗವದ್ಗೀತೆಯಲ್ಲಿ ಅಡಕವಾಗಿವೆ. ಅಲ್ಲಿ ಅರ್ಜುನ ಸಾಂಕೇತಿಕವಾಗಿದ್ದಾನೆ ಅಷ್ಟೇ! ಜಗತ್ತಿನ ಜನರೆಲ್ಲರೂ ಅರ್ಜುನೆಂದೇ ಭಾವಿಸಬೇಕು. ಭಗವದ್ಗೀತೆಯ ಮೇಲೆ ಆಗಿರುವಷ್ಟು ಪ್ರವಚನಗಳು ಜಗತ್ತಿನ ಯಾವ ಗ್ರಂಥಗಳ ಮೇಲೂ ಆಗಿಲ್ಲವೆಂಬುದು ಸತ್ಯ ಸಂಗತಿಯಾಗಿದೆ.

ಇವುಗಳೊಂದಿಗೆ 'ಪುರಾಣ' ಪ್ರವಚನ ಬೆಳೆದು ಬಂದುದನ್ನು ಗಮನಿಸಬೇಕು. ಮೊದಲಿದ್ದ ಪುರಾಣಗಳು ಒಟ್ಟು ಹದಿನೆಂಟು. ಅವುಗಳು ದೇವ-ದೇವತೆಗಳ ಮೇಲೆ ರಚಿತವಾದವುಗಳು. ರಚನಾಕಾರರ ಹೆಸರುಗಳು ಸಿಗುವದಿಲ್ಲ. ಒಂದೊಂದು ಪುರಾಣ ಒಂದೊಂದು ದೇವ-ದೇವತೆಗೆ ಸಂಬಂಧ ಪಟ್ಟದ್ದು. ಉದಾಹರಣೆಗೆ "ಶಿವಪುರಾಣ" ಶಿವನ ವಿಷಯಕ್ಕೆ ಸಂಬಂಧ ಪಟ್ಟದ್ದು, ವಿಷ್ಣುಪುರಾಣ ವಿಷ್ಣುವಿಗೆ, ಮಾರ್ಕಂಡೇಯ ಪುರಾಣ ಮಾರ್ಕಂಡೇಯನಿಗೆ ಸಂಬಂಧ ಪಟ್ಟಿದ್ದು. ಹೀಗಲ್ಲದೆ ಸ್ಕಂದ, ಕಲ್ಕಿ, ಮತ್ಸ ಮುಂತಾದ ಪುರಾಣಗಳು ಹಲವಾರು ವಿಷಯ-ವಿಚಾರಗಳನ್ನು ಒಳಗೊಂಡಿರುವದನ್ನು ಗಮನಿಸಬಹುದು. ಪುರಾಣಗಳಲ್ಲಿಯ ಒಂದು ಭಾಗವನ್ನು ಅಲ್ಲಿ ಬರುವ ಒಬ್ಬ ವ್ಯಕ್ತಿಯ ಸುತ್ತಲೂ ಹೆಣೆದಿರುವ ಘಟನೆಯನ್ನೋ ಎತ್ತಿಕೊಂಡು ಪ್ರವಚನದ ಪರಂಪರೆ ಬೆಳೆದು ಬಂದಿತು. ದಶಾವತಾರ, ಅವುಗಳಲ್ಲಿಯ ವ್ಯಕ್ತಿಗಳ ಪರಿಚಯ, ಘಟನೆಗಳು ಪ್ರವಚನಗಳ ಮೂಲಕ ಸಾಗಿ ಬಂದಾಗ ಜನರಿಗೆ ರಂಜನೆ ಉಂಟು ಮಾಡಿದುವಲ್ಲದೆ "ಪುರಾಣ ಪ್ರೇಮ" ಉತ್ಪನ್ನವಾಯಿತು. ಪುರಾಣಗಳಲ್ಲಿಯ ವ್ಯಕ್ತಿಗಳ ಗುಣಾವಗುಣಗಳು, ಘಟನೆಗಳು ತಮ್ಮ ಜೀವನಕ್ಕೆ ಅನ್ವಯಿಸಿಕೊಂಡರು. ವಿಶೇಷವಾಗಿ ಸ್ಕಂದ, ಮತ್ಸ್ಯ, ಗರುಡ, ವಿಷ್ಣು ಮತ್ತು ಶಿವ ಪುರಾಣಗಳು ಆಳವಾದ ಆಭ್ಯಾಸಕ್ಕೆ ತೊಡಗಿಸಿದವು. ಈ ರೀತಿಯಾಗಿ ಪುರಾಣ ಪ್ರವಚನದ ಪರಂಪರೆ ಸಾಗಿ ಬಂದು ಜನರಿಗೆ ಭಕ್ತಿಯ ಮತ್ತು ನೈತಿಕ ಮೌಲ್ಯದ ಬೀಜವನ್ನು ಬಿತ್ತಲು ಕಾರಣವಾಯಿತು.

ನಂತರದಲ್ಲಿ ಬಂದ ಪ್ರವಚನ ಪರಂಪರೆಯೆಂದರೆ ಉಪನಿಷತ್ತುಗಳು ಮತ್ತು ಭಗವದ್ಗೀತೆಯ ಪ್ರವಚನಗಳು. "ಗೌತಮ"ನು ಬುದ್ಧನಾದ ಮೇಲೆ ಅವನ ಪ್ರವಚನಗಳು ಅತ್ಯಂತ ಜನಪ್ರಿಯವಾದುವಲ್ಲದೆ, ಪರಿಣಾಮಕಾರಿಯಾಗಿಯೂ ಇದ್ದವು. ಕಟ್ಟುನಿಟ್ಟಾದ ಧಾರ್ಮಿಕ ಆಚರಣೆಗಳನ್ನು ಖಂಡಿಸಿ ಸುಲಭವಾದ, ಸರ್ವಸಮ್ಮತವಾದ ಅವನ ಪ್ರವಚನಗಳು ಜನರನ್ನು ಆಕರ್ಷಿಸಲು ಸಮತವಾದವು. ಅವನ ಪ್ರವಚನದ ಪರಂಪರೆಯ ಪರಿಣಾಮ ಎಷ್ಟೊಂದು ಗಟ್ಟಿಯಾಗಿತ್ತೆಂದರೆ; ಜಗತ್ತಿನಲ್ಲಿ ಇದೊಂದೆ ಶ್ರೇಷ್ಠ ಧರ್ಮ ಎನ್ನುವಷ್ಟರ ಮಟ್ಟಿಗೆ ಅದು

ನೆಲೆಯೂರಿತ್ತು. ಆದರೆ ಬುದ್ಧನ ನಂತರ ಆ ರೀತಿಯಾಗಿ ಪ್ರವಚನ ನೀಡುವ, ಪರಿಣಾಮ ಬೀರುವ ವ್ಯಕ್ತಿಗಳು ಹಾಗೂ ಪರಿಸ್ಥಿತಿ ನಿಂತು ಹೋದವು.

ಕರ್ನಾಟಕದಲ್ಲಿಯೇ ಬೆಳೆದು ಬಂದಿರುವ ಜೈನಧರ್ಮ ಕುರಿತು ಪ್ರವಚನಗಳ ಪರಂಪರೆಯನ್ನು ಅವಲೋಕಿಸಬಹುದು. ಇಂದಿನ ಕಾಲದಲ್ಲಿದ್ದ ಅಜಿತಸೇನಾಚಾರ್ಯ ಮೊದಲುಗೊಂಡು ಇಂದಿನ ಭಟ್ಟಾರಕರು, ಮುನಿಗಳು, ಶ್ರಾವಕರು, ಪ್ರವಚನ ಕಾರ್ಯಕೈಕೊಂಡಿದ್ದಾರೆ. ಪಂಚಕಲ್ಯಾಣ, ಸಲ್ಲೇಖನಗಳ; ಕುರಿತು ಪ್ರವಚನ ಪರಂಪರೆ ಬಂದಿರುವುದು ಗಮನಾರ್ಹ.

ಇಪ್ಪತ್ತಮೂರು ಜನ ತೀರ್ಥಂಕರಾಗಿ ಹೋಗಿದ್ದರೂ, ಮಹಾವೀರನು ಜೈನ ಧರ್ಮಕ್ಕೆ ನೆಲೆಯೂರಲು ಕಾರಣನಾದನು. ಅವನ ಪ್ರವಚನವು ಬೌದ್ಧ ಜನರ ಪ್ರವಚನಕ್ಕಿಂತ ಭಿನ್ನವಾಯಿತು. ದೇಹದಂಡನೆ, ಮನೋನಿಗ್ರಹ, ಅಹಿಂಸಾ ಮಾರ್ಗದ ಪ್ರವಚನಗಳು ಜನರಿಗೆ ಹಿಡಿಸಿದವು. ಇದರಿಂದಾಗಿ ಜೈನಧರ್ಮದ ಪ್ರವಚನಗಳು ತುಂಬಾ ಪರಿಣಾಮಕಾರಿಯಾದವು. ಭಾರತದಲ್ಲಿಯ ಹಲವಾರು ರಾಜ-ಮಹಾರಾಜರು ಬೌದ್ಧ ಧರ್ಮದ ಅನುಯಾಯಿಯಾಗಿರುವಂತೆ ಜೈನಧರ್ಮದ ಅನುಯಾಯಿಗಳಾಗಿ ಆ ಧರ್ಮದ ಪ್ರವಚನ ಪರಂಪರೆಯನ್ನು ಮುಂದುವರಿಸಿದರು. ರಾಜ-ಮಹಾರಾಜರ ಪ್ರಭಾವದಿಂದಾಗಿ ಜೈನಧರ್ಮವು ವಿದೇಶಗಳಲ್ಲಿ ಹರಡಿತು. ಅಲ್ಲಿಗೂ ಹಲವಾರು ಬೌದ್ಧ ಮತದ ಅನುಯಾಯಿಗಳು ತೆರಳಿ ಪ್ರವಚನಗಳ ಮೂಲಕ ಆ ಧರ್ಮದ ಬೀಜವನ್ನು ಬಿತ್ತಿ ಬಂದರು. ಇಂದಿಗೂ ಸಿಂಹಳ (ಲಂಕಾ) ಬರ್ಮಾ (ಮಯನ್ಮಾರ) ಜಪಾನ, ಚೀನಾ, ಮಂಗೋಲಿಯಾ, ಟಿಬೇಟ್ ಮುಂತಾದ ದೇಶಗಳಲ್ಲಿ ಬೌದ್ಧ ಧರ್ಮವೇ ಪ್ರಧಾನವಾಗಿರುವದನ್ನು ಕಾಣುತ್ತೇವೆ. ಕಾರಣ ಪ್ರವಚನಗಳ ಪರಂಪರೆಯೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ಆದರೆ ಜೈನ ಧರ್ಮವು ಹಾಗೆ ಬೆಳೆಯದೇ ಭಾರತದಲ್ಲೇ ಗಟ್ಟಿಗೊಂಡಿತು. ಇಂದಿಗೂ ಭಾರತದಲ್ಲಿ ಬೌದ್ಧ ಧರ್ಮೀಯರಿಗಿಂತ ಜೈನ ಧರ್ಮೀಯರು ಹೆಚ್ಚಿಗಿರುವದನ್ನು ಗಮನಿಸಬೇಕು ಜೈನಧರ್ಮದ ಪ್ರವಚನದ ಪರಂಪರೆಯು ಕೆಲವು ಅಗ್ರಹಾರಗಳ ಮೂಲಕ ನಡೆವು ಜೈನಮುನಿಗಳು ಪ್ರವಚನದ ಪರಂಪರೆಯನ್ನು ಮುಂದುವರಿಸಿದ್ದಾರೆ.

ಇವೆಲ್ಲವುಗಳ ನಂತರ ಬಸವಣ್ಣನವರ ನೇತೃತ್ವದಲ್ಲಿ ಜರುಗಿದ ವಚನ ಕ್ರಾಂತಿಯು ಪ್ರವಚನದ ಪರಂಪರೆಯನ್ನು ಗಟ್ಟಿಗೊಳಿಸಿತು ಹಾಗೂ ಶಾಶ್ವತವಾದ ನೆಲೆಗಟ್ಟನ್ನು ಒದಗಿಸಿತು. ಅನುಭವ ಮಂಟಪದಲ್ಲಿ ಮೂಡಿಬಂದ ಶರಣರ ವಚನಗಳು ಮುತ್ತಿನಹಾರವಾದವು, ಸ್ಫಟಿಕದ ಶಲಾಖೆಯಾದವು, ಅವರ ಮಾತುಗಳು ಜ್ಯೋತಿರ್ಲಿಂಗಗಳಾದವು. ಸತ್ವಭರಿತ-ತತ್ವಭರಿತ

ವಚನಗಳು ಜನರ ನಾಲಿಗೆಯ ಮೇಲೆ ನಲಿದಾಡತೊಡಗಿದವು. ತಮ್ಮ ದಿನನಿತ್ಯದ ಜೀವನ ಕ್ರಮಕ್ಕೆ ವಚನಗಳನ್ನು ಆಧಾರವಾಗಿಟ್ಟುಕೊಂಡರು. ಮಾನವೀಯ ಮೌಲ್ಯಗಳು ಉನ್ನತೀಕರಣವಾದವು. ಶರಣರ ವಚನಗಳ ವಿಶ್ಲೇಷಣೆ ಪ್ರಾರಂಭವಾದವು. ಒಂದೇ ಒಂದು ವಚನದ ಮೇಲೆ ಅಥವಾ ವಚನದ ಒಂದೇ ಒಂದು ಸಾಲಿನ ಮೇಲೆ ಪ್ರವಚನ ಹೇಳುವದು ರೂಢಿಯಾಯಿತು. ಶರಣರ ವಚನಗಳು ಲೌಕಿಕಕ್ಕೂ, ಅಲೌಕಿಕಕ್ಕೂ ಸಾಧನಗಳಾದವು. ಭಕ್ತಿ, ಜ್ಞಾನ, ವೈರಾಗ್ಯಗಳು ಅವುಗಳಲ್ಲಿ ಹಾಸುಹೊಕ್ಕಾಗಿದ್ದವು. "ಕಾಯಕವೇ ಕೈಲಾಸ" ಎಂಬುದರ ಮೇಲೆಯೇ ಹಲವಾರು ಜನರು ಹಲವಾರು ರೀತಿಯಿಂದ ತಿಂಗಳ ಪರಿಯಂತರ ಪ್ರವಚನ ಮಾಡಿದ್ದಾರೆ ಮಾಡುತ್ತಲಿದ್ದಾರೆ. ಕರ್ನಾಟಕದಲ್ಲಿ ಯಾರೇ ಪ್ರವಚನ ಮಾಡಿದರೂ ಶರಣರ ವಚನಗಳು ಆಪ್ಯಾಯಮಾನವಾಗಿವೆ. ವೇದಗಳಲ್ಲಿ, ಉಪನಿಷತ್ತುಗಳಲ್ಲಿ ನಿಗೂಢವಾದ ವಿಷಯಗಳನ್ನು ಶರಣರು ತಮ್ಮ ವಚನಗಳಲ್ಲಿ ಸರಳವಾಗಿ ಅಷ್ಟೇ ತೂಕದಿಂದ ಹೇಳಿದ್ದರಿಂದ ಪ್ರವಚನಕಾರರಿಗೆ ತುಂಬಾ ಅನುಕೂಲವಾಗಿ ಸಾಮಾನ್ಯರಿಗೆ ಆಧ್ಯಾತ್ಮದ ತಿರಳನ್ನು ಬಿತ್ತರಿಸಲು ಸಾಧ್ಯವಾಯಿತು.

ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಮತ್ತು ಐಕ್ಯ–ಹೀಗೆ ಷಟಸ್ಥಲ ನಿರ್ಮಿಸಿದ ಶರಣರ ದಿವ್ಯ ಮೆಟ್ಟಿಲುಗಳ ಮೇಲಿಂದ ಪ್ರವಚನ ನೀಡುವ ರೂಢಿ ಬಂದಿತು. ಒಂದೊಂದೇ ಸ್ಥಳವು ಮಹತ್ವಪೂರ್ಣವಾದವುಗಳಾಗಿವೆ. ಒಬ್ಬ ವ್ಯಕ್ತಿಯು ಭಕ್ತಸ್ಥಲದಿಂದ ಐಕ್ಯಸ್ಥಲಕ್ಕೆ ಮುಟ್ಟಬೇಕಾದ ಕ್ರಮವನ್ನು ಅವುಗಳಿಗೆ ಸಂಬಂಧಿಸಿದ ಎಲ್ಲ ಶರಣರ ವಚನಗಳ ಉದಾಹರಣೆಗಳೊಂದಿಗೆ ಪ್ರವಚನದ ಪರಂಪರೆ ಸಾಗಿಬಂದಿತು. ಪ್ರವಚನಕ್ಕಾಗಿ ವಚನಗಳ ಆಳವಾದ ಅಧ್ಯಯನ ಅವಶ್ಯಕತೆ ಬೇಕಾಯಿತು. ಅದಕ್ಕಾಗಿ ಅಲ್ಲಲ್ಲಿ "ವಚನ ಕಮ್ಮಟ"ಗಳು ಹುಟ್ಟಿಕೊಂಡವು. "ವಚನ ಎಂದರೆ ಬರಿ ಮಾತಲ್ಲ. ಸತ್ಯಶುದ್ಧವಾದ, ಹಿತಮಿತವಾದ, ಲೋಕಾನುಭವ ಹಾಗೂ ಶಿವಾನುಭವಗಳಿಂದ ಪರಿಪೂರ್ಣವಾದ ಮಾತು. ಬದುಕಿಗೆ ಮಾರ್ಗದರ್ಶನ ಮಾಡಬಲ್ಲ ಇಂತಹ ವಚನಗಳನ್ನು ಬಿಡಿಸಿ ಹೇಳುವದೇ ಪ್ರವಚನ"ವೆನ್ನುವುದು ಹಲವರ ಅಭಿಪ್ರಾಯ. ಹೀಗೆ ವಚನಗಳ ಮೇಲೆ ಪ್ರವಚನ ಮಾಡುವ ಪರಂಪರೆಯನ್ನು ಕೆಲವರು ಮುಂದುವರಿಸಿದರು ಗುಬ್ಬಿಮಲ್ಲಣಾರ್ಯರು, ಹಾನಗಲ್ಲ ಕುಮಾರ ಮಹಾಸ್ವಾಮಿಗಳು, ಅಥಣಿಯ ಮುರಘೇಂದ್ರ ಶಿವಯೋಗಿಗಳು, ಸ್ವಾಮಿಲಿಂಗಾನಂದರು, ಮಾತೆ ಮಹಾದೇವಿಯವರು, ಸೊಲ್ಲಾಪುರದ ಸುಗ್ಗಲಾದೇವಿ, ಗದಗದ ತೋಂಟದಾರ್ಯಮಠದ ಜಗದ್ಗುರು ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಚಿತ್ರದುರ್ಗದ ಡಾ. ಶಿವಮೂರ್ತಿ ಮುರುಘಾಶರಣರು ಹಾವೇರಿಯ ಹುಕ್ಕೇರಿ ಮಠದ ಶ್ರೀಗಳು, ನೀಲಮ್ಮ ತಾಯಿ ಅಸುಂಡಿಯವರು, ಕೊಪ್ಪಳದ

ಜಗದ್ಗುರು ಗವಿಸಿದ್ಧೇಶ್ವರ ಮಹಾಸ್ವಾಮಿಗಳು ಇವರೊಂದಿಗೆ ಆಧುನಿಕ-ಅತ್ಯಾಧುನಿಕ ಕಾಲದ ಯುವಪ್ರವಚನಕಾರರೂ ಸೇರಿಕೊಂಡಿದ್ದಾರೆ. ಇದೊಂದು ಹೆಮ್ಮೆಯ, ಸಂತೋಷದ ವಿಚಾರವಾಗಿದೆ. ವಚನಗಳ ಮೇಲೆ ಯಾರೇ ಎಷ್ಟೇ ಪ್ರವಚನ ಮಾಡಿದರೂ ಅದು ತೀರದ ಖಣಿ, ಅನುಭವಗಳ ಬಾವಿಗಳೆಂದು ಹೇಳಿದರೆ ಸಾಕು. ಶರಣರು ಗತಿಸಿಹೋದ ನಂತರ ಅವರ ಇರವನ್ನು, ಅವರು ಬದುಕಿದ ದಾರಿಯನ್ನು ಹಾಗೂ ಅವರ ವಚನಗಳ ಆಧಾರದಿಂದ ಪುರಾಣಗಳು ಹುಟ್ಟಿಕೊಂಡವು. ಬಸವಪುರಾಣವು ತುಂಬಾ ಪ್ರಭಾವಿತವಾದುದಾಗಿದೆ. ಅದು 'ಭೀಮ' ಕವಿಯಿಂದ ಬರೆದಿದ್ದು ತೆಲುಗು ಭಾಷೆಯಲ್ಲೂ ಅವರು ರಚಿಸಿದ್ದಾರೆ. ಚಾಮರಸನ 'ಪ್ರಭುಲಿಂಗಲೀಲೆ' ವಿರೂಪಾಕ್ಷ ಪಂಡಿತನ "ಚನ್ನಬಸವಪುರಾಣ"ಗಳು ಪ್ರಮುಖವಾದವುಗಳು. ಇವು ಪುರಾಣವೆಂದು ಕರೆದಿದ್ದರೂ ಅವುಗಳಲ್ಲಿ ಪ್ರವಚನದ ಅಂಶಗಳನ್ನು ಹೇಳವವರೂ ಇದ್ದಾರೆ. ಉದಾಹರಣೆ ಪ್ರವಚನ ಪಿತಾಮಹ ಲಿ. ಸ್ವಾಮಿಲಿಂಗಾನಂದರು, ಜೋಳದರಾಶಿ ದೊಡ್ಡನಗೌಡರು, ಷ.ಬ್ರ. ಬಸವಕಿಂಗ ಪಟ್ಟಾಧ್ಯಕ್ಷರು ಹಿರೇಮಠ ತೇಲಸಂಗ ಮುಂತಾದವರು ಅಕ್ಕನ ಪುರಾಣ, ಶೂನ್ಯ ಸಂಪಾದನೆ, ಪ್ರಭುಲಿಂಗಲೀಲೆ ಪ್ರವಚನ ನೀಡಿದ್ದಾರೆ. ಅವುಗಳಲ್ಲಿಯ ಪವಾಡ ಇತರ ಕೆಲವು ವಿಷಯಗಳನ್ನು ಬದಿಗಿರಿಸಿ ಅವರ ಅನುಭವವನ್ನು ಪ್ರವಚನಗಳ ಮೂಲಕ ಹೇಳುವ ಪರಂಪರೆ ಬಂದಿತು. ಇಂಥ ಪರಂಪರೆಯಲ್ಲಿ ಇಳಕಲ್‌ದ ವಿಜಯಮಹಾಂತ ಶಿವಯೋಗಿಗಳು, ಮುರಗೋಡದ ಮಹಾಂತ ಮಹಾಸ್ವಾಮಿಗಳು, ಭಾಲ್ಕಿಯ ಡಾ. ಚನ್ನಬಸವ ಪಟ್ಟದ್ದೇವರು, ನಾಗನೂರ ಶಿವಬಸವ ಮಹಾಸ್ವಾಮಿಗಳು ಮೊದಲಿಗರಾಗುತ್ತಾರೆ. ನಂತರ ಯುವ ಸ್ವಾಮಿಗಳು, ಪ್ರವಚನಪಟುಗಳೂ, ಮುಂದುವರೆಸಿದ್ದಾರೆ.

ಶರಣರ ಮೇಲೆ ಪುರಾಣಗಳಲ್ಲದೆ ಚರಿತ್ರೆಗಳು ಮೂಡಿ ಬಂದಿವೆ. ಬಸವ ಚರಿತ್ರೆ, ಅಕ್ಕಮಹಾದೇವಿಯ ಚರಿತ್ರೆ, ಪ್ರಭುದೇವರ, ಮೋಳಗಿಯ ಮಾರಯ್ಯ, ನುಲಿಯ ಚಂದಯ್ಯ, ಹಡಪದ ಅಪ್ಪಣ್ಣ, ಸಮಗಾರ ಹರಳಯ್ಯ ಇವರ ಚರಿತ್ರೆಗಳ ಮೇಲೆಬಂದವು. ಪ್ರವಚನದ ಪರಂಪರೆ ಸಾಗಿಬಂದಿವೆ. ಹೀಗೆ ವಚನಗಳನ್ನು ಪುರಾಣಗಳನ್ನು, ಚರಿತ್ರೆಗಳನ್ನು ಪ್ರವಚನ ಮಾಡಿದವರಿಂದ ಕೇಳಿ, ಅವುಗಳ ಬಗ್ಗೆ ಆಳವಾಗಿ ಅಭ್ಯಾಸ ಮಾಡಿ, ಅನುಭವಕ್ಕಿಳಿದು ಕಾದಂಬರಿಗಳು ಬಂದವು. ಡಾ. ಎಚ್. ತಿಪ್ಪೇರುದ್ರಸ್ವಾಮಿಗಳಿಂದ 'ಕರ್ತಾರನಕಮ್ಮಟ', 'ಕದಳಿಯ ಕರ್ಪೂರ', ಡಾ. ಸಿದ್ದಯ್ಯ ಪುರಾಣಿಕರ 'ವಚನೋದ್ಯಾನ' ಮುಂತಾದವುಗಳನ್ನು ಹೆಸರಿಸಬಹುದು. ಇದು ಒಂದು ರೀತಿಯಿಂದ ಪ್ರವಚನದ ಪರಂಪರೆಯೆಂದು ಹೇಳಿದರೆ ತಪ್ಪಾಗಲಾರದು.!

ಶಿವಶರಣರು ಸಾಗಿಹೋದ ದಾರಿಯಲ್ಲೇ ಸಾಗಿ ಹಲವಾರು ಜನರು ಮಹಾತ್ಮರೆನಿಸಿಕೊಂಡರು. ಶರಣರ ಅನುಭಾವವನ್ನು ಅಳವಡಿಸಿಕೊಂಡು ಅನುಭವವನ್ನು ಸಮಾಜಕ್ಕೆ ವಿವರಿಸಿ ಶರಣರಾದರು. ಅಂಥವರ ಮೇಲೂ ಪುರಾಣಗಳು ರಚಿತವಾದವು. ಕಲಬುರ್ಗಿ ಶರಣಬಸವೇಶ್ವರ, ಅಥಣಿಯ ಮುರಘರಾಜೇಂದ್ರ ಶಿವಯೋಗಿ, ನಾಲ್ವತವಾಡದ ವೀರೇಶ್ವರ ಶರಣರು, ತಾಳಿಕೋಟೆಯ ಖಾಸಗತೇಶ್ವರ, ನರಗುಂದ ಚನ್ನಬಸವ, ಹಾನಗಲ್ ಕುಮಾರ ಮಹಾಸ್ವಾಮಿಗಳು, ಹಾಲಕೆರೆ ಅನ್ನದಾನ ಶಿವಯೋಗಿಗಳು, ಅರಭಾವಿಯ ದುರದುಂಡೇಶ್ವರರು, ಕೊಪ್ಪಳದ ಗವಿಸಿದ್ಧೇಶ್ವರ, ಮುಂತಾದ ಮಹಾತ್ಮರ ಬಗ್ಗೆ ಚರಿತ್ರೆ-ಪುರಾಣಗಳು ಹುಟ್ಟಿಕೊಂಡವು. ಪ್ರವಚನಕಾರರು ಅವುಗಳಲ್ಲಿಯ ಅನುಭವವನ್ನು ಮಾತ್ರ ಎತ್ತಿಕೊಂಡು ಪ್ರವಚನ ಮಾಡುವ ಪರಂಪರೆ ಬೆಳೆದು ಬಂದಿತು. ಇಂಥ ಮಹಾತ್ಮರ ಪ್ರವಚನಗಳ ಪರಿಣಾಮ ಸಮಾಜದ ಬದಲಾವಣೆಗೆಗೆ ಕಾರಣವಾದವು.

ಇದರಂತೆ ಇಸ್ಲಾಂ ಧರ್ಮದಲ್ಲೂ ಪ್ರವಚನದ ಪರಂಪರೆ ಇದೆ. ಮೌಲ್ವಿಗಳು ಅಲ್ಲಲ್ಲಿಗೆ ಬಂದು 'ಕುರಾನ'ದಲ್ಲಿಯೂ ವಿಷಯಗಳನ್ನು ಪ್ರವಚನ ಮಾಡುತ್ತಿದ್ದಾರೆ.

ಕೆಲವು ಕಡೆಗೆ "ಇಸ್ತಿಮಾ" ನಡೆಯಿಸಿ ಹಲವಾರು ಧರ್ಮದ ಮುಖಂಡರಿಂದ ಪ್ರವಚನ ಮಾಡಿಸುವ ಕಾರ್ಯ ನಡೆಯುತ್ತಿರುವದನ್ನು ನೋಡಬಹುದು.

ಕ್ರೈಸ್ತ ಧರ್ಮದಲ್ಲೂ ಪ್ರವಚನ ಪರಂಪರೆಯನ್ನು ಕಾಣಬಹುದು. ಮೊದಲನೆಯ ಪ್ರವಚನದ ಪರಂಪರೆಯು "ಯೇಸು ಸ್ವಾಮಿ"ಯಿಂದಲೇ ಪ್ರಾರಂಭವಾಗಿದೆ ಎಂಬುದು ಅವರ ನಂಬಿಕೆ. ಅದರಂತೆ ಪ್ರತಿ ರವಿವಾರ "ಬೈಬಲ್"ದ ಪ್ರವಚನ ಹಾಗೂ ಪ್ರಾರ್ಥನೆ ನಡೆಯುತ್ತಿರುವುದು ಕಂಡುಬರುತ್ತದೆ. "ಒಡಂಬಡಿಕೆ"ಗಳ ಪ್ರವಚನಗಳು 'ಪಾದ್ರಿ'ಗಳಿಂದ ಸಾಗುವುದು. ಇದರಂತೆ ಜಗತ್ತಿನ ಎಲ್ಲ ಧಾರ್ಮಿಕ ಮುಖಂಡರು ತಮ್ಮ ಧರ್ಮದ ಬಗ್ಗೆ ಪ್ರವಚನ ಮಾಡುವ ಪರಂಪರೆ ಇದೆ.

ಇನ್ನು ಸಿದ್ಧರೂಢರ ಪ್ರವಚನ ಕೇಳಲು ಯೋಗಿಗಳು, ತತ್ತ್ವವೇತ್ತರು, ಪಂಡಿತರು, ರಾಜಕಾರಣಿಗಳು ಬಂದು ಧನ್ಯರಾಗುತ್ತಿದ್ದರು.

೧) ಕೈವಲ್ಯ ಪದ್ಧತಿ ೨) ಪರಮಾನುಭವ ಬೋಧೆ ೩) ಅನುಭವ ಸಾರ ೪) ಪಾರಮಾರ್ಥಕ ಗೀತೆ ೫) ಪಾರಮಾರ್ಥಕ ಪ್ರಕಾಶಿಕೆ ೬) ವಿವೇಕ ಚಿಂತಾಮಣಿ ಇವು ನಿಜಗುಣ ಶಿವಯೋಗಿಗಳ ಗ್ರಂಥಗಳು. ನಿಜಗುಣರು ಹದಿನಾರನೆಯ ಶತಮಾನದ ಮಹಾನ್ ತತ್ತ್ವಜ್ಞಾನಿ. ಕನ್ನಡ-ಸಂಸ್ಕೃತ ಭಾಷೆಗಳನ್ನು ಆಳವಾಗಿ ಅಭ್ಯಾಸ ಮಾಡಿ, ವೇದಾಂತದಲ್ಲಿದ್ದ ರಹಸ್ಯ

ವಿಷಯಗಳನ್ನು ಕನ್ನಡದಲ್ಲಿ ದಾಖಲಿಸಿದ ಮಹಾನುಭಾವ. ಒಂದು ವೇಳೆ ನಿಜಗುಣರು ಬರದೇ ಇದ್ದಲ್ಲಿ ವೇದಾಂತದ ವಿಷಯ–ವಿಚಾರ ವಿವರ ಕನ್ನಡದಲ್ಲಿ ಆಗಲು ಸಾಧ್ಯವಾಗುತ್ತಿರಲಿಲ್ಲ.

"ವೇದ ವಾಕ್ಯವನೆಲ್ಲ ಮೋದದಿಂ ಕನ್ನಡದಿ ।

ಬೋಧಿಸುತ ಜನರ ।ಭೇದ ಮತಿ ಕಳೆದಿರುವ ।

ಸಾಧುನಿಜಗುಣಿಗೆನತನಪ್ಪೆ."[೩೭] ॥

ವೇದದಲ್ಲಿರುವ ವಿಷಯಗಳನ್ನು ಸುಂದರವಾಗಿ ಸುಲಭವಾಗಿ ವಿವರಿಸಿದ ನಿಜಗುಣರು ಕನ್ನಡಿಗರ ಕಣ್ಮಣಿಗಳು. "ಬೃಹದಾರಣ್ಯ ಉಪನಿಷತ್ತ"ದ ಗಹನವಾದ ವಿಷಯಗಳನ್ನು "ಪರಮಾನುಭವ ಬೋಧೆಯಂದು ಮಂಡಿಸಿ ನಾಡಿಗೆ ಉಪಕಾರವೆಸಗಿದ್ದಾರೆ. ಯಾಜ್ಞವಲ್ಕ್ಯ–ಮೈತ್ರೇಯಿಯರ ಸಂವಾದವೇ ಇದಕ್ಕೆ ಆಧಾರವಾಗಿದೆ.

ಇಂಥ ನಿಜಗುಣರ ತತ್ವವಿಚಾರಗಳನ್ನು ಪ್ರವಚನದ ಮೂಲಕ ಜನರಿಗೆ ಹಂಚಿದ ಶ್ರೇಯಸ್ಸು ಸಿದ್ಧಾರೂಢರಿಗೇ ಸಲ್ಲಬೇಕು. ಆದ್ದರಿಂದಲೇ–

"ಬದ್ಧಜೀವರಿಗೆಲ್ಲ ಅದ್ವೈತ ಬೋಧದಿಂ ।

ಶುದ್ಧರನ್ನಾಗಿಗೈದ ಶ್ರೀ ಜಡಿಸಿದ್ಧ ।

ಸಿದ್ಧಾರೂಢರಿಗೆ ನತನಪ್ಪೆಂ".[೩೮] ॥

ಎಂದು ಹಾಡಿ ಹರಸಿದ್ದಾರೆ. ಸಿದ್ಧಾರೂಢರಿಂದಲೇ ಆರೂಢ ಹಾಗೂ ವೇದಾಂತ ಪ್ರವಚನದ ಪರಂಪರೆಯು ಗಟ್ಟಿಯಾಗಿ ಅಷ್ಟೇ ಜನಪ್ರಿಯವಾಗಿ ಬೆಳೆದು ಬಂದಿತು. ಜಾತಿ, ಮತ, ಕುಲ, ಆಚರಣೆ, ಧಾರಣೆ ಯಾವೂ ಇಲ್ಲಿ ಅವಶ್ಯವಿಲ್ಲ "ನಾನಾರು? ಎಂದು ವಿಚಾರಿಸುವವರೆಲ್ಲರೂ ಆರೂಢ ಸಾಂಪ್ರದಾಯದವರೇ! ನಿಜಗುಣ ಶಿವಯೋಗಿಗಳ ಕೈವಲ್ಯಪದ್ಧತಿಯ ಸೂತ್ರದ ಪದ್ಯದ ಮೊದಲನೆಯ ಸಾಲು "ಶ್ರೀ ಗುರು ವಚನೋಪದೇಶವನಾಲಿಸಿದಾಗಳುಹುದು ನರರಿಗೆ ಮುಕುತಿ"[೩೯] ಎಂಬುದರ ಮೇಲೆ ಸಿದ್ಧಾರೂಢರು ಮೂರು ತಿಂಗಳು ಕಾಲ ನಿರಂತರ ಪ್ರವಚನ ಮಾಡಿದ್ದರು.

---

೩೭ " " 'ಪರಮಾರ್ಥಗೀತೆ' ಟೀಕಾತಾತ್ಪರ್ಯ ಗ್ರಂಥ ಲೇ. ಪ್ರೊ.ಬ್ರ.ಶಿವಮತ್ರಸ್ವಾಮಿಗಳು. (೧೯೫೪)

೩೮ " " 'ಪರಮಾರ್ಥಗೀತೆ' ಟೀಕಾತಾತ್ಪರ್ಯ ಗ್ರಂಥ ಲೇ. ಪ್ರೊ.ಬ್ರ.ಶಿವಮತ್ರಸ್ವಾಮಿಗಳು. (೧೯೫೪)

೩೯ " " 'ಕೈವಲ್ಯಪದ್ಧತಿ' ಶ್ರೀಮನ್ನಿಜಗುಣಶಿವಯೋಗಿ ವಿರಚಿತ. (ಶಿವಕಾರುಣ್ಯಸ್ಥಲದ ಮೊದಲ ಪದ್ಯದ ಮೊದಲ ಸಾಲು) ಪುಟಸಂಖ್ಯೆ–೧. (೨೦೦೧)

ಲೋಕಮಾನ್ಯ ತಿಲಕರು ಇವರ ಪ್ರವಚನಕೇಳಲು ಬಂದಿದ್ದು ಸಾಮಾನ್ಯ ಸಂಗತಿಯೇನಲ್ಲ. ಇವರ ಪ್ರವಚನದಿಂದ ವೇದಾಂತ ವಿಷಯ ಸುಲಭವಾಯಿತು. "ಸರ್ವದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಗೆ" ನಾಂದಿಯಾಯಿತು. ಇವರ ತರುವಾಯ ಪ್ರವಚನ ಪರಂಪರೆಗೆ ಪಣ ತೊಟ್ಟವರೆಂದರೆ ಸಿದ್ಧಾರೂಢರ ಶಿಷ್ಯರಾದ ಶಿವಪುತ್ರ ಸ್ವಾಮಿಗಳು ಇವರಲ್ಲದೆ ಜಡಿಸಿದ್ಧೇಶ್ವರ ಮಠ ಹುಬ್ಬಳ್ಳಿಯ ಪರಮಹಂಸ ರಾಜಯೋಗಿ ಎಂದು ಕರೆಯಿಸಿಕೊಂಡಿರುವ ಶಂಕರಾನಂದರು ರೋಣದ ಬಸಪ್ಪನವರು, ಶಾಮಾನಂದರು, ಅಕ್ಕಲಕೋಟ ಶರಣರು, ಗೋವನಕೊಪ್ಪದ ಸಿದ್ಧವೀರಪ್ಪನವರು, ಹುಲಕೋಟಿಯ ಓದುಗೌಡರು, ಮುಂತಾದವರು ಇದನ್ನು ಮುಂದುವರಿಸಿಕೊಂಡು ಬಂದರು. ಇವರೊಂದಿಗೆ ಶ್ರೋತ್ರೀಯ ಬ್ರಹ್ಮನಿಷ್ಠರಾದ ಅಗ್ನಿ ಹೋತ್ರ ಶಂಕರಭಟ್ಟರಂತೂ ಜ್ಞಾನದ ಖಣಿ-ಎಂದೇ ಹೆಸರು ಪಡೆದವರು.

ಶಂಕರ ಭಟ್ಟರು ಸಿದ್ಧಾರೂಢರ ಒಡನಾಡಿಗಳು. ಸಂಸ್ಕೃತ ಕನ್ನಡಭಾಷೆಯ ಮೇಲೆ ಪ್ರಭುತ್ವ ಪಡೆದವರಾದ ಅವರು ನಿಜಗುಣ ಶಿವಯೋಗಿಗಳ ಗ್ರಂಥಗಳನ್ನು ಆಳವಾಗಿ ಅಧ್ಯಯನ ಮಾಡಿದವರು. ಅದರಂತೆ ವಿದ್ಯಾರಣ್ಯರ 'ಪಂಚದಶಿ' ದಶೋಪನಿಷತ್ತುಗಳನ್ನು, 'ಭಗವದ್ಗೀತೆ'ಯನ್ನು ಅಭ್ಯಾಸ ಮಾಡಿದ್ದರು. ಅವರ ಮುಖದಿಂದ ಪ್ರವಚನ ಕೇಳಿದ ಜನರು ಇಂದಿಗೂ ಅವರನ್ನು ಸ್ಮರಿಸುತ್ತಾರೆ. ಬರಬರುತ್ತ ಉತ್ತರ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಸಿದ್ಧಾರೂಢರ ಮಠಗಳು ಸ್ಥಾಪನೆಯಾಗಿ ಅಲ್ಲಿಯೂ ಪ್ರವಚನಗಳ ಪರಂಪರೆ ಮೂಡಿ ಬಂದವು. ಸವದತ್ತಿ ತಾಲೂಕಿನ ಮುಗಳಿಹಾಳ, ಮುಧೋಳ ತಾಲೂಕಿನ ಮಂಟೂರ, ನಾಗನೂರ, ಯರಝರ್ವಿ. ಕಲ್ಲೊಳ್ಳಿ, ಹಾರೂಗೇರಿ, ಸಂಕರಟ್ಟಿ, ಯಲ್ಪಾರಟ್ಟಿ, ಜಗಾಪುರ, ಹುಣಶೀಕಟ್ಟಿ ಹೀಗೆ ಹೇಳುತ್ತಾ ಹೋದರೆ ಸಾಕಷ್ಟು ಸಿದ್ಧಾರೂಢರ ಮಠಗಳು ಸಿಗುತ್ತವೆ. ಇದರಂತೆ ಶಂಕರಾನಂದರ ಮಠಗಳು ಸ್ಥಾಪನೆಯಾಗಿ ಅಲ್ಲಿಯೂ ಪ್ರವಚನ ಪರಂಪರೆ ಇರುವದನ್ನು ಕಾಣುತ್ತೇವೆ. ಹುಕ್ಕೇರಿ ತಾಲೂಕಿನ ಕರಗುಪ್ಪಿ, ಆಥಣಿಯ ತಾಲೂಕಿನ ಶೇಗುಣಸಿ, ಖವಟಕೊಪ್ಪ, ಮುಂತಾದವುಗಳನ್ನು ಹೆಸರಿಬಹುದು. ಒಟ್ಟಿನಲ್ಲಿ ಆರೂಢ ಸಾಂಪ್ರದಾಯವೆಂದರೆ ವೇದಾಂತ ಪ್ರವಚನದ ಪರಂಪರೆಯೆಂದೇ ಹೇಳಬೇಕಾಗುವದು.

ಸಿದ್ಧಾರೂಢರ ಸಮಕಾಲೀನರವರಾದ ಪೂಜ್ಯ ಶಿವಾನಂದರ ಪ್ರವಚನ ಪರಂಪರೆಯೊಂದು ಬೆಳೆದು ಬಂದಿರುವದು ಅಷ್ಟೇ ಸತ್ಯವಾದ ಮಾತಾಗಿದೆ. ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರಗಳ ವೇದಗಳ, ಭಗವದ್ಗೀತೆ, ಉಪನಿಷತ್ತಗಳ ವಿಚಾರಗಳನ್ನು, ಶಿವಶರಣರ ವಚನಗಳನ್ನು, ದಾಸರ ಪದ್ಯಗಳನ್ನು ಸಮನ್ವಯಗೊಳಿಸಿ ಪ್ರವಚನ ಮಾಡುವ ಪರಂಪರೆಯು ಶಿವಾನಂದರಿಂದ ಬಂದಿತು. ಲೌಕಿಕದ ಆಚಾರ-ವಿಚಾರಗಳನ್ನು

ಅಳವಡಿಸಿಕೊಂಡ, ಉದಾಹರಣೆ ಪಡೆದುಕೊಂಡು ವೇದಾಂತ ತತ್ವವನ್ನು ಸುಲಭವಾಗಿ ಬೋಧಿಸುವ ಪ್ರವಚನದ ಕಲೆ ಬಹುಬೇಗನೆ ಜನಪ್ರಿಯವಾಯಿತು. ಶಿವಾನಂದರ ಶಿಷ್ಯರಾದ ಪೂಜ್ಯ ಮಲ್ಲಿಕಾರ್ಜುನ ಸ್ವಾಮಿಗಳು ಪ್ರವಚನ ಪಟುಗಳೆಂದೂ ಹೆಚ್ಚಾಗಿ 'ವೇದಾಂತ ಕೇಸರಿ' ಎಂದೇ ಪ್ರಸಿದ್ಧರಾದರು. ತಮ್ಮ ಜೀವಿತ ಕಾಲದಲ್ಲಿ ಊರೂರಿಗೆ ಹೋಗಿ ತಿಂಗಳ ಪರಿಯಂತರ ಪ್ರವಚನ ನೀಡಿದರು. ಅವರ ಪ್ರವಚನಗಳಿಂದ ಬಂದ ಆದಾಯವನ್ನು ಅದೇ ಊರಿನವರ ಕೈಯಲ್ಲಿ ಕೊಟ್ಟು ಶಿಕ್ಷಣ ಸಂಸ್ಥೆ ಸ್ಥಾಪಿಸಲು, ಶಿಕ್ಷಣ ಸಂಸ್ಥೆಗಳ ಕಟ್ಟಡ ನಿರ್ಮಿಸಲು ಸಲಹೆ ಮಾಡಿದರು. ನಿಜಗುಣ ಶಿವಯೋಗಿಗಳ ತತ್ವಗಳನ್ನು ಗ್ರಾಮೀಣ ಪ್ರದೇಶಕ್ಕೆ ಹೊತ್ತೈದ ಮಹಾನುಭಾವರೆಂದರೆ ಮಲ್ಲಿಕಾರ್ಜುನ ಮಹಾಸ್ವಾಮಿಗಳು. ತಮ್ಮ ಜೀವಿತದ ಅಂತ್ಯದವರೆಗೂ ಪ್ರವಚನ ಮಾಡುವದನ್ನು ಬಿಡಲೇ ಇಲ್ಲ. ಶಿವಾನಂದರ ಪ್ರವಚನದ ಪರಂಪರೆಯನ್ನು ಗಟ್ಟಿಗೊಳಿಸಿದವರೆಂದರೆ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳೆಂದು ಸ್ಪಷ್ಟವಾಗಿ ಹೇಳಬೇಕಾಗುವದು.

'ವೇದಾಂತ ಕೇಸರಿ' ಮಲ್ಲಿಕಾರ್ಜುನ ಮಹಾಸ್ವಾಮಿಗಳ ಕರಕಮಲ ಸಂಜಾತರಾದ ಪೂಜ್ಯರಾದ ಸಿದ್ಧೇಶ್ವರ ಸ್ವಾಮಿಗಳು. ಜ್ಞಾನನಿಧಿ, ಪಾಶ್ಚಾತ್ಯ ಪೌರಾಸ್ತ್ಯ ತತ್ತ್ವಜ್ಞಾನಿಗಳನ್ನು ಓದಿಕೊಂಡ ಇವರು ಕನ್ನಡ, ಇಂಗ್ಲೀಷ್, ಮರಾಠಿ ಸಂಸ್ಕೃತ ಭಾಷೆಯಲ್ಲಿ ಪಾಂಡಿತ್ಯವುಳ್ಳವರು. ಇವರ ಪ್ರವಚನಗಳು ನಾಡಿಗೆ, ದೇಶಕ್ಕೆ ಹಾಗೂ ವಿಶ್ವಕ್ಕೂ ಹರಡಿವೆ. ಅವರ ಪ್ರವಚನಗಳು 'ಉತ್ತಮ, ಮಧ್ಯಮ, ಕನಿಷ್ಠ' ಮೂರು ತೆರನಾದ ಅಧಿಕಾರಿಗಳಿಗೂ ಅನ್ವಯಿಸುತ್ತವೆ. ಅವರ ಪ್ರವಚನಗಳಲ್ಲಿ ತತ್ವಮಸಿವಾಕ್ಯ ಉತ್ತಮ ಅಧಿಕಾರಿಗೆ ಅರ್ಥವಾಗುವಂತೆ, ಮಧ್ಯಮ ಅಧಿಕಾರಿಗೆ ಅಧ್ಯಾತ್ಮದ ಅರುಹನ್ನು ತಿಳಿಸುವ ವಿಚಾರ, ಕನಿಷ್ಠ ಅಧಿಕಾರಿಗೆ ಸಂಸಾರ ಸುಂದರಗೊಳಿಸಿ ಭಕ್ತಿ ಮಾರ್ಗಕ್ಕೆ ಒಲಿಯುವಂತೆ ಮಾಡುತ್ತವೆ. ಹೀಗಾಗಿ ಪ್ರತಿಯೊಬ್ಬರಿಗೂ ಅವರ ಇರುವಿಕೆಯು ಸಮಾಜಕ್ಕೆ ನಿದರ್ಶನವಾಗಿದೆ. ಜಗತ್ತಿನ ಎಲ್ಲ ಧರ್ಮಗಳ, ಧಾರ್ಮಿಕ ಪುರುಷರ ವಿಚಾರಗಳನ್ನು-ವಿಷಯಗಳನ್ನು ತಮ್ಮದೇ ಆದ ಸರಳ ಮಾತುಗಳಲ್ಲಿ ಹೇಳುವದು ಜನರ ಮನಸ್ಸಿನ ಮೇಲೆ ಅಚ್ಚೊತ್ತಿದಂತಾಗುತ್ತದೆ. ವೇದಾಂತದ ರಹಸ್ಯ ವಿಷಯಗಳನ್ನು ಇಷ್ಟೊಂದು ಸರಳವಾಗಿ ಪ್ರವಚನ ಗೈಯುವವರು ತೀರಾ ಕಡಿಮೆ. ಶಿವಾನಂದರ ಪ್ರವಚನದ ಪರಂಪರೆಯೆಂದರೆ ಲೌಕಿಕ-ಅಲೌಕಿಕ ಸಮನ್ವಯ ಗೊಳಿಸುವಂತಹದ್ದು "ಜಾಣನು ಲೌಕಿಕ ಪರಮಾರ್ಥವೆರಡನು ಮಾಣದೆ ಕೂಡಿ ನಡೆಸುತಿಹನಿಂತು."೪೦ ಎಂಬ ನಿಜಗುಣರ ಪದ್ಯಕ್ಕೆ ಸಾಕ್ಷಿಯಾಗಿದೆ. ವೇದಗಳಲ್ಲಿಯ, ಉಪನಿಷತ್ತುಗಳಲ್ಲಿಯ, ಭಗವದ್ಗೀತೆಗಳಲ್ಲಿಯ ಶಾಸ್ತ್ರೀಯ

---

೪೦ " " 'ಕೈವಲ್ಯಪದ್ಧತಿ' ಶ್ರೀಮನ್ನಿಗುಣಶಿವಯೋಗಿ ವಿರಚಿತ. ಪುಟಸಂಖ್ಯೆ-೮೬ ನೀತಿಕ್ರಿಯಾಚರ್ಯಸ್ಥಲದ ೧೬ನೇ ಪದ. (೨೦೦೧)

ಶಬ್ದಗಳನ್ನು ಬಳಸದೇ ಅವುಗಳಿಗೆ ಸರಿಸಮಾನವಾದ ಕನ್ನಡದ ಶಬ್ದಗಳನ್ನು ಬಳಸಿ ಪ್ರವಚನದ ಪರಂಪರೆಯು ಪೂಜ್ಯ ಸಿದ್ಧೇಶ್ವರ ಶ್ರೀಗಳಿಂದ ಸಾಗುತ್ತಲಿದೆ. ಅವರ ಮಧುರ ಮಾತಿನ ಪ್ರವಚನಗಳಲ್ಲಿಯೇ ಪರಮಾತ್ಮನನ್ನು ಕಾಣಬಹುದಾಗಿದೆ. ಇವರ ಬಗ್ಗೆ ಬರೆಯುತ್ತ ಹೋದರೆ ಒಂದು ಗ್ರಂಥವೇ ಆಗಬಹುದು. ಈಗಾಗಲೇ ಅವರ ಪ್ರವಚನಗಳ ಪುಸ್ತಕಗಳೂ, ಧ್ವನಿಸುರುಳಿಗಳು ನಾಡಿದಾದ್ಯಂತ ಬಂದಿವೆ. ಅವುಗಳನ್ನೇ ಓದಿ, ಕೇಳಿ, ನೋಡಿ ಪ್ರವಚನ ಮಾಡುವ ಪರಂಪರೆ ಮುಂದುವರೆದಿದೆ.

ಇವರ ಹಾಗೆಯೇ ಶಿವಾನಂದರ ಪ್ರವಚನದ ಪರಂಪರೆಯನ್ನು ಮುಂದುವರಿಸಿದವರಲ್ಲಿ ಪೂಜ್ಯ ಆತ್ಮಾನಂದರೂ ಒಬ್ಬರು. ಅವರು ಶಿವಾನಂದರ ಶಿಷ್ಯರೂ ಹೌದು; ಪುತ್ರರೂ ಹೌದು. ತಮ್ಮ ಜೀವನವನ್ನು ಪ್ರವಚನ ಹೇಳುವದರಲ್ಲಿಯೇ ಕಳೆದರು ಹಾಗೂ ಮುಂದಿನವರಿಗೆ ಆ ಪರಂಪರೆಯನ್ನು ಹಾಕಿಕೊಟ್ಟರು. ಇಂದು ಪೂಜ್ಯಶ್ರೀ ಘೋಡಗೆರೆಯ ಮಲ್ಲಯ್ಯಸ್ವಾಮಿಗಳೂ, ಕಾಗವಾಡ ಶಿವಾನಂದ ಮಠದ ಪೂಜ್ಯ ಶ್ರದ್ಧಾನಂದರೂ, ಪೂಜ್ಯ ಕೈವಲ್ಯಾನಂದ ಸ್ವಾಮಿಗಳು ಮುಂತಾದವರು ಪ್ರವಚನದ ಪರಂಪರೆಯನ್ನು ಮುಂದುವರಿಸಿದ್ದಾರೆ.

ಪ್ರವಚನದ ಪರಂಪರೆಯು ಸರಾಗವಾಗಿ ಸಾಗಿಬಂದಿರುವುದರೊಂದಿಗೆ ಸಾಹಿತ್ಯ, ಸಂಸ್ಕೃತಿ ಬೆಳೆಸಲು ಸಹಕಾರಿಯಾಗಿದೆ. ಸಮಾಜ ಸುಧಾರಣೆಗೆ, ಪ್ರಬಲವಾದ ಅಸ್ತ್ರವಾಗಿದೆ. ನಿತ್ಯವೂ ಹಲವಾರು ಕಡೆಗೆ ಪ್ರವಚನಗಳು ನಡೆಯುತ್ತಲಿವೆ. ತನ್ನಿರವನ್ನು ತಾನು ಅರಿಯುವಲ್ಲಿ ಪ್ರವಚನ ಪ್ರಮುಖ ಪಾತ್ರವಹಿಸಿದೆ.

## ೪.೧ ಪ್ರವಚನದ ಪರಿಣಾಮ :

ಮಳೆ ಸುರಿಯತೊಡಗಿತೆಂದರೆ ಬೀಳುವ ಸ್ಥಳಕ್ಕೆ ಸಂಬಂಧಿಸಿದಂತೆ ಅದಕ್ಕೆ ತಾರತಮ್ಯ ಭಾವ ಮೂಡುವುದೇನೂ ಸಾಧ್ಯವಿಲ್ಲ.! ಪ್ರವಚನದ ಪರಿಣಾಮವೂ ಅಷ್ಟೇ. ಊರಲ್ಲಿ ಜನ ತುಂಬಿರುತ್ತಾರೆ, ಅವರಿಗೆಲ್ಲ ಯಾವುದಾವುದೇ ಕೆಲಸವಿರುತ್ತದೆ. ಕೆಲಸವಿಲ್ಲದಿದ್ದರೂ ಅವರು ಮನಸ್ಸು ಮಾಡುವುದಿಲ್ಲ. 'ಲೋಕೋ ಭಿನ್ನಃ ರುಚಿ' ಎನ್ನುವಂತೆ ನೂರೆಂಟು ಸ್ವಭಾವದವರಲ್ಲಿ ಅಧ್ಯಾತ್ಮದ ಕಡೆಗೆ ದೃಷ್ಟಿ ಬೀರುವುದು ಕೆಲವರು ಮಾತ್ರ. ಹಾಗೆ ಮಾಡಿದರೂ ತತ್ತ್ವಜ್ಞಾನ ಅಳವಡುವುದು ಎನ್ನೂ ಕೆಲವರಲ್ಲಿ ಮಾತ್ರ!

ಪ್ರಭುಲಿಂಗಲೀಲೆಯಲ್ಲಿ ಒಂದು ಪ್ರಸಂಗ ಹೀಗಿದೆ. ಮಾಯೆ ಸೋತು ಸುಣ್ಣವಾಗಿದ್ದಾಳೆ. ಅವಳಿಗೆ ಕೃಪೆ ದೊರೆಯಬೇಕೆಂದು ವಿಮಳೆ ಪ್ರಭುವನ್ನು ಪ್ರಾರ್ಥಿಸುತ್ತಾಳೆ. ಪರುಷಮಣಿಯಾಗಿರುವ ಅಲ್ಲಮ ಮಾಯೆಯನ್ನು ಕೈಯಿಂದ ಸ್ಪರ್ಶಿಸಿದರೂ ಚಿನ್ನವಾಗುತ್ತಾಳೆ. ಕಾಲಿನಿಂದ ಒದೆದರೂ ಚಿನ್ನವಾಗುತ್ತಾಳೆ ಎಂದು ತಿಳಿಸುತ್ತಾಳೆ. ಅದಕ್ಕೆ ಪ್ರಭು ಕೊಡುವ ಉತ್ತರ ಹೀಗಿದೆ– 'ಲೋಹವೊಂದು ಪರುಷಮಣಿಯನ್ನು ಸ್ಪರ್ಶಿಸಿ ಹೊನ್ನಾಗಬಹುದೇ ಹೊರತು ಹಳೆ ಹೆಂಚು ಬದಲಾಗುವುದು ಸಾಧ್ಯವಿಲ್ಲ. ಸನ್ಮಾರ್ಗದ ಕಡೆಗೆ ಒಲವಿರುವವರಿಗೆ ಬೆಳಕು ತೋರಿದರೆ, ಆ ಬೆಳಕಿನಲ್ಲಿ ನಡೆದ ಅವರು ಇನ್ನಷ್ಟು ಜನರಿಗೆ ಬೆಳಕು ತೋರುವ ಸಾಧ್ಯತೆ ಇರುತ್ತದೆ. ಯಾವುದಕ್ಕೂ ಚಿಂತಿಸುವ ಅಗತ್ಯವಿಲ್ಲ. ಕರ್ಮಮಾರ್ಗದಲ್ಲಿ ಸಾಗುವುದೊಂದೇ ಕೆಲಸ!

"ಶ್ರೀಮದಮಲಜ್ಞಾನ ಭಕ್ತಿ
ಪ್ರೇಮ ವೇದಪುರಾಣಶಾಸ್ತ್ರ
ಸ್ತೋಮನುತನತ ಚಾರುಚರಣಾಂಭೋಜ ಘನಮಹಿಮ ।
ನಾಮರೂಪ ಕ್ರಿಯಾಕಳಾಪವಿ
ರಾಮನನುಪಮ ದಿವ್ಯತೇಜೋ
ವ್ಯೋಮಮೂರುತಿ ಗುರು ಗುಹೇಶ್ವರಲಿಂಗ ಶರಣಾರ್ಥಿ."[೪೧] ॥

'ಪ್ರಭುಲಿಂಗಲೀಲೆ'ಯ ಈ ಮೊದಲ ಪದ್ಯದಲ್ಲಿ ರಚನಕಾರ ಚಾಮರಸ ಅಲ್ಲಮಪ್ರಭುಗಳನ್ನು ಪ್ರಾರ್ಥಿಸಿರುವುದು ಗೊತ್ತಾಗುತ್ತದೆ. ಆದರೆ ಕವಿಯ ದೃಷ್ಟಿಯಿರುವುದು ಪರಶಿವನೆಡೆಗೆ ಎನ್ನುವುದನ್ನು ಗಮನಿಸಬೇಕು. ಅಲ್ಲಮಪ್ರಭುಗಳನ್ನು ಸಂಕೇತವಾಗಿಟ್ಟುಕೊಂಡು ಆತ ಪರಶಿವನನ್ನು ಪ್ರಾರ್ಥಿಸಿದ್ದಾನೆ ಎನ್ನುವುದು ಕೆಳಗಿನ ಅಂಶಗಳಿಂದ ಗೊತ್ತಾಗುತ್ತದೆ.

---

೪೧ " " 'ಶ್ರೀಪ್ರಭುಲಿಂಗಲೀಲೆ' ಲೇ. ಡಾ. ಎಸ್. ವಿದ್ಯಾಶಂಕರ. ಸಂ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ಪುಟಸಂಖ್ಯೆ–೧. ಪದ್ಯಸಂಖ್ಯೆ–೧

## ೪.೨ ಪ್ರವಚನಕಾರರು–ಸ್ವಾತಂತ್ರ್ಯ, ಅಭಿವ್ಯಕ್ತಿ :

ಪ್ರವಚನಕಾರನಲ್ಲಿ ಒಂದು ಅಂತಃಸತ್ವ ಇರಲೇಬೇಕು. ಇದು ಇರದೇ ಯಾರನ್ನು ಸಹಜವಾಗಿ ಒಪ್ಪಿಸಲು ಆಗುವುದಿಲ್ಲ. ಪ್ರವಚನವೂ ಒಂದು ಕಲೆ. ಪರಂಪರಾಗತವಾಗಿ ಬಂದಿರುವಂಥದ್ದು. ಗ್ರಂಥವನ್ನು ಇಟ್ಟುಕೊಂಡು ಸ್ವಾಧ್ಯಾಯ ಮಾಡುವಂಥದ್ದು. ಪ್ರ–ವಚನ–ವಿಶೇಷವಾದ ಮಾತುಕತೆ.

ಪ್ರಾಚೀನ ಕಾಲದಲ್ಲಿ ಇರುವಂತಹ ಅರಿವು–ಅನುಭವ ಕಣ್ಣಿಗೆ ಇವೆಲ್ಲವುಗಳನ್ನು ಪರರಿಗೆ ಸುಲಭವಾಗಿ ವರ್ಗಾಯಿಸುವದಕ್ಕೋಸ್ಕರವಾಗಿ ಕಂಡುಕೊಂಡಂತಹ ಒಂದು ಶ್ರೇಷ್ಠವಾದ ಅನುಭವದ ಸ್ಪರ್ಶ ಕೊಟ್ಟಾಗ ಗಟ್ಟಿಗಾಳುಗಳು ನಿರ್ಮಾಣಗೊಳ್ಳುತ್ತವೆ. ಮಾತು ಮತ್ತು ವಿದ್ಯೆಯ ತೇಜಸ್ಸು ಸಮ್ಮಿಳಿತವಾದಾಗ ಒಂದು ವಿನೂತನ ಪ್ರವಚನ ಸಾಹಿತ್ಯ ರಚನೆಗೊಳ್ಳುತ್ತದೆ.

'ವಿವೇಕ, ವಿವೇಚನೆಗಳಿಂದ ಬಂದಿರುವ ಗ್ರಹಣ ಶಕ್ತಿ ಜನರನ್ನು ಸಮ್ಮೋಹನಗೊಳಿಸುವ ಧ್ವನಿಯಲ್ಲಿ ಅದ್ಭುತ ಶಕ್ತಿ ಇರುತ್ತದೆ' ಎಂದು ಪರಿಣಿತರು ಹೇಳುತ್ತಾರೆ. ಭಾಷೆಯಲ್ಲಿ ಸಮ್ಮೋಹನವಿದೆ. ವಿಚಾರವಹನ ಅಂತರಾಳದಲ್ಲಿರುವ ಅಂತಃಸತ್ವದ ಭಾವವನ್ನು ನಿರ್ಭೀಡೆಯಾಗಿ ಹಂಚುವದು. ಶ್ರೋತೃಗಳು ಧನ್ಯತೆಯನ್ನು ಅನುಭವಿಸುವಂತೆ ವ್ಯಕ್ತಗೊಳಿಸುವ ಕ್ರಿಯೆ ಪ್ರವಚನ. ನಿರಾಲಂಬ, ನಿರಾಳ, ನಿಶ್ಯಬ್ಧಗೊಳಿಸುವ ನಿಶ್ಚಿಂತೆಯ ಶೈಲಿ ಪ್ರವಚನದ ಮೂಲವಸ್ತು. ಭಾಷೆ ಸಮ್ಮೋಹನ ವಿಚಾರವಹನ ಮುಖ್ಯ

ಮನಸ್ಸಿನಲ್ಲೇಳುವ ವಿಚಾರಗಳನ್ನು ಪರರಿಗೆ ಪರಿಣಾಮಕಾರಿಯಾಗಿ ಮುಟ್ಟಿಸುವ ಒಂದು ವಿಜ್ಞಾನ ಮತ್ತು ಒಂದು ಕಲೆ. ಪ್ರನಚನ ಸಂವಹನ ಮತ್ತು ವಿಚಾರವಹನಗಳೇ ಪ್ರವಚನದ ಸ್ವರೂಪ ತಳಹದಿ.

ಪ್ರವಚನಕ್ಕೆ ಮುಖ್ಯವಾಗಿ ಭಾವ ಸಂಚಲನ, ಸನ್ನಿವೇಶದಲ್ಲಿ ದುಃಖದ ವಿಷಯ ಬಂದಾಗ ಅಳುವಂತೆ, ಭಾವ ಸ್ಪರ್ಷವಿದ್ದಾಗ ಭಾವನಾ ಲೋಕದಲ್ಲಿ ವಿಹರಿಸುವಂತೆ, ಹಾಸ್ಯವಿದ್ದಾಗ ನಗುವಂತೆ ಮಾಡುವದು ಪ್ರವಚನಕಾರನ ಭಾವ ಸಂಚಲನ ಕ್ರಿಯೆ. ಇಂತಹ ಪರಿಸ್ಥಿತಿಯಲ್ಲಿ ಒಂದು ಸಾಹಿತ್ಯ ಪ್ರವಚನಕಾರನ ನಾಲಗೆಯಿಂದ ಮೈದಾಳುತ್ತದೆ.

ಇತಿಹಾಸದ ಜಗತ್ತಿನ ಮಹಾಮಹಾಘಟನೆಗಳು ನಡೆದದ್ದು ಪ್ರವಚನದಿಂದಲೇ. ಆಗಿ ಹೋದ ಘಟನೆಗಳನ್ನು ವೇದಿಕೆ ಮೂಲಕ ನೆನಪಿಸದೇ ಇದ್ದರೆ ಇತಿಹಾಸ ಉಳಿಯುವುದಿಲ್ಲ. ಪ್ರವಚನಕಾರನು ಅವುಗಳನ್ನು ಮನಮುಟ್ಟುವಂತೆ ಪ್ರಕಟಪಡಿಸುವುದರಿಂದ ಅವೆಲ್ಲ ಇನ್ನೂ ಜೀವಂತವಾಗಿವೆ.

ಬಸವಣ್ಣನವರು ಕ್ರಾಂತಿಯನ್ನು ಆರಂಭಿಸಿದ್ದು, ಗಾಂಧೀಜಿ ಸ್ವಾತಂತ್ರ್ಯ ತಂದದ್ದು, ರೂಸೋ, ಇಲಕಲ್ಲದ ಡಾ. ಮಹಾಂತಪ್ಪಗಳು ಮುಂತಾದವರ ಗುರು ಚರಮೂರ್ತಿಗಳು, ಚಿಂತಕರು, ಸಂಶೋಧಕರು, ವಾಗ್ಮಿಗಳು ಮುಂತಾದವರೆಲ್ಲ ಬದಲಾವಣೆ ತಂದದ್ದು ಪ್ರವಚನದಿಂದಲೇ!

ಪ್ರವಚನದಿಂದ ಪ್ರಚೋದನೆ, ಪ್ರಕಾಶ, ಪ್ರಭಾವ, ವಿಕಾಸ ಎಲ್ಲವೂ ಇರುತ್ತದೆ. ಪ್ರವಚನದಲ್ಲಿ ಒಂದು ವಿಜ್ಞಾನ ತಂತ್ರಜ್ಞಾನ ಎಲ್ಲವೂ ಹೌದು. ಸರ್ವರಲಿ ಒಂದು ನುಡಿಗಲೆತು ಪ್ರವಚನಕಾರನು ವಿದ್ಯೆಯ ಪರ್ವತವೇ ಆದನು. ಚಿಂತನಾಕಾರರ ಚಿಂತನೆಗಳು, ಅಂಕಣಕಾರರ ಬರಹಗಳು ಎಲ್ಲವೂ ಪ್ರವಚನ ಸಾಹಿತ್ಯ. ನೇತ್ರದಾನ ಮಾಡಿದ್ದು, ದೇಹದಾನ ಮಾಡಿದ್ದು, ದುಶ್ಚಟಗಳನ್ನು ಬಿಡಿಸಿದ್ದು, ಕಳ್ಳತನ, ಮೋಸ, ಜಗಳ ಬಿಡಿಸಿದ್ದು ಪ್ರವಚನದ ಮಾತುಗಳಿಂದಲೇ. ಪ್ರವಚನಕಾರನ ಮಾತಿಗೆ ಸಾವಿರ–ಸಾವಿರ ಜನಸಮೂಹ ಸೃಷ್ಠಿಯಾಗಿರುತ್ತದೆ. ಅವನ ವಿಕಾಸದ ಮಾತುಗಳು ಸಾಮಾಜಿಕ ಬದಲಾವಣೆಗೆ ಕಾರಣವಾಗಬಲ್ಲವು.

ಸರಳತೆ, ಮೃದುಮಾತು, ಸಮಯಪ್ರಜ್ಞೆ, ಶ್ರೋತೃಗಳು, ವಾತಾವರಣ, ಧ್ವನಿವರ್ಧಕದ ವ್ಯವಸ್ಥೆ ಎಲ್ಲವೂ ಒಂದು ಯಶಸ್ವಿ ಪ್ರವಚನಕ್ಕೆ ಮತ್ತು ಪರಿಣಾಮಕಾರಿ ಪ್ರವಚನ ಸಾಹಿತ್ಯಕ್ಕೆ ಕಾರಣವಾಗುವವು. ನಿತ್ಯದ–ಸತ್ಯದ ಘಟನೆಗಳನ್ನು ಉದಾಹರಿಸುವುದರಿಂದ ಪ್ರವಚನ ಪರಿಣಾಮ ಆಗಬಹುದು.

ಎದೆ ತಟ್ಟುವ ಪ್ರವಚನದ ಮಾತುಗಳು ದೈನಂದಿನ ಚಟುವಟಿಕೆಗಳ–ಮೇಲೆ, ಮನಸ್ಸಿನ–ಮೇಲೆ, ಮಾತಿನ–ಮೇಲೆ, ರೀತಿ–ನೀತಿಯ ಮೇಲೆ ಬಹುಪಾಲು ಪರಿವರ್ತನೆ ತರುತ್ತವೆ.

ಒಂದು ಸಂಪ್ರದಾಯ, ಒಂದು ವ್ಯಕ್ತಿ ಚಿತ್ರಣವನ್ನೂ ವೈಭವೀಕರಿಸಿ ಹೇಳುವ ಪುರಾಣಗಳು ಇಂದಿನ ಜಾಗತಿಕ ಯುಗದಲ್ಲಿ ಪರಿಣಾಮ ಮಾಡವು.

ಪ್ರವಚನದಲ್ಲಿ ಹಾಗಲ್ಲ, ಪ್ರವಚನ ಸಾಹಿತ್ಯಕ್ಕೆ ಎಲ್ಲಾ ವಿಷಯ, ವಿಚಾರಗಳ ಅವಶ್ಯಕತೆ ಇದೆ. ಅದರಲ್ಲಿ ತತ್ವಜ್ಞಾನವಿದೆ–ವಿಜ್ಞಾನವಿದೆ, ಖಗೋಳ–ಭೂಗೋಳ ಶಾಸ್ತ್ರವಿದೆ, ಜೀವ ಜೀವಿಗಳ ವೈವಿಧ್ಯತೆಯಿದೆ, ಇತಿಹಾಸವಿದೆ, ಹಳ್ಳಿಯ ಚಿತ್ರಣವಿದೆ, ಕವಿ–ಸಾಹಿತಿಗಳ ಕಾವ್ಯ ಪ್ರತಿಮೆಗಳಿವೆ, ನಾಟಕ, ಕಲೆ, ಸಂಸ್ಕೃತಿ ಇದೆ. ಉಪಮೆ–ಉಪಮಾನಗಳ ಸಮೂಹವಿದೆ. ಎಲ್ಲವನ್ನೂ ಒತ್ತಟ್ಟಿಗೆ ಸೇರಿಸಿದಾಗ ಒಂದು ಅದ್ಭುತ ರೂಪಾಕೃತಿ ಕಾಣುತ್ತದೆ. ಅದುವೇ ಪ್ರವಚನದ ದಿವ್ಯ ದರ್ಶನ. ಈ ದಿವ್ಯ ರೂಪದಿಂದ ಚಿಮ್ಮುವ ಆ ಜ್ಞಾನಧಾರೆಯಿಂದ ಹೊರಹೊಮ್ಮಿ ಒಂದು ವಿನೂತನ ಸಾಹಿತ್ಯ ಸೃಷ್ಟಿಯಾಗುತ್ತದೆ. ಅದುವೇ ಪ್ರವಚನ ಸಾಹಿತ್ಯ.

ಪ್ರವಚನ ಸಾಹಿತ್ಯವೆಂಬುದು ಒಂದು ವಿಶಿಷ್ಟ ಪ್ರಕಾರವಿಲ್ಲ. ಯಾವುದನ್ನಾದರೂ ಪ್ರವಚನ ಮಾಡಬಹುದು. ರೋಮದ ಹೋಮರನು ಗ್ರೀಕ್ ಕವಿ. ಜಗತ್ತಿನ ಆದಿಕವಿಗಳಲ್ಲಿ ಒಬ್ಬ ಗ್ರೀಕ್ ಭಾಷೆಯ ಆದಿಕವಿ. ಅವನು ತಾನು ರಚಿಸಿದಂಥ ಕಾವ್ಯವನ್ನು ತಾನೇ ಹಾಡುವ ಹೊತ್ತಿಗೆ ಅವನು ಕುರುಡಾಗಿದ್ದ. ಆದರೂ ಅವನ ಬೆರಳು ಲೈನ ವಾಕ್ಯ ಮೇಲೆ ಆಡಿದರೆ ಒಂದು ಸುಮಧುರ ಅರ್ಥ ಭಾವದ ನಾದ ಹೊರಡುತ್ತಿತ್ತು. ಇಲಿಯಡ್ ಓಡಿಸ್ಸಿ ಕಾವ್ಯವನ್ನು ಸಂತೋಷ ಕೂಟದ ಸಂದರ್ಭದಲ್ಲಿ ಅವನು ಹಾಡುತ್ತಿದ್ದ.

ಇಲಿಯಡ್ ಕಾವ್ಯದಲ್ಲಿ ಶೌರ್ಯ, ಸಾಹಸ, ಕೊಲೆ, ಸುಲಿಗೆ, ಬಡಿದಾಟ ಹೋರಾಟ ಅಂತ ಇತ್ತು. ಅದನ್ನು ಆತ ಪ್ರವಚನ ನೀಡಿದನೆಂದರೆ ಆ ಸತ್ಯ ಚಿತ್ರಣವನ್ನು ಕಣ್ಣು ಮುಂದೆ ನಿಲ್ಲಿಸುತ್ತಿದ್ದನು. ಚಂಪೂ, ರಗಳೆ ಪ್ರಕಾರದಂತೆ ಪ್ರವಚನ ಸಾಹಿತ್ಯಕ್ಕೆ ಸ್ವತಂತ್ರ ಸಾಹಿತ್ಯ ಪ್ರಕಾರವಿಲ್ಲ. ಯಾವ ಕೃತಿಯನ್ನು ಪ್ರವಚನ ಮಾಡಬಹುದು.

ಓಡಿಸ್ಸಿಯಲ್ಲಿ ಮನುಷ್ಯನ ಜೀವನ ಮುಗಿದೇ ಹೋಯಿತು ಎನ್ನುವದರೊಳಗೆ ಮತ್ತೆ ಹೊಸತೊಂದನ್ನು ಕಟ್ಟಬೇಕು ಎನ್ನುತ್ತಾನೆ. ಇದು ಅದರಲ್ಲಿ ಹುದುಗಿದೆ. ಬರೀ ಕಾವ್ಯ ಹಾಡುತ್ತಿರಲಿಲ್ಲ ಅದನ್ನು ಒಂದು ಕಥೆಯಾಗಿ ಹಾಡುತ್ತಿದ್ದ. ಕವಿಯೂ ಇಲ್ಲಿ ಪ್ರವಚನಕಾರನಾಗಿದ್ದಾನೆ. ಕಾವ್ಯ ಸಾಹಿತ್ಯ ಬರೆಯುವುದು ಎಷ್ಟು ಮುಖ್ಯವೋ ಅದನ್ನು ಜನತೆಗೆ ಮುಟ್ಟಿಸುವುದು ಅಷ್ಟೇ ಮುಖ್ಯ ಕಾವ್ಯದ ಒಂದು ತುದಿಯಲ್ಲಿ ಕವಿ ಇದ್ದಾನೆ. ಇನ್ನೊಂದು ತುದಿಯಲ್ಲಿ ವಾಗ್ಮಿ ಇದ್ದಾನೆ. ಕವಿ ಕಾವ್ಯವನ್ನು ಸೃಷ್ಟಿ ಮಾಡುತ್ತಾನೆ. ಅವನಿಗವನೇ ದರ್ಶನವಾಗಿರುತ್ತಾನೆ. ಅವನಿಗೆ ಕಂಡ ಆ ಬೆಳಕನ್ನು ಪ್ರವಚನಕಾರನು ತಾನು ಉಂಡು ಜನರಿಗೆಲ್ಲ ಹಂಚುತ್ತಾನೆ. ಕವಿ ಕಂಡದ್ದನ್ನು ಒಂದು ಭಾಷೆಯಲ್ಲಿ ರೂಪಕೊಟ್ಟು ಇಡುತ್ತಾನೆ. ಪ್ರವಚನಕಾರನು ಅದಕ್ಕೆ ಶೃಂಗಾರ, ಸೌಂದರ್ಯ ನೀತಿ ಜನಮಾನಸಕ್ಕೆ ತಲುಪಿಸುತ್ತಾನೆ.

ಒಂದು ಸಾಹಿತ್ಯದ ಸೃಷ್ಟಿ ಕವಿ ಯಾವ ಕಲ್ಪನೆ, ಭಾವನೆ ಇಟ್ಟು ರಚಿಸಿರುತ್ತಾನೆ ಅದನ್ನು ಸರಿಯಾಗಿ ಅರ್ಥೈಸಿಕೊಂಡು ಮೂಲರೂಪ ಕೆಡದಂತೆ ಅದಕ್ಕೆ ಒಂದು ಮಾತಿನ ಸ್ಪರ್ಶ ಉಂಟು ಮಾಡುವವನೇ ಪ್ರವಚನಕಾರ. 'ಹೇಳಿದರೆ ಹಾಳಾಗಬಹುದು ಆ ಅನುಭವದ ಸವಿಯು ಹೇಳದೆ ತಾಳನು ಆ ಕವಿಯು'. ಕುವೆಂಪು ಅವರ ಮಾತು. ಕವಿಗೆ ಸಾಹಿತಿಗೆ ಸಂತಸವಾಗುವುದು ಒಬ್ಬ ಉತ್ತಮ ಪ್ರವಚನಕಾರನಿಂದ ಮೂಲ ಸಾಹಿತ್ಯಕ್ಕೆ ಧಕ್ಕೆ ಬರದಂತೆ ಹೇಳಿದಾಗ ಪರಮ ಸಂತಸ. ಪ್ರವಚನಕಾರನು ಎಷ್ಟೇ ಹೇಳಿದರೂ ಇನ್ನೂ ನಾನು ಪೂರ್ತಿ ಕೊಟ್ಟಿಲ್ಲ ಎಂಬ ಅಳುಕು ಇದ್ದೇ ಇರುತ್ತದೆ. ಕವಿ ಸಾಹಿತಿಗಳೆಲ್ಲದರ ದರ್ಶನ ಒಬ್ಬ ಪ್ರವಚನಕಾರನಿಂದ ಮೂಡಿ ಬರುತ್ತದೆ.

ಕವಿ-ಸಾಹಿತಿ-ಜ್ಞಾನಿ-ದಾರ್ಶನಿಕ ಪ್ರವಚನಕಾರ ಎಲ್ಲವನ್ನೂ ಬರೆಯುತ್ತಾನೆ ಹೇಳುತ್ತಾನೆ ಎಂದು ಹೇಳಲಾಗುವುದಿಲ್ಲ.

ಪ್ರವಚನಕ್ಕೆ ಗಂಭೀರತೆ ಇತ್ತು. ಕೇಳುಗನ ದೃಷ್ಟಿ ಅತ್ತ-ಇತ್ತ ವಿಚಲಿತ ಆಗದ ರೀತಿಯಲ್ಲಿ ಇತ್ತ ಪ್ರವಚನವು ಒಂದು ಸುಂದರ ಯೋಗ. ಶಿವಯೋಗದಷ್ಟೇ ಪವಿತ್ರ

ನಮ್ಮೊಂದಿಗೆ ಹುಟ್ಟಿದಂತಹ, ನಮ್ಮೊಂದಿಗೆ ಬೆಳೆದಂತಹ, ನಮ್ಮೊಂದಿಗೆ ಬದುಕಿ ಬಾಳಿದಂತಹ ಆದರೆ ಎಷ್ಟು ಸಂಪತ್ತಿದ್ದರೂ ಮೊಣಕಾಲು ಕೆಳಗೆ ಪಂಚೆಯನ್ನೂ ಉಡಲಾರದ, ಎಷ್ಟು ಸಂಪತ್ತಿದ್ದರೂ ಯಾವುದೇ ಒಂದು ಆಭರಣವನ್ನು ತರಲಾರದವನಿದ್ದರೂ ಎಷ್ಟೇ ತೊಂದರೆಯಾದರೂ ಕುತ್ತಿಗೆಗೆ ಹಾಕಿಕೊಂಡ ಮಡಿಕೆಯಲ್ಲಿಯೇ ಉಗುಳಬೇಕೆ?

ಸವರ್ಣಿಯರು ಬಂದ ತಕ್ಷಣ ನಾನು ಬರುತ್ತಿದ್ದೇನೆ-ದೂರ ಸರಿಯಿರಿ ಎಂದು 'ಸಂಭೋಳಿ-ಸಂಭೋಳಿ' ಕೂಗುವಂತಹ ನತದೃಷ್ಟ 'ನನ್ನ ಅಣ್ಣ ತಮ್ಮಂದಿರಾ, ನನ್ನ ಅಕ್ಕ ತಂಗಿಯರಾ' ಎನ್ನುವ ಆತರದ ಆದರದ ಭಾವನೆಗಳೆಲ್ಲ ಪ್ರವಚನದ ಮಾತುಗಳು. ಗಾಂಧೀಯವರ ಇಂಥಹ ಮಾತುಗಳೂ ಸಹ ಪ್ರವಚನದ ಮಾತುಗಳು.

ಅರವಿಂದ ಘೋಷರು Idea ಎನ್ನುವ ಒಂದು ಪ್ರಬಂಧವನ್ನು ಬರೆಯುತ್ತಾರೆ. ಒಬ್ಬ ಮನುಷ್ಯನ ಮನಸ್ಸಿನ ಮೇಲೆ ಹುಟ್ಟುವಂತಹ ವಿಚಾರ ನಿಧಾನವಾಗಿ ಗಟ್ಟಿಗೊಂಡು ಹೃದಯದಿಂದ ವ್ಯಕ್ತವಾಗಿ ಮಾತಿನ ಮೂಲಕ ಜನರ ಮೇಲೆ ಪ್ರಭಾವ ಬೀರುತ್ತದೆ. ಒಂದು ಪರಿವರ್ತನೆ ಕಾಣುತ್ತದೆ. ಒಂದು ಸಂಘಟನೆ ಬೆಳೆಯುತ್ತದೆ. ಸಂಘಟನೆಯಿಂದ ದೇಶವನ್ನು ಕಟ್ಟಬಹುದು. ದೇಶವನ್ನೇ ಉರುಳಿಸಬಹುದು. ಅರವಿಂದರು ಭಾರತ ಸ್ವಾತಂತ್ರ್ಯಕ್ಕೆ ಸಂಬಂಧಪಟ್ಟಂತೆ ಮಾತನಾಡಿದರೂ ದೇಶದ ವಿಶ್ವದ ಮಹತ್ತಕಾರ್ಯಗಳು ಉಂಟಾಗಿದ್ದೇ ಪ್ರವಚನದಿಂದ ಭಾಷಣ ಉಪನ್ಯಾಸ ಒಂದೇ ಕಡೆ ಇರಬಹುದು. ಪ್ರವಚನ ಹಾಗಲ್ಲ ಅದು ಸಮಗ್ರವಾದುದು. ಟೂತ್‌ಪೇಸ್ಟ ಮಾರಾಟ ಮಾಡುವವರು ಒಂದು ಭಾಗವನ್ನು ಮಾತ್ರವೇ ಹೇಳುತ್ತಾ ಹೋಗುತ್ತಾನೆ. ಅದರಿಂದ ಹಾನಿ ಏನೇನು ಆಗುತ್ತದೆ ಎಂಬುದನ್ನು ಹೇಳುವುದಿಲ್ಲ. ಕಡ್ಡಿ ಗುಡ್ಡ ಮಾಡ್ತಾನೆ ಅವನು. ಆದರೆ ಪ್ರವಚನಕಾರ ಹಾಗಲ್ಲ. ಸಮಗ್ರ ವಿಷಯಕ್ಕೆ ಸಂಬಂಧಪಟ್ಟಂತೆ ಒಳಿತು-ಕೆಡಕು ತಾರಕ-ಮಾರಕ ಎಲ್ಲವನ್ನೂ ಹೇಳುತ್ತಾನೆ. ಇಂತಹದೆಲ್ಲವನ್ನೂ ಒಳಗೊಂಡದ್ದೇ ಪ್ರವಚನ ಸಾಹಿತ್ಯ.

"ಒಂದು ಮಾತೆನ್ನಬಹುದೆ ಶಬ್ದಸಾರಾಯವನು?

ಒಂದು ಮಾತೆನ್ನಬಹುದೆ ಶರಣ ಸಂಬಂಧವನು?

ಕೂಡಲ ಸಂಗಮದೇವ,

ನಂಬಿಗೆ 'ಓ' ಎಂದುದನೊಂದು ಮಾತೆನ್ನಬಹುದೆ?

ಲಿಂಗವಶದಿಂದ ಬಂದ ನುಡಿಗಳು."[೬೨]

ಲಿಂಗವಶದಿಂದ ಬಂದ ನುಡಿಗಳು ಲಿಂಗಸ್ವರೂಪವಾಗಿರುತ್ತವೆಯಲ್ಲದೆ ಬೇರಲ್ಲ. ಶಬ್ದ ಸ್ವರಗಳ ಸೀಮೆಯನ್ನು ಮೀರುತ್ತವೆ. ಹಾಗೆ ಪ್ರವಚನದ ಅನುಭಾವದ ನುಡಿಗಳು ಅಂತರಂಗದ ಪರದೆಯ ಮೇಲೆ ಮೂಡಿಬಂದ ಮಾತುಗಳಾಗಿರಬೇಕು. ಆಗ ಅದು ಎದುರಿನ ವ್ಯಕ್ತಿಯ ಕದ ತೆರೆಯಬಹುದು.

ಇದು ವಚನಕಾರನ ಹಾರೈಕೆ. ಮಾತನ್ನು ಮೀರಿ ಮಂತ್ರವಾಗಿಸುವ ಮಾರ್ಗ. ಪ್ರವಚನಕಾರನ ಮಾತು ಮಂತ್ರ, ನಡೆದು ನುಡಿವ ಮಾತು ಪ್ರವಚನ ಮಾತು.

ಮನೀಷೆ ಮುನಿಸುಗಳಿಲ್ಲದ ಮಾತು 'ಸುಭಾಷೆ' ಯೆನಿಸುತ್ತದೆ. ಶಿವನತ್ತ ಕರೆದೊಯ್ಯುತ್ತದೆ. ಭವರೋಗ ತಿಮಿರ ಕಳೆಯುತ್ತದೆ. ಮೃದು ಮಾತುಗಳನ್ನಾಡುವುದೇ ಒಂದು ತಪಸ್ಸು. ಅದೇ ದಿಟವಾಗಿ ಸೊಬಗಿನ ಸಾಹಿತ್ಯ. ಇದು ಪ್ರವಚನ ಸಾಹಿತ್ಯ.

ಇದು ಸರಸಸಾಹಿತ್ಯ. ಇದರಿಂದ ಶಿವಸುಖ ಸಾಹಿತ್ಯ. "ಅಯ್ಯಾ" ಎಂದಡೆ ಸ್ವರ್ಗ; "ಎಲವೋ" ಎಂದಡೆ ನರಕ. ದೇವ, ಭಕ್ತ ಜಯ, ಜೀಯಾ ಎಂಬ ನುಡಿಯೊಳಗೆ ಕೈಲಾಸವಿಹುದು. ದಿಟವ ನುಡಿವುದು, ನುಡಿದಂತೆ ನಡೆವುದು ಪ್ರವಚನಕಾರನ ಪ್ರಮುಖಲಕ್ಷಣ.

---

೬೨ " " 'ವಚನ ಸಾಹಿತ್ಯ ಸಂಗ್ರಹ' – ಸಂ. ಸಂ. ಶಿ.ಭೂಸನೂರಮಠ. ಪುಟಸಂಖ್ಯೆ–೨೮೧. ವಚನಸಂಖ್ಯೆ–೧. (೨೦೦೬)

ಒಂದು ನುಡಿದು ಹುಸಿಯದಿರುವುದು; ಇನ್ನೊಂದು ನಡೆದು ತಪ್ಪದಿರುವುದು. ಎರಡನ್ನೂ ಪಾಲಿಸಬೇಕು.

ಮನಕ್ಕೆ ನಾಚದ ವಚನ
ವಚನಕ್ಕೆ ನಾಚದ ಮನ!

ಮಾತಿನ ಸೈರಣೆ ಬೇಕು. ಮಾತಿನಲ್ಲಿ ಅವಧಾನ ಇರಬೇಕು.

## ೪.೩ ಪ್ರವಚನದ ಅವಶ್ಯಕತೆ :

"ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ ? ಕಡೆಗೀಲು ಬಂಡಿಗಾಧಾರ! ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ! ರಾಮನಾಥಾ".[೪೩] ಎಂಬ ಜೇಡರದಾಸಿಮಯ್ಯನ ಈ ವಚನದಲ್ಲಿ, ಬಂಡಿ ಮತ್ತು ದೇಹಗಳು ರೂಪಕದಲ್ಲಿ ಪರಿಗಣನೆಗೆ ಬಂದಿವೆ. ಹೊಡೆಯುವವನು ಬಲಶಾಲಿಯಾಗಿದ್ದಾನೆ. ಆದರೂ ಗಾಲಿಗಳಿಗೆ ಕೀಲು ಹಾಕುವುದನ್ನು ಮರೆತ್ತಿದ್ದಾರೆ! ಗಾಡಿ ಸಾಗವುದೆಂತು? ಕಡೆಗೀಲು ಇರದ ಅಥವಾ ಕಡೆಗೀಲಿನ ಭದ್ರತೆ ಇರದ ಬಂಡಿ ಹೇಗಿದ್ದರೇನು? ಉರುಳಿ ಬೀಳುವುದು ಸ್ವಾಭಾವಿಕ. ಅಂತೆಯೇ ದೇಹವೆಂಬ ಬಂಡಿಗೆ ರೂಪ, ಯೌವ್ವನ, ಧನಕನಕಾದಿಗಳು ಎಷ್ಟಿದ್ದರೇನು? ಶಿವಶರಣರ ನುಡಿಗಳ ಕೀಲು– ದೇಹಕ್ಕೆ (ಜೀವನಿಗೆ) ಇರದಿದ್ದರೆ, ಪಥನ ನಿಶ್ಚಿತ. ಮೊದಲ ವಚನಕಾರನೆಂದು ವಚನ ಸಾಹಿತ್ಯ ಚರಿತ್ರೆಯಲ್ಲಿ ಪರಿಗಣಿಸಲ್ಪಟ್ಟಿರುವ ಜೇಡರದಾಸಿಮಯ್ಯನು ಹೀಗೆ 'ಮಾತುಗಳ'ನ್ನು 'ವಿಚಾರಗಳ'ನ್ನು 'ಒಳ್ಳೆಯ ಅಂಶ'ಗಳನ್ನು ಆದ್ಯತೆಯಲ್ಲಿ ಪರಿಗಣಿಸಿರುವುದು 'ವಿಚಾರ ಸಾಹಿತ್ಯ'ಕ್ಕೆ ಆತನು ಕೊಡುತ್ತಿರುವ ಮಹತ್ವವನ್ನು ಸೂಚಿಸುತ್ತದೆ.

ಅಲ್ಲಮಪ್ರಭುವಿನ ಈ ವಚನವು 'ವಿಚಾರ', 'ಒಳ್ಳೆಯ ಮಾತು'ಗಳು ಇವುಗಳಿಗೆ ಸಂಬಂಧಿಸಿದಂತೆ ನೇರವಾಗಿ ಹೇಳದಿದ್ದರೂ ಮಾನಸಿಕ ಸಮತೋಲನ ಸ್ಥಿತಿಯ ಕಾಪಾಡುವಿಕೆಯನ್ನು ವಿವರಿಸುತ್ತದೆ. ಓಡುವ ದೇಹದ ಬಂಡಿಗೆ ಮಹಾತ್ಮರ, ಶರಣರ, ನುಡಿಗಡಣದ ಕಡೆಗೀಲು ಅವಶ್ಯ. ಇದನ್ನು ಹಾಕಲಾರದೆ ಓಡುವ ಬಂಡಿಗಳು ಎಲ್ಲೆಲ್ಲಿಯೋ ಬಿದ್ದು ಹೊರಲಾಡುವವರನ್ನು ನಿತ್ಯ ಗಮನಿಸಬಹುದಾಗಿದೆ. ಬಾಳಲಿಕ್ಕೆ ಬೇಕಾದ ನೈತಿಕ ಶಾಸನಗಳು, ಸಂಹಿತೆಗಳು ಸಿಕ್ಕುವುದು ಮಹಾತ್ಮರ ನುಡಿಗಳಲ್ಲಿ, ಅದು ಪ್ರವಚನದ ಮೂಲಕ ದೊರೆಯಬಹುದಾಗಿದೆ.

---

೪೩ " " ಸಮಗ್ರ ವಚನ ಸಂಪುಟ–೭ ಸಂಎಸ್. ವಿದ್ಯಾಶಂಕರ. ವ.ಸಂ.೭೬೭ ಪುಟಸಂಖ್ಯೆ–೨೪೨. (೨೦೦೧)

## ೪.೪ ಪ್ರವಚನದ ಪ್ರಯೋಜನ

ಪ್ರವಚನದ ಗುರಿ ಮಾನವರಲ್ಲಿದ್ದಿರಬಹುದಾದ ನಿರಾಶಾವಾದವನ್ನು ಹೋಗಲಾಡಿಸುವುದು. ಜಾತಿ, ಮತ, ಪಂಥ, ಅರ್ಥ ಸಂಬಂಧದ ಭೇದಭಾವಗಳನ್ನು ತೊಡೆದುಹಾಕುವುದು. ಜಗತ್ತಿನ ಆದಿಯಾಧಾರ ಮಹಾತತ್ತ್ವದ ಅರಿವನ್ನು ಜನತೆಗೆ ನೀಡುವುದು. ಹಾಗೂ ದೈವೀ ಶಾಂತಿಯನ್ನು ಪ್ರತಿವ್ಯಕ್ತಿಯ ಹೃದಯದಲ್ಲಿ ಸ್ಥಾಪಿಸುವುದು.

ನಾವು ಇಂದಿಗೂ ಅಂಧಕಾರದಲ್ಲಿದ್ದೇವೆ. ನಮಗೆ ಸಮಾಧಾನವಿಲ್ಲ, ಕೀಳುಭಾವನೆ, ಸ್ವಾರ್ಥಕಲ್ಪನೆ, ನಮ್ಮ ಹೃದಯಗಳಲ್ಲಿ ಮನೆಮಾಡಿದೆ. ನಮ್ಮ ಅಂತರಂಗ ಸಂಕುಚಿತವಾಗಿ ಅಲ್ಲಿ ಮಡದಿ ಮಕ್ಕಳಿಗಲ್ಲದೆ ಬೇರೆಯವರಿಗೆ ಸ್ಥಾನವಿಲ್ಲ. ಮೋಹ, ಮದ, ಮತ್ಸರಗಳ ಜಾಲ ನಮ್ಮ ಮನದಲ್ಲೆಲ್ಲಾ ಹರಡಿವೆ. ಕಾಮ, ಅಹಂಕಾರ, ಲೋಭಗಳೆಂಬ ರಕ್ಕಸರು ನಮ್ಮನ್ನು ಆಳುತ್ತಿದ್ದಾರೆ. ಇನ್ನೆಲ್ಲಿ ಶಾಂತಿ–ಸಮಾಧಾನ.?

"ಮನೆಯೊಳಗೆ ಮನೆಯೊಡೆಯನಿದ್ದಾನವೋ ಇಲ್ಲವೋ! ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ? ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ, ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲಸಂಗಮದೇವಾ."[೪೪]

ನಮ್ಮ ಹೃದಯ ಸ್ವಚ್ಛವಾಗಬೇಕು. ಅಲ್ಲಿರುವ ಬಂಧ–ಜಾಲಗಳು ಕತ್ತರಿಸಿ ಹೋಗಬೇಕು. ಒಳಗಿರುವ ಅಂಧಕಾರ ನೀಗಬೇಕು. ಹೃದಯ ವಿಶ್ವ–ವಿಶಾಲವಾಗಬೇಕು. ಇದನ್ನೆಲ್ಲ ಸಾಧಿಸುವ ಮಹಾ ಶಕ್ತಿ ಪ್ರವಚನದಲ್ಲಿದೆ. ಪ್ರವಚನದ ತುಂಬೆಲ್ಲ ಕರುಣೆ, ದಯೆ, ಓತಪ್ರೋತವಾಗಿ ಹರಿಯುತ್ತಿದೆ. ಇಂತಹ ಪ್ರವಚನ ಕೇಳಿದಾಗ ಮನ ಮುಗ್ಧವಾಗುವುದು. ದೇಹ ಪುಳಕಿತವಾಗುವುದು. ಹೃದಯ ಅರಳುವುದು. ಬುದ್ಧ ದೇವನ ಪ್ರವಚನ (ಸುವಾರ್ತೆ) ದಿಂದ ಅಂಗೂಲಿಮಾಲಾ, ನಾರದರ ಉಕ್ತಿಯಿಂದ ರತ್ನಾಕರ ಬೇಡ ಬದಲಾವಣೆಗೊಂಡರು.

ಪ್ರವಚನದ ಸಾಮೂಹಿಕ–ಸಾಂಸ್ಕೃತಿಕವಾದ ಸಂವಹನದ ಕ್ರಿಯೆಯೂ ಬದುಕನ್ನು ಪರಿಪಕ್ವಗೊಳಿಸುವ ಉದ್ದೇಶವನ್ನೇ ಒಳಗೊಂಡಿರುತ್ತದೆ. ಅಚಿಂತ್ಯವಾದ ಭಗವದ್ ಶಕ್ತಿಯೇ ಆಗಿರಲೀ, ಮನುಷ್ಯ ಶಕ್ತಿಯೇ ಆಗಿರಲೀ, ಅದನ್ನು ಅರಿವಿಗೆ ತಂದುಕೊಂಡು ನಡೆದು ನಡೆದುಕೊಳ್ಳಬೇಕಾದ ಒಂದು ವಿಧಾನವಾಗಿ ಈ ಪ್ರವಚನವು ಮನುಷ್ಯನ ಬಾಳಿಗೆ ಅವಶ್ಯಕವೆನಿಸುತ್ತದೆ.

---

೪೪ " " 'ವಚನ ಸಾಹಿತ್ಯ ಸಂಗ್ರಹ'. ಸಂ.–ಸಂ. ಶ್ರೀ ಭೂಸನೂರಮಠ. ಪ್ರ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು–೦೨. ಪುಟ–೫೩. ವಚನಸಂಖ್ಯೆ–೨೨. (೨೦೦೬)

ಭೌತಿಕವಾದ-ಲೌಕಿಕವಾದ ಬದುಕು ಅನಿವಾರ್ಯವಾಗಿಯೂ ಆದಿಭೌತಿಕವಾದ-ಅಲೌಕಿಕವಾದ ಚಳುವಳಿಯೂ ಅವಶ್ಯವಾಗಿಯೂ ಮನುಷ್ಯನ ಬದುಕಿಗೆ ಬೇಕಾಗುತ್ತದೆ. ಒಂದು; ಬದುಕಿಗೆ ಉಪಭೋಗದ ಸೌಲಭ್ಯಗಳನ್ನು, ಮತ್ತೊಂದು; ಭೋಗಸೌಲಭ್ಯಗಳನ್ನು ಒದಗಿಸುತ್ತದೆ. ಒಂದು; ದೇಹದ ಸೌಲಭ್ಯವಾದರೆ, ಮತ್ತೊಂದು; ಮನಸ್ಸಿನ ಸೌಲಭ್ಯ. ಒಂದು; ಬಹಿರಂಗದ, ಮತ್ತೊಂದು; ಅಂತರಂಗದ ವಿಷಯವಾಗಿದೆ. ಆಚಾರವೆಂಬುದು ಮನುಷ್ಯನನ್ನು ಬಹಿರಂಗದಲ್ಲಿ ಶುದ್ಧವಿಡುತ್ತದೆ. ವಿಚಾರವೆಂಬುದು ಮನುಷ್ಯನನ್ನು ಅಂತರಂಗದಲ್ಲಿ ಶುದ್ಧವಿಡುತ್ತದೆ. ಅಂತರಂಗ-ಬಹಿರಂಗ ಇವೆರಡು ಶುದ್ಧಗೊಂಡರೆ ಅಂಥವನಿಗೆ ಸಾಮಾಜಿಕವಾದ ಸ್ಥಾನ-ಗೌರವಗಳು ಸ್ವಾಭಾವಿಕವಾಗಿ ಲಭ್ಯವಾಗುತ್ತದೆ. ಇಂಥ ಖಚಿತದಾರಿಯನ್ನು ತೋರಿಸುವ ಶಕ್ತದಾರಿಗಳಲ್ಲಿ 'ಪ್ರವಚನ'ವೂ ಒಂದು.

## ೪.೫ ವಿವಿಧ ಪರಂಪರೆಯ ಪ್ರವಚನಕಾರರು :

### ೧) ವಿರಕ್ತ ಪರಂಪರೆಯ ಪ್ರವಚನಕಾರರು :

ಬಸವಾದಿ ಶಿವಶರಣರ ತತ್ವಸಿದ್ಧಾಂತಗಳನ್ನು ಕಾಯಕ, ದಾಸೋಹ, ಭಕ್ತಿ, ಶಿವಯೋಗ, ಶಿವಾನುಭವದ ಹಿನ್ನೆಲೆಯಲ್ಲಿ ಹಳ್ಳಿ ಹಳ್ಳಿಗಳಿಗೆ ಸಂಚರಿಸಿ, 'ಪ್ರಭುಲಿಂಗಲೀಲೆ', ಶೂನ್ಯಸಂಪಾದನೆ, ಅಕ್ಕನಚರಿತ್ರೆ, ೬೩ ಪುರಾತನರ ಚರಿತ್ರೆ, ಶರಣ ಚರಿತಾಮೃತ, ಬಸವಪುರಾಣ ಮತ್ತು ಬಸವಾದಿ ಶಿವಶರಣರ ವಚನಗಳ ಮೇಲೆ ಪ್ರವಚನ ನೀಡುತ್ತಾರೆ.

ಸಹಜ ಶಿವಯೋಗ, ಲಿಂಗದೀಕ್ಷಾ ಕಾರ್ಯಕ್ರಮ, ಸಸಿನೆಡುವುದು, ಆರೋಗ್ಯ ಶಿಬಿರ, ಯೋಗ ಶಿಬಿರಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಧರ್ಮಜಾಗೃತಿ ಮಾಡುತ್ತಾ ಬಂದಿದ್ದಾರೆ.

ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಶ್ರೀ ಜಗದ್ಗುರು ತೋಂಟದಾಚಾರ್ಯ ಮಠ ಗದಗ, ಡಾ. ಮಹಾಂತ ಮಹಾಸ್ವಾಮಿಗಳು ಇಳಕಲ್, ಡಾ. ಶಿವಮೂರ್ತಿ ಮುರುಘಾ ಶರಣರು ಚಿತ್ರದುರ್ಗ, ಪೂಜ್ಯ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಮುರುಘಾಮಠ ಧಾರವಾಡ, ಪೂಜ್ಯ ಶ್ರೀ ದಿಂಗಾಲೇಶ್ವರ ಮಹಾಸ್ವಾಮಿಗಳು ಬಾಲೆಹೊಸೂರ, ಪೂಜ್ಯ ಶ್ರೀ ಪ್ರಭುಚನ್ನಬಸವ ಸ್ವಾಮಿಗಳು ಮೋಟಗಿಮಠ ಅಥಣಿ, ಮುಂತಾದವರು ತಮ್ಮ ಆಧ್ಯಾತ್ಮಿಕ ಪ್ರವಚನಗಳ ಮೂಲಕ ಶಾಂತ ಮತ್ತು ಪ್ರಶಾಂತ ಸಮಾಜವನ್ನು ಕಟ್ಟುತ್ತಿದ್ದಾರೆ.

೨) <u>ಗುರುಪರಂಪರೆ ಪ್ರವಚನಕಾರರು</u> :

ಸಿದ್ಧಾಂತ ಶಿಖಾಮಣಿ ಮತ್ತು ವಚನಶಾಸ್ತ್ರ ಸಾಮಾಜಿಕ ಮತ್ತು ಧಾರ್ಮಿಕ ಚಿಂತನೆಗಳ ಮೂಲಕ ಮನಕುಲಕ್ಕೆ ತತ್ವಾದರ್ಶಗಳ ಮೂಲಕ ಪ್ರವಚನ ನೀಡುತ್ತಾ ಜನಮನ ತಿದ್ದುವ ಮಹಾಕಾರ್ಯದಲ್ಲಿ ತೊಡಗಿದವರು. ಷ.ಬ್ರ.ಶ್ರೀ ಮಹಾಂತಲಿಂಗ ಲಿವಾಚಾರ್ಯರು ನಂದವಾಡಗಿ, ಷ.ಬ್ರ.ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು ಹಿರೇಮಠ ತೆಲಸಂಗ, ಷ.ಬ್ರ.ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ಹುಕ್ಕೇರಿ, ಡಾ. ಶಿವಾನಂದ ಶಿವಾಚಾರ್ಯರು ತುಮಕೂರ ಮುಂತಾದವರು.

೩) <u>ಸಿದ್ಧಾರೂಢ ಪರಂಪರೆ ಪ್ರವಚನಕಾರರು</u> :

ವೇದಾಂತ ಸಿದ್ಧಾಂತಗಳನ್ನು ಸಮನ್ವಯಗೊಳಿಸಿ, ಗುರು ಸಿದ್ಧಾರೂಢ ಮಹಾಸ್ವಾಮಿಗಳ ತತ್ವಾದರ್ಶಗಳನ್ನು ಶ್ರೀಮನ್ ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರಗಳನ್ನು, ಉಪನಿಷತ್ತ, ಗೀತೆ, ವಚನ ಮುಂತಾದವುಗಳ ಮೇಲೆ ವೇದಾಂತ ಪರಿಷತ್ ಅಡಿಯಲ್ಲಿ ಪ್ರವಚನ ನೀಡುತ್ತಾರೆ. ಇವರಲ್ಲಿ ಸನ್ಯಾಸಿ ಮತ್ತು ಗ್ರಹಸ್ಥ ಪ್ರವಚನಕಾರರನ್ನು ಕಾಣುತ್ತೇವೆ. ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳು ಬೀದರ, ಪೂಜ್ಯ ಶ್ರೀ ಶಿವಾನಂದ ಭಾರತಿ ಸ್ವಾಮಿಗಳು ಇಂಚಲ, ಪೂಜ್ಯ ಶ್ರೀ ಅಭಿನವ ಶಿವಪುತ್ರ ಸ್ವಾಮಿಗಳು ಬಿಜಾಪುರ, ಪೂಜ್ಯ ಶ್ರೀ ಪ್ರಣವಾನಂದ ಮಹಾಸ್ವಾಮಿಗಳು ಮುಳಂಬಾ, ಮಾತೋಶ್ರೀ ಅಕ್ಕಮಹಾದೇವಿ ತಾಯಿಯವರು ಗದಗ, ಮಾತೋಶ್ರೀ ಉಮಾತಾಯಿಯವರು ಶಿರಗುಪ್ಪಿ, ಮಾತೋಶ್ರೀ ಲಕ್ಷ್ಮೀತಾಯಿ ಗುಲಬರ್ಗಾ ಪೂಜ್ಯ ಗಣೇಶಾನಂದ ಮಹಾರಾಜರು ಬೀದರ, ಶ್ರೀ ಶಿವರುದ್ರ ಶರಣರು ಹಿಪ್ಪರಗಿ, ಶ್ರೀ ಮಹಾಂತೇಶ ಶಾಸ್ತ್ರಿಗಳು ಘಟಪ್ರಭಾ, ಶ್ರೀ ಮಾರುತಿ ಶರಣರು ಕಂಕಣವಾಡಿ, ಶ್ರೀ ಕೆ. ಬಿ. ಪಾಟೀಲರು ಕೋಲೂರ ಮುಂತಾದವರು ಈ ಮಾರ್ಗದಲ್ಲಿ ಮುನ್ನಡೆದ ನಾಡಿನಾದ್ಯಂತ ಪ್ರವಚನ ನೀಡುವುದಲ್ಲದೆ, ಅನೇಕ ಸಿ.ಡಿ ಮತ್ತು ಗ್ರಂಥಗಳನ್ನು ಲೋಕಾರ್ಪಣೆ ಮಾಡಿದ್ದಾರೆ.

೪) <u>ಶರಣರ ಪರಂಪರೆ ಪ್ರವಚನಕಾರರು</u> :

ಬಸವಾದಿ ಶಿವಶರಣರ ವಚನ ವಾಂಙ್ಮಯವನ್ನು ಮನೆಮನೆಗಳಿಗೆ ಮುಟ್ಟಿಸುವ ಮಹತ್ಕಾರ್ಯದಲ್ಲಿ ತೋಡಗಿರುವ ಪ್ರವಚನಕಾರರನ್ನು ನಾವಿಲ್ಲಿ ನೋಡುತ್ತೇವೆ. ಇಲ್ಲಿಯೂ ಸನ್ಯಾಸಿ ಮತ್ತು ಗ್ರಹಸ್ಥ ಪ್ರವಚನಕಾರರನ್ನು ಕಾಣುತ್ತೇವೆ. ವಚನಗಳನ್ನಲ್ಲದೆ (ಬಸವತತ್ವ) ಇನ್ನೇನನ್ನೂ ಪ್ರವಚನ ಮಾಡಲಾರದು. ಹೀಗಾಗಿ ಇವರನ್ನು ಬಸವತತ್ವ ನಿಷ್ಠ ಪ್ರವಚನಕಾರರೆಂದು ಕರೆಯುತ್ತೇವೆ.

ಪೂಜ್ಯ ಅಕ್ಕನ್ನಪೂರ್ಣತಾಯಿಯವರು ಬೀದರ, ಡಾ. ಗಂಗಾಬಿಕೆ ತಾಯಿಯವರು ಬೀದರ, ಪೂಜ್ಯ ಸಿದ್ಧರಾಮ ಶರಣರು ಬೆಲ್ದಾಳ, ಪೂಜ್ಯ ಶ್ರೀ ನಿಜಗುಣಾನಂದ ಮಹಾಸ್ವಾಮಿಗಳು ಬೈಲೂರ, ಡಾ. ಸಿದ್ಧಣ್ಣ ಲಂಗೋಟಿ ಮುಂತಾದವರು.

೫) <u>ಬಸವಪೀಠ ವಿಶ್ವಕಲ್ಯಾಣ ಮಿಷನ್ ಪ್ರವಚನಕಾರರು</u> :

ಪ್ರವಚನ ಪಿತಾಮಹ ಪೂಜ್ಯ ಶ್ರೀ ಲಿಂಗಾನಂದ ಮಹಾಸ್ವಾಮಿಗಳಿಂದ ಸ್ಥಾಪಿತವಾದ ಮಹಿಳಾ ಜಗದ್ಗುರು ಪೀಠ ಬಸವ ಧರ್ಮ ಅಧ್ಯಯನ ಪೀಠವಾಗಿದೆ. ಪೂಜ್ಯ ಮಾತೋಜಿಯವರನ್ನು ಮೊಟ್ಟಮೊದಲು ಮಹಿಳಾ ಜಗದ್ಗುರುವಾಗಿ ನೇಮಿಸಿದ ಖ್ಯಾತಿ ಪೂಜ್ಯ ಲಿಂಗಾನಂದ ಸ್ವಾಮಿಗಳವರಿಗೆ ಸಲ್ಲಬೇಕು.

ಪೂಜ್ಯ ಲಿಂಗಾನಂದರ ಗರಡಿಯಲ್ಲಿ ಅದೇಷ್ಟೋ ಜನ ಪ್ರವಚನಕಾರರು ಸಿದ್ಧರಾಗಿ ಇಂದು ನಾಲ್ಕು ರಾಜ್ಯಗಳಲ್ಲಿ ಶರಣರ ತತ್ವದ ಪ್ರಸಾರ ಪ್ರಚಾರ ಪ್ರಕಟಣೆ ಮಾಡುತ್ತಿದ್ದಾರೆ. ವಿಶ್ವಕಲ್ಯಾಣ ಮಿಷನ್ ಸ್ಥಾಪಿಸಿ, ಗ್ರಂಥ, ಸಿ.ಡಿ. ಪ್ರಕಟಣೆಗೊಳಿಸುತ್ತಿದ್ದಾರೆ. ಶರಣರ ಭಾವಚಿತ್ರಗಳ ಕಲ್ಪನೆ ನೀಡಿದ ಶ್ರೇಯಸ್ಸು ಈ ಸಂಸ್ಥೆಗೆ ಸಲ್ಲುತ್ತದೆ. ಶರಣ ಮೇಳಗಳ ಮೂಲಕ "ಶರಣಮೇಳ ಸಮಾವೇಶ" ಏರ್ಪಡಿಸಿ ಭೇದರಹಿತ ಸಮಾಜ ನಿರ್ಮಿಸಲು ಶ್ರಮಿಸುತ್ತಿದ್ದಾರೆ.

ಬಸವಣ್ಣನವರನ್ನು ಮತ್ತು ಬಸವಸಂದೇಶಗಳನ್ನು ಬಹಿರಂಗವಾಗಿ ಮೊಟ್ಟಮೊದಲು ಮಾತನಾಡಿದ ಧ್ವನಿ ಪೂಜ್ಯ ಲಿಂಗಾನಂದ ಮಹಾಸ್ವಾಮಿಗಳವರದೆಂದು ಹೇಳಲು ನಮಗಿದು ಹೆಮ್ಮೆ ಎನಿಸುತ್ತದೆ. ವೈಚಾರಿಕವಾಗಿ ಮಾತನಾಡುವ ಬಸವತತ್ವ ನಿಷ್ಠ ಪ್ರವಚನಕಾರರಿಗೆ ಪೂಜ್ಯ ಲಿಂಗಾನಂದರು ಮಾದರಿಯಾಗಿದ್ದರು.

೬) <u>ರಾಮಕೃಷ್ಣ ಆಶ್ರಮ ಪರಂಪರೆಯ ಪ್ರವಚನಕಾರರು</u> :

ಸನ್ಯಾಸ ಧರ್ಮ ಸ್ವೀಕರಿಸಿ ಸ್ವಾಮಿ ವಿವೇಕಾನಂದರ ಜೀವನ ಸಿದ್ಧಂತಗಳನ್ನು ಭಾರತೀಯ ಆಧ್ಯಾತ್ಮಿಕ ಪರಂಪರೆಯನ್ನು ಪರಮಹಂಸರ ಜೀವನ ಮೌಲ್ಯಗಳನ್ನು ತಿಳಿಸುತ್ತಾ ಹಿಂದು ಧರ್ಮದ ಮೌಲ್ಯಗಳನ್ನು ಬಿತ್ತರಿಸುತ್ತಾ ನಾಡಿನ ಹಲವೆಡೆ ಆಶ್ರಮಗಳನ್ನು ಕಟ್ಟಿ ಅನೇಕಾನೇಕ ಗ್ರಂಥ ಪ್ರಕಟಿಸಿ ಕ್ಯಾಸೆಟ್ಟು, ಪುಸ್ತಕ ಪ್ರಕಟಿಸಿ ಧರ್ಮಜಾಗೃತಿ ಕಾರ್ಯಕೈಗೊಂಡಿದ್ದಾರೆ.

ಪೂಜ್ಯ ನಿಭ್ಯಾನಂದ ಸ್ವಾಮಿಗಳು ಗದಗ, ಪೂಜ್ಯ ವಿಜಯಾನಂದ ಸ್ವಾಮಿಜಿ ಧಾರವಾಡ, ಪೂಜ್ಯ ರಾಘವೇಶಾನಂದ ಸ್ವಾಮಿಜಿ ಬೆಳಗಾವಿ ಮುಂತಾದವರೆಲ್ಲ ಪ್ರವಚನ ಪ್ರತಿಭೆಗಳನ್ನು ಸಿದ್ಧಗೊಳಿಸಿ ವಿವೇಕ ಪ್ರಭೆಯನ್ನು ಹರಡುತ್ತಿದ್ದಾರೆ.

## ೭) ವೀರೇಶ್ವರ ಪುಣ್ಯಾಶ್ರಮ ಪರಂಪರೆಯ ಪ್ರವಚನಕಾರರು :

ಹಾನಗಲ್ ಕುಮಾರ ಶಿವಯೋಗಿಗಳ ಅಂತಃಕರಣದ ಆಶೀರ್ವಾದದ ಬಲದಿಂದ ಪಂ. ಪಂಚಾಕ್ಷರಿ ಗವಾಯಿಗಳವರು ೧೯೧೪ ರಲ್ಲಿ ಬಸರೀಗಿಡದ ವೀರಣ್ಣನವರು ದಾನಕೊಟ್ಟ ಭೂಮಿಯಲ್ಲಿ ವೀರೇಶ್ವರ ಪುಣ್ಯಾಶ್ರಮ ಸ್ಥಾಪಿಸಿದರು. ಅವರ ಪುಣ್ಯದ ಬಲದಿಂದ ಪಂ. ಡಾ. ಪುಟ್ಟರಾಜ ಕವಿಗವಾಯಿಗಳವರು ಅದರ ವಸ್ತುವಾರಿ ವಹಿಸಿಕೊಂಡು ಆಶ್ರಮದ ಒಡೆಯರಾಗಿ ಸಂಗೀತ, ಸಾಹಿತ್ಯ, ಪುರಾಣ ಪ್ರವಚನದ ತರಬೇತಿ ಕೇಂದ್ರವನ್ನೇ ಸ್ಥಾಪಿಸಿದರು. ಅಂಧ ಅನಾಥ ಬಡ ಮಕ್ಕಳಿಗೆ ಉಚಿತ ಅಧ್ಯಾತ್ಮಿಕ ಶಿಕ್ಷಣ ನೀಡಿದರು. ಇಡೀ ನಾಡಿನಲ್ಲಿ ಮಠ ಮಾನ್ಯಗಳಲ್ಲಿ ಇಂದು ಪ್ರವಚನ ಪುರಾಣ ನೀಡುವವರು ನೂರಕ್ಕೆ ೭೦ ರಷ್ಟು ಜನ ವೀರೇಶ್ವರ ಪುಣ್ಯಾಶ್ರಮದವರೇ ಎಂದು ಹೇಳಬೇಕು. ಸಂಗೀತ ಪುರಾಣ ಕೀರ್ತನ ಪ್ರವಚನಕಾರರಿಗೆ ಗುರು ಪುಟ್ಟರಾಜರು ಆಶ್ರಯದಾತರು ಮತ್ತು ಅನ್ನದಾತರು ಪಂ. ರಾಜಗುರು ಗುರುಸ್ವಾಮಿ ಕಲಕೇರಿಯವರು, ಪಂ. ಕಲ್ಲಿನಾಥ ಶಾಸ್ತ್ರೀಗಳು ಅಡ್ನೂರ, ಪೂಜ್ಯ ಸಿದ್ಧಯ್ಯ ಶಾಸ್ತ್ರೀಗಳು ತೆಲ್ಲೂರ ಮುಂತಾದವರನ್ನು ನಾವು ಕಾಣುತ್ತೇವೆ.

## ೮) ಶಿವಾನಂದ ಪರಂಪರೆಯ ಪ್ರವಚನಕಾರರು :

ಪೂಜ್ಯ ಶಿವಾನಂದರು ಒಂದು ಆಧ್ಯಾತ್ಮಿಕ ಹೊಸ ಸಾಮ್ರಾಜ್ಯವನ್ನೇ ಕಟ್ಟಿದರು. ಅವರು ಅಧ್ಯಾತ್ಮದ ಬಾನಂಗಳದ ಅನಭಿಷಕ್ತ ದೊರೆಗಳು. ಮೇರು ಪರ್ವತ, ಶ್ರೇಷ್ಠ ತಪಸ್ವಿಗಳು. ವೇದಾಂತ ಕೇಸರಿ ಶ್ರೀ ಮಲ್ಲಿಕಾರ್ಜುನ ಶಿವಯೋಗಿಗಳು ಸಾಮರಸ್ಯ ಪ್ರವಚನಾಚಾರ್ಯರು. ಸನ್ಯಾಸ ಧರ್ಮ ಸ್ವೀಕರಿಸಿ ನಡೆ, ನುಡಿ, ಒಂದಾದ ಮಹಾಂತರು ಇಲ್ಲಿ ಲೋಕಮಾನ್ಯರಾಗಿದ್ದಾರೆ. ಪುರಾಣ ರತ್ನ ಪೂಜ್ಯ ಶ್ರೀ ಚನ್ನಬಸವದೇವರು ಘೋಡಗೇರಿ, ರೇವಣಸಿದ್ಧೇಶ್ವರ ಮಹಾಸ್ವಾಮಿಗಳು ಹರಳಕಟ್ಟಿ ಯಕ್ಸಂಬಾ, ಪೂಜ್ಯ ಶರಣ ಬಸವ ಸ್ವಾಮಿಗಳು ಗಣಿಕೋಪ್ಪದ ಶ್ರದ್ಧಾನಂದ ಸ್ವಾಮಿಗಳು ಜಾಲಿಕಟ್ಟಿ, ಪೂಜ್ಯ ಪೂರ್ಣಾನಂದ ಸ್ವಾಮಿಗಳು, ರೋಣದ ಪೂಜ್ಯ ಶ್ರೀ ಸದಾಶಿವ ಸ್ವಾಮಿಗಳು, ಹೆಬ್ಬಳ್ಳಿಯ ಶ್ರೀ ವಾಸುದೇವ ಸ್ವಾಮಿಗಳು, ಪೂಜ್ಯ ಮಲ್ಲಯ್ಯ ಮಹಾಸ್ವಾಮಿಗಳು ಘೋಡಗೇರಿ-ಮೈಗೂರ ಮುಂತಾದವರು ಶ್ರೀ ಶಿವಾನಂದ ಪರಂಪರೆಯಲ್ಲಿ ಕಂಗೊಳಿಸುತ್ತಾರೆ.

ಶಂಕರರ ಅದ್ವೈತ, ನಿಜಗುಣರ ಕೈವಲ್ಯ, ಉಪನಿಷತ್ತ, ಭಗವದ್ಗೀತೆ, ವಚನಶಾಸ್ತ್ರ, ಸಿದ್ಧಾಂತ ಶಿಖಾಮಣಿ ಮುಂತಾದ ಶಾಸ್ತ್ರ ವಿಷಯಗಳ ಮೇಲೆ ಪ್ರವಚನ ನೀಡುವ ಉಪದೇಶಕರು ಇಲ್ಲಿ ಕಾಣಬರುತ್ತಾರೆ.

ಅಲ್ಲದೇ ಅಸುಂಡಿ ನೀಲಮ್ಮ ತಾಯಿ, ಕದಳಿವನ ಮಠದ ಅಕ್ಕ ಮಹಾದೇವಿಯವರು ಶಿಶುವಿನ ಹಳ್ಳಿಯ ಶಾಂತಮ್ಮ ತಾಯಿಯವರು ಮಹಿಳಾ ಪ್ರವಚನಕಾರರಾಗಿ ಈ ಪರಂಪರೆಯಲ್ಲಿ ಗುರುತಿಸಲ್ಪಡುತ್ತಾರೆ. ಪ್ರವಚನ ಲೋಕದ ತೂರ್ಯದ ಸೂರ್ಯ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು ಜ್ಞಾನಯೋಗಿಗಳು ಉತ್ತಮ ವಾಗ್ಮಿಗಳು ಈ ಪರಂಪರೆಗೆ ಹೊನ್ನ ಕಳಶ.

೯) <u>ಇಂಚಗೇರಿ ಸಾಂಪ್ರದಾಯ ಮತ್ತು ಆ ಪರಂಪರೆಯ ಪ್ರವಚನಕಾರರು</u> :

ಬಿಜಾಪುರ ಜಿಲ್ಲೆಯಲ್ಲಿ ಜನ್ಮ ತಾಳಿ ಉತ್ತರ ಕರ್ನಾಟಕದಲ್ಲಿ, ಮತ್ತು ಸೋಲ್ಲಾಪೂರ ಜಿಲ್ಲೆಯಲ್ಲಿ ಗುರುತಿಸಿಕೊಂಡಿರುವ ಪ್ರವಚನ ಸಾಂಪ್ರದಾಯವೆಂದರೆ “ಇಂಚಗೇರಿ”ಯದ್ದು. ಇದರ ಮೂಲ ಪುರುಷ ಗುರುಲಿಂಗ ಜಂಗಮರು, ನಂತರ, ಬಾಹುಸಾಹೇಬರು, ತದನಂತರ ಗಿರಿಮಲ್ಲೇಶ್ವರ ಮಹಾರಾಜರು, ಇವರ ನಂತರ ಸಂಗಯ್ಯಪ್ಪ, ನಂತರದಲ್ಲಿ ಮಾಧವಾನಂದರೆಂದು ಹೆಸರಿಸಬಹುದು. ಇವರೆಲ್ಲ “ದಾಸಭೋದೆ” ಗ್ರಂಥದ ಮೇಲಿಂದ ಪ್ರವಚನ ಸಾಗಿಸುವ ಪರಂಪರೆ ಬೆಳೆದು ಬಂದಿತು. ಈ ಸಂಪ್ರದಾಯದಲ್ಲಿ ಪ್ರಸಿದ್ಧ ಪ್ರವಚನಕಾರರೆಂದರೆ ಡಾ. ಗುರುದೇವ ರಾನಡೆ ಹಾಗೂ ಕುಬಕಡ್ಡಿಯ ರಂಗರಾವ ಮಹಾರಾಜರು, ಕನ್ನೂರಿನ ಶಾಂತಿ ಕುಟೀರದ ಗಣಪತಿ ಮಹಾರಾಜರೆಂದು ಹೆಸರಿಸಬಹುದು. ಡಾ. ಗುರುದೇವ ರಾನಡೆ ಯವರು ಜಮಖಂಡಿಯವರು, ಬಾಹುಸಾಹೇಬ ಶಿಷ್ಯತ್ವವಹಿಸಿಕೊಂಡವರು. ತತ್ತ್ವಶಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡಿದವರು. ಅಲಹಾಬಾದ್ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದರು; ತತ್ತ್ವಜ್ಞಾನಿಗಳಾಗಿದ್ದವರು. ಶಂಕರ ದಯಾಳ ಶರ್ಮಾ ಮುಂತಾದ ರಾಜಕಾರಣಿಗಳು ಇವರ ಶಿಷ್ಯರು. ಕೊನೆಯಲ್ಲಿ ಇಂಡಿ ತಾಲೂಕಿನ ನಿಂಬಾಳದಲ್ಲಿ ಆಶ್ರಮ ಮಾಡಿ ಪ್ರತಿದಿವಸ ಪ್ರವಚನ ಹೇಳುವುದನ್ನು ತಪ್ಪಿಸಲಿಲ್ಲ. ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ. ಡಿ. ಸಿ. ಪಾವಟೆಯವರು ಡಾ. ಗುರುದೇವ ರಾನಡೆಯವರ ಪ್ರವಚನಗಳನ್ನು ವಿಶ್ವವಿದ್ಯಾಲಯದಲ್ಲಿ ಏರ್ಪಡಿಸಿದ್ದರು. ಅವರಂತೆ ಕನ್ನೂರಿನ ಗಣಪತಿ ಮಹಾರಾಜರು ಪ್ರವಚನದ ಪರಂಪರೆಯನ್ನು ಇಂದಿನವರೆಗೂ ಸಾಗಿಸಿಕೊಂಡು ಬಂದಿದ್ದಾರೆ. ಜೊತೆಗೆ ಪ್ರವಚನಗಳ ಪುಸ್ತಕಗಳನ್ನು ಪ್ರಕಟಿಸಿದ್ದರು. ಕೂಬಕಡ್ಡಿ ಪೂಜ್ಯ ರಂಗರಾವ ಮಹಾರಾಜ ಮಹಾರಾಜರ ಭಕ್ತಿ ಸಂಪ್ರದಾಯ, ದಾಸಬೋಧೆ ಪಠಣ, ಪ್ರವಚನ ಭಜನೆ ನಾಮಸ್ಮರಣೆಯಿಂದ ಮುಂದುವರೆದಿದೆ. ಇಂದಿಗೂ ಇಂಚಗೇರಿ ಹಾಗೂ ಕನ್ನೂರು ಮತ್ತು ನಿಂಬಾಳ ಕೂಬಕಡ್ಡಿ ಗ್ರಾಮಗಳಲ್ಲಿ ‘ದಾಸಭೋದೆ’ಯ ಪ್ರವಚನ ಸಾಗುತ್ತಲಿದೆ.

"ಇಂಚಗೇರಿ ಎಂಬುದು ಒಂದು ಸಣ್ಣ ಹಳ್ಳಿ

ಅಲ್ಲಿ ಹಬ್ಬಿದೆ ಸದ್ಗುರುವಿನ ಬಳ್ಳಿ"

"ಇಂಚಗೇರಿ ಸದ್ಗುರು ಸಾಂಪ್ರದಾಯ ಆತ್ಮಜ್ಞಾನದ-ಆಧ್ಯಾತ್ಮ ಪರಂಪರೆಯ ದಿವ್ಯ ಜೀವನದ ಜ್ಞಾನಕೇಂದ್ರ, ಮಹೋನ್ನತ ಜೀವನಕಲೆ ಕಲಿಸುವ ಪ್ರಯೋಗ ಶಾಲೆ. ನೈಜ ಮಾನವ ಪೀಠ."

<u>ಇಂಚಗೇರಿ ಸಾಂಪ್ರದಾಯದ ಪರಂಪರೆ</u>

- ಸದ್ಗುರು ಸಮರ್ಥ ಕಾಡಸಿದ್ಧೇಶ್ವರ ಮಹಾರಾಜರು ಸಿದ್ಧಗಿರಿ.
- ಸದ್ಗರು ಸಮರ್ಥ ಗುರುಲಿಂಗ ಜಂಗಮ ಮಹಾರಾಜರು ನಿಂಬರಗಿ.
- ಸದ್ಗುರು ಸಮರ್ಥ ಗಿರಿಮಲ್ಲೇಶ್ವರ ಮಹಾರಾಜರು ಜಮಖಂಡಿ.
- ಸದ್ಗುರು ಸಮರ್ಥ ಸಂಗಮೇಶ್ವರ ಮಹಾರಾಜರು ಹಿಪ್ಪರಗಿ.
- ಸದ್ಗುರು ಸಮರ್ಥ ಶಿವಪ್ರಭು ಮಹಾರಾಜರು ಹುಬ್ಬಳ್ಳಿ.
- ಸದ್ಗುರು ಸಮರ್ಥ ಮಾಧವಾನಂದ ಪ್ರಭುಗಳು ಹುಬ್ಬಳ್ಳಿ.
- ಸದ್ಗುರು ಸಮರ್ಥ ಗುರುಪುತ್ರ ಮಾಹಾರಾಜರು ಇಂಚಗೇರಿ.
- ಸದ್ಗುರು ಸಮರ್ಥ ಜಗನ್ನಾಥ ಮಹಾರಾಜರು ಇಂಚಗೇರಿ.

ಇವರಲ್ಲದೆ ಇಂಚಗೇರಿ ಸಾಂಪ್ರದಾಯದಲ್ಲಿ ಪ್ರಸಿದ್ಧರಾದವರೆಂದರೆ, ಸಿದ್ಧರಾಮೇಶ್ವರರು (ಪಾರ್ಥಲಿ) ಅಂಬುರಾವ ಮಹಾರಾಜ (ಜಿಗಜಿನ್ನಿ) ರಾಮರಾವ ಮಹಾರಾಜರು (ಹೊರ್ತಿ) ಪ್ರಭಾಕರ ಮಹಾರಾಜರು (ಸೊಲ್ಲಾಪುರ) ಶಿವಲಿಂಗ ಚಾರ‍್ಯ (ಜತ್ತ) ಡಾ. ಗುರುದೇವ ರಾನಡೆ (ನಿಂಬಾಳ-ಜಮಖಂಡಿ) ಮುಂತಾದವರು.

ಈ ಸಾಂಪ್ರದಾಯದಲ್ಲಿ ಪ್ರವಚನಕ್ಕಿಂತ ಹೆಚ್ಚಾಗಿ ರಾಷ್ಟ್ರಪ್ರೇಮ, ಬಂಧುಪ್ರೇಮ, ಗೋವು ಸಾಕಾಣಿಕೆ, ಸಾಮೂಹಿಕ ಪ್ರಾರ್ಥನೆ, ಸಾಮೂಹಿಕ ಬೇಸಾಯ, ಅಂತರಜಾತಿಯ ವಿವಾಹ, ಭೂದಾನಯಜ್ಞ, ಸರ್ವೋದಯ ಕಾರ್ಯಕ್ರಮ ಇತ್ಯಾದಿಗಳನ್ನು ಸಾಗಿಸುವದಾಗಿತ್ತು. ಇಂಚಗೇರಿ ಗ್ರಾಮವು ಮಹಾರಾಷ್ಟ್ರಕ್ಕೆ ಹೊಂದಿಕೊಂಡಿರುವಂತಹದ್ದು. ಈ ಸಾಂಪ್ರದಾಯದಲ್ಲಿ ಅದ್ವೈತ ತತ್ವವನ್ನೇ ಪ್ರತಿಪಾದಿಸುವ ಪ್ರವಚನ ಸಾಗುತ್ತದೆ. "ದಾಸಬೋಧೆ", ಮನಾಚೆ ಶ್ಲೋಕ" ಮುಂತಾದ

ಸಮರ್ಥ ರಾಮದಾಸರ ಗ್ರಂಥಗಳ ಕುರಿತು ಪ್ರವಚನ ಸಾಗುತ್ತವೆ. ಕನ್ನಡ ಭಕ್ತಿ ಗೀತೆಗಳಕ್ಕಿಂತ, ಮಹಾರಾಷ್ಟ್ರದ 'ಅಭಂಗ'ಗಳ ಪ್ರವಚನ ಇಲ್ಲಿ ಸರ್ವೇಸಾಮಾನ್ಯ. ಇಂಚಗೇರಿ ಸಂಪ್ರದಾಯದಲ್ಲಿ ಮಾಧವಾನಂದ ಪ್ರಭುಗಳು, ಹಾಗೂ ಗುರುಪುತ್ರ ಪ್ರಭುಗಳು ಮಾತ್ರ ಪ್ರವಚನ ಮಾಡಿದ್ದಾರೆ.

<u>ಇವರ ಪ್ರವಚನದ ಸಾರ</u> :

ತಾನು ಯಾರು? ಭೂಮಿಗೆ ಬಂದ ಮೇಲೆ ಮಾಡಬೇಕಾದ ಕರ್ತವ್ಯವೇನು? ಮಾನವ ಜನ್ಮ ಶ್ರೇಷ್ಠವಾದದು. ಪ್ರತಿಯೊಬ್ಬರೂ ತಾನು ಯಾರು ಎಂಬುದನ್ನು ಸದ್ಗುರುವಿನ ಮುಖಾಂತರ ಅರಿತು ತಾನೇ ಶಿವನಿದ್ದೇನೆಂಬ ದೃಢ ಅಪರೋಕ್ಷ ಜ್ಞಾನವಾದಗಲೇ ಈ ಭವ ಬಂಧನದಿಂದ ಬಿಡುಗಡೆಯಾಗುವದು. ಆತ್ಮಜ್ಞಾನವಾಗಲಾರದೇ ನಿಜವಾದ ಸುಖ ದೊರೆಯಲಾರದು (ಪುಟ-೧೦೬) ಅಹಂಬ್ರಹ್ಮಾಸ್ಮಿ, ತತ್ವಮಸಿ, ಸರ್ವಂ ಕಲ್ವಿದಂಬ್ರಹ್ಮ- ಅಂತಹ ಸರ್ವಶ್ರೇಷ್ಠವಾದ ವಸ್ತು 'ಸತ್ಯ' 'ಬ್ರಹ್ಮ' ಅನುವದು ತನ್ನಲ್ಲಿಯೇ ಇರುವದು (ಪುಟ-೧೧೫) "ಜಾತಿಗಳನ್ನು ನಾವಾಗಿಯೇ ಮಾಡಿಕೊಂಡವುಗಳು ಅವು ಸಮಾಜಕ್ಕೆ ಮಾರಕವಾಗಬಾರದು ಅಂತರ ಜಾತಿಯ ವಿವಾಹ ಅತ್ಯಂತ ಯೋಗ್ಯವಾದುದು (ಪುಟ-೫೨೦-೫೨೧) ರಾಷ್ಟ್ರಪ್ರೇಮದ ಕುರಿತೂ ಪ್ರವಚನಗಳು ಈ ಮಠದಲ್ಲಿ ಸಾಗಿ ಬಂದಿವೆ."[೪೫]

ಇದೇ ಪರಂಪರೆಯಲ್ಲಿ ಬಂದ ಡಾ. ಗುರುದೇವ ರಾನಡೆಯವರು ಅಲಹಾಬಾದ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದರು. ಸಂಸ್ಕೃತ, ಮರಾಠಿ, ಇಂಗ್ಲೀಷ, ಹಾಗೂ ಕನ್ನಡ ಭಾಷೆಗಳಲ್ಲಿ ಪ್ರಭುತ್ವ ಸಾಧಿಸಿದವರು. ಅವರ ಉಪನ್ಯಾಸಗಳು ಅಂದಿನ ಕಾಲದಲ್ಲಿ ಪ್ರಭಾವ ಬೀರಿದ್ದವು. ೧೯೫೫ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ. ಡಿ.ಸಿ. ಪಾವಟೆಯವರು. ಡಾ. ರಾನಡೆಯವರಿಂದ ಪ್ರವಚನ ಮಾಡಿಸಿದ್ದರು. ಅಲ್ಲಿಯ ಉಪನ್ಯಾಸಗಳು "ಪಾರಮಾರ್ಥ ಪಥ" ಎಂಬ ಹೆಸರಿನ ಪುಸ್ತಕ ಪ್ರಕಟವಾಗಿದೆ. ಅಂತರರಾಷ್ಟ್ರೀಯ ತತ್ವಜ್ಞಾನಿಗಳಾದ ಇವರು ೧೯೬೦ ರಲ್ಲಿ ನಿಂಬಾಳ ತಾ. ಇಂಡಿಯಲ್ಲಿ ದೇಹತ್ಯಾಗ ಮಾಡಿದರು.

---

೪೫ " " 'ಇಂಚಗೇರಿ ಸದ್ಗುರು ಸಾಂಪ್ರದಾಯ ಸಮಗ್ರ ಅಧ್ಯಯನ'. ಲೇಖಕರು- ಮಹಾಲಿಂಗ ಲುಂಗಿ. ಪುಟಸಂಖ್ಯೆ-೧೦೬
ಕಿಕ್ಕೇರಿ ಪ್ರಕಾಶನ ಬೆಂಗಳೂರು. (೨೦೧೦)

# ಅಧ್ಯಾಯ–೫:
# ಪ್ರಮುಖ ಪ್ರವಚನಕಾರರು

೫.೧. ೧೯ ರಿಂದ ೨೧ನೇ ಶತಮಾನದ ಪ್ರಮುಖ ಪ್ರವಚನಕಾರರು

೫.೨. ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಮುಖ ಪ್ರವಚನಕಾರರ ಪಾತ್ರ

# ಅಧ್ಯಾಯ-೫

## ಪ್ರಮುಖ ಪ್ರವಚನಕಾರರು

### ಪ್ರಸ್ತಾವನೆ

"ಕ್ರಿ.ಶ. ೧೮ ಮತ್ತು ೧೯ ನೆಯ ಶತಮಾನದಿಂದಚೆಗೆ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು, ಮೈಸೂರಿನ ಗೌರಿಶಂಕರ ಸ್ವಾಮಿ, ಧಾರವಾಡ ನವಕಲ್ಯಾಣ ಮಠದ ಕುಮಾರಸ್ವಾಮಿ, ಹಾವೇರಿಯ ಪಂಡಿತ ಮಲ್ಲಿಕಾರ್ಜುನ ದೇವರಂತಹ, ನೂರಾರು ಮಠಾಧಿಪತಿಗಳು, ಬಸವಪ್ಪಶಾಸ್ತ್ರೀ, ವೈ.ನಾಗೇಶಶಾಸ್ತ್ರೀ ಶಿವಮೂರ್ತಿಶಾಸ್ತ್ರೀ, ಕರಿಬಸವಶಾಸ್ತ್ರೀ, ಕಾಶೀನಾಥ ಶಾಸ್ತ್ರೀಗಳಂತಹ ಪುಣ್ಯ ಪುರುಷರು ಅಲ್ಲದೆ ಹರ್ಡೇಕರ್ ಮಂಜಪ್ಪ, ಹಲಸಂಗಿ ಚನ್ನಪ್ಪ, ದ್ಯಾಮಂಪೂರದ ಚನ್ನಕವಿಗಳಂತಹ ಗಣ್ಯಮಾನ್ಯರು, ಸೋಲ್ಲಾಪೂರದ ರತಿದೇವಿ, ಸುಗ್ಗಲಾದೇವಿಯವರು, ಮಾತೆ ಮಹಾದೇವಿಯರಂತಹ ತಾಯಿಂದಿರು ಪ್ರವಚನ ಸಾಹಿತ್ಯವನ್ನು ಹುಲುಸಾಗಿ ಬೆಳೆಸಿದರು."[೪೬]

ಒಬ್ಬ ಪ್ರವಚನಕಾರ ಬರೀ ಪ್ರವಚನಕಾರನಲ್ಲ ಸಂಸ್ಕೃತಿಯ ವಾರಸುದಾರ ಸಮಾಜ ಸಂಯೋಜಕ ಮಾನವೀಯ ಮೌಲ್ಯ ಬಿತ್ತುವವ, ಚಿಂತನೆಗಳ ಮೂಲಕ ಪರಿವರ್ತನೆ ತರುವ ಪ್ರತಿಭಾವಂತ ಮಲಗಿದವರನ್ನು ಎಚ್ಚರಿಸುವ ಕೆಲಸ, ಸಮಾಜ ಅಭಿವೃದ್ಧಿ ಕೆಲಸ, ಒಬ್ಬ ಪ್ರವಚನಕಾರ ಮಾಡಬಲ್ಲ.

ಇಲ್ಲಿ ಭಕ್ತಿ ಪ್ರಧಾನದ ವ್ಯಕ್ತಿಯನ್ನು ಅಥವಾ ದೇವರನ್ನು ಆಧಾರವಾಗಿಟ್ಟುಕೊಂಡು ಅದಕ್ಕೆ ಸಂಬಂಧಿಸಿದ ಕಥೆಗಳನ್ನು ಉಪಕಥೆಗಳನ್ನು ಹಾಗೂ ಹಾಸ್ಯದ ಕೆಲವು ಚಟಾಕಿಗಳನ್ನು ಹೇಳುತ್ತ ಜನರಿಗೆ ಮನರಂಜನೆ ಕೊಡುವುದಾಗಿದೆ. ಪುರಾಣ ಹೇಳುವುದು ಪ್ರವಚನವಾಗುವದಿಲ್ಲ. ಪುರಾಣಗಳು ಪವಾಡಗಳನ್ನು ವಿವರಿಸುತ್ತ ಜನರಲ್ಲಿ ಅಲ್ಪ-ಸ್ವಲ್ಪ ಭಕ್ತಿ ಭಾವನೆಗಳನ್ನು ಹುಟ್ಟಿಸಲು ಪ್ರಯತ್ನಿಸುತ್ತವೆ. ಒಂದು ಪುರಾಣದಲ್ಲಿ ಕಾಣುವ ಪವಾಡಗಳನ್ನು ಅಥವಾ ವಿಚಾರಗಳನ್ನು ಇತರ ಪುರಾಣಗಳಲ್ಲೂ ಕಾಣಬಹುದಾಗಿದೆ. ಉಪನ್ಯಾಸಗಳು ಕೆಲವೇ ಜನರಿಗೆ ಒಂದು ಅಂಶದ ಮೇಲೆ ಅಥವಾ ವಿಷಯದ ಮೇಲೆ ಭಾಷಣ ಮಾಡುವಂತಹದ್ದು.

---

೪೬ " " ಬೇಡಗಿನ ನೂರಾ ಒಂದು ವಚನಗಳ ಪ್ರವಚನ. ಲೇ-ಶಿವಲಿಂಗಶಾಸ್ತ್ರೀ ಹಿರೇಮಠ. ಪ್ರ- ಶ್ರೀ ರಾಜಗುರು ಪ್ರಭುರಾಜೇಂದ್ರ ಗ್ರಂಥ ಮಾಲೆ ಗುಡೂರು-ಇಳಕಲ್. (೨೦೦೯)

ಮೇಲಿನವುಗಳನ್ನೂ ಗಮನಿಸಿದಾಗ ಪ್ರವಚನ ಭಿನ್ನವಾಗಿ ತೋರುತ್ತದೆ. ಪುರಾಣ, ಉಪನ್ಯಾಸ, ಕೀರ್ತನೆ ಮುಂತಾದವುಗಳನ್ನೂ ಹೇಳುವುದರಲ್ಲಿ ಹಲವಾರು ಜನರು ಪ್ರಸಿದ್ಧರಾಗಿದ್ದಾರೆ. ಅಂಥವುಗಳನ್ನು ಕೇಳಲು ಜನರು ಬಹು ಸಂಖ್ಯೆಯಲ್ಲಿ ಕೂಡುವುದನ್ನು ನಾವು ಗಮನಿಸಿದ್ದೇವೆ.

ಹನ್ನೆರಡನೆಯ ಶತಮಾನ ನಾಡಿಗಷ್ಟೇ ಅಲ್ಲ, ಜಗತ್ತಿಗೆ ಹೊಸ ಬೆಳಕನ್ನು ನೀಡಿದುದಾಗಿದೆ. ಸಂಸ್ಕೃತ, ಹಳೆಗನ್ನಡದಲ್ಲಿದ್ದ ಕನ್ನಡ ಸಾಹಿತ್ಯ ಸರಳೀಕರಣವಾಗಿ ಜನ ಸಾಮಾನ್ಯರಿಗೂ ತಿಳಿಯುವಂತಾಯಿತು. ತತ್ವ ವಿಚಾರಗಳು ಜನರ ಮನಸ್ಸಿಗೆ ಮುಟ್ಟುವಂತಾದವು. ಜಾತಿ, ಕುಲ, ಮತ, ವರ್ಣ, ವರ್ಗ, ಗೋತ್ರ ಧರ್ಮ ಇವೆಲ್ಲವುಗಳನ್ನೂ ಮೀರಿ ಸಹಜ ಸುಂದರ ಸಮಾಜ ನಿರ್ಮಾತೃಗಳೇ ಶಿವಶರಣರು. ಆದ್ದರಿಂದಲೇ ಎಲ್ಲ ದೃಷ್ಟಿಯಿಂದ ನೋಡಿದರೂ ಹನ್ನೆರಡನೆಯ ಶತಮಾನ ಸುವರ್ಣ ಶತಮಾನವೆಂದರೂ ತಪ್ಪೇನಿಲ್ಲ. ಅಣ್ಣ ಬಸವಣ್ಣನ ನೇತೃತ್ವದಲ್ಲಿ ಅನುಭವ ಮಂಟಪದೊಳಗೆ ಅಲ್ಲಿ ಶಿವಶರಣರು ಕೂಡಿ ಅನುಭಾವಗಳನ್ನು ಹಂಚಿಕೊಂಡರು. ಅಂಥ ಅನುಭಾವದ ಮಾತುಗಳೇ ವಚನಗಳಾದವು. ಆ ವಚನಗಳು ತ್ರಿಕಾಲ ಸತ್ಯವಾದವುಗಳು. ಅವು ಎಷ್ಟು ಗಟ್ಟಿಯಾಗಿವೆಯೆಂದರೆ ಜಗತ್ತಿನ ಎಲ್ಲ ಧರ್ಮದವರೂ ಒಪ್ಪಿಕೊಳ್ಳುವಷ್ಟರ ಮಟ್ಟಿಗೆ ಗಟ್ಟಿಯಾಗಿವೆ. ಜಗತ್ತಿನ ಮೊದಲನೆಯ ಸಂಸತ್ತನ್ನು ಪ್ರಾರಂಭಿಸಿದ ಶ್ರೇಯಸ್ಸು ಶಿವಶರಣರಿಗೆ ಸಲ್ಲಬೇಕು. ಕನ್ನಡ ಭಾಷೆಗೆ ಮೆರಗು ಕೊಟ್ಟ ಹೊಸ-ಹೊಸ ಆವಿಷ್ಕಾರಗಳನ್ನು ಕೊಟ್ಟವರೂ ಅವರೇ ಆಗಿದ್ದಾರೆ. ಅನುಭವ ಮಂಟಪದ ಮೂಡಿಬಂದ ಅನುಭಾವ ಸಾಹಿತ್ಯ ಎಷ್ಟು ಪ್ರಬಲವಾಗಿತ್ತೆಂದರೆ ನಾಡಿನ ಮೂಲೆ-ಮೂಲೆಗಳಿಂದ ಜನರು ಕಲ್ಯಾಣಕ್ಕೆ ಬರುವಷ್ಟರ ಮಟ್ಟಿಗೆ ಅದು ಕಾರಣವಾಗಿತ್ತು.

ಇಂತಹ ಶಿವಶರಣರ ವಚನಗಳನ್ನು ಜನಸಾಮಾನ್ಯರಿಗೆ ವಿವರಿಸಿ ಭಕ್ತಿ-ಜ್ಞಾನ-ವೈರಾಗ್ಯ ಬೋಧಿಸುವುದರೊಂದಿಗೆ, ವರ್ಗರಹಿತ, ವರ್ಣರಹಿತ ಸಮಾಜ ನಿರ್ಮಿಸುವ, ಆಧ್ಯಾತ್ಮದ ಮೂಲ ವಿಚಾರಗಳನ್ನು ವಿವರಿಸುವ ಕಲೆಗೆ ಪ್ರವಚನ ಎಂಬ ಶಬ್ದ ಪ್ರಾಪ್ತವಾಗಿದೆ. ವಚನಗಳು ಪ್ರಾರಂಭವಾದಾಗ ಅವುಗಳ ಮೇಲೆ ಚರ್ಚೆಗಳು ಪ್ರಾರಂಭವಾದವು. **ಪ್ರವಚನದ ಉಗಮವಾಯಿತು**. ಒಂದೇ ಮಾತಿನಲ್ಲಿ ಹೇಳುವದಾದರೆ ಪ್ರವಚನದ ಮೂಲ ಉಗಮ ವಚನಸಾಹಿತ್ಯ ಎಂದು ಸ್ಪಷ್ಟವಾಗಿ ಹೇಳಿದರೆ ತಪ್ಪಾಗಲಾರದು. ಕನ್ನಡದಲ್ಲಿ ವಚನ ಸಾಹಿತ್ಯ ಬೆಳೆದು ಬರದಿದ್ದರೆ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ 'ಪ್ರವಚನ'ವೂ ಇಷ್ಟು ಪ್ರವರ್ಧಮಾನವಾಗಿ ಇರುತ್ತಿರಲಿಲ್ಲವೆಂದು ಭಾವಿಸಬಹುದು. ವಚನಗಳಲ್ಲಿ ಆತ್ಮಕಲ್ಯಾಣದೊಂದಿಗೆ, ಲೋಕಕಲ್ಯಾಣವೂ ಅಡಗಿದೆ. ಅವರ ಚಿಂತನೆಗಳು ಆಗಷ್ಟೇ ಅಲ್ಲ ಈಗಲೂ ಮುಂದೂ

ಪ್ರಸ್ತುತವಾದವುಗಳಾಗಿವೆ. ಉತ್ತರ ಕರ್ನಾಟಕದ ವೀರಶೈವ ಲಿಂಗಾಯತ ಪ್ರವಚನಕಾರರನ್ನು ಗಮನದಲ್ಲಿಟ್ಟು ಹೇಳುವದಾದರೆ,

೧) ವಚನಗಳನ್ನು ವಿಶಿಷ್ಟರೀತಿಯಲ್ಲಿ ಸಾಮಾನ್ಯರಿಗೂ ತಿಳಿಯುವಂತೆ ಹೇಳುವುದಕ್ಕೆ ಪ್ರವಚನವೆನ್ನಬಹುದು.

೨) ವಚನಗಳನ್ನು ಕ್ರಮವತ್ತಾಗಿ ವಿವರಿಸುವುದು.

೩) ವಚನಗಳೊಂದಿಗೆ ಜಾಗತಿಕ ದಾರ್ಶನಿಕರು ಕಂಡುಂಡ ಅನುಭವಗಳನ್ನು ಬೆಸೆದು ಹೇಳುವುದು.

೪) ವಚನಗಳು ವಿಚಾರಕ್ಕಷ್ಟೇ ಅಲ್ಲ ಆಚಾರಕ್ಕೂ ಹೌದು ಎಂಬುದನ್ನು ಮನಗಾಣಿಸುವದು.

೫) ಭಕ್ತ, ಮಹೇಶ, ಪ್ರಾಣ, ಪ್ರಸಾದಿ, ಶರಣ, ಐಕ್ಯ ಮುಂತಾದ ಸ್ಥಳಗಳೊಂದಿಗೆ ವಿವರಿಸುವ ಕಲೆ.

೬) ಜಾತಿ, ಮತ, ಕುಲ, ಧರ್ಮ, ಗೋತ್ರ, ವರ್ಣ, ವರ್ಗ ಮೀರಿ ನಿಂತು ಶಿವೋಹಂ ಹಾಗೂ ದಾಸೋಹಂ ತತ್ವವನ್ನು ಬಿತ್ತರಿಸುವದಕ್ಕೆ ಇದ್ದ ಮಾರ್ಗ ಪ್ರವಚನ.

೭) ಜೀವ, ಜಗತ್ತು, ಈಶ ಮೂರನ್ನೊಳಗೊಂಡ ತತ್ವಗಳನ್ನು ಗಟ್ಟಿಗೊಳಿಸುವದು.

೮) ಅರಿಷಡ್ವರ್ಗಗಳನ್ನು ತ್ಯಜಿಸಿ, ಮೂರುಗುಣಗಳನ್ನು ಮೆಟ್ಟಿನಿಂತು, ಸ್ಥೂಲ, ಸೂಕ್ಷ್ಮ ಹಾಗೂ ಕಾರಣ ಶರೀರಗಳಿಗೆ ಅತೀತನಾಗಿರುವೆನೆಂದು ತಿಳಿಸುವದು.

೯) ಇಷ್ಟಲಿಂಗ, ಪ್ರಾಣಲಿಂಗ, ಭಾಗಲಿಂಗಗಳ ತಾತ್ಪರ್ಯ ಅರಿಯುವದು.

೧೦) ಗುರುವಿನ ಮುಖಾಂತರ ಅರಿವಿನ ಗುರುತು ಹಿಡಿಯುವದು.

೧೧) 'ಅರಿವೇ ಗುರು' ಎಂಬುದನ್ನು ಧೃಡವಾಗಿ ಬಿಂಬಿಸುವದು

೧೨) ಸರ್ವ ದುಃಖ ನಿವೃತ್ತ ಪರಮಾನಂದ ಪ್ರಾಪ್ತಿಯ ಸೋಪಾನಗಳನ್ನು ಮಾತಿನ ಮೂಲಕ ಮನಮುಟ್ಟಿಸುವದು.

ಪ್ರವಚನವು ಪುರಾಣದ ಹಾಗೆ ದೀರ್ಘಕಾಲದವರೆಗೆ ನಡೆಯುವಂತಹದ್ದಲ್ಲ. ಒಬ್ಬವ್ಯಕ್ತಿಯ ಸುತ್ತ ಹೆಣೆದಿರುವ ಕಥೆಯಂತೂ ಅಲ್ಲವೇ ಅಲ್ಲ. ಪವಾಡ, ಜೋತಿಷ್ಯ ಮುಂತಾದವುಗಳನ್ನು ವಿವರಿಸಿ ಜನರಲ್ಲಿ ಭಯ ಹುಟ್ಟಿಸುವ ಕೆಲಸ ಪ್ರವಚನದ್ದಲ್ಲ. ಮೂಢನಂಬಿಕೆಗಳಿಗೆ ಇಂಬುಕೊಡುವ ಕೆಲಸವನ್ನು ಇದು ಮಾಡುವದಿಲ್ಲ. ಸಂಸಾರವನ್ನು ತ್ಯಜಿಸಬೇಕೆಂದು

ಬೋಧಿಸುವದೂ ಇಲ್ಲ. ಸುಂದರ ಸಂಸಾರವನ್ನಾಗಿ ಮಾಡಿಕೊಂಡು ಶಿವ ಸ್ವರೂಪದ ಮಟ್ಟಕ್ಕೇರುವಂತೆ ಪ್ರವಚನ ದಾರಿ ತೋರಿಸಬಲ್ಲದು. ಕೀರ್ತನೆಯಂತೆ ರಂಜಿತ ವಿಷಯಗಳನ್ನು ಹೇರುತ್ತ ಮೂಲ ವಿಷಯವನ್ನು ಮರೆಮಾಚುವ ಕೆಲಸ ಪ್ರವಚನದ್ದಲ್ಲ. ಆದರೆ ದಾರ್ಶನಿಕರ, ಮಹಾನುಭಾವರ, ಶಿವಶರಣರ, ತತ್ವವೇತ್ತರ, ಸಾಧಕರ ಹೆಸರುಗಳನ್ನು ಪ್ರಾಸ್ತಾಪಿಸಿ ಅವರು ಸಾಗಿದ ದಾರಿಯಲ್ಲಿಯ ಘಟನೆಗಳನ್ನು ಉದಾಹರಿಸಬಹುದು. ಆ ದೃಷ್ಟಾಂತಗಳು ಪ್ರವಚನಕ್ಕೆ ಪೂರಕವಾಗಿರಬೇಕಷ್ಟೆ!

ನಮ್ಮ ನಾಡಿನಲ್ಲಿ ಆಗಿಹೋಗಿರುವ ಅಥವಾ ಸಧ್ಯದಲ್ಲಿರುವ ಪ್ರವಚನಕಾರರ ವಿವರ ಹೇಳುವದಕ್ಕಿಂತ ಮೊದಲು ಪ್ರವಚನಕಾರರು ಹೇಗಿರಬೇಕೆಂಬುದನ್ನು ಸ್ವಲ್ಪ ಮಟ್ಟಿಗೆ ತಿಳಿದುಕೊಳ್ಳುವದು ಅವಶ್ಯವಿದೆ. ಆದರೆ ಅವರು ಹೀಗೆ ಇರಬೇಕೆಂದು ನಿರ್ದಿಷ್ಟವಾಗಿ ಹೇಳಲು ಬರುವದಿಲ್ಲ ಎಂಬುದನ್ನು ಲಕ್ಷದಲ್ಲಿಡಬೇಕಾಗುತ್ತದೆ.

೧) ಶಿವಶರಣರ ವಚನಗಳನ್ನು ಆಳವಾಗಿ ಅಭ್ಯಾಸ ಮಾಡಿರಬೇಕಾಗುತ್ತದೆ. ವಚನಗಳಲ್ಲಿ ಆರು ಸ್ಥಳಗಳಿಗೂ ಅನ್ವಯಿಸುವ ವಚನಗಳಿದ್ದು ಯಾವ ವಚನಗಳನ್ನೂ ಎತ್ತಿಕೊಂಡು ಪ್ರವಚನ ಮಾಡಿದರೆ ಯೋಗ್ಯವೆಂಬ ಪರಿಜ್ಞಾನ ಇರುವದು ಅವಶ್ಯ

೨) ಶಿವಶರಣರ ನಂತರದ ವಚನಕಾರರ, ಆಧುನಿಕ ವಚನಕಾರರ ವಚನಗಳನ್ನೂ ಆತ ಲಕ್ಷಿಸಬೇಕಾಗುತ್ತದೆ.

೩) ವಚನಗಳಲ್ಲದೆ ನಿಜಗುಣಶಿವಯೋಗಿಗಳ, ಸರ್ಪಭೂಷಣ ಶಿವಯೋಗಿಗಳ, ಮಹಾಲಿಂಗರಂಗರ, ಶಿಶುನಾಳ ಶರೀಫರ, ಕಡಕೋಳ ಮಡಿವಾಳಪ್ಪ ಮುಂತಾದ ತತ್ವವೇತ್ತರ ಪದ್ಯಗಳನ್ನು ಅಭ್ಯಯಿಸಿಸಿ ಸಂದಂರ್ಭಾನುಸಾರವಾಗಿ ಬೋಧಿಸುವದರಿಂದ ಪ್ರವಚನವು ಕೇಳುಗರ ಮನಸ್ಸಿನ ಮೇಲೆ ಪರಿಣಾಮ ಬೀರುವದು.

೪) ಜಗತ್ತಿನಲ್ಲಿ ಆಗಿ ಹೋದ ದಾರ್ಶನಿಕರಾದ ಸಾಕ್ರೇಟಿಸ್, ಪ್ಲೇಟೋ, ಟಾಲ್‌ಸ್ಟಾಯ್, ಕನಪ್ಯೂಶಿಯಸ್, ಮುಂತಾದವರ ಅನುಭವಗಳನ್ನು ಪ್ರವಚನದಲ್ಲಿ ಸೇರಿಸುವದರಿಂದ ಸರ್ವಧರ್ಮಗಳ ವಿಚಾರಗಳನ್ನು, ಅವರ ಅನುಭವಗಳನ್ನು ಶಿವಶರಣರ ವಚನಗಳೊಂದಿಗೆ ಸಮನ್ವಯಗೊಳಿಸುವದು ತುಂಬಾ ಮಾರ್ಮಿಕವಾದುದಾಗಿದೆ.

೫) ಭಾರತದಲ್ಲಿ ಬಾಳಿಹೋದ ಋಷಿ-ಮುನಿಗಳ, ರಾಮಾಯಣ, ಮಹಾಭಾರತದಲ್ಲಿಯ ಹಲವಾರು ಘಟನೆಗಳ ಉದಾಹರಣೆಗಳನ್ನು ಹೇಳುವದರಿಂದ ಕೇಳುಗರಲ್ಲಿ ಪ್ರವಚನದ ಬಗ್ಗೆ ಆಸಕ್ತಿ ಹುಟ್ಟುವದು.

೬) ಬುದ್ಧ, ಮಹಾವೀರ, ಪೈಗಂಬರ್ ಗುರುನಾನಕ, ಚೈತನ್ಯಪ್ರಭು, ಮೀರಾದೇವಿ, ತುಳಸಿದಾಸ, ನಿಶ್ಚಲದಾಸ ಮುಂತಾದವರ ಹಾಗೂ ಸಂತರ ವಿಚಾರಧಾರೆಗಳನ್ನು ಪ್ರವಚನದಲ್ಲಿ ಅಳವಡಿಸಿಕೊಳ್ಳುವದು ಅವಶ್ಯವಿದೆ.

೭) ಭಗವದ್ಗೀತೆ ಅಷ್ಟಾವಕ್ರಮುನಿ ಗೀತೆ, ಅವಧೂತ ಗೀತೆಗಳ ಸಾರಗಳನ್ನು ಶಿವಶರಣರ ವಚನಗಳೊಂದಿಗೆ ಹೋಲಿಸುವದರಿಂದ ಕೇಳುಗರಲ್ಲಿರುವ ಅಡೆತಡೆಗಳಿಗೆ ಪರಿಹಾರವಾಗುವದು.

೮) ಪ್ರವಚನದ ಕಾಲಕ್ಕೆ ಸಂದರ್ಭಾನುಸಾರವಾಗಿ ಸುಭಾಷಿತಗಳನ್ನು ಹೇಳುವದರಿಂದ ಅದಕ್ಕೆ ಹೆಚ್ಚಿನ ಮಹತ್ವ ಬರುತ್ತದೆ.

೯) ಶರಣರ ವಚನಗಳನ್ನು, ತತ್ವಪದಗಳನ್ನು ಧ್ವನಿ ತೆಗೆದು ಹಾಡುವದರಿಂದ ಬಂದಿರುವ ಸಂಗೀತ ಪ್ರೇಮಿಗಳಿಗೆ ಸಂತಸವಾಗುವುದಲ್ಲದೆ, ಪ್ರವಚನ ಆಲಿಸಲು ಬಂದಿರುವವರ ಮನಸ್ಸು ಏಕಾಗ್ರತೆಯತ್ತ ಸಾಗುವದು.

೧೦) ಕೇಳುಗರಿಗೆ ಸಂಶಯ ಬಾರದಂತೆ ವಿಷಯ ಇರಬೇಕು.

೧೧) ಮಧುರವಾದ ಧ್ವನಿ ಇದ್ದರೆ ತುಂಬಾ ಒಳ್ಳೆಯದು.

೧೨) ಸ್ಪಷ್ಟವಾದ ಉಚ್ಚಾರಣೆ ಇರಬೇಕು.

೧೩) ಪ್ರಾರಂಭದಲ್ಲಿ ಜನರ ಮನಸ್ಸನ್ನು ಆಕರ್ಷಿಸಲು ಪದ್ಯ ಹೇಳಬೇಕು.

೧೪) ಪ್ರಾರಂಭದಲ್ಲಿ ಜನರ ಕುತೂಹಲ ಕೆರಳಿಸುವ ವಿಷಯ ಪ್ರಸ್ತಾಪಿಸಬೇಕು.

೧೫) ನಾಳೆ ಏನು? ಎಂಬ ಕುತೂಹಲದೊಂದಿಗೆ ಪ್ರವಚನ ಮುಕ್ತಾಯವಾಗಬೇಕು.

ಒಟ್ಟಿನಲ್ಲಿ ಪ್ರವಚನವು ಅಂದಿನ ಮಟ್ಟಿಗೆ ಆಯ್ದುಕೊಂಡ ವಿಷಯವು ಸಾಫಲ್ಯ ಕಾಣಬೇಕು. ಮನುಷ್ಯನ ಜ್ಞಾನಕ್ಕೆ ಪೂರಕವಾಗಿರಬೇಕು. ಕೇಳುಗನು 'ಧನ್ಯೋಸ್ಮಿ' ಎಂದರೆ ಸಾಕು.! ಪ್ರವಚನದ ಅವಧಿಯು ಕೇಳುಗರ ಮೇಲೆ ಅವಲಂಬಿತವಾಗಿರುತ್ತದೆ. ಮೂರು ದಿನಗಳವರೆಗೆ ಪ್ರವಚನ, ಒಂದು ವಾರದವರೆಗೆ, ಹನ್ನೊಂದು ದಿನಗಳವರೆಗೆ ಹೆಚ್ಚೆಂದರೆ ಒಂದು ತಿಂಗಳ ಪರಿಯಂತ ಪ್ರವಚನ ಸಾಗಿಸುತ್ತಿರುವದನ್ನು ಕಾಣುತ್ತೇವೆ. ಒಂದೊಂದು ದಿನ ಒಂದೊಂದು ಶಿವಶರಣರ ವಚನಗಳ ವಿಶ್ಲೇಷಣೆಯೊಂದಿಗೆ ಪ್ರವಚನ ನಡೆಯುವದು. ಮಾರನೆಯ ದಿವಸ ಮತ್ತೊಂದು ವಚನವನ್ನು ಆಧಾರವಾಗಿಟ್ಟುಕೊಂಡು ವಿಷಯ ಸಾಗಿಸುವದು. ಇನ್ನೂ ಕೆಲವು ವಚನಕಾರರು ಷಟ್‌ಸ್ಥಳಗಳಲ್ಲಿ ಒಂದು ಸ್ಥಳವನ್ನು ಆಯ್ಕೆ ಮಾಡಿಕೊಂಡು ಒಂದು ತಿಂಗಳವರೆಗೆ

ಪ್ರವಚನ ಹೇಳುವದುಂಟು ಉದಾಹರಣೆಗೆ ಭಕ್ತಿಗೆ ಸಂಬಂಧ ಪಟ್ಟ, ಮಹೇಶ ಸ್ಥಳ, ಪ್ರಸಾದಿ, ಈ ರೀತಿಯಾಗಿ ಸಾಗಿಸುವದುಂಟು. ಇನ್ನೂ ಕೆಲವು ವಚನಕಾರರು ಭಕ್ತಿ, ಜ್ಞಾನ, ವೈರಾಗ್ಯಕ್ಕೆ ಸಂಬಂಧ ಪಟ್ಟ ವಚನಗಳನ್ನಾಗಲಿ, ತತ್ವಪದಗಳನ್ನಾಗಲಿ ಆಧಾರವಾಗಿಟ್ಟುಕೊಂಡು ಪ್ರವಚನ ಮಾಡುವರು.

ಪೂಜ್ಯ ಸಿದ್ಧಾರೂಢ ಮಹಾತ್ಮರು ನಿಜಗುಣ ಶಿವಯೋಗಿಗಳ ಸೂತ್ರ ಪದ್ಯದ ಮೊದಲನೆಯ ಸಾಲಾದ "ಶ್ರೀ ಗುರು ವಚನುಪದೇಶವನಾಲಿಸಿದಾಗಳುಹುದು ನರರಿಗೆ ಮುಕುತಿ."೪೭ ಇದರ ಮೇಲೆ ಮೂರು ತಿಂಗಳವರೆಗೆ ಪ್ರವಚನ ಮಾಡಿರುವದನ್ನು ಕೇಳಿದ್ದೇವೆ. ಅದರಂತೆ ಗದುಗಿನ ಪೂಜ್ಯ ಶಿವಾನಂದ ಮಹಾತ್ಮರು "ತೋರದಯ್ಯ ಸುಖ ತೋರದಯ್ಯ। ಬೇರೆ-ಬೇರೆ ಭಾವಿಸಿ ಬ್ರಹ್ಮಜ್ಞಾನವೊಂದಿಲ್ಲದವಗ"೪೮ ಎಂಬ ಪದ್ಯದ ಮೊದಲನೆಯ ಸಾಲಿನ ಮೇಲೆ ಹದಿನಾರು ದಿನಗಳ ವರೆಗೆ ಪ್ರವಚನ ಮಾಡಿರುವದನ್ನು ಕೇಳಿದ್ದೇವೆ. ಹೀಗೆ ಒಂದೇ ಒಂದು ಸಾಲಿನ ಮೇಲೆ ಪ್ರವಚನ ಹೇಳಬಹುದಾದರೆ, ಅದಕ್ಕೆ ಅಭ್ಯಾಸ, ಅನುಭವ ಇರಬೇಕಲ್ಲದೆ, ಭಾಷೆಯ ಮೇಲೆ ಪ್ರಭುತ್ವ ಇರುವದು ಅವಶ್ಯವಿದೆ. ಆ ಪದ್ಯಕ್ಕೆ ಸರಿಹೊಂದುವ ಇತರ ಪದ್ಯಗಳ, ಗ್ರಂಥಗಳ, ವ್ಯಕ್ತಿಗಳ ಅನುಭವನ್ನು ಹೊಂದಿಸಿದಾಗ ಅದಕ್ಕೆ ಸ್ವಾರಸ್ಯ ಬರುವದರೊಂದಿಗೆ ಕೇಳುಗರಿಗೆ ಅನುಭವವಾಗುತ್ತದೆ. ಪ್ರವಚನಕಾರರಿಗೆ ಅಥವಾ ವಿಷಯಕ್ಕೆ ಜಾತಿಯ ನಂಟನ್ನು ಅಂಟಿಸಬಾರದು. ಹಾಗೆ ಮಾಡಿದರೆ ಪ್ರವಚನವು ಯಶಸ್ವಿಯಾಗಲಾರದು. ಶಿವಶರಣರ ವಚನಗಳ ಮೇಲೆ ಪ್ರವಚನ ಮಾಡುವವರು ಲಿಂಗಾಯತರೇ ಇರಬೇಕೆಂದೇನೂ ಅಲ್ಲ, ಅವುಗಳ ಮೇಲೆ ಲಿಂಗಾಯತರಲ್ಲದವರೂ ಪ್ರವಚನ ಮಾಡಬಹುದು; ಆದರೆ ಆಳವಾದ ಅಭ್ಯಾಸ-ಅನುಭವ ಮುಖ್ಯ ಎಂಬುದನ್ನು ಗಮನಿಸಬೇಕು. ಪ್ರವಚನಕಾರರೂ ನಾನು ಇಂತಹ ಜಾತಿಯವರಿಗೆ ಮಾತ್ರ ಪ್ರವಚನ ಮಾಡುವೆನೆಂದು ಭಾವಿಸಬಾರದು. ಇದರಿಂದ ಹೇಳುವ ವಿಷಯಕ್ಕೂ ಹೇಳುವವರಿಗೂ ಚ್ಯುತಿ ಬರುತ್ತದೆ; ಅಲ್ಲದೆ ಜಾತಿಗಳ ಮೇಲೆ ಮೂಢನಂಬಿಕೆ ಗಟ್ಟಿಯಾಗುತ್ತದೆ. ಪ್ರವಚನವೆಂಬುದು ಸರ್ವಧರ್ಮಗಳ ಸಾರವನ್ನೊಳಗೊಂಡಿರುತ್ತದೆ. ಅದು 'ಸರ್ವಜನಾಂಗದ ಶಾಂತಿಯ ತೋಟ'ದಲ್ಲಿ ಅರಳುವ ಹೂವು!

---

೪೭ " " ಕೈವಲ್ಯ ಪದ್ಧತಿ ಮೊದಲ ಪದ್ಯ. ಲೇ-ನಿಜಗುಣ ಶಿವಯೋಗಿಗಳು. ಪುಟಸಂಖ್ಯೆ-೮. ಪ್ರ-ತೋಂಟದಾರ್ಯ ಬುಕ್‌ಡಿಪೋ, ಗದಗ.

೪೮ " " ಕೈವಲ್ಯ ಪದ್ಧತಿ ಜ್ಞಾನಪ್ರತಿಪಾದವಾಸ್ಥಲ. ಲೇ-ನಿಜಗುಣ ಶಿವಯೋಗಿಗಳು. ಪುಟಸಂಖ್ಯೆ-೧೬೨. ಪದ್ಯಸಂಖ್ಯೆ-೨೫ ಪ್ರ-ತೋಂಟದಾರ್ಯ ಬುಕ್‌ಡಿಪೋ, ಗದಗ.

ಶಿವಶರಣರ ಜಾತಿಗಳನ್ನು ಹೆಸರಿಸಿ ಪ್ರವಚನ ಮಾಡಲೇಬಾರದು, ಕಾರಣ ಇದು ಜಾತಿ ಸಂಘಟನೆಗೆ ಕಾರಣವಾಗುವದು. ಬಸವಣ್ಣ ಕಟ್ಟಬಯಸಿದ ಜ್ಯಾತ್ಯಾತೀತ ಸಮಾಜ ಕನಸಿಗೆ ಕೊಡಲಿಪೆಟ್ಟು ಬೀಳುವುದು. ಜಾತಿಗಳು ಅವರವರು ಮಾಡುವ ವೃತ್ತಿಗಳ ಮೇಲಿಂದ ಬಂದವುಗಳೇ ವಿನಾಃ ಜನ್ಮತಃ ಬಂದವುಗಳಲ್ಲ ಎಂಬುದನ್ನು ಪ್ರವಚನದಲ್ಲಿ ವಿವರಿಸುವದರಿಂದ ಸುಂದರ ಸಮಾಜ ನಿರ್ಮಾಣವಾಗುವದು. ಲೌಕಿಕ ವಿಚಾರಗಳೊಂದಿಗೆ ಅಲೌಕಿಕ ವಿಚಾರಗಳನ್ನು ತಿಳಿಸುವ ವಚನಗಳಿಗೆ ಪ್ರವಚನವೆಂದರೂ, ಅದು ಪರಿಪೂರ್ಣ ಅರ್ಥವಾಗಲಾರದು. ಕ್ರಿ. ಶ. ಪೂರ್ವದಲ್ಲಿ ಬದುಕಿದ ಸಾಕ್ರೇಟಿಸ್‌ನ ಮಾತುಗಳಿಂದ ಜನರ ಮನಸ್ಸಿನ ಪರಿವರ್ತನೆಯಾಗಿರುವದನ್ನು ಓದುತ್ತೇವೆ. ಅವೆಲ್ಲವೂ ಒಂದು ದೃಷ್ಟಿಯಿಂದ ಪ್ರವಚನಗಳೇ ಆಗಿವೆ. ಆದಾಗ್ಯೂ ಪ್ರವಚನ ಶಬ್ದಕ್ಕೆ ಧ್ವನಿ ತುಂಬಿದವರು ಶಿವಶರಣರು ಎಂಬುದರಲ್ಲಿ ಎರಡು ಮಾತಿಲ್ಲ. ಅನುಭವ ಮಂಟಪದಲ್ಲಿ ವಚನ ವಿಶ್ಲೇಷಣೆಯೇ ಪ್ರವಚನಕ್ಕೆ ನಾಂದಿಯಾಯಿತು ಎಂದು ಹೇಳುವದರಲ್ಲಿ ತಪ್ಪೇನಿಲ್ಲ.

ಶಿವಶರಣರ ಜಾತಿಗಳನ್ನು ಹೆಸರಿಸಿ ಪ್ರವಚನ ಮಾಡಲೇಬಾರದು, ಕಾರಣ ಇದು ಜಾತಿ ಸಂಘಟನೆಗೆ ಕಾರಣವಾಗುವದು. ಬಸವಣ್ಣ ಕಟ್ಟಬಯಸಿದ ಜ್ಯಾತ್ಯಾತೀತ ಸಮಾಜ ಕನಸಿಗೆ ಕೊಡಲಿಪೆಟ್ಟು ಬೀಳುವುದು. ಜಾತಿಗಳು ಅವರವರು ಮಾಡುವ ವೃತ್ತಿಗಳ ಮೇಲಿಂದ ಬಂದವುಗಳೇ ವಿನಾಃ ಜನ್ಮತಃ ಬಂದವುಗಳಲ್ಲ ಎಂಬುದನ್ನು ಪ್ರವಚನದಲ್ಲಿ ವಿವರಿಸುವದರಿಂದ ಸುಂದರ ಸಮಾಜ ನಿರ್ಮಾಣವಾಗುವದು. ಲೌಕಿಕ ವಿಚಾರಗಳೊಂದಿಗೆ ಅಲೌಕಿಕ ವಿಚಾರಗಳನ್ನು ತಿಳಿಸುವ ವಚನಗಳಿಗೆ ಪ್ರವಚನವೆಂದರೂ, ಅದು ಪರಿಪೂರ್ಣ ಅರ್ಥವಾಗಲಾರದು. ಕ್ರಿ. ಶ. ಪೂರ್ವದಲ್ಲಿ ಬದುಕಿದ ಸಾಕ್ರೇಟಿಸ್‌ನ ಮಾತುಗಳಿಂದ ಜನರ ಮನಸ್ಸಿನ ಪರಿವರ್ತನೆಯಾಗಿರುವದನ್ನು ಓದುತ್ತೇವೆ. ಅವೆಲ್ಲವೂ ಒಂದು ದೃಷ್ಟಿಯಿಂದ ಪ್ರವಚನಗಳೇ ಆಗಿವೆ. ಆದಾಗ್ಯೂ ಪ್ರವಚನ ಶಬ್ದಕ್ಕೆ ಧ್ವನಿ ತುಂಬಿದವರು ಶಿವಶರಣರು ಎಂಬುದರಲ್ಲಿ ಎರಡು ಮಾತಿಲ್ಲ. ಅನುಭವ ಮಂಟಪದಲ್ಲಿ ವಚನ ವಿಶ್ಲೇಷಣೆಯೇ ಪ್ರವಚನಕ್ಕೆ ನಾಂದಿಯಾಯಿತು ಎಂದು ಹೇಳುವದರಲ್ಲಿ ತಪ್ಪೇನಿಲ್ಲ.

ಪ್ರವಚನಕ್ಕೆ ಸಂಪೂರ್ಣವಾದ ಒಂದು ವ್ಯಾಖ್ಯೆಕೊಡುವದು ಸುಲಭದ ಮಾತಲ್ಲ. ಅದು "ಜಗದಗಲ ಮಿಗೆಯಗಲ" ಎಂದೇ ಹೇಳಬೇಕಾಗುವದು. ಬೆಳಗಾವಿ ರುದ್ರಾಕ್ಷಿ ಮಠದ ಪೂಜ್ಯ ಮ. ನಿ. ಪ್ರ. ಸ್ವ ಸಿದ್ಧರಾಮ ಸ್ವಾಮಿಗಳು ಪ್ರವಚನಕ್ಕೆ ನೇರವಾದ, ನಿರ್ದಿಷ್ಟವಾದ ವ್ಯಾಖ್ಯೆಯನ್ನು ಕೊಟ್ಟಿರದಿದ್ದರೂ, ಪರ್ಯಾಯವಾಗಿ ಆ ಧ್ವನಿ ಬರುವಂತೆ ವಿವರಿಸುತ್ತಾರೆ.

“ಬಸವಾದಿ ಶಿವಶರಣರು ರಚಿಸಿರುವ ವಚನಗಳನ್ನು ಕೆಲವರು ವಚನ ಶಾಸ್ತ್ರವೆಂದರೆ, ಹಲವರು ವಚನಸಾಹಿತ್ಯವೆಂದರು, ಇನ್ನೂ ಕೆಲವರು ಅನುಭಾವಿಗಳ ಅಂತರಂಗದ ಮಾತುಗಳೆಂದರೆ ಇವುಗಳನ್ನು ನೋಡಿದರೆ ಶಾಸ್ತ್ರಕ್ಕೆ ಶಾಸ್ತ್ರಗಳಾಗಿ, ಸಾಹಿತ್ಯಕ್ಕೆ ಸಾಹಿತ್ಯವಾಗಿ, ಅನುಭಾವಿಗಳಿಗೆ ಅನುಭವದ ನುಡಿಗಳಾಗಿ ಗೋಚರಿಸುವವು. ಹೀಗೆ ವಚನಗಳು ಅರ್ಥವಿಸ್ತಾರವನ್ನು ಪಡೆದುಕೊಳ್ಳುವವು; ಅದು ಅಷ್ಟೇ ಸತ್ಯವಾಗಿದೆ. ವಚನಗಳಲ್ಲಿ ಭಾವಾನುಗುಣದ ಲಯಗಾರಿಕೆಯ ಜೊತೆಗೆ ಆತ್ಮ ವಿಮರ್ಶೆ, ಸಾಮಾಜಿಕ ವಿಡಂಬನೆ, ಶೋಷಣೆ, ಮೌಢ್ಯಗಳ ಖಂಡನೆ, ನೈತಿಕ ಮೌಲ್ಯಗಳ ಬೋಧನೆ, ಧಾರ್ಮಿಕ ಆಚರಣೆ, ತತ್ವವಿಚಾರಗಳ ವಿವರಣೆ, ವಿಫುಲವಾಗಿದ್ದರೂ ವ್ಯಕ್ತಿಯ ಸ್ವರೂಪ ಜ್ಞಾನ ಮಾಡಿಸುವಲ್ಲಿ ಯಶಸ್ವಿಯಾಗಿವೆ. ಶಿವಶರಣರು ತಮ್ಮ ಅನುಭವ ಹಾಗೂ ಆಲೋಚನೆಗಳನ್ನು ವಚನಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಆತ್ಮಕಲ್ಯಾಣದ ಜೊತೆಗೆ ಸಮಾಜಕಲ್ಯಾಣ ಸಾಧಿಸುವ ಆಶಯ ಶಿವಶರಣರದ್ದಾಗಿದೆ. ಹೀಗೆ ಇವುಗಳನ್ನು ವಿವರಿಸುವದೇ ಇಂದಿನ ಅವಶ್ಯಕತೆಯಿದೆ. ಈ ಅಭಿಪ್ರಾಯವನ್ನು ನೋಡಿದರೆ ಶಿವಶರಣರು ಅಭಿವ್ಯಕ್ತಗೊಳಿಸಿದ ಹಲವಾರು ವಿಚಾರಗಳನ್ನು ಯೋಚನೆ, ಆಲೋಚನೆ, ಅನುಭವಗಳನ್ನು ವಿವರಿಸುವ ಕಲೆಗೆ ಪ್ರವಚನ ಎಂದು ಕರೆದರೆ ಸಾಕು.”

ಪ್ರವಚನವು ಆಧ್ಯಾತ್ಮದ ತಳಹದಿಯ ಮೇಲೆ ಕಟ್ಟಿದ ಸುಂದರ ಸೌಧವಾಗಿದೆ. ಅದರಿಂದ ಸಮಾಜದ ಕಲ್ಯಾಣ ನಿರ್ಮಿಸಬಹುದಾಗಿದೆ. ಆದ್ದರಿಂದಲೇ ಇದು ವ್ಯಕ್ತಿಯ ವಿಕಸನಕ್ಕೆ ಸಮಾಜ ಸುಧಾರಣೆಗೆ ಸುಲಭವಾದ ಸಾಧನವಾಗಿದೆ. ಕನ್ನಡ ಸಾಹಿತ್ಯ ಹೆಚ್ಚಾಗಿ ಧಾರ್ಮಿಕ ವಿಚಾರಗಳಿಂದ ಒಡಗೂಡಿದೆ. ಹಳಗನ್ನಡ ಸಾಹಿತ್ಯವಂತೂ ಧಾರ್ಮಿಕ ವಿಚಾರಗಳಿಗೆ ಮೀಸಲಾಗಿತ್ತು ಎಂದರೆ ತಪ್ಪಾಗಲಾರದು. ಇಂದಿನ ಹಲವಾರು ಕವಿಗಳೂ ಸಹ ಪ್ರವಚನಕ್ಕೆ ಸಾಮಗ್ರಿಯನ್ನೊದಗಿಸುವ ಕಾವ್ಯಗಳನ್ನು ಕೊಟ್ಟಿರುವದನ್ನು ಕಾಣಬಹುದಾಗಿದೆ. ಅನುಭಾವಿ ಕವಿಯೆಂದೇ ಪ್ರಖ್ಯಾತರಾಗಿರುವ ಮಧುರ ಚನ್ನರ ಕೆಳಗಿನ ಕೆಲವು ನುಡಿಗಳನ್ನು ಗಮನಿಸಬಹುದು.

“ನಿಲ್ಲು ನಿಲ್ಲಲೆ ನವಿಲೆ ನಿನ್ನ ಕಣ್ಣುಗಳೆಷು ।
ಕಣ್ಣು ಬಣ್ಣಗಳೆ ಎಣಿಸಲಾರೆ ।
ಎಲ್ಲ ರೂಪಿಸಿದವನು ಎಲ್ಲಿ ಅಡಗಿಹನು ತಾನು ।
ತಾಳಲಾರದು ಜೀವ ಹೇಳಬಾರೆ”[೪೯] ॥

---

೪೯ “ “ ನನ್ನನಲ್ಲ. ಲೇ–ಹುಲಸಂಗಿ ಮಧುರಚೆನ್ನ. ಪುಟಸಂಖ್ಯೆ–೮. ೩ನೇ ಎಸಳು–೧. ನುಡಿ. ಪ್ರ– ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ . ಸಾಹಿತ್ಯ ಮಾಲೆ. (೨೦೧೧)

ಈ ನುಡಿಯನ್ನು ನೋಡಿದಾಗ ನವಿಲಿನ ಬಣ್ಣಗಳನ್ನು ಕಂಡಿರುವ ಕವಿಯು ಬೆರಗಾಗಿದ್ದಾನೆ. ಇಂಥ ಬಣ್ಣ ಕೊಡಲು ಅಥವಾ ನಿರ್ಮಿಸಲು ಮನುಷ್ಯರಿಂದ ಸಾಧ್ಯವಿಲ್ಲ ಎಂಬುದನ್ನು ಮನಗಂಡಿದ್ದಾನೆ. ಆದ್ದರಿಂದಲೇ ಇದನ್ನು ನಿರ್ಮಿಸಿದವನು ಬೇರೊಬ್ಬನಿದ್ದಾನೆ, ಎಂಬ ಖಚಿತ ಅಭಿಪ್ರಾಯಕ್ಕೆ ಬಂದು ಅವನೆಲ್ಲಿದ್ದಾನೆಂದು ನವಿಲಿನಲ್ಲೇ ಪ್ರಶ್ನಿಸುತ್ತಿರುವದು ಸೋಜಿಗವೆನಿಸುವದು. ಇದರ ಮರ್ಮವನ್ನು ಮಧುರ ಚನ್ನರು ಹೇಳುವಾಗ 'ಅದು ನಿಜವಾಗಿ ಉಪನ್ಯಾಸವಾಗಿರದೇ ಪ್ರವಚನ'ವೇ ಆಗಿತ್ತು. ಈಗಲೂ ಸಹ ಮೇಲಿನ ಪದ್ಯ ಹೇಳಬೇಕಾದರೆ ಅನುಭವ ಮುಖ್ಯ. ನವಿಲಿನ ಬಣ್ಣ ಅದರಲ್ಲಿ ಅಡಗಿರುವ ಕಣ್ಣು, ಅದರ ಒಯ್ಯಾರ, ಕುಣಿತ ಮುಂತಾದವುಗಳು ಕವಿಗೆ ಆಶ್ಚರ್ಯವಾಗಿದೆ. ಇದನ್ನೇ ಅನುಭವ ಮಾಡಿಕೊಂಡು ವಿವರಿಸುತ್ತಾ ಹೋದರೆ ಅದೊಂದು ಪ್ರವಚನವಾಗಿ ಜನರಿಗೆ ದೇವರಲ್ಲಿ ನಂಬುಗೆ, ಪ್ರವಚನಕಾರರಲ್ಲಿ ವಿಶ್ವಾಸ ಉಂಟಾಗಿ ಜೀವನ ಸುಂದರವಾಗುವದು. ಕಣ್ಣಿಗೆ ಕಾಣುವ ನವಿಲಿನ ಎಲ್ಲ ಆಕಾರಗಳನ್ನು ವರ್ಣಿಸಿ ನಿರಾಕಾರನಾದ ಪರಮಾತ್ಮನ ಕಲ್ಪನೆ ಮಾಡಿಕೊಡುವುದು ಪ್ರವಚನಕಾರರ ಜಾಣ್ಮೆಯಲ್ಲಿಡಗಿರುವದು. ಮಧುರ ಚನ್ನರ ಇನ್ನೊಂದು ನುಡಿಯನ್ನು ಪ್ರವಚನಕ್ಕೆ ಸಾಮಗ್ರಿಯಾಗಿರುವುದನ್ನು ನೋಡಬಹುದು.

"ದೇವಲೀಲೆಯೋ ಕಾಣೆ!

ಕರ್ಮಜಾಲವೋ ಕಾಣೆ

ಅದು ನಮ್ಮ ಬುದ್ಧಿಯಾಚೆಗಿನ ಮಾತು.

ಯಾವುದೇನೇ ಇರಲಿ

ಪ್ರೀತಿಯಂಥ ವಸ್ತು ಭವದಲ್ಲಿ ಕಾಣೆ ।

ಮನಗಂಡ ಮಾತು."೫೦

ಇದನ್ನು ಗಮನಿಸಿದರೆ "ಯಾರೇ ಏನೇ ಆಗಲಿ ಪ್ರೀತಿಯಂಥ ವಸ್ತು ಭವದಲ್ಲಿ ಕಾಣೆ ಮನಗಂಡ ಮಾತು ಎನ್ನುವಲ್ಲಿ ಪ್ರೀತಿಯು ಜೀವನದಲ್ಲಿ ಹರಡಿದರೆ ಸಮಾಧಿಯು ಪ್ರಾಪ್ತವಾಗುವದು ಎಂಬುದು ಕವಿಯ ಆಶಯ.

---

೫೦ " " ನನ್ನನಲ್ಲ. ಲೇ-ಹುಲಸಂಗಿ ಮಧುರಚೆನ್ನ. ಪುಟಸಂಖ್ಯೆ-೪೫. ಮೊದಲನೆಯ ಮುದ್ದು ನುಡಿ-೪. ಪ್ರ- ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ . ಸಾಹಿತ್ಯ ಮಾಲೆ. (೨೦೧೧)

ಇದರ ಹಿಂದಿನ ಸಾಲಿನಲ್ಲಿ "ಯಾರೆ ಏನೇ ಅನ್ನಲಿ" ಎನ್ನುವಲ್ಲಿ ವ್ಯಕ್ತಿಯ ಬಗ್ಗೆ ರಾಗ, ದ್ವೇಷ ಇದ್ದೇ ಇರುತ್ತವೆ. ಅಂಥವುಗಳ ಬಗ್ಗೆ ಹೆಚ್ಚಿನ ವಿಚಾರ ಅವಶ್ಯಕತೆ ಇಲ್ಲ ಎಂಬುದು ಕವಿಯ ವಿಚಾರ. ಇದನ್ನೇ ಅಕ್ಕಮಹಾದೇವಿಯು "ಲೋಕದಲ್ಲಿ ಹುಟ್ಟಿದ ಬಳಿಕ ಸ್ತುತಿ-ನಿಂದೆಗಳು ಬಂದರೆ ಕೋಪವ ತಾಳದೇ ಸಮಾಧಾನಿಯಾಗಿರಬೇಕು" ಎಂದು ಹೇಳಿರುವದಕ್ಕೆ ಸರಿಸಾಟಿಯಾಗಿರುವದು. ಜನ್ಮವೆತ್ತಿ ಬಂದ ಬಳಿಕ ಎಲ್ಲರಿಗೂ ಬೇಕಾಗುವದು ಸಾಧ್ಯವಿಲ್ಲದ ಮಾತು. ಏಕೆಂದರೆ "ಲೋಕೋಭಿನ್ನರುಚಿಃ" ಒಂದಿಲ್ಲೊಂದು ರೀತಿಯಿಂದ ದೋಷಕಾಣುವವರೇ ಹೆಚ್ಚು. "ಬಾಗಿ ನಡೆದರೆ ನಡುವಿಲ್ಲವೆನ್ನುವರು, ನೆಟ್ಟಗೆ ನಡೆದರೆ ಸೊಕ್ಕು ಬಂದಿದೆ ಎನ್ನುವರು, ಮಾತನಾಡಿದರೆ ವಟವಟಿ ಎನ್ನುವರು, ಮಾತನಾಡದಿದ್ದರೆ ಮೂಕ ಎನ್ನುವರು, ಸ್ತ್ರೀಗಮನಿಯಾದರೆ ಕಾಮುಕ ಎನ್ನುವರು ಆಗದಿದ್ದರೆ ಷಂಡ ಎನ್ನುವರು ಹೀಗಿದೆ ಜಗತ್ತು" ಇದನ್ನೇ ಸುಂದರವಾಗಿ ವಿವರಿಸಿದರೆ ಪ್ರವಚನ ಮಾರ್ಮಿಕವಾಗಿ ರೂಪು ತಾಳುವದು.

ಮಧುರ ಚೆನ್ನರ ನುಡಿಯೊಂದಿಗೆ, ಅಕ್ಕನ ವಚನದೊಂದಿಗೆ ಬಸವಣ್ಣನವರ "ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ"[೫೧] ಎಂಬ ಸಾಲನ್ನು ಹೇಳಿದರೆ ಪ್ರವಚನ ಸಮರ್ಥವಾಗಿ ಮೂಡಿಬರುವುದು.

ನಾನಾ ವಿಚಾರಗಳನ್ನು, ವಿಷಯಗಳನ್ನು ಅಳವಡಿಸಿಕೊಂಡು ಪ್ರವಚನ ಮಾಡಿದ ಮಹಾನುಭಾವರು ನಮ್ಮ ನಾಡಿನಲ್ಲಿ ಬದುಕಿ ಹೋದವರೂ, ಬದುಕುತ್ತಿರುವವರು ಪ್ರಮುಖರ ಹೆಸರುಗಳನ್ನು ಅವರ ಪ್ರವಚನದ ಸಾರವನ್ನು ಇಲ್ಲಿ ನಾವೆಲ್ಲ ಗಮನಿಸಬಹುದು. ಇಂಥ ಪ್ರವಚನಕಾರರಲ್ಲಿ ಪುರಾಣ ಕರ್ತೃಗಳೂ ಇದ್ದಾರೆ; ವಿರಕ್ತರೂ, ಮಠಾಧೀಶರೂ, ಗೃಹಸ್ಥರೂ, ಸಮಾಜ ಸೇವಕರೂ, ಆರೂಢ ಸಾಂಪ್ರದಾಯದವರೂ, ಸ್ತ್ರೀಯರೂ, ದೇಶಾಭಿಮಾನಿಗಳೂ, ಕಲಾವಿದರೂ ಇದ್ದಾರೆಂಬುದು ಅಷ್ಟೇ ಸತ್ಯವಾದ ಮಾತಾಗಿದೆ. ಮಧುರ ಚನ್ನ (ಹಲಸಂಗಿ ಚನ್ನಮಲ್ಲಪ್ಪ), ಚನ್ನಪ್ಪ ಎರೇಸೀಮೆ, ಜೋಳದರಾಶಿ ದೊಡ್ಡನಗೌಡ ಮುಂತಾದವರನ್ನು ಇಲ್ಲಿ ಹೆಸರಿಸಬಹುದು. ಹೀಗಾಗಿ ಅವರನ್ನು ಅನುಭಾವಿ ಕವಿಗಳೆಂದೇ ಕರೆಯುವದುಂಟು. ಶರಣರ ಜೀವನವನ್ನು ಅಳವಡಿಸಿಕೊಂಡು ಅವರೆಲ್ಲ ಬದುಕಿದವರು.

---

೫೧ " " ಸಮಗ್ರ ವಚನಸಂಪುಟ-೧. ಸಂ-ಎಂ.ಎಂ. ಕಲಬುರ್ಗಿ. ಪುಟಸಂಖ್ಯೆ-೩೪. ವಚನಸಂಖ್ಯೆ-೧೨೪. (೨೦೧೧)

ಹರ್ಡೇಕರ ಮಂಜಪ್ಪನವರನ್ನು 'ಕರ್ನಾಟಕದ ಗಾಂಧಿ' ಎಂದು ಕರೆಯುವದುಂಟು. ಶಿವಶರಣರ ಮೇಲೆ ಅವರು ಸಹಜವಾಗಿ ಮಾತನಾಡಿದರೂ ಅದು ಪ್ರವಚನವಾಗಿರುತ್ತಿತ್ತು. ಸಾಮಾಜಿಕ ಬದಲಾವಣೆಗೆ-ಬೆಳವಣಿಗೆಗೆ ಶರಣರ ವಚನಗಳು ಅವಶ್ಯ ಎಂಬುದನ್ನು ಅವರು ಗಟ್ಟಿಯಾಗಿ ನಂಬಿದ್ದರು. ಶರಣರು ಸಾಗಿದ ದಾರಿಯಲ್ಲಿ ನಾವೆಲ್ಲ ಸಾಗಿದರೆ ನಮ್ಮ ಭಾರತದೇಶ ಸಮರ್ಥ ದೇಶವಾಗುವದೆಂದು ಹೇಳುತ್ತಿದ್ದರು.

ಕೆಲವು ಮಹಾತ್ಮರು ಕೊಡುತ್ತಿದ್ದ ಪ್ರವಚನದ ಅವಧಿ ಕಡಿಮೆಯಾಗಿದ್ದರೂ ಅವುಗಳ ಪರಿಣಾಮ ದೀರ್ಘಕಾಲ ಉಳಿಯುವಂತಿರುತ್ತಿದ್ದವು; ಹಾಗೂ ತುಂಬಾ ಪರಿಣಾಮಕಾರಿ-ಯಾಗಿದ್ದವು. ಅವರ ಪ್ರವಚನಗಳಿಂದ ಅಸಾಧ್ಯವಾದ ಕಾರ್ಯಗಳನ್ನು ಸಾಧ್ಯಮಾಡಿ ತೋರಿಸಲು ಸಹಕಾರಿಯಾಗಿದ್ದವು. ಪೂಜ್ಯ ಹಾನಗಲ್ಲ ಕುಮಾರ ಸ್ವಾಮಿಗಳ ಒಂದೊಂದು ಪ್ರವಚನ ಜನಸಾಮಾನ್ಯರ ಮನಸ್ಸಿಗೆ ಮುಟ್ಟಿ ಶಿವಯೋಗಮಂದಿರ ನಿರ್ಮಾಣ ಮಾಡುವಲ್ಲಿ ಯಶಸ್ವಿಯಾದವು. ಇಂದು ಪ್ರವಚನ ಪ್ರವೀಣರಾದವರಲ್ಲಿ ಬಹುಪಾಲು ಮಹಾತ್ಮರು ಶಿವಯೋಗಮಂದಿರದ ಗರಡಿಯಲ್ಲಿ ಪಳಗಿ ಬಂದವರಾಗಿದ್ದಾರೆಂಬುದರಲ್ಲಿ ಸಂದೇಹವಿಲ್ಲ.

ಅಥಣಿಯ ಪೂಜ್ಯ ಮುರಘೇಂದ್ರ ಶಿವಯೋಗಿಗಳ ಶಿವಶರಣರ ವಚನಗಳನ್ನು ತಲೆಯ ಮೇಲಿಟ್ಟುಕೊಳ್ಳುತ್ತಿದ್ದರಂತೆ! ಬಸವಣ್ಣನವರಿಗೆ ಅವರು ಕರೆಯುತ್ತಿದ್ದ ಶಬ್ದವೆಂದು "ಅಪ್ಪ" ಎನ್ನುತ್ತಿದ್ದರು. ಅಪ್ಪ ಬರೆದ ವಚನದ ಕಟ್ಟುಗಳನ್ನು ತಲೆಯಮೇಲಿಟ್ಟುಕೊಂಡು ನಂತರ ಕೈಯಲ್ಲಿ ಹಿಡಿದುಕೊಂಡು ಅದರಲ್ಲಿಯ ಒಂದು ವಚನದ ಮೇಲಿಂದ ಪ್ರವಚನ ಮಾಡುತ್ತಿದ್ದರು. ಅಥಣಿ ಶಿವಯೋಗಿಗಳು ಅದೇ ತಾಲೂಕಿನ ನದಿ ಇಂಗಳಗಾಂವಿಯವರು. ಅವರ ಕರಕಮಲಸಂಜಾತರಾದ ಪೂಜ್ಯ ಧಾರವಾಡದ ಮೃತ್ಯುಂಜಯ ಅಪ್ಪಗಳು ಹುಬ್ಬಳ್ಳಿ ತಾಲೂಕಿನ "ಇಂಗಳಳ್ಳಿ"ಯವರು. "ಎಲ್ಲಿಯ ಮಾಮರ ಎಲ್ಲಿಯ ಕೋಗಿಲೆ ಎತ್ತಣಿಂದತ್ತ ಸಂಬಂಧವಯ್ಯ" ಎನ್ನವಂತೆ ಇಂಗಳಳ್ಳಿಯಿಂದ ಅಥಣಿಗೆ ಬಂದು ಅವರ ಶಿಷ್ಯರಾಗಿ, ಅವರ ಪ್ರವಚನಗಳಿಂದ ಪುನೀತರಾದರು. ತದನಂತರ ಧಾರವಾಡವನ್ನು ತಮ್ಮ ಕರ್ಮಭೂಮಿಯನ್ನಾಗಿ ಮಾಡಿಕೊಂಡು ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನದಾಸೋಹ ಹಾಗೂ ಜ್ಞಾನದಾಸೋಹ ಮಾಡಿದರು. ಪ್ರತಿದಿವಸ ಬೆಳಗ್ಗೆ ಶರಣ ವಚನಗಳ ಪಠಣದೊಂದಿಗೆ ಕಾರ್ಯಪ್ರಾರಂಭವಾಗಿ ರಾತ್ರಿ ಮಲಗುವ ಮುನ್ನ ವಚನ ಪಠಣ ಮಾಡಿ ದಿನನಿತ್ಯದ ಕಾರ್ಯ ಮುಗಿಸುತ್ತಿದ್ದರು. ಅಲ್ಲಿದ್ದುಕೊಂಡು ವಿದ್ಯಾಭ್ಯಾಸ ಮಾಡಿದವರು. ನಾಡಿನಲ್ಲಿ ಅಷ್ಟೇ ಅಲ್ಲ ದೇಶ-ವಿದೇಶಗಳಲ್ಲೂ ಹೆಸರುವಾಸಿಯಾಗಿದ್ದಾರೆ. ಹಲವಾರು ಕ್ಷೇತ್ರಗಳಲ್ಲಿ ಉತ್ತುಂಗಕ್ಕೇರಿ ಇತಿಹಾಸ ಪುಟಗಳಲ್ಲಿ ತಮ್ಮ ಹೆಸರನ್ನು ದಾಖಲಿಸಿದ್ದಾರೆ. ಹೀಗಿದ್ದರೂ ಪೂಜ್ಯ ಮೃತ್ಯುಂಜಯ ಅಪ್ಪಗಳ ಪ್ರವಚನವೆಂದರೆ ಹೃದಯದಿಂದ ಹೃದಯಕ್ಕೆ

ಮುಟ್ಟುವ ನುಡಿಗಳಾಗಿದ್ದವು. ಅವರನ್ನು 'ಅದ್ವೈತ ಚಕ್ರವರ್ತಿ' ಎಂದೇ ಕರೆಯುತ್ತಿದ್ದರು. ವೇದಾಂತ-ಉಪನಿಷತ್ತುಗಳನ್ನು ಆಳವಾಗಿ ಅಭ್ಯಾಸ ಮಾಡಿ ಗ್ರಂಥ ರಚಿಸಿದ ನಿಜಗುಣ ಶಿವಯೋಗಿಗಳ ಗ್ರಂಥಗಳನ್ನು ಆಧಾರವಾಗಿಟ್ಟು ಅದ್ವೈತ ವಿಷಯದ ಮೇಲೆ ಪ್ರವಚನ ಮಾಡುವಲ್ಲಿ ಸಿದ್ಧಾರೂಢರು ನಿಸ್ಸೀಮರು. ಅವರ ಪ್ರವಚನ ಕೇಳಲು ಕನ್ನಡ ನಾಡಿನ ಜನರಷ್ಟೇ ಅಲ್ಲದೆ ಮಹಾರಾಷ್ಟ್ರ, ಗುಜರಾತ್, ಆಂಧ್ರ ಪ್ರದೇಶ ಮೊದಲಾದ ರಾಜ್ಯಗಳಿಂದಲೂ ಜನರು ಬರುತ್ತಿದ್ದರು. ಇಂದಿಗೂ ಆಯಾ ರಾಜ್ಯಗಳ ಭಕ್ತರು ಬಂದು ಹೋಗುತ್ತಿರುವದೇ ಅದಕ್ಕೆ ಸಾಕ್ಷಿ. ಇವರ ಪ್ರವಚನದ ಪ್ರಭಾವವನ್ನು ಕೇಳಿದ ಹಲವಾರು ದೇಶಭಕ್ತರೂ ಇವರ ಭೆಟ್ಟಿಗಾಗಿ ಬಂದಿದ್ದರು. " ಸ್ವರಾಜ್ಯವೇ ನನ್ನ ಜನ್ಮ ಸಿದ್ಧ ಹಕ್ಕು" ಎಂದು ಗುಡುಗಿ ಬ್ರಿಟಿಷರಿಗೆ ನಡುಕ ಹುಟ್ಟಿಸಿದ ಬಾಲಗಂಗಾಧರ ತಿಲಕ ಇವರ ಪ್ರವಚನ ಆಲಿಸಲು ಬಂದಿದ್ದರು. ೧೮೮೦ ರಿಂದ ೧೯೨೫ ರ ಅವಧಿಯಲ್ಲಿ ಪೂಜ್ಯ ಸಿದ್ಧಾರೂಢರ ಪ್ರವಚನ ಬಹು ಜನರನ್ನು ಉದ್ಧಾರಗೊಳಿಸಿದವು. ಜಾತಿ-ಮತ-ಕುಲ-ಗೋತ್ರ ಮೀರಿನಿಂತ ಇವರ ಪ್ರವಚನಗಳು ಸತ್ವಭರಿತ-ತತ್ವಭರಿತವಾಗಿದ್ದವೆಂಬುದರಲ್ಲಿ ಎರಡು ಮಾತಿಲ್ಲ.

ಅಥಣಿ ಶಿವಯೋಗಿ-ಸಿದ್ಧಾರೂಢರ ಸಮಕಾಲೀನವರಾದ ಶಿಶುನಾಳ ಶರೀಪ ಶಿವಯೋಗಿ, ಗರಗದ ಮಡಿವಾಳೇಶ್ವರ, ನವಿಲುಗುಂದ ನಾಗಲಿಂಗ, ಬಂಥನಾಳ ವೃಷಭಲಿಂಗೇಶ್ವರ ಶಿವಯೋಗಿಗಳು, ಲಚ್ಯಾಣದ ಸಿದ್ಧಲಿಂಗಯತಿಗಳು, ಕೌದೆಪ್ಪ ಮಹಾರಾಜರು ಗದಗದ ಶಿವಾನಂದರು ಪ್ರಮುಖರು. ಇವರಲ್ಲಿ ಶಿಶುನಾಳ ಶರೀಪರು ತತ್ವಪದಗಳನ್ನು ಕಟ್ಟಿ ರಾಗಬದ್ಧವಾಗಿ ಹಾಡುತ್ತಿದ್ದರು. ಕೆಲವು ಸಾರೆ ಪದ್ಯದ ಅರ್ಥವನ್ನು ಕೂಡಿದ ಜನರಿಗೆ ಬಿಡಿಸಿ ಹೇಳುತ್ತಿದ್ದರು. ಉಳಿದ ಮಹಾತ್ಮರ ಪ್ರವಚನಗಳೆಂದು ಹೇಳದೆ, ಕೂಡಿದ ಜನರಿಗೆ ತತ್ವಯುಕ್ತವಾದ ಮಾತುಗಳನ್ನು ನಾವು ಪ್ರವಚನಗಳೆಂದು ಭಾವಿಸಿದರೆ ತಪ್ಪಾಗಲಾರದು. ಇವರ ನಂತರ ಹುಬ್ಬಳ್ಳಿಯ ಶಾಂತಾಶ್ರಮದ ಶಿವಪುತ್ರಸ್ವಾಮಿಗಳು, ಶಂಕರಾನಂದರು, ಅಗ್ನಿಹೊತ್ರಿ ಶಂಕರ ಭಟ್ಟರು, ಸೊಲ್ಲಾಪುರದ ಸಿದ್ದಯ್ಯ ಸ್ವಾಮಿಗಳು ಪ್ರವಚನ ಮಾಡುವಲ್ಲಿ ಪ್ರಖ್ಯಾತಿ ಪಡೆದವರಾಗಿದ್ದಾರೆ. ಅವರ ಪ್ರವಚನಗಳು ಜನರ ಮನಸ್ಸಿನ ಮೇಲೆ ತುಂಬಾ ಪರಿಣಾಮ ಬೀರುತ್ತಿದ್ದವು. ಅವರ ಪ್ರವಚನ ಕೇಳಿದವರು ಹಲವಾರು ಜನರು ಇಂದೂ ಬದುಕಿದ್ದಾರೆ. ಧಾರವಾಡದ ನವಕಲ್ಯಾಣ ಮಠದ ಪೂಜ್ಯ ಕುಮಾರ ಸ್ವಾಮಿಗಳ ಪ್ರವಚನಗಳು ನಾಡಿನಲ್ಲಿ ಪ್ರಖ್ಯಾತಿ ಹೊಂದಿದ್ದವು. ಹಲವಾರು ಭಾಷೆಗಳ ಮೇಲೆ ಪ್ರಭುತ್ವ ಪಡೆದ ಪೂಜ್ಯರು ವಿದೇಶಗಳಲ್ಲೂ ಪ್ರವಚನ ನೀಡಿ ಜನಾನುರಾಗಿಗಳಾಗಿದ್ದರು. ನಮ್ಮ ದೇಶದ ಮೊದಲನೆಯ ಪ್ರಧಾನಿ ಪಂಡಿತ ಜವಾಹರಲಾಲ ನೆಹರೂರವರು ಇವರ ಪ್ರವಚನ ಕೇಳಿ, 'ಪೂಜ್ಯರು

ಎರಡನೆಯ ವಿವೇಕಾನಂದ'ರೆಂದು ಬಣ್ಣಿಸಿರುವದನ್ನು ನೋಡಿದರೆ, ಪೂಜ್ಯರ ಪ್ರವಚನ ಎಷ್ಟೊಂದು ಮಾರ್ಮಿಕವಾಗಿತ್ತೆಂದು ತಿಳಿದು ಬರುವದು. ಕ್ರೈಸ್ತ ಬಂಧುಗಳ ಗುರುಗಳಾದ "ಪೋಪ್" ರವರು, 'ವೆನಿಟಿಕ್' ನಗರದಲ್ಲಿ ವಾಸಿಸುತ್ತಿದ್ದಾರೆ. ಕುಮಾರಸ್ವಾಮಿಗಳು ಅವರಲ್ಲಿ ಹೋಗಿ ಪ್ರವಚನ ಕೊಟ್ಟು ಅವರ ಅಂಗೈಗೆ ಲಿಂಗ ಕೊಟ್ಟು ಅದರ ಮಹತ್ವ ತಿಳಿಸಿದ ಮಹಾತ್ಮರಾಗಿದ್ದಾರೆ. ಇವರ ಪ್ರವಚನಕ್ಕೆ ಮನಸೋತವರಲ್ಲಿ ಜಾನ್ ಪೋಪರೂ ಒಬ್ಬರು.

ಶಿವಶರಣರ ವಚನಗಳನ್ನು ಆಧಾರವಾಗಿಟ್ಟುಕೊಂಡು ಸುಂದರವಾಗಿ, ಸ್ವಾರಸ್ಯಭರಿತವಾಗಿ, ತತ್ವಗಳೊಂದಗೂಡಿದ ಪ್ರವಚನ ಮಾಡಿದವರೆಂದರೆ ಪ್ರವಚನ ಪಿತಾಮಹ ಪೂಜ್ಯ ಶ್ರೀ ಲಿಂಗಾನಂದರು ಹಾಗೂ ಮಾತೆ ಮಹಾದೇವಿಯವರು. ಶಿವಶರಣರ ವಚನಗಳನ್ನು ಇಡಿಯಾಗಿ ಅಥವಾ ಬಿಡಿಬಿಡಿಯಾಗಿ ತೆಗೆದುಕೊಂಡು ಪ್ರವಚನ ಮಾಡುವ ಅವರ ವಾಕ್‌ಝರಿಗೆ ಮನಸೋಲದಿರುವ ಜನರು ತೀರಾ ಕಡಿಮೆ. ವಚನಗಳ ಒಂದೇ ಒಂದು ಸಾಲನ್ನು ಆಯ್ಕೆ ಮಾಡಿಕೊಂಡು ಸಾಮಾನ್ಯ ಜನರಿಗೂ ತಿಳಿಯುವಂತೆ ಹೇಳುವ ಅವರ ಪ್ರವಚನಗಳು ಮಂತ್ರ ಮುಗ್ಧರನ್ನಾಗಿ ಮಾಡುತ್ತಿದ್ದವು. ಶಿವಶರಣರ ವಚನಗಳ ಮೇಲೆ ಮಾತ್ರ ಅವರು ಪ್ರವಚನ ಮಾಡುತ್ತಿದ್ದರೆಂಬುದು ವಿಶೇಷವಾಗಿದೆ. ಲಿಂಗಾನಂದರು ಬದುಕಿರುವಾಗ ಅವರೊಂದಿಗೆ ಪ್ರವಚನ ನೀಡುತ್ತಿದ್ದ ಮಾತೆ ಮಹಾದೇವಿಯವರು, ಅವರ ನಂತರ ಪ್ರವಚನದ ಕಾರ್ಯವನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಪ್ರತಿ ವರುಷ ಸಂಕ್ರಮಣದ ಸಮಯದಲ್ಲಿ ಮೂರು ದಿನಗಳವರೆಗೆ ಶಿವಶರಣರ ವಚನಗಳ ಮೇಲೆ ಪ್ರವಚನ ಜರುಗುತ್ತವೆ. ನಾಡಿನ ವಿದ್ವಾಂಸರು ಈ ಸಂದರ್ಭದಲ್ಲಿ ಕೂಡಲಸಂಗಮಕ್ಕೆ ಬಂದು ವಚನಗಳ ಮೇಲೆ ಪ್ರವಚನ ಕೊಡುತ್ತಿದ್ದಾರೆ. ಶಿವಶರಣರ ವಚನಗಳನ್ನು ಆಳವಾಗಿ ಅಭ್ಯಾಸ ಮಾಡಿ ಅವುಗಳ ಮೇಲೆ ಪ್ರವಚನ ಮಾಡುವ ಕಲೆ ಮಾತೆ ಮಹಾದೇವಿಯವರಿಗೆ ಕರಗತವಾಗಿದೆ. ಪ್ರವಚನಗಳಿಂದ ನಮ್ಮ ನಾಡಿನಲ್ಲಿ ಅಷ್ಟೇ ಅಲ್ಲದೆ ಇತರ ರಾಜ್ಯಗಳಲ್ಲೂ ಅವರ ಪ್ರವಚನಗಳು ಪ್ರಭಾವ ಬೀರಿವೆ.

ಪ್ರವಚನಗಳಿಂದ ನಾಡಿನಲ್ಲೆಲ್ಲ ಹೆಸರುವಾಸಿಗಳಾದವರೆಂದರೆ ಇಳಕಲ್‌ದ ಪೂಜ್ಯ ಡಾ. ಮಹಾಂತ ಅಪ್ಪಗಳು ಮೊದಲು ಪುರಾಣ ಪ್ರವಚನ ನೀಡಿದವರು, ಶಿವಶರಣರ ದರ್ಶನ ಪಡೆಯಬೇಕಾದರೆ ಇವರ ಪ್ರವಚನಗಳ ಮೂಲಕ ಅರಿಯಬಹುದಾಗಿದೆ. ಅವರ ಪ್ರವಚನಗಳಲ್ಲಿ ಶಿವಶರಣರ ವೈವಿಧ್ಯಮಯ ಜೀವನದ ಮಾರ್ಗಗಳನ್ನು, ಶಿವಶರಣರು ಸಾಗಿ ಹೋದ ಹಾದಿಯಲ್ಲಿ ನಾವು ಸಾಗಬೇಕಾದರೆ ನಾವು ಮಾಡಬೇಕಾದ ಕರ್ತವ್ಯಗಳೇನು? ಎಂಬುದನ್ನು ಬಲು ಸೊಗಸಾಗಿ ಹೇಳುವರು. ಪೂಜ್ಯ ಮಹಾಂತ ಸ್ವಾಮಿಗಳು ಪ್ರವಚನಗಳ ಮೂಲಕ ಜನರಲ್ಲಿಯ ದುಶ್ಚಟಗಳನ್ನು ಬಿಡಿಸಿದರು. ಅದಕ್ಕಾಗಿ "ಮಹಾಂತ ಜೋಳಿಗೆ" ಹುಟ್ಟಿಕೊಂಡಿತು.

ಊರೂರಿಗೆ ಹೋಗಿ ಶಿವಶರಣರ ವಚನಗಳ ಮೇಲೆ ಪ್ರವಚನ ಮಾಡಿ, ತಾವು ಮಾಡುತ್ತಿರುವ ಚಟಗಳನ್ನು ಈ ಜೋಳಿಗೆಯಲ್ಲಿ ಹಾಕಬೇಕೆಂದು ಬೇಡಿಕೊಳ್ಳುತ್ತಿದ್ದರು. ಇವರ ಪ್ರವಚನಕ್ಕೆ ಬಂದಂತಹ ಜನರು ತಮ್ಮಲ್ಲಿರುವ ದುಶ್ಚಟಗಳನ್ನು ಮಹಾಂತ ಜೋಳಿಗೆಯಲ್ಲಿ ಹಾಕಿ ಚಟಗಳಿಂದ ಮುಕ್ತರಾಗಿದ್ದಾರೆ. ಚಟಗಳನ್ನು ಬಿಟ್ಟ ನಂತರ ಶರಣ ಜೀವನದ ಸಂಸಾರ ಸಾಗಿಸುತ್ತಿರುವುದನ್ನು ಕಾಣುತ್ತೇವೆ. ಗದಗ, ಧಾರವಾಡ, ಮುರಗೋಡ, ಶಿವಯೋಗ ಮಂದಿರ, ಬಳ್ಳಾರಿ, ಹೊಸಪೇಟೆ ಮುಂತಾದ ಮಠಮಾನ್ಯಗಳಲ್ಲಿ ಶಿವಾನುಭವ ಸಂಪದದ ಮೂಲಕ ಪ್ರವಚನಗಳು ನಡೆಯುತ್ತಿವೆ. ನಾಡಿನ ವಿದ್ವಾಂಸರನ್ನು ಬರಮಾಡಿಕೊಂಡು ಶರಣರ ತತ್ವಗಳ ಮೇಲಿಂದ ಪ್ರವಚನ ಕೊಡಿಸುತ್ತಿರುವರು. ಉದಾಹರಣೆಗೆ ಜಾನಪದದಲ್ಲಿ ಶಿವಶರಣರು, ಶಿವಶರಣರ ದೃಷ್ಟಿಯಲ್ಲಿ ಆರ್ಥಿಕತೆ, ಶರಣರ ಕಾಯಕ, ಶರಣಸತಿ-ಲಿಂಗಪತಿ, ಇಂದಿನ ಸಮಾಜಕ್ಕೆ ಶರಣರ ವಚನಗಳ ಅವಶ್ಯಕತೆ, ಶರಣ ಜೀವನ, ಬಾಳಿಗೆ ಬೆಳಕು ಕೊಡುವ ಶರಣರ ವಚನಗಳು ಇಂತಹ ವಿಷಯಗಳಿಂದ ಜನರು ಜಾಗೃತರಾಗಿ ತಮ್ಮ ಸಂಸಾರ ಸುಧಾರಿಸಿಕೊಳ್ಳಲು ಅನುಕೂಲವಾಗುತ್ತಿವೆ. ಹೀಗೆ ಪ್ರವಚನ ಕೊಡಿಸುತ್ತಿರುವ ತಾವೂ ಕೊಡುತ್ತಿರುವ ಕಾರ್ಯ ಶ್ಲಾಘನೀಯವಾದುದಾಗಿದೆ.

ಸಿದ್ಧಾರೂಢರ ಸಮಕಾಲೀನವರಾದ ಗದುಗಿನ ಪೂಜ್ಯ ಶಿವಾನಂದರ ಪ್ರವಚನಗಳ ಪರಿಮಳದ ವಾಸನೆ ಇಂದಿಗೂ ನಾಡಿನಲ್ಲೆಲ್ಲ ಸುವಾಸನೆ ಬೀರುತ್ತಿದೆ. ಮೂಲತಃ ರಾಮದುರ್ಗ ತಾಲೂಕಿನ ಸುರೇಬಾನ ಮನಿಹಾಳದವರಾದ ಶಿವಾನಂದರು ಸಂಸಾರದಲ್ಲಿದ್ದು ಸನ್ಯಾಸಿಗಳಾಗಿ ಬಾಳಿದವರು. ಅವರು ದ್ವೈತ-ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಮೇಳವಿಸಿಕೊಂಡು ಪ್ರವಚನ ಮಾಡುತ್ತಿದ್ದರು. ಹೀಗಾಗಿ ಎಲ್ಲ ಮತದವರೂ ಇವರ ಪ್ರವಚನಗಳಿಗೆ ಮಾರು ಹೋಗಿದ್ದರು. ನಿಜಗುಣ ಶಿವಯೋಗಿಗಳ ಪದ್ಯಗಳೇ ಇರಲಿ, ಶಿವಶರಣರ ವಚನಗಳೇ ಇರಲಿ ಅವುಗಳು ಮೇಲಿಂದ ಪ್ರವಚನ ನೀಡುವ ಅವರ ತತ್ವ ವಿಚಾರಗಳು ಅಪ್ಯಾಯಮಾನಗಳಾಗಿದ್ದವು. ಇದರಂತೆಯೇ ಇವರ ಸುಪುತ್ರರಾದ ಪೂಜ್ಯ ಆತ್ಮಾನಂದರು ಪ್ರವಚನ ಮಾಡುವದರಲ್ಲಿ ಪ್ರಖ್ಯಾತಿ ಪಡೆದವರಾಗಿದ್ದರು. ಶಿಕ್ಷಣದಲ್ಲಿ ಉನ್ನತ ಪದವಿ ಪಡೆದವರಾಗಿದ್ದ ಇವರು ಹಲವಾರು ಭಾಷೆಗಳ ಮೇಲೆ ಹಿಡಿತ ಸಾಧಿಸಿದ್ದರು. ಎಲ್ಲ ಭಾಷೆಗಳಲ್ಲೂ ಪ್ರವಚನ ನೀಡುತ್ತಿದ್ದುದು ಇವರ ವಿಶೇಷವಾಗಿತ್ತು. ಧಾರವಾಡದ ತತ್ವಾನ್ವೇಷಣ ಮಂದಿರದಲ್ಲಿ ಪ್ರತಿ ರವಿವಾರ ಸಾಯಂಕಾಲ ೬ ರಿಂದ ೭ ರ ವರೆಗೆ ಒಂದು ಗಂಟೆಯವರೆಗೆ ಪ್ರವಚನ ಹೇಳುತ್ತಿದ್ದರು, ಇವರ ಪ್ರವಚನ ಕೇಳಲು ಧಾರವಾಡದ ಜನರು ಆಸಕ್ತಿಯಿಂದ ಬರುತ್ತಿದ್ದರು, ಹಾಗೂ ಹಲವಾರು ಪ್ರಶ್ನೆಗಳನ್ನು ಕೇಳಿ ಅವರಿಂದ ಉತ್ತರ ಪಡೆದು ಸಂತೃಪ್ತಿಯಿಂದ ಮರಳುತ್ತಿದ್ದರು. ಪೂಜ್ಯ ಶಿವಾನಂದರ ನಂತರ

ಅವರ ಪ್ರವಚನದ ಪ್ರವಾಹ ಮುಂದುವರಿಯಿತು. ಅವರ ಮಾನಸ ಪುತ್ರ, 'ವೇದಾಂತ ಕೇಸರಿ' ಮಲ್ಲಿಕಾರ್ಜುನ ಸ್ವಾಮಿಗಳ ಪ್ರವಚನ ಕರ್ನಾಟಕ-ಮಹಾರಾಷ್ಟ್ರ ರಾಜ್ಯಗಳಲ್ಲಿ ಪ್ರಭಾವ ಬೀರಿವೆ. ಪೂಜ್ಯ ಮಲ್ಲಿಕಾರ್ಜುನ ಸ್ವಾಮಿಗಳು ಊರೂರಿಗೆ ಹೋಗಿ ಪ್ರವಚನ ಮಾಡುತ್ತಿದ್ದರು. ತಿಂಗಳುಗಟ್ಟಲೆ ಅಲ್ಲಿ ವಾಸ ಮಾಡಿ ದಿವಸದ ಎರಡೂ ವೇಳೆ ಪ್ರವಚನ ಮಾಡಿ ಜನರಲ್ಲಿ ಜಾಗೃತಿಯನ್ನುಂಟು ಮಾಡಿದ್ದಾರೆ. ಇವರ ವಿಶ್ಲೇಷತೆ ಏನೆಂದರೆ ಪ್ರವಚನದ ಪ್ರಭಾವದಿಂದ ಶೈಕ್ಷಣಿಕ ಕ್ರಾಂತಿ ಮಾಡಿದ್ದು ಅವಿಸ್ಮರಣೀಯವಾದುದು. ಪ್ರವಚನದ ಪ್ರಭಾವಕ್ಕೊಳಗಾದ ಜನರು ಹಣವನ್ನು ಪೂಜ್ಯರಿಗೆ ಅರ್ಪಿಸಿದಾಗ ಆ ಹಣವನ್ನು ಸಮಾಜಕ್ಕೆ ನೀಡಿ ಶೈಕ್ಷಣಿಕ ಸಂಸ್ಥೆ ಸ್ಥಾಪಿಸಲು ಪ್ರೇರೇಪಿಸುತ್ತಿದ್ದರು. ಅಂತಹ ಶಿಕ್ಷಣ ಸಂಸ್ಥೆಗಳನ್ನು ಇಂದಿಗೂ ಕಾಣಬಹುದಾಗಿದೆ. ಕಾಗವಾಡದ ಶ್ರೀ ಶಿವಾನಂದ ಮಹಾವಿದ್ಯಾಲಯ, ಶ್ರೀ ಮಲ್ಲಿಕಾರ್ಜುನ ಪ್ರೌಢಶಾಲೆ ಶಿರಗುಪ್ಪಿ ಇತ್ಯಾದಿ. ಗೋಕಾಕದಲ್ಲಿ ಪೂಜ್ಯರ ಪ್ರವಚನಗಳಿಂದ ಬಂದ ಹಣವನ್ನು ಪ್ರೌಢಶಾಲಾ ಕಟ್ಟಡಕ್ಕೆ ಕೊಟ್ಟು ಭೌಥಿಕವಾಗಿ ಮರೆಯಾಗಿ ಹೋದರೂ ಇಂದಿಗೂ ಆ ಕಟ್ಟಡಗಳನ್ನು ನೋಡಬಹುದು. ಈಗ ಆ ಕಟ್ಟಡದಲ್ಲಿ ಸರಕಾರಿ ಪದವಿಪೂರ್ವ ಕಾಲೇಜು ನಡೆಯುತ್ತಿದೆ. ಸಿದ್ಧಾರೂಢರ, ಶಿವಾನಂದರ ಪರಂಪರೆಯನ್ನು ಸ್ವಲ್ಪ ಅವಲೋಕಿಸಿದರೆ ಯಾವ ಊರಗಳಲ್ಲೂ ಮೂಲತಃ ಮಠಗಳಿಲ್ಲ. ಪ್ರವಚನ ಮಾಡುತ್ತ ಸಾಗಿ ಅಲ್ಲಿ ಪೂಜ್ಯರ ಹೆಸರಿನಲ್ಲಿ ಮಠಗಳನ್ನು ಸ್ಥಾಪಿಸಿ ಶೈಕ್ಷಣಿಕ ಹಾಗೂ ಸಾಮಾಜಿಕ ಕ್ರಾಂತಿ ಮಾಡುತ್ತಿರುವದನ್ನು ನಾವು ಗಮನಿಸಬಹುದು.

ಮಲ್ಲಿಕಾರ್ಜುನ ಸ್ವಾಮಿಗಳ ಕರಕಮಲ ಸಂಜಾತ ಮಾನಸ ಪುತ್ರರಾದ ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳು ನಾಡಿಗಷ್ಟೇ ಅಲ್ಲ ವಿಶ್ವಕ್ಕೆ ಚಿರಪರಿಚಿತರಾಗಿದ್ದಾರೆ. ಅವರ ಪ್ರವಚನದ ಸುಗಂಧ ವಿಶ್ವದಲ್ಲೆಲ್ಲ ಹರಡಿದೆ ಹರಡುತ್ತಲ್ಲಿದೆ. ಆರೇಳು ಭಾಷೆಗಳಲ್ಲಿ ಪಾಂಡಿತ್ಯ ಪಡೆದ ಪೂಜ್ಯರು ನಾಡಿನಲ್ಲಿ ಅಷ್ಟೇ ಅಲ್ಲದೆ ಬೇರೆ ರಾಜ್ಯಗಳಲ್ಲಿ, ವಿದೇಶಗಳಲ್ಲಿ ಪ್ರವಚನ ನೀಡುತ್ತ ಬಂದಿದ್ದಾರೆ. ಯಾವುದೇ ರೀತಿಯ ಫಲಾಪೇಕ್ಷೆಯಿಲ್ಲದೆ, ನೀಡುವ ಅವರ ಪ್ರವಚನ ಜನರ ಮನಸ್ಸಿನ ಮೇಲೆ ಪರಿಣಾಮ ಬೀರುತ್ತಿದೆ. ಇವರ ಪ್ರವಚನಗಳಿಂದ ಪ್ರಭಾವಿತರಾದ ಜನರು ತಮ್ಮ ಜೀವನ ಕ್ರಮವನ್ನು ಬದಲಾಯಿಸಿಕೊಂಡು ಶರಣ ಜೀವನ ಸಾಗಿಸುತ್ತಿದ್ದಾರೆ. ಅಲ್ಲದೆ ಪೂಜ್ಯ ಸಿದ್ಧೇಶ್ವರ ಸ್ವಾಮಿಗಳನ್ನು ತಮ್ಮ 'ಆರಾಧ್ಯ ದೇವ'ರೆಂದು ಪೂಜಿಸುತ್ತಿದ್ದಾರೆ. ಅವರಿಗೆ 'ನಡೆದಾಡುವ ದೇವ'ರೆಂದೂ, 'ಮಾತನಾಡುವ ದೇವ'ರೆಂದೂ ಕರೆಯುತ್ತಿರುವದನ್ನು ನಾವು ಕಾಣುತ್ತೇವೆ. ಹಳ್ಳ-ಕೊಳ್ಳ-ನದಿ, ಬೆಟ್ಟ, ಮರ, ಗಿಡ, ಹೂ, ಬಳ್ಳಿ, ಕಲ್ಲು, ಮಣ್ಣು, ಚಿನ್ನ ಮುಂತಾದ ವಸ್ತುಗಳ ಉದಾಹರಣೆಗಳೊಂದಿಗೆ ಪ್ರವಚನ ಹೇಳುತ್ತಿರುವದು ಒಂದು ಅದ್ಭುತ ಕಲೆಯಾಗಿದೆ. ಜೀವನದಲ್ಲಿ ಅಥವಾ ನಮ್ಮ ಮನೆಗಳಲ್ಲಿ ಜರಗುವ ಘಟನೆಗಳೇ ಪೂಜ್ಯರ

ಪ್ರವಚನಗಳಲ್ಲಿ ಉದಾಹರಣೆಗಳಾಗಿವೆ. ಶಿವಶರಣರ ವಚನಗಳನ್ನಾಗಲೀ ಅಥವಾ ಅದರಲ್ಲಿ ಒಂದೇ ಒಂದು ಶಬ್ದವನ್ನು ಆಯ್ದುಕೊಂಡು ತಿಳಿತಿಳಿಯಾಗಿ ಜನರಿಗೆ ಸರಳವಾಗಿ ಅರ್ಥವಾಗುವಂತೆ ಪ್ರವಚನ ನೀಡುವರು. ಆಧ್ಯಾತ್ಮವೆಂಬುದು ತುಂಬಾ ಕಠಿಣವಾದ ಮಾರ್ಗ ಎಂಬುದನ್ನು ತಿಳಿದುಕೊಂಡವರಿಗೆ, ಇವರ ಪ್ರವಚನ ಕೇಳಿದರೆ ಆಧ್ಯಾತ್ಮವು ಸುಲಭದ ದಾರಿ ಎಂದು ಅರಿತುಕೊಂಡು ಜೀವನ ಸಾಗಿಸಲು ಸಿದ್ಧರಾಗುತ್ತಾರೆ. ಪೂಜ್ಯ ಸಿದ್ಧೇಶ್ವರ ಸ್ವಾಮಿಗಳ ಪ್ರವಚನಗಳು ತುಂಬಾ ಪರಿಣಾಮಕಾರಿಯಾಗಲು ಕಾರಣಗಳೆಂದರೆ, ಅವರ ಆಳವಾದ ಅಭ್ಯಾಸ, ಅನುಭವ, ಸಾದಾ-ಸೀದಾ-ಸರಳ ಜೀವನ ಕ್ರಮ, ಉಡುಗೆ ತೊಡುಗೆಗಳಲ್ಲೂ ಆಡಂಬರ ಇಲ್ಲದಿರುವದು, ಭಾಷೆಯ ಮೇಲೆ ಪ್ರಭುತ್ವವಿರವುದು ಫಲಾಪೇಕ್ಷೆಯಿಲ್ಲದೆ ವಿಷಯ ಪ್ರತಿಪಾದಿಸುವದು, ಇದೇ ಧರ್ಮ ಶ್ರೇಷ್ಠವೆಂದು ಹೇಳದಿರುವದು, ಎಲ್ಲ ಧರ್ಮದವರಲ್ಲಿದ್ದ ದಾರ್ಶನಿಕರ ಹೆಸರನ್ನು ಹಾಗೂ ಅವರು ಸಾಗಿ ಹೋದ ಮಾರ್ಗಗಳನ್ನು ಬಲು ಸುಂದರವಾಗಿ ವಿವರಿಸುವುದು, ನಾಡು ನುಡಿಯ ಹಾಗೂ ದೇಶದ ಬಗ್ಗೆ ಅಭಿಮಾನ ಉಂಟುಮಾಡುವದು, ಹೆಚ್ಚಾಗಿ ಮನುಷ್ಯ ಹುಟ್ಟಿ ಬಂದ ಮೇಲೆ ತನ್ನನ್ನು ತಾನು ಅರಿತುಕೊಂಡು ಉದ್ಧಾರವಾಗಬೇಕೆಂಬ ಅವರ ಹಂಬಲ ಪೂಜ್ಯರ ಪ್ರವಚನಗಳಲ್ಲಿ ಅಡಗಿದೆ. ಒಂದು ಊರಿಗೆ ಹೋದರೆ ಪೂಜ್ಯರು ಒಂದು ತಿಂಗಳ ಪರಿಯಂತರ ಪ್ರವಚನ ಕೊಡುವರು. ಅವರು ಒಂದು ದಿವಸ, ಒಂದು ತಾಸು ಪ್ರವಚನ ಮಾಡಿದ ವಿವರವನ್ನು ಹತ್ತಾರು ಸಾಲುಗಳಲ್ಲಿ ಹಿಡಿದಿಡಲು ಪ್ರಯತ್ನಿಸಿದೆ.

ಅಲ್ಲಮ ಪ್ರಭುಗಳ ಒಂದು ಸುಂದರ ವಚನ.

"ಐವರ ಸಂಗದಿಂದ ಬಂದೆ ನೋಡಯ್ಯ

ಐವರ ಸಂಗದಿಂದ ನಿಂದೆ ನೋಡಯ್ಯ

ಐವರು ತಮ್ಮ-ತಮ್ಮ ಬಟ್ಟೆಯಲ್ಲಿ ಹೋದರು,

ನಾನೊಬ್ಬನೇ ನಿಃಸ್ಸಂಗಿಯಾಗಿ ಉಳಿದೆ, ಎಲ್ಲಾ! ಗುಹೇಶ್ವರನೆಂಬ

ನಿತ್ಯ-ನಿರಂಜನ ಘನವ ರೂಹಿಲ್ಲದ ಕಂಡೆ ನಯ್ಯಾ"೫೨

---

೫೨ " " ಅಲ್ಲಮಪ್ರಭುದೇವರ ವಚನ ನಿರ್ವಚನ. ಸಂ-ಶ್ರೀ ಸಿದ್ಧೇಶ್ವರ ಸ್ವಾಮಿಗಳು. ವಚನಸಂಖ್ಯೆ-೩೯೭ ಪ್ರ-ಶ್ರೀ ಶಿವರಾತ್ರೇಶ್ವರ ಗ್ರಂಥಮಾಲೆ ಮೈಸೂರ. (೨೦೦೧)

ಎಷ್ಟು ಮಜಾ ಅದ ನೋಡ್ರಿ! ಈ ವಚನ! ಸುಂದರವಾದ ಈ ದೇಹ ಆದದ್ದು ಪಂಚ ಮಹಾಭೂತಗಳಿಂದ (ಭೂಮಿ, ಆಕಾಶ, ನೀರು, ವಾಯು, ಅಗ್ನಿ) ಅವುಗಳ ಸಂಗದಿಂದ ಇದು ಬಂದಿದೆ. ಇದು ಬೆಳೆಯುವದೂ ಅವುಗಳ ಸಂಗದಿಂದಲೇ. ಕೊನೆಯಲ್ಲಿ ಅವು ಎಲ್ಲಿಂದ ಬಂದಿದ್ದವೋ ಅಲ್ಲಿಗೇ ಹೋದವು. ಹೋದ ನಂತರ ಉಳಿವುದೇ "ನಾನು" ಅದು ನಿಸ್ಸಂಗಿ, ನಿರಾಕಾರ ನೋಡ್ರಿ! ಜೀವ ಭಾವ ನಮ್ಮನ್ನು ಪಂಚಮಹಾಭೂತಗಳಿಂದಾದ ಶರೀರಕ್ಕೆ ಕಟ್ಟಿಹಾಕುತ್ತದೆ, ಜೀವ ಭಾವ ಅಳಿದಾಗ ಶಿವಭಾವ ಬಂದೇ ಬರುವದು. ಅದಕ್ಕೆ ಆತ್ಮಭಾವ ಎಂದೂ ಕರೆಯುವರು. ಆತ್ಮಭಾವದ ಅವಸ್ಥೆಯಲ್ಲಿ ಅನುಭವಕ್ಕೆ ಬರುವುದೇ ನಿತ್ಯ-ನಿರಂಜನ-ಘನ. ಅದು ರೂಪಿಲ್ಲದ ರೂಪು, ಬದಲಾಗದ ಸತ್ಯ ಅದುವೇ ಗುಹೇಶ್ವರ ಲಿಂಗವು.

ಪೂಜ್ಯ ಸಿದ್ಧೇಶ್ವರ ಸ್ವಾಮಿಗಳಿಗೆ ಆತ್ಮೀಯರು, ಕ್ರಿಯಾಶೀಲರೂ ಆಗಿರುವ ಮೈಗೂರಿನ ಶಿವಾನಂದ ಮಠದ ಪೂಜ್ಯ ಶ್ರೀ ಮಲ್ಲಯ್ಯ ಸ್ವಾಮಿಗಳೂ ಸಹ ಅರ್ಥಪೂರ್ಣವಾದ ಪ್ರವಚನ ಕೊಡುತ್ತಿದ್ದಾರೆ. ಶಿವಶರಣರ ವಚನಗಳನ್ನಾಗಲಿ, ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯ ಪದ್ಯದಲ್ಲಿಯ ಒಂದು ಸಾಲನ್ನಾಗಲೀ, ದಾಸರ ಪದ್ಯದ ಒಂದು ಸಾಲನ್ನಾಗಲಿ, ಕೆ.ಸಿ. ಶಿವಪ್ಪನವರ ಮುದ್ದುರಾಮನ ಮನಸ್ಸು ಕೃತಿಯ ಚೌಪದಿಗಳನ್ನು ಆರಿಸಿಕೊಂಡು ಪ್ರವಚನ ಮಾಡುವರು. ಒಂದು ಕಾಲದಲ್ಲಿ ಡಿ.ವ್ಹಿ.ಜಿಯ ಕಗ್ಗದ ಸಾಲುಗಳನ್ನು ಪ್ರವಚನಗಳಲ್ಲಿ ಹೇಳತ್ತಿದ್ದರು. ಇಂದು ಅಷ್ಟೇ ಮೌಲ್ಯದ ಶ್ರೀ ಕೆ.ಸಿ. ಶಿವಪ್ಪನವರ ಮುದ್ದುರಾಮನ ಮನಸ್ಸುಗಳಲ್ಲಿ ಚೌಪದಿಗಳನ್ನು ಜನಮಾನಸಕ್ಕೆ ಮುಟ್ಟುವಂತೆ ಜನರೆಲ್ಲರ ಮನಂಬುಗುವಂತೆ ಮಾತನಾಡುವವರು. ಪೂಜ್ಯ ಮಲ್ಲಯ್ಯ ಸ್ವಾಮಿಗಳವರು. ಅದರಂತೆ "ಗಿಳಿಯು ಪಂಜರದೊಳಗಿಲ್ಲ" ಎಂದ ದಾಸರ ಪದ್ಯದ ಮೇಲೆ ಮಾಡಿದ ಪ್ರವಚನ, "ಹಸಿವಾದೊಡೆ ಭಿಕ್ಷಾನ್ನಗಳುಂಟು" ಎಂಬ ಅಕ್ಕಮಹಾದೇವಿಯ ವಚನ ಪ್ರವಚನ ಇಂದಿನ ಜನರ ಮನಸ್ಸಿನ ಮೇಲೆ ಅಚ್ಚೊತ್ತಿದಂತಿದೆ.

೧೯೫೦ ರಿಂದ ೧೯೭೦ ರ ದಶಕದೊಳಗೆ ರೋಣದ ಬಸಪ್ಪ ಎಂಬವರು ಪ್ರಸಿದ್ಧ ಪ್ರವಚನಕಾರರಿದ್ದರು. ಊರೂರಿಗೆ ಹೋಗಿ ಶರಣರ, -ನಿಜಗುಣ ಶಿವಯೋಗಿಗಳ ಪದ್ಯಗಳ ಮೇಲೆ ಪ್ರವಚನ ಮಾಡುತ್ತಿದ್ದರು. ಬಹಳಷ್ಟು ಜನರಿಗೆ ಇವರ ಪ್ರವಚನ ಪರಿಣಾಮ ಬೀರಿತ್ತು. ರೋಣದ ಬಸಪ್ಪನವರ ಪ್ರವಚನವಿದೆಯೆಂದು ಗೊತ್ತಾದರೆ ಸಾಕು! ಗ್ರಾಮೀಣ ಪ್ರದೇಶಗಳಲ್ಲಿ ಸಾಕಷ್ಟು ಜನರು ಕೂಡುತ್ತಿದ್ದರು. ಅವರು ತಿಂಗಳುಗಳವರೆಗೆ ಪ್ರವಚನ ಮಾಡದೆ, ಒಂದು ಊರಿನಲ್ಲಿ ಮೂರು ದಿನಗಳವರೆಗೆ ಪ್ರವಚನ ಮಾಡಿ ಮುಂದಿನ ಊರುಗಳಿಗೆ ತೆರಳುತ್ತಿದ್ದರು.

ನಮ್ಮ ನಾಡಿನಲ್ಲಿ ಗುಬ್ಬಿ ಮಲ್ಲಣಾರ್ಯರನ್ನು ಮೊದಲುಗೊಂಡು ಇಂದಿನ ವರೆಗೆ ಪ್ರವಚನಕಾರರನ್ನು ಲೆಕ್ಕ ಹಾಕಿದರೆ ನೂರಕ್ಕೂ ಮೇಲ್ಪಟ್ಟು ಪ್ರವಚನಕಾರರು ಸಿಗುತ್ತಾರೆ. ಕೆಲವು ಪ್ರವಚನಕಾರರು ರಾಜ್ಯದ ಕೆಲವು ಭಾಗಗಳಲ್ಲಿ ಪ್ರಸಿದ್ಧರಾಗಿದ್ದಾರೆ, ಇನ್ನೂ ಕೆಲವರು ನಾಡಿನ ತುಂಬೆಲ್ಲಾ ತಮ್ಮ ಪ್ರವಚನಗಳಿಂದ ಪ್ರಸಿದ್ಧರಾಗಿದ್ದು ಕಂಡು ಬರುತ್ತದೆ. ಭಾಲ್ಕಿಯ ಪಟ್ಟದ್ದೇವರು ಬೀದರ ಜಿಲ್ಲೆಯಲ್ಲಿ ಪ್ರವಚನಗಳಿಂದ ಪ್ರಸಿದ್ಧಿ ಪಡೆದಿದ್ದಾರೆ. ವಚನಸಾಹಿತ್ಯದ ಕುರಿತು ಪ್ರತಿದಿವಸ ಅವರ ಮಠದಲ್ಲಿ ಪ್ರವಚನ ಸಾಗುತ್ತ ಬಂದಿದೆ. ಇದರೊಂದಿಗೆ ನಾಡಿನಲ್ಲಿಯ ಹಲವಾರು ಮಹಾತ್ಮರನ್ನು, ವಿದ್ವಾಂಸರನ್ನು ಮಠಕ್ಕೆ ಬರಮಾಡಿಕೊಂಡು, ಅವರಿಂದ ವಚನ ತತ್ವಶಾಸ್ತ್ರಗಳ ಮೇಲೆ ಪ್ರವಚನ ಕೊಡಿಸುವ ಪದ್ಧತಿಯನ್ನು ಇಟ್ಟುಕೊಂಡಿದ್ದಾರೆ. ತಾವು ನೀಡಿದ ಬಸವತತ್ತ್ವದ ಮೇಲಿನ ಪ್ರವಚನಗಳನ್ನು ಅನೇಕ ಕೃತಿರೂಪಗಳಲ್ಲಿ ಪ್ರಕಟಪಡಿಸಿದ್ದಾರೆ. ಕಾಗವಾಡದ ಡಾ. ಶ್ರದ್ಧಾನಂದ ಸ್ವಾಮಿಗಳ ಪ್ರವಚನವಂತೂ ತುಂಬಾ ಮಾರ್ಮಿಕವಾದದ್ದು. ಅವರು ಪ್ರವಚನಗಳ ಮೂಲಕ ಸಮಾಜ ಸುಧಾರಣೆಗೆ ಕಾರಣವಾಗಿದ್ದಾರೆಂದು ಹೇಳಬಹುದು. ಆಯಾ ಕಾರ್ಯಕ್ರಮಗಳಲ್ಲಿ ಆ ಮಠ ಆ ಸ್ವಾಮಿಜಿಯವರನ್ನು ಕುರಿತು ಪದಪದ್ಯ ರಚಿಸುವ ಕವಿ ರಚನಾಚಾರ್ಯರು ಆಗಿದ್ದಾರೆ.

ಬೀದರ ಜಲ್ಲೆಯ ಚಳಕಾಪುರದ ಶ್ರೀ ಶಿವಕುಮಾರ ಸ್ವಾಮಿಗಳ ಹೆಸರನ್ನು ಹೇಳದೇ ಇದ್ದರೆ ತಪ್ಪಾದೀತು.! ನಾಲ್ಕಾರು ಭಾಷೆಯಲ್ಲಿ ಪ್ರಾವೀಣ್ಯತೆ ಪಡೆದ ಅವರು ಶಿವಶರಣರ ವಚನಗಳನ್ನು, ನಿಜಗುಣ ಶಿವಯೋಗಿಗಳ ಮತ್ತು ಸರ್ಪಭೂಷಣ ಶಿವಯೋಗಿಗಳ ಪದ್ಯಗಳನ್ನು ಜನರ ಮನಸ್ಸಿಗೆ ಪರಿಣಾಮ ಬೀರುವಂತೆ ಪ್ರವಚನ ಮಾಡುವರು.

ಅಥಣಿಯ ಮೋಟಗಿ ಮಠದ ಪೂಜ್ಯರ ಪ್ರವಚನವೆಂದರೆ ಆಳವಾದ ಅನುಭವ ಸರಳ ಮಾತುಗಳಿಂದ ಸಮಯಕ್ಕನುಸರಿಸಿ ವಚನಗಳಿಂದ ಪ್ರವಚನ ನೀಡುವ ಅವರ ಶೈಲಿ ಬಹುಜನರಿಗೆ ಮೆಚ್ಚುಗೆಯಾಗಿದೆ. ಹುಕ್ಕೇರಿಯ ಚಂದ್ರಶೇಖರ ಶಿವಾಚಾರ್ಯರ ಪ್ರವಚನವೆಂದರೆ ಬೇಸಿಗೆಯಲ್ಲಿ ಬರುವ ರಭಸದ ಮಳೆ ಬಂದತೆ. ಪ್ರವಚನ ಮಾಡುವ ಕಾರ್ಯವೊಂದನ್ನೇ ಮಾಡದೇ ಹಲವಾರು ಗ್ರಂಥಗಳನ್ನು ರಚಿಸಿ ನಾಡಿಗೆ ಕೊಡಮಾಡಿದ್ದಾರೆ. ಆಧ್ಯಾತ್ಮದ ವಿಚಾರಗಳನ್ನು ತಮ್ಮ ಗ್ರಂಥಗಳಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ. ಅವರ ಗ್ರಂಥಗಳು ಗದ್ಯದಲ್ಲೂ-ಪದ್ಯಗಳಲ್ಲೂ ಮೂಡಿಬಂದಿವೆ.

ಪ್ರವಚನಗಳ ಮೂಲಕ ನಾಡಿನಲ್ಲಿ ಜನಜಾಗೃತಿ ಮಾಡಿದ ಹಲವರ ಹೆಸರನ್ನು ಇಲ್ಲಿ ನೋಡಬಹುದು. ಬಸವಕಲ್ಯಾಣದ ವಿ. ಸಿದ್ಧರಾಮಣ್ಣನವರು, ಶಿವಲಿಂಗ ಶಾಸ್ತ್ರಿಗಳು ಗದಗ, ಬಸವಲಿಂಗ ಪಟ್ಟಾಧ್ಯಕ್ಷರು ತೆಲಸಂಗ, ಗುಡಗೇರಿಯ ಬಸವಲಿಂಗ ಸ್ವಾಮಿಗಳು, ನರಗುಂದ

ತಾಲ್ಲೂಕಿನ ಸುರಕೋಡ ಗ್ರಾಮದ ವೀರಯ್ಯನವರು, ಅಡ್ನೂರದ ಕಲ್ಲಿನಾಥ ಶಾಸ್ತ್ರಿಗಳು, ದೊಡ್ಡಬಳ್ಳಾಪುರದ ಶಿವದೇವ ಶಾಸ್ತ್ರಿಗಳು, ಮುಂತಾದವರು.

ಕೊಲ್ಹಾಪುರ ಸಮೀಪವಿರುವ ಕನ್ಹೇರಿಯ ಕಾಡಸಿದ್ಧೇಶ್ವರ ಮಠದ ಶ್ರೀಗಳ ಪ್ರವಚನ ಉತ್ತರ ಕರ್ನಾಟಕದ ಜನರಲ್ಲಿ, ಮಹಾರಾಷ್ಟ್ರ ರಾಜ್ಯದ ದಕ್ಷಿಣ ಭಾಗದಲ್ಲಿ ಪ್ರಸಿದ್ಧವಾಗಿವೆ. ಆಡು ಭಾಷೆಯಲ್ಲಿ ಪ್ರವಚನ ನೀಡುವುದು ಅವರ ವಿಶಿಷ್ಟ ಶೈಲಿಯಾಗಿದೆ. **ಇವರ ಪ್ರವಚನ ಕೃಷಿ ಮತ್ತು ಆರೋಗ್ಯದ ಕುರಿತದ್ದಾಗಿದೆ.**

ಪ್ರವಚನ ಹೇಳುವವರು ಇಂಥ ಧರ್ಮದವರಾಗಲೀ, ಇಂಥ ಜಾತಿಯವರಾಗಲೀ ಹೇಳಬೇಕೆಂದೇನೂ ಅಲ್ಲ. ಶರಣರು ರಚಿಸಿದ ವಚನಗಳು ಮಾನವ ಕುಲವನ್ನು ಉದ್ಧರಿಸಲಿಕ್ಕೆ ಹುಟ್ಟಿಕೊಂಡವುಗಳು. ಅವುಗಳನ್ನು ಯಾರು ಬೇಕಾದರೂ ಅರ್ಥೈಸಿಕೊಂಡು ಸುಂದರವಾಗಿ ಹೇಳಬಹುದು. ಧರ್ಮದಿಂದ ಇಸ್ಲಾಂದವನಾದರೂ, ಶರಣರ ವಚನಗಳನ್ನು ಆಧಾರವಾಗಿಟ್ಟುಕೊಂಡು ಪ್ರವಚನ ಹೇಳುವವರಲ್ಲಿ ಮಹಾಲಿಂಗಪುರದ ಶ್ರೀ ಇಬ್ರಾಹಿಂ ಸುತಾರವರು ಮತ್ತು ಇಳಕಲ್‌ದ ಶ್ರೀ ಲಾಲಹುಸೇನ ಕಂದಗಲ್ಲರು ಇವರ ಪ್ರವಚನದ ಶೈಲಿಯನ್ನು ಗಮನಿಸಿದರೆ ಜಾತ್ಯಾತೀತತೆಯನ್ನು ಪ್ರತಿನಿಧಿಸುವದು, ಪೂಜ್ಯ ಸಹಜಾನಂದರ ಪ್ರವಚನವು ಬಹು ಜನರ ಮೆಚ್ಚುಗೆಗೆ ಪಾತ್ರವಾಗಿವೆ.

ವಿಶ್ವಗುರು ಬಸವಣ್ಣ ಪ್ರತಿಪಾದಿಸಿದ ಹಲವಾರು ವಿಚಾರ-ವಿಷಯಗಳಲ್ಲಿ ಲಿಂಗ ಸಮಾನತೆಯೂ ಒಂದು. ಅನುಭವ ಮಂಟಪದಲ್ಲಿ ಸಾಕಷ್ಟು ಜನ ಮಹಿಳೆಯರು ಚಿಂತನೆಗಳಲ್ಲಿ ತೊಡಗಿರುವದು ಕಂಡುಬರುತ್ತದೆ. ಶರಣರ ಅನುಭವದ ನುಡಿಗಳಷ್ಟೇ ಶರಣೆಯ ಅನುಭವದ ಮಾತುಗಳು ಚಿಂತನೆಗೆ ಕಾರಣವಾಗಿವೆ. ಅದರಂತೆ ಇಂದೂ ಸಹ ಹಲವಾರು ಮಹಿಳೆಯರು ಪುರುಷರಂತೆ ಪ್ರವಚನ ನೀಡಲು ಸಮರ್ಥರಾಗಿದ್ದುರೆಂಬುದನ್ನು ಗಮನಿಸಬಹುದು. ಶಿವಶರಣರ ವಚನಗಳನ್ನು, ಶಾಸ್ತ್ರ ವಿಷಯಗಳನ್ನು ಆಳವಾಗಿ ಅಭ್ಯಾಸ ಮಾಡಿ ಸಾಮಾನ್ಯ ಜನರಿಗೆ ತಿಳಿಯುವಂತೆ ಪ್ರವಚನ ಮಾಡಲು ಸಿದ್ಧರಾಗಿದ್ದಾರೆ. ಪ್ರವಚನದೊಂದಿಗೆ ವಚನಗಳನ್ನು ರಾಗಬದ್ಧವಾಗಿ ಹಾಡಲು ಕಲಿತಿರುವದೊಂದು ವಿಶೇಷವಾಗಿದೆ.

ಮಾತೆ ಮಹಾದೇವಿಯವರಲ್ಲದೆ, ಶರಣೆ ನೀಲಮ್ಮ ತಾಯಿ ಅಸುಂಡಿ, ಬೆಳಗಾವಿಯ ವಾಗ್ದೇವಿ ತಾಯಿಯವರು, ಉಮಾದೇವಿಯವರು, ಸೋಲಾಪುರದ ಸುಗ್ಗಲಾದೇವಿಯವರು, ಬೀದರದ ಅಕ್ಕ ಅನ್ನಪೂರ್ಣದೇವಿಯವರನ್ನು ಇಲ್ಲಿ ಸ್ಮರಿಸಬಹುದು. ಇವರಿಗಿಂತ ಪೂರ್ವದಲ್ಲಿ ಶರಣ ಜೀವನ ಸಾಗಿಸಿ ಶರಣರ ವಚನಗಳ, ಬಗ್ಗೆ ಅಪಾರ ಅಭಿಮಾನವಿಟ್ಟುಕೊಂಡ,

ಅವುಗಳ ಮೇಲೆ ವಿದ್ವತ್ ಪೂರ್ಣವಾದ ಪ್ರವಚನ ನೀಡುತ್ತಿದ್ದ ಜಯದೇವಿ ತಾಯಿ ಲಿಗಾಡೆಯವರನ್ನು ಮರೆತರೆ ತಪ್ಪಾದೀತು. ಜೀವಿತ ಕಾಲದಲ್ಲಿ ನುಡಿದಂತೆ ನಡೆದ, ಶರಣ ಜೀವನ ಸಾಗಿಸಿದ ತಾಯಿಯವರವರು. ಸೋಲಾಪುರ, ಅಕ್ಕಲಕೋಟ, ಸಾಂಗ್ಲಿ, ಜತ್ತ ಮುಂತಾದ ಕಡೆಗಳಲೆಲ್ಲ ಶರಣರ ವಚನಗಳ ಕುರಿತು ಪ್ರವಚನ ಮಾಡಿದ ಶ್ರೇಯಸ್ಸು ಅವರಿಗೇ ಸಲ್ಲಬೇಕು. ಅಲ್ಲದೇ ಸಿದ್ಧರಾಮೇಶ್ವರರ ಪುರಾಣ ರಚಿಸಿದ್ದಾರೆ. ಇವರಲ್ಲದೆ ಈಶ್ವರೀ ಮಹಾವಿದ್ಯಾಲಯದ ಬ್ರಹ್ಮಕುಮಾರಿಯದು ತಮ್ಮ ಪರಂಪರೆಯನ್ನು ಸಮಾಜದಲ್ಲಿ ಪ್ರವಚನಗಳ ಮೂಲಕ ಪ್ರಕಟಪಡಿಸುತ್ತಿದ್ದಾರೆಂಬುದನ್ನು ಇಲ್ಲಿ ಉಲ್ಲೇಖಿಸಬೇಕಾಗುತ್ತದೆ.

ಕೆಲವು ಮಹಿಳೆಯರು ಕೆಲವು ದಿನಗಳ ವರೆಗ ಪ್ರವಚನ ನೀಡಿದರೆ, ಕೆಲವು ಮಹಿಳೆಯರು ತಿಂಗಳು ಪರಿಯಂತರ ಪ್ರವಚನ ಕೊಡುತ್ತಿರುವದನ್ನು ಕಾಣಬಹುದಾಗಿದೆ. ನೀಲಮ್ಮ ತಾಯಿಯವರು ಅಸುಂಡಿ, ವಾಗ್ದೇವಿಯವರು, ಬೀದರಿನ ಅಕ್ಕ ಅನ್ನಪೂರ್ಣದೇವಿಯವರು ನಿರಂತರವಾಗಿ ಒಂದು ಊರಲ್ಲಿ ಪ್ರವಚನ ಮಾಡುವದನ್ನು ಕಾಣುತ್ತೇವೆ. ಅವರು ಮಾಡಿದ ಪ್ರವಚನದ ಒಂದು ದಿನದ ವಿಚಾರವನ್ನು ಇಲ್ಲಿ ಗಮನಿಸಬಹುದು. "ಕಾಯಕ ತತ್ವ" ಕುರಿತು ಅವರ ಪ್ರವಚನದ ಸಾರಾಂಶ ಹೀಗಿದೆ 'ಬಸವ ಧರ್ಮದ ಪ್ರಕಾರ ಕುಳಿತು ಅವರ ಉಣ್ಣುವದು ಕಳ್ಳತನ. ಬ್ರಹ್ಮ ಸತ್ಯ ಜಗತ್ತು ಮಿಥ್ಯ. ಸ್ವರ್ಗ-ನರಕ, ದೇವಲೋಕ-ಮೃತ್ಯಲೋಕವೆಂಬ ಶೈವ ಮತ್ತು ವೈದಿಕರ ಕಲ್ಪನೆಗಳನ್ನು ನಿರಸನಗೈದು ಬಸವಣ್ಣನವರು, ಮರ್ತ್ಯಲೋಕವೆಂಬ ಕರ್ತಾರನ ಕಮ್ಮಟವೆಂದು ಪ್ರತಿಪಾದಿಸಿದರು. ಅವರಿಗೆ ಅಲ್ಲಿ-ಇಲ್ಲಿ ಎಂಬ ಭೇದವಿರಲಿಲ್ಲ. ಅಂತರಂಗ ಬಹಿರಂಗ ಬೇರೆಯಾಗಿರಲಿಲ್ಲ. ಅದಕ್ಕಾಗಿಯೇ ಅವರು ಬದುಕಿಗೆ ತುಂಬಾ ಮಹತ್ವ ಕೊಟ್ಟರು. ವಾಸ್ತವಿಕ ಜೀವನವನ್ನು ಅಲ್ಲಗಳೆಯಲಿಲ್ಲ. ಆದ್ದರಿಂದಲೇ ಕರ್ಮಸಿದ್ಧಾಂತವನ್ನು ತೊಡೆದು ಹಾಕಿ ಕಾಯಕ ಸಿದ್ಧಾಂತವನ್ನು ಸ್ಥಾಪಿಸಿದರು.

ಕಾಯಕಕ್ಕೂ-ಕೆಲಸಕ್ಕೂ ಅಪಾರ ಅಂತರವಿದೆ. ಕರ್ಮ, ಕ್ರಿಯೆ ಹಾಗೂ ಕಾಯಕವನ್ನು ಹೀಗೆ ವ್ಯಾಖ್ಯಾನಿಸಬಹುದು. ತನಗೆ ಮಾತ್ರ ಲಾಭವಾಗುವಂತಿದ್ದರೆ ಅದು ಕರ್ಮವೆನಿಸುತ್ತದೆ. ತನಗೆ ಹಾಗೂ ತನ್ನ ಕುಟುಂಬಕ್ಕೆ ಮಾತ್ರ ಹಿತಕರವಾಗುತ್ತಿದ್ದರೆ ಅದು ಕ್ರಿಯೆ ಎಂದು ಕರೆಯಿಸಿಕೊಳ್ಳುತ್ತದೆ. ತನಗೂ ತನ್ನ ಕುಟುಂಬಕ್ಕೂ ಮತ್ತು ಸಮಾಜವನ್ನು ಹಿತಕರವಾದ ಕೆಲಸವು ಕಾಯಕ ಎಂದು ಎನ್ನಿಸಿಕೊಳ್ಳುವದು. ಕಾಯಕವೆನ್ನುವದು ಸತ್ಯಶುದ್ಧವಾದುದು. ಮರ್ತ್ಯದ ಬಾಳುವಿಗೆ ಮಂಗಲಕರವಾದುದು. ಪ್ರತಿಯೊಬ್ಬ ವ್ಯಕ್ತಿಯೂ ಕಾಯಕಕ್ಕೆ ಒಳಗಾಗಬೇಕೆಂಬುದು ಶರಣರ ವಾಣಿಯಾಗಿತ್ತು. ಕಾಯಕ-ದಾಸೋಹ ಇವೆರಡೂ ಶರಣತ್ವಕ್ಕೆ ಮೆರಗುಕೊಡಬಲ್ಲವು. "ಕಾಯಕ ಮತ್ತು ದಾಸೋಹ" ಸಿದ್ಧಾಂತವನ್ನು ವಿಶ್ವಕ್ಕೆ ಬಸವಣ್ಣನವರು ನೀಡಿದ ಅದ್ಭುತ

ಕೊಡುಗೆಯಾಗಿದೆ! ಸಮೃದ್ಧ ಜೀವನಕ್ಕೆ ಅದು ಅಡಿಪಾಯವಾಗಿದೆ. ಜಗತ್ತಿನ ಯಾವುದೇ ಧರ್ಮದ ಗ್ರಂಥಗಳನ್ನು ಅವಲೋಕಿಸಿದರೆ "ಕಾಯಕ" ಎಂಬ ಶಬ್ದ ಸಿಗಲಾರದು. ಹಲವಾರು ವಿಚಾರಗಳಿಗೆ ಆ ಧಾರ್ಮಿಕ ಗ್ರಂಥಗಳು ಮಹತ್ವಕೊಟ್ಟರೆ, ಬಸವಣ್ಣನವರು ಕಾಯಕಕ್ಕೆ ಮಹತ್ವ ಕೊಟ್ಟರು. ಕಾಯಕದಲ್ಲಿ ನಿರತರಾದವರಿಗೆ "ಕಾಯಕಯೋಗಿ" ಎಂದು ಕರೆದಿರುವದು ವಿಶೇಷವಾಗಿದೆ. ಕಾಯಕದಲ್ಲಿ ಮೇಲು-ಕೀಳು ಎಂಬ ಭೇದವಿಲ್ಲ. ಚಪ್ಪಲಿ ಹೊಲಿಯುವ ಸಮಗಾರನ ಕಾಯಕ ಮಂತ್ರಿಯ ಕೆಲಸದಷ್ಟೇ ಮಹತ್ವದೆಂದು ಹೇಳಿ ಕಾಯಕಕ್ಕೆ ಗೌರವ ತಂದುಕೊಟ್ಟ ಮಹಾನುಭಾವರವರು. ಸಂಪತ್ತಿಗೆ ಸಮಾನ ಹಂಚಿಕೆಗೆ ಕಾರಣವಾಗುವ "ಕಾಯಕ-ದಾಸೋಹ ಸಿದ್ಧಾಂತದಿಂದ ಜಗತ್ತಿಗೆ ಹೊಸ ಅರ್ಥವ್ಯವಸ್ಥೆಯನ್ನು ಕಲ್ಪಿಸಿದರು."

ಮೇಲಿನ ಪ್ರವಚನದ ಸಾರಾಂಶವನ್ನು ಗಮನಿಸಿದರೆ ಅಕ್ಕ ಅನ್ನಪೂರ್ಣಾದೇವಿಯವರ ಅನುಭವ ಮಾತಿನ ಮಧುರತೆ ಕೇಳುಗರಿಗೆ ವೇದ್ಯವಾಗುವದು. ಸರಳವಾದ ಭಾಷೆಯನ್ನು ಪ್ರವಚನದಲ್ಲಿ ಬಳಸುತ್ತಿರುವದರಿಂದ ಜನರ ಮನಸ್ಸಿಗೆ ಪ್ರವಚನದ ಅರ್ಥ ಸುಲಭವಾಗುವದು. ಈ ರೀತಿಯಾಗಿ ಮಹಿಳೆಯರೂ ಸಹ ತಮ್ಮದೇ ಆದ ರೀತಿಯಲ್ಲಿ ಪ್ರವಚನ ನೀಡುತ್ತಿರುವದು ಸಂತಸದ ಸಂಗತಿಯಾಗಿದೆ. ಅನುಭವ-ಅಭ್ಯಾಸ ಎರಡನ್ನು ಮೇಳೈಸಿಕೊಂಡು ಅವರು ಪ್ರವಚನ ಮಾಡುತ್ತಿರುವದು ಶುಭ ಸೂಚನೆಯೆಂದು ಭಾವಿಸಬೇಕಾಗುವದು.

ಇವರಂತೆಯೇ ಅಸುಂಡಿ ನೀಲಮ್ಮ ತಾಯಿಯವರೂ ಸಹ ತಮ್ಮದೇ ಆದ ರೀತಿಯಲ್ಲಿ ಪ್ರವಚನ ಮಾಡಿ ಜನರಲ್ಲಿ ಜಾಗೃತಿ ಮಾಡುತ್ತಿರುವದನ್ನು ನಾವೆಲ್ಲ ಗಮನಿಸಬಹುದು. ಅಡುಗೆ ಮನೆಗೆ, ಪಡಸಾಲೆಗೆ ಅಥವಾ ಮನೆಯ ಒಳಗೆ ಮಾತ್ರ ಬದುಕು ಸಾಗಿಸುತ್ತ ಬಂದಿರುವ ಮಹಿಳೆಯರು ಇಂದು ಶರಣರ-ತತ್ವಜ್ಞಾನಿಗಳ ವಿಚಾರಗಳನ್ನು-ವಿಷಯಗಳನ್ನು ಅಳವಡಿಸಿಕೊಂಡು ಸಮಾಜಕ್ಕೆ ಪ್ರವಚನಗಳ ಮೂಲಕ ಮಾಡುತ್ತಿರುವ ಕೊಡುಗೆ ಸಣ್ಣದೇನಲ್ಲ.

ಕರ್ನಾಟಕದಲ್ಲಿ ಕಂಡುಬಂದಿರುವ ಹಲವಾರು ಪ್ರವಚನಕಾರರನ್ನು ವಿವರಿಸಿದರೂ ಇನ್ನೂ ಕೆಲವರು ಎಲೆ-ಮರೆಯಕಾಯದಂತೆ ಉಳಿದಿರುವರು.

ನಾನಾದರೂ ಸಹ ಹಲವಾರು ಕಡೆಗೆ ಪ್ರವಚನ ನೀಡುತ್ತಿರುವೆ. ಅದಕ್ಕೆಲ್ಲ ಕಾರಣ ನನ್ನ ಪರಿಸರ, ಮಹಾತ್ಮರ ಆಶೀರ್ವಾದ ಹಾಗೂ ಸತ್ಸಂಗವೆಂದೇ ನನ್ನ ಭಾವನೆ. ಬೀದರದಿಂದ ಮೈಸೂರವರೆಗೆ ನಾಡಿನ ೧೬ ಜಿಲ್ಲೆಯಲ್ಲಿ ತಿಂಗಳ ಪರಿಯಂತರ ಪ್ರವಚನ ನೀಡಿದ್ದೇನೆಂದು ಹೇಳಬಯಸುವೆ. ಪ್ರವಚನವು ಪ್ರವಚನಕಾರರ ಬಾಯಿಂದ ಬಂದರೂ ಅದು ದೇವತ್ವದ ಕಡೆಗೆ ಒಯ್ಯುವ ಸಾಧನವಾಗಿದೆ.

## ೫.೧. ೧೯ ರಿಂದ ೨೧ನೇ ಶತಮಾನದವರೆಗಿನ ಪ್ರಮುಖ ಪ್ರವಚನಕಾರರು :

### ೧) ಶ್ರೀಮದ್‌ಥಣಿ ಮುರಘೇಂದ್ರ ಶಿವಯೋಗಿಗಳು :

ಅಥಣಿಯ ಪೂಜ್ಯ ಶ್ರೀ ಮುರಘೇಂದ್ರ ಶಿವಯೋಗಿಗಳು ಶಿವಶರಣರ ವಚನಗಳನ್ನು ತಲೆಯ ಮೇಲಿಟ್ಟುಕೊಳ್ಳುತ್ತಿದ್ದರಂತೆ! ಬಸವಣ್ಣನವರಿಗೆ ಅವರು "ಅಪ್ಪ" ಎನ್ನುತ್ತಿದ್ದರು. ಅಪ್ಪ ಬರೆದ ವಚನದ ಕಟ್ಟುಗಳನ್ನು ತಲೆಯಮೇಲಿಟ್ಟುಕೊಂಡು ನಂತರ ಕೈಯಲ್ಲಿ ಹಿಡಿದುಕೊಂಡು ಅದರಲ್ಲಿಯ ಒಂದು ವಚನದ ಮೇಲಿಂದ ಪ್ರವಚನ ಮಾಡುತ್ತಿದ್ದರು. ಅಥಣಿ ಶಿವಯೋಗಿಗಳು ಅದೇ ತಾಲೂಕಿನ ನದಿ ಇಂಗಳಗಾಂವಿಯವರು.

ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರಭಾವಿತ ಮಹಾತ್ಮರಲ್ಲಿ ಇವರೂ ಒಬ್ಬರು. ಹಾನಗಲ್ಲ ಕುಮಾರ ಸ್ವಾಮಿಗಳು, ಬಿದರಿಯ ಕಲ್ಮಠದ ಶಿವಯೋಗಿಗಳು, ಸಿದ್ಧಾರೂಢರು, ಗದಗದ ಶಿವಾನಂದರು ಇವರೆಲ್ಲರೂ ಸಮಕಾಲೀನರು.

ಅಥಣಿಯ ಮುರಘೇಂದ್ರ ಶಿವಯೋಗಿಗಳು ಪ್ರವಚನಗಳನ್ನು ಕೊಟ್ಟಿರುವದು ಕಡಿಮೆ. ಬಂದ ಭಕ್ತರಿಗೆ ಸಾಯಂಕಾಲ ತಮ್ಮದೇ ಆ ವಿಚಾರಗಳನ್ನು ಹೇಳುತ್ತಿದ್ದರು. ಅವರಲ್ಲಿ ಒಂದು ವಿಶೇಷತೆ ಇತ್ತು. ಅದೇನಂದರೆ ಬಸವಣ್ಣನವರಿಗೆ, ಬಸವೆಂದಾಗಲಿ, ಬಸವೇಶ್ವರನೆಂದಾಗಲಿ ಎಂದೂ ಉಚ್ಚರಿಸದೇ 'ಅಪ್ಪ' ಎಂದೇ ಕರೆಯುತ್ತಿದ್ದರು. 'ಅಪ್ಪನ ವಚನ'ಗಳನ್ನೇ ಬಿಡಿಸಿಹೇಳುತ್ತಿದ್ದರು. ಶ್ರಾವಣ ಮಾಸದಲ್ಲಿ ಪ್ರವಚನಕಾರರನ್ನು ಕರೆಯಿಸಿ ಅವರಿಂದ ಜನರಿಗೆ ಪ್ರವಚನ ಹೇಳಿಸುತ್ತಿದ್ದರು. ನಂತರದಲ್ಲಿ ಅವರೂ ಹದಿನೈದರಿಂದ ಇಪ್ಪತ್ತು ನಿಮಿಷಗಳವರೆಗೆ ಪ್ರವಚನ ಮಾಡಿ ಮುಗಿಸುತ್ತಿದ್ದರು. ಅಂತಹ ಸಮಯದಲ್ಲಿ ಅವರು ಬಸವೇಶ್ವರರ ವಚನಗಳನ್ನು ಆಧಾರವಾಗಿಟ್ಟುಕೊಳ್ಳುತ್ತಿದ್ದರು. ಅವರು ಮೇಲಿಂದ ಮೇಲೆ ಹೇಳುವ ವಾಕ್ಯಗಳೆಂದರೆ "ನೋಡ್ರಿಪಾ ಅಪ್ಪ ಹೇಳ್ಯಾನ ಕಾಯಕವೇ ಕೈಲಾಸಂತ ಅಂದ್ರ ದುಡಿದ ಉಣ್ಣಾಕ ಕಲಿಬೇಕು. ಕುಂತ ಉಣ್ಣಬಾರದ. ದುಡದ ತಿಂದ್ರ ಶರೀರ ಚಲೋ ಇರ್ತದ, ಕುಟುಂಬ ಚಲೋ ಆಗತತ, ನಾಡ, ದೇಶ ಶ್ರೀಮಂತ ಆಗತತ, ದಿನಾ ಏಳುವಾಗ ಮಲಗುವಾಗ ಶಿವಾ-ಶಿವಾ ಅನ್ನಬೇಕು, ಜಾತಿ ಬೇಧ ಮಾಡಬ್ಯಾಡ್ರಿ, ಆಹಾರ ಕೆಡಸಬ್ಯಾಡಿ, ಬಡವರಿಗೆ ಸಹಾಯ ಮಾಡಾಕ ಕಲಿಯಿರಿ" ಇವು ಅವರ ಪ್ರವಚನದ ವಾಕ್ಯಗಳು. ಭಕ್ತರು ಕರೆದಲ್ಲಿ ಚಕ್ಕಡಿಗಳಲ್ಲಿ ಪ್ರಯಾಣಿಸಿ ಆ ಊರುಗಳಲ್ಲಿ ಬಸವಣ್ಣನವರ ವಚನಗಳನ್ನು ವಿವರಿಸಿ ಹೇಳಿ ಸಮಾಜ ಸುಧಾರಿಸಲು ಪ್ರಯತ್ನಿಸಿದ ಮಹಾತ್ಮರಿವರು. ಇವರ ಕರಕಮಲಸಂಜಾತರೇ ಧಾರವಾಡದ ಮೃತ್ಯುಂಜಯ ಅಪ್ಪಗಳು.

## ೨) ಧಾರವಾಡದ ಪೂಜ್ಯ ಮೃತ್ಯುಂಜಯ ಶ್ರೀಗಳು :

ಉತ್ತರ ಕರ್ನಾಟಕದ ಶಿಕ್ಷಣ ಕ್ಷೇತ್ರಕ್ಕೆ ಬಹುದೊಡ್ಡ ಕಾಣಿಕೆ ಸಲ್ಲಿಸಿದ ಮಹಾತ್ಮರೆಂದರೆ ಧಾರವಾಡದ ಮೃತ್ಯುಂಜಯ ಅಪ್ಪಗಳು. ೮-೪-೧೮೮೮ ರಂದು ಹುಬ್ಬಳ್ಳಿ ತಾಲೂಕಿನ ಇಂಗಳಳ್ಳಿಯಲ್ಲಿ ಇವರ ಜನನ. ಅಥಣಿಯ ಮುರಘೇಂದ್ರ ಶಿವಯೋಗಿಗಳ ಶಿಷ್ಯರಾಗಿ ಅಲ್ಲಿಯೇ ಸಂಸ್ಕೃತ-ಕನ್ನಡ ಭಾಷೆಗಳ ಅಭ್ಯಾಸ ಮಾಡಿದರು. ಶಿವಶರಣರ ವಚನಗಳ ಅಧ್ಯಯನವನ್ನು ಆಳವಾಗಿ ಮಾಡಿದರು. ಶಿವಯೋಗಿಗಳ ಆಜ್ಞಾನುಸಾರ ಮೊದಲು ದಾವಣಗೇರಿ ವಿರಕ್ತಮಠಕ್ಕೆ ಅಧಿಕಾರಿಗಳಾದರು. ಅದೇ ಸಮಯದಲ್ಲಿ ಹರ್ಡೇಕರ ಮಂಜಪ್ಪನವರ ಪರಿಚಯವಾಯಿತು. ಇಬ್ಬರೂ ಕೂಡಿ ೧೯೧೩ ರಲ್ಲಿ ಬಸವ ಜಯಂತಿಯನ್ನು ಪ್ರಾರಂಭಿಸಿದರು. ೨೦೧೩ ಕ್ಕೆ ಬಸವ ಜಯಂತಿ ಆಚರಣೆಯ ಶತಮಾನೋತ್ಸವ ಜರಗುತ್ತಿದ್ದು ಇದಕ್ಕೆ ಕಾರಣರವರು. ದಾವಣಗೇರಿಯಿಂದ ಧಾರವಾಡದ ಮುರಘಾಮಠಕ್ಕೆ ಅಧಿಕಾರಿಯಾಗಿ ಬಂದರು. ಅಂದಿನ ಕಾಲದಲ್ಲಿ ಪ್ರೌಢಶಾಲಾ ಶಿಕ್ಷಣ ಕಾಲೇಜ ಶಿಕ್ಷಣ ಕಲಿಯುವದಂದರೆ ಗಗನ ಕುಸುಮವಾಗಿತ್ತು. ಇದನ್ನೆಲ್ಲ ಅರಿತ ಮೃತ್ಯುಂಜಯ ಅಪ್ಪಗಳು ವಿದ್ಯಾರ್ಥಿಗಳಿಗಾಗಿ ಉಚಿತ ಪ್ರಸಾದ ನಿಲಯ ಪ್ರಾರಂಭಿಸಿದರು. ಬೆಳಗಾವಿ, ಧಾರವಾಡ, ವಿಜಾಪುರ ಹಾಗೂ ಕಾರವಾರ ಜಿಲ್ಲೆಗಳ ಬಡ ವಿದ್ಯಾರ್ಥಿಗಳಿಗೆ ಈ ಉಚಿತ ಪ್ರಸಾದ ನಿಲಯ ಕಾಮಧೇನು-ಕಲ್ಪವೃಕ್ಷವಾಯಿತು. ಜಾತಿ-ಕುಲಗಳನ್ನು ನೋಡದೇ ಬಡವಿದ್ಯಾರ್ಥಿಗಳಿಗೆ ಇಲ್ಲಿ ಪ್ರವೇಶ ದೊರೆಯಿತು. ವಿದ್ಯಾರ್ಥಿಗಳ ವಸತಿಗಾಗಿ ಅರವತ್ಮೂರು ಕೊಠಡಿಗಳನ್ನು ನಿರ್ಮಿಸಿ ಅವುಗಳಿಗೆ ಅರವತ್ಮೂರು ಪುರಾತನರ ಹೆಸರುಗಳನ್ನು ಪ್ರತಿಯೊಂದು ಕೊಠಡಿಗೆ ಇಟ್ಟರು. ವಿದ್ಯಾರ್ಥಿಗಳಿಗೆ ಬೇಕಾಗುವ ಧಾನ್ಯ ಸಂಗ್ರಹಕ್ಕಾಗಿ ಗ್ರಾಮೀಣ ಪ್ರದೇಶಗಳಿಗೆ ಚಕ್ಕಡಿಯಲ್ಲಿ ಪ್ರಯಾಣಿಸಿ ಅಲ್ಲಿ ಬಸವಣ್ಣನವರ ಹಾಗೂ ಇತರ ಶರಣ-ಶರಣಿಯರ ಕುರಿತು ಬಲ್ಲವರಿಂದ ಪ್ರವಚನ ಮಾಡಿಸಿ ತಾವು ಪ್ರವಚನ ಮಾಡಿ ಧಾನ್ಯ ಸಂಗ್ರಹಿಸಿಕೊಂಡು ಬರುತ್ತಿದ್ದರು. ವಸತಿ ನಿಲಯದಲ್ಲಿದ್ದ ಮಕ್ಕಳು ಸಾಮೂಹಿಕ ಪ್ರಾರ್ಥನೆ ಮಾಡುವದು ಕಡ್ಡಾಯ. ಜಾತಿಗಳ ಬಗ್ಗೆ ಮಾತನಾಡಬಾರದೆಂದು ಶ್ರೀಗಳ ಕಟ್ಟಪ್ಪಣೆ. ಅವರ ವಸತಿ ನಿಲಯದಲ್ಲಿದ್ದುಕೊಂಡು ವಿದ್ಯಾಭ್ಯಾಸ ಪೂರೈಸಿ ಉನ್ನತ ಹುದ್ದೆಯಲ್ಲಿ ಇದ್ದವರು ಸಾಕಷ್ಟಿದ್ದಾರೆ. ದೇಶ-ವಿದೇಶಗಳಲ್ಲಿ ಇಂದು ಸಂಸಾರ ಸಾಗಿಸುತ್ತಿದ್ದಾರೆ. ಅವರ ಪ್ರವಚನ ದೀರ್ಘವಲ್ಲದಿದ್ದರೂ ನಾಲ್ಕೇ ಮಾತುಗಳಲ್ಲಿ ಸಮಾಜ ಸುಧಾರಣೆಯ ಮಾತುಗಳನ್ನು ಆಡುತ್ತಿದ್ದರು. "ಮೃಧುವಾಗಿ ಮಾತನಾಡಿರಿ, ಜಾತಿ-ಕುಲ ನಾವೇ ಮಾಡಿಕೊಂಡವುಗಳು, ಶರೀರ ಶ್ರಮದಿಂದ ಸುಖ ಸಿಗುವದು. ಮತ್ತೊಬ್ಬರ ಮನಸ್ಸಿಗೆ ನೋವಾಗದಂತೆ ಜೀವನ ಸಾಗಿಸುವದು ಉತ್ತಮ ಮಕ್ಕಳಿಗೆ ಶಿಕ್ಷಣ ಕೊಡಿಸುವದು ಪಾಲಕರ ಕರ್ತವ್ಯ" ಈ ಮಾತುಗಳು ಅವರ

ಪ್ರವಚನಗಳಲ್ಲಿ ಇರುತ್ತಿದ್ದವು. ಒಂದು ದೃಷ್ಟಿಯಿಂದ ನೋಡಿದರೆ "ಅವರ ಮಂದಹಾಸಿನ ಮುಖವೇ ಒಂದು ಒಳ್ಳೆಯ ಪ್ರವಚನವಾಗಿತ್ತು." ೧೩-೧೧-೧೯೬೪ ರಂದು ಶಿವನಲ್ಲಿ ಬೆರೆತರು. ಅವರು ಸ್ಥಾಪಿಸಿದ ಉಚಿತ ಪ್ರಸಾದ ನಿಲಯ ಇಂದಿಗೂ ಶಿಕ್ಷಣ, ಅನ್ನ, ಆಶ್ರಯ ನೀಡುತ್ತಿದೆ.

## ೩) ವೇದಾಂತ ಕೇಸರಿ ಪೂಜ್ಯ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಜ್ಞಾನಯೋಗಾಶ್ರಮ ಬಿಜಾಪುರ.

ಈ ದೇಶದ ಅಧ್ಯಾತ್ಮದ ಅಮರ ಸಂದೇಶವನ್ನು ಪ್ರಪಂಚದಲ್ಲಿ ಪ್ರಸಾರಗೈಯುವ ಮಹಾಕಾರ್ಯವನ್ನು ಅನಾದಿಕಾಲದಿಂದಲು ಅನೇಕ ಮನುಮುನಿ, ಸಂತ ಸಾಧು, ಶರಣರು ಮಾಡುತ್ತಲೇ ಬಂದಿದ್ದಾರೆ. ಅಂಥವರ ಮಾಲಿಕೆಯಲ್ಲಿ ಪೂಜ್ಯ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೊಬ್ಬರು ಎಂದು ಹೇಳಲು ನಮಗೆ ಸಂತೋಷವೆನಿಸುತ್ತದೆ. ಅವರು ಅನೇಕ ವರ್ಷಗಳಿಂದಲೂ ಅಧ್ಯಾತ್ಮ ತತ್ತ್ವದ ಪ್ರಚಾರದ ಕಾರ್ಯವನ್ನು ಕೈಕೊಂಡು ಕನ್ನಡ ನಾಡನ್ನಷ್ಟೇ ಅಲ್ಲ, ಕನ್ನಡದ ಗಡಿಯನ್ನು ಕೂಡ ಸುತ್ತಿದ್ದಾರೆ.

ಶ್ರೀಗಳವರು ಕಠಿಣವಾದ ಅಧ್ಯಾತ್ಮ ಪ್ರಕ್ರಿಯೆಗಳನ್ನು ಸಾಮಾನ್ಯರಿಗೂ ಕೂಡ ಸಹಜವಾಗಿ, ಸುಲಭವಾಗಿ ತಿಳಿಯುವ ಶೈಲಿಯಲ್ಲಿ ಪ್ರತಿಪಾದನೆ ಮಾಡಿರುವುದು ಶ್ಲಾಘನೀಯವಾದುದಾಗಿದೆ. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಗುರುವಿನಲ್ಲಿ ಅಚಲವಾದ ನಿಷ್ಠೆ ಉಳ್ಳವರು. ತಮ್ಮ ಪ್ರವಚನದಲ್ಲಿ ಅಡಿಗಡಿಗೆ, ತಮ್ಮ ಕೃತಜ್ಞತಾ ಭಾವವನ್ನು ವ್ಯಕ್ತಗೊಳಿಸುತ್ತಾರೆ. ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳುವ ನಿಜವಾದ ರೀತಿಯನ್ನು ಈ ಶತಮಾನದ ಕನ್ನಡಿಗರಿಗೆ ಹಾಗೂ ಮಹಾರಾಷ್ಟ್ರದವರಿಗೆ ತಿಳಿಸಲು ಅವತರಿಸಿದ ಕ್ರಾಂತಿಪುರುಷರೇ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು. ಶ್ರೀ ನಿಜಗುಣರ ಶಾಸ್ತ್ರದ ನಿಜಮರ್ಮವನ್ನು ಜನತೆಗೆ ಬಿತ್ತರಿಸಲು ಅವತರಿಸಿದ ಪುಣ್ಯ ಪುರುಷರೇ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಗದುಗಿನ ಶ್ರೀ ಶಿವಾನಂದ ಪ್ರಭುಗಳನ್ನು ನಾವು ಕರ್ನಾಟಕದ ಶ್ರೀ ರಾಮಕೃಷ್ಣ ಪರಮಹಂಸರೆಂದು ಕರೆದರೆ, ಶ್ರೀ ಮಲ್ಲಿಕಾರ್ಜುನರನ್ನು ಕರ್ನಾಟಕದ ವಿವೇಕಾನಂದರೆಂದು ರೂಢಿಯಲ್ಲಿ ಗುರುತಿಸಲಾಗಿದೆ.

ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ನಿಜವಾಗಿ ಪ್ರವಚನ ಪಟುಗಳು. ಗಂಭೀರವಾದ ವ್ಯಕ್ತಿತ್ವ ಪ್ರಶಾಂತ ಹಾಗೂ ಪ್ರಸನ್ನ ಮುಖ ಮುದ್ರೆ. ಆಳವಾದ ಶಾಸ್ತ್ರಜ್ಞಾನ. ಪದ ಪದಾರ್ಥಗಳ ಅಂತರಾಳದಲ್ಲಿ ಹೊಕ್ಕು ಅವುಗಳನ್ನು ಸ್ವತಃ ಚನ್ನಾಗಿ ಅರಿತುಕೊಂಡು, ಪರರು ಸುಲಭವಾಗಿ ಅರಿತುಕೊಳ್ಳುವಂತೆ ಪ್ರತಿಪಾದಿಸುವ ಜಾಣ್ಮೆ. ಎಷ್ಟು ಹೊತ್ತು ಪ್ರತಿಪಾದಿಸಿದರೂ ತಾಳ್ಮೆಯನ್ನು

ಕಳೆದುಕೊಳ್ಳದ ಧೀರತನ; ನಡುನಡುವೆ ನಕ್ಕು ನಗಿಸುವ ರೀತಿ. ಹಿತಮಿತ ಮೃದುವಚನಗಳಿಂದ ಕೂಡಿದ ಉಚಿತ ಹಾವ ಭಾವಗಳನ್ನೊಳಗೊಂಡ ಸಮಯೋಚಿತ ಉದಾಹರಣೆಗಳು; ಪಂಡಿತ ಪಾಮರರನ್ನು, ಬಾಲಕರನ್ನು ಹಾಗೂ ಕಲಿತ, ಕಲಿಯದ ಹೆಣ್ಣು ಮಕ್ಕಳನ್ನು ಕೂಡ ಬೆರಗುಗೊಳಿಸುವ ಮಾತುಗಾರಿಕೆ, ಶ್ರೋತ್ರವೃಂದದ ಮಟ್ಟವನ್ನರಿತು ಮಾಡುವ ಪದ ಪ್ರಯೋಗ ಇವೇ ಮೊದಲಾದವುಗಳಿಂದ ಶ್ರೀ ಮಲ್ಲಿಕಾರ್ಜುನ ಶಿವಯೋಗಿಗಳು ಸರ್ವರಿಗೂ ಆದರಣೀಯರಾಗಿದ್ದಾರೆ.

ದೈವೀಸಂಪತ್ತು ಗುರುವಿನ ಅನುಗ್ರಹ ಹಾಗೂ ಆತ್ಮಪ್ರಸಾದಗಳಿಲ್ಲದೆ ಇಂಥ ಪ್ರಚಂಡ ಸಾಮರ್ಥ್ಯವನ್ನು ಸಂಪಾದಿಸುವದು ಅಸಾಧ್ಯ. "ಜಾಣರಂ ತಲೆದೂಗಿಸದೆ ನುಡಿದೊಡೆ, ಆ ಪದಕ್ಕೆ ಊಣೆಯಂಬಹುದೆಂದು, ಸರಸೋಕ್ತಿಯಿಂದೆ ಗೀರ್ವಾಣಪುರನಿಲಯ ಲಕ್ಷ್ಮೀವರಂತಾನೆ ಸಂಗೀತ ಸುಕಲಾ ನಿಪುಣನು; ವೀಣೆಯಿಂ ಗಾನಮಂ ನುಡಿಸುವಂದದೊಳು ಎನ್ನ ವಾಣಿಯಿಂ ಪೇಳಿಸಿದನೆಂದು ಅರಿದು, ಕೇಣಮಂ ತೊರೆದು ಪುರುಡಿಸುವರಂ ಜರೆದು ಕಿವಿದೆರೆದು ಕೇಳ್ವುದು ಎಲ್ಲಾ ಸುಜನರು"೫೩ ಎಂಬ ಲಕ್ಷ್ಮೀಶಕವಿಯ ಮಾತು ಉಚಿತವಾಗಿದೆ. ಶ್ರೀ ಶಿವಾನಂದ ಪ್ರಭುಗಳ ದಿವ್ಯ ಪ್ರಾಸಾದಿಕ ವಾಣಿಯೇ ಇವರ ನಾಲಿಗೆಯ ಮೇಲೆ ನರ್ತಿಸುವಾಗ, ಇವರಿಗೇತರ ಕೊರತೆ? ಗುರು ಶಿಷ್ಯನಿಂದ ಧನ್ಯನಾದ; ಶಿಷ್ಯ ಗುರುವಿನಿಂದ ಧನ್ಯನಾದ. ಇಂಥ ಗುರುಶಿಷ್ಯರ ಆದರ್ಶವನ್ನು ಸದಾ ನಮ್ಮ ಕಣ್ಣುಮುಂದೆ ಇರಿಸಿಕೊಂಡರೆ, ಕನ್ನಡಿಗರಾದ ನಾವೂ ಕೃತಾರ್ಥರಲ್ಲವೇ. ಚಿರಶಾಂತಿ; ಶಾಶ್ವತ ಸಮಾಧಾನ, ಒಂದು ದಿನವೂ ಕೂಡ, ಅವರು ಒಂದು ಮತವನ್ನು ನೇರವಾಗಿಯಾಗಲಿ, ಪರ್ಯಾಯದಿಂದಾಗಲಿ ಹೇಳಿದ್ದನ್ನು ಯಾರೂ ಕಂಡಿಲ್ಲ. ಇಂಥ ಹೃದಯಯೌದಾರ್ಯ ಸಂಪನ್ನರು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು. ಇಷ್ಟೇ ಅಲ್ಲ. ಸರ್ವಧರ್ಮಗಳ ಸಾರ ಒಂದೆ, ಸರ್ವ ಮತಗಳ ಗುರಿ ಒಂದೇ, ಸರ್ವಮಾನವರು ಸಾಧಿಸಬೇಕಾದುದು ಒಂದೇ ಎಂಬುದಾಗಿ ಇವರು ಮೇಲಿಂದ ಮೇಲೆ ಪ್ರತಿಪಾದಿಸುತ್ತಾರೆ. ಆದರೆ ಸಮನ್ವಯ ದೃಷ್ಟಿಯು ಮಾತ್ರ ಪ್ರತಿ ಮಾನವರಲ್ಲಿ ಬರಬೇಕೆಂದು ಇವರ ಉತ್ಕಟೇಚ್ಛೆ. ಪ್ರೇಮ, ಅಂತಃಕರಣ, ಔದಾರ್ಯ, ಶಾಂತಿ ಸಮಾಧಾನಗಳು ಎಲ್ಲೆಲ್ಲಿಯೂ ನೆಲೆಗೊಳ್ಳಬೇಕೆಂದು ಇವರ ಹಿರಿದಾದ ಆಸೆ.

---

೫೩ " " 'ಕವಿ ಲಕ್ಷ್ಮೀಶ' ಭಾಗ ಲಕ್ಷ್ಮೀಶನ ಕಥಾಲಾಪ ಕೌಶಲ ಲೇ-ತಿರುಮಲೆ ತಾತಾಚಾರ್ಯ ಶರ್ಮಾ. ಪುಟಸಂಖ್ಯೆ-೧೩೮. ಪ್ರ-ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು. (೧೯೭೯)

ತಮ್ಮ ಪ್ರವಚನದಲ್ಲಿ ಇವರು ಮೇಲಿಂದ ಮೇಲೆ ಉದಾಹರಣೆಗೆ ತೆಗೆದುಕೊಳ್ಳುವ ಮಹಾತ್ಮರನ್ನು ನೋಡಿದರೆ ಇವರಲ್ಲಿಯ ಸಮನ್ವಯ ದೃಷ್ಟಿಯು ತೋರಗಾರಿಕೆಯದಲ್ಲವೆಂಬುದು ಕಂಡು ಬರದಿರದು. ಶ್ರೀ ಪುರಂದರ ಕನಕರಂಥ ವೈಷ್ಣವದಾಸರ, ಶ್ರೀ ಸರ್ಪಭೂಷಣ ಶಿವಯೋಗಿ, ಶ್ರೀ ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಮುಂತಾದ ವೀರಶೈವರ, ರಾಮದಾಸ, ತುಕಾರಾಮ ಮುಂತಾದ ಹಿಂದೀ ಹಾಗೂ ಮರಾಠೀ ಸಾಧುವರ್ಯರ, ಅನೇಕ ಜೈನ, ಬೌದ್ಧರ, ಶ್ರೀ ಶಂಕರ ರಾಮಾನುಜ, ಮಧ್ವಾಚಾರ್ಯವರ್ಯರ ವಚನ ವಾಙ್ಮಯದಲ್ಲಿಯ ಸಾರವನ್ನೆಲ್ಲ ಒಳ್ಳೇ ರಸವತ್ತಾಗಿ ತಮ್ಮ ಶ್ರೋತೃವೃಂದದ ಮುಂದಿರಿಸಿ, ಅವರ ಮನವನ್ನು ತಣಿಸುತ್ತಿದ್ದರು.

ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ಗುಣಗ್ರಾಹತೆಗೆ ವಿಶಾಲ ಹೃದಯಕ್ಕೆ, ವಿಶ್ವಸಮತಾ ಭಾವನೆಗಳಿಗೆ ಅವರು ಉಪದೇಶಿಸಲು ಉಪಯೋಗಿಸುವ ಪುಸ್ತಕಗಳ ಹಾಗೂ ಅವರ ಶ್ರೋತೃವೃಂದವು ಸಾಕಷ್ಟು ಸಾಕ್ಷಿಯಾಗಿವೆ, ಭಗವದ್ಗೀತೆ, ಸಿದ್ಧಾಂತ ಶಿಖಾಮಣಿಗಳಂಥ ಪ್ರೌಢ ಹಾಗೂ ವಿಶ್ವಮಾನ್ಯ ಸಂಸ್ಕೃತ ಗ್ರಂಥಗಳು. ಶ್ರೀ ನಿಜಗುಣರ ಕೃತಿಗಳಂಥ ಅದ್ವೈತ ಪ್ರತಿಪಾದಕ ಸರ್ವಮಾನ್ಯ ಗ್ರಂಥಗಳು ಪ್ರಭುಲಿಂಗಲೀಲೆಯಂಥ ಸುಶ್ರಾವ್ಯಮಪ್ಪ ಕಾವ್ಯಂಗಳು ಇವೇ ಮೊದಲಾದ ಅನೇಕ ಮತ, ಅಭಿಪ್ರಾಯಗಳಿಂದ ಒಡಗೂಡಿದ ಗ್ರಂಥಗಳನ್ನು ಅವರು ತಮ್ಮ ಪ್ರವಚನದ ವಿಷಯಗಳನ್ನಾಗಿ ಮಾಡಿಕೊಂಡಿದ್ದಾರೆ. ರಾಮ, ಕೃಷ್ಣ, ಬುದ್ಧ, ಬಸವ, ಶಂಕರ, ಮಧ್ವ, ರಾಮಾನುಜ, ತುಕಾರಾಮ, ರಾಮದಾಸ, ಮಹಮ್ಮದ, ಕಬೀರ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗದುಗಿನ ಶ್ರೀ ಶಿವಾನಂದ, ಪೈಗಂಬರ, ಕ್ರೈಸ್ತ, ಸಾಕ್ರೇಟಿಸ್, ಮಹಾತ್ಮಗಾಂಧಿ, ವಿನೋಭಾ ಭಾವೆ ಮೊದಲಾದವರನ್ನು ಯುಗಪುರುಷರನ್ನಾಗಿ, ಶಕಪುರುಷರನ್ನಾಗಿ, ಅವತಾರೀ ಪುರುಷರನ್ನಾಗಿ ಭಾವಿಸಿದ್ದಾರೆ. ವೈಷ್ಣವ ತತ್ವೋಪದೇಶ ನಡೆದಲ್ಲಿ ವೈಷ್ಣವ ವೃಂದವನ್ನು, ಶೈವ ತತ್ವೋಪದೇಶ ನಡೆದಾಗ ಕೇವಲ ವೀರಶೈವರನ್ನು, ಕುರಾನ ಪ್ರತಿಪಾದನೆ ನಡೆದಾಗ ಕೇವಲ ಮುಸಲ್ಮಾನ ವೃಂದವನ್ನು ಮಾತ್ರ, ಆಗಾಗ್ಗೆ ನೋಡುವದುಂಟು. ಆದರೆ ಶ್ರೀ ಮಲ್ಲಿಕಾರ್ಜುನರ ಶ್ರೋತೃವೃಂದದಲ್ಲಿ ಹಿಂದೂಗಳು, ಮುಸಲ್ಮಾನರು, ಕ್ರಿಶ್ಚನ್ನರು, ಫಾರ್ಸಿ ಜನರು, ಮಾರವಾಡಿಗಳು, ಬ್ರಾಹ್ಮಣರು. ಅದರಲ್ಲಿ ವೈಷ್ಣವರು, ಕಾಣ್ವರು, ಸ್ಮಾರ್ತರು, ವೀರಶೈವರು, ಅವರಲ್ಲಿ ಅನೇಕ ಪಂಗಡಗಳಿಗೆ ಸೇರಿದವರು, ಅಂತ್ಯಜರು, ಜೈನರು, ಬೌದ್ಧರು, ಮಹಾರಾಷ್ಟ್ರದವರು, ಕರ್ನಾಟಕದವರು ಎಲ್ಲರೂ ಸೇರುತ್ತಿದ್ದರು. ಕಾರಣ ಅವರ ಪ್ರವಚನ ಸಮಾನತಾ ಭಾವವನ್ನು ತಿಳಿಸುತ್ತಿತ್ತು. ಯಾರೊಬ್ಬರ ಟೀಕೆ ಟಿಪ್ಪಣಿಗಳಿರಲಿಲ್ಲ.

ಆತ್ಮೋದ್ಧಾರದ ಕಾರ್ಯವಲ್ಲದೆ ಸಮಾಜೋದ್ಧಾರದ ಕಾರ್ಯವನ್ನೂ ಕೈಕೊಂಡಿದ್ದಾರೆ. ಶ್ರೀ ಮಲ್ಲಿಕಾರ್ಜುನ ಸ್ವಾಮಿವರ್ಯರು ನಮ್ಮ ವಿಜಯಪುರದಲ್ಲಿ ಆ ಭವ್ಯವಾದ ಶಿವಾನುಭವ ಮಂಟಪವನ್ನು ನಿರ್ಮಿಸಲು ಕಾರಣರಾದವರು ಬೇರಾವ ಸಾಮಾನ್ಯರಿಂದ ಈ ಅಸಾಮಾನ್ಯವಾದ ಕಾರ್ಯವು ಸಾಧಿಸಬಹುದಾಗಿತ್ತೇ? ಗೋಕಾಕದಲ್ಲಿಯ ಅಕ್ಕನಮಂದಿರ, ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆಗಳನ್ನು ಕಟ್ಟಿಸಲು ಸುಮಾರು ಐದು ಲಕ್ಷ ರೂಪಾಯಿ ನಿಧಿಯನ್ನು ಕೂಡಿಸಿ, ಅವರನ್ನು ಕೊನೆಯವರೆಗೂ ಉದ್ಧರಿಸಿದ ಶ್ರೇಯಸ್ಸು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಿಗೆ ಸಲ್ಲುವದಿಲ್ಲವೇ? ಗೋಕಾಕದಲ್ಲಿಯ ಅಕ್ಕನಮಂದಿರಕ್ಕಾಗಿ, ಶ್ರೀ ಬಸಪ್ಪಣ್ಣಾ ಭೂತಿ ಇವರಿಂದ ಸ್ಥಳದಾನ ಪಡೆದು, ಅಲ್ಪವಧಿಯಲ್ಲಿಯೇ ಒಂದು ದೊಡ್ಡ ಮೊತ್ತದಿಂದ ಕೂಡಿದ ಕಟ್ಟಡ ನಿಧಿಯನ್ನು ಕೂಡಿಸಿದ್ದರಿಂದ, ಎಷ್ಟೋ ದಿನಗಳಿಂದ ಕನಸಾಗಿ ಉಳಿದಿದ್ದ ಅಲ್ಲಿಯ ಅಕ್ಕನಮಂದಿರವು ಇವರ ಅನುಗ್ರಹದಿಂದಲೇ ನನಸಾಗುವ ಶುಭಯೋಗವು ಅಲ್ಲಿಯ ಅಕ್ಕನ ಬಳಗಕ್ಕೆ ಪ್ರಾಪ್ತವಾಗಲಿಲ್ಲವೇ? ಸಂಕೇಶ್ವರದಂಥ ಸ್ಥಳದಲ್ಲಿ ಐವತ್ತು ಸಾವಿರ ರೂಪಾಯಿಗಳನ್ನು ಅಲ್ಪಾವಧಿಯಲ್ಲಿಯೇ ಕೂಡಿಸುವದೇನು ಸಣ್ಣ ಕಾರ್ಯವೇ? ಜಮಖಂಡಿ ತಾಲೂಕಿನ ಹುನ್ನೂರ ಗ್ರಾಮದಲ್ಲಿ, ನಾಲ್ಕಾರು ವರುಷಗಳಿಂದ ಪ್ರಯತ್ನ ಮಾಡಿದರೂ ಅಲ್ಲಿಯ ಚಿಕ್ಕ ಮಕ್ಕಳಿಗಾಗಿ ಶಾಲಾ ಕಟ್ಟಡವನ್ನು ಕಟ್ಟಿಸುವ ವ್ಯವಸ್ಥೆಯಾಗಿದ್ದಿಲ್ಲ. ಈ ಕಾರ್ಯವನ್ನು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಕೂಡಲೇ ಮಾಡಿದರಲ್ಲದೆ, ಬೇರೊಂದು ವಿದ್ಯಾಲಯವನ್ನು ಕಟ್ಟಿಸುವ ವ್ಯವಸ್ಥೆಯನ್ನು ಲೀಲಾಮಾತ್ರದಿಂದ ಮಾಡಿಸಿ, ಅದರ ಶಂಕುಸ್ಥಾಪನೆಯ ಕಾರ್ಯವನ್ನು ಸಹ ಸ್ವಹಸ್ತದಿಂದ ಮಾಡಿಸಿ, ಅದರ ವೇದಾಭ್ಯಾಸವು ಸದಾಕಾಲ ಸುಗಮವಾಗಿ ಸಾಗಲೆಂಬ ಸದುದ್ದೇಶದಿಂದ ಜ್ಞಾನಮಂದಿರವೊಂದನ್ನು ಕಟ್ಟಿಸುವ ಏರ್ಪಾಡನ್ನು ಮಾಡಿಕೊಟ್ಟರು. ಒಂಭತ್ತು ವರ್ಷಗಳ ಹಿಂದೆ, ಜಮಖಂಡಿಯಲ್ಲಿ ಇವರಿಂದಲೇ ಸ್ಥಾಪಿತವಾದ ಕಾಡಸಿದ್ಧೇಶ್ವರ ಬಡವಿದ್ಯಾರ್ಥಿಗಳ ಉಚಿತಪ್ರಸಾದ ನಿಲಯವು, ಇವರ ಕೃಪೆಯಿಂದಲೇ ಈಗ ಹೊಸ ರೂಪವನ್ನು ತಾಳಿರುವದು. ಅಲ್ಲಿ ಭಗವದ್ಗೀತೆಯನ್ನು ಸಮಗ್ರವಾಗಿ ಬೋಧಿಸಿ, ಅದರ ಹದಿನೆಂಟು ಅಧ್ಯಾಯಗಳಿಗೆ ದ್ಯೋತಕವಾಗಿ ಹದಿನೆಂಟು ಕೋಣೆಗಳನ್ನು ನಿರ್ಮಿಸುವ ಮಹತ್ಕಾರ್ಯವನ್ನು ಲೀಲಾಮಾತ್ರದಿಂದ ನೆರವೇರಿಸಿದ್ದಾರೆ ಮಲ್ಲಿಕಾರ್ಜುನ ಸ್ವಾಮಿಗಳು.

ಇಷ್ಟೆಲ್ಲ ಮಹಾತ್ಕಾರ್ಯಗಳನ್ನು, ತಮ್ಮ ಪ್ರವಚನವನ್ನು ಸಾಗಿಸಿದಾಗ, ಸ್ವಲ್ಪವೂ ಶ್ರಮ ತೆಗೆದುಕೊಳ್ಳದೆ, ಯಾವ ನಟನೆಯಿಲ್ಲದೆ ಅತ್ತಿತ್ತ ಓಡಾಡದೇ, ಲೀಲಾಮಾತ್ರದಿಂದ ಜರುಗಿಸುವದೊಂದು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳ ವೈಶಿಷ್ಟ್ಯವೆಂದು ಹೇಳಬಹುದು.

ಗದುಗಿನ ಶಿವಾನಂದ ಮಠದ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ತಮ್ಮ ಪ್ರವಚನದಿಂದ ಕನ್ನಡ ನಾಡಿನಲ್ಲಿ ತುಂಬ ಪ್ರಸಿದ್ಧಿ ಪಡೆದಿರುವದನ್ನು ಎಲ್ಲರೂ ಬಲ್ಲರು. ಆರಾರು ತಿಂಗಳುಗಳು, ಎಂಟೆಂಟು ತಿಂಗಳುಗಳು ಒಂದೆಡೆಯಲ್ಲಿ, ಎರಡೂ ಹೊತ್ತು ಪ್ರವಚನ ಸಾಗಿಸಿದರೂ ಜನತೆಯಲ್ಲಿ ಇನ್ನೂ ಕೇಳಬೇಕೆನ್ನುವ ಹಂಬಲ ಹೆಚಾಗುತ್ತದೆಯೇ ವಿನಃ ಕಡಿಮೆಯಾಗದು. ಅವರದು ಪ್ರಾಸಾದಿಕ ವಾಣಿ. ಆಧ್ಯಾತ್ಮಿಕ ಅನುಭವವನ್ನು ತಿಳಿತಿಳಿಯಾಗಿ ತಿಳಿಸುವರು. ನಿತ್ಯ ಜೀವನದ ಕಷ್ಟಕೋಟಲೆಗಳಲ್ಲಿ ಸಿಲುಕಿ ತೊಳಲಾಡುವ ಜನತೆಗೆ ಅವರ ಉಪದೇಶವು ಜ್ಞಾನಪೀಯೂಷವಾಗಿತ್ತು. ಇಂತಹ ಪ್ರವಚನಗಳನ್ನು ಸಂಪಾದನೆ ಸಾಹಿತ್ಯಿಕ ಭಾಷೆಯಲ್ಲಿದೆ. ಇದು ಅವರ ಶೈಲಿಯನ್ನೇ ಹಿಡಿದಿಟ್ಟರೆ ಹೆಚ್ಚು ಅಧಿಕೃತವಾಗುತ್ತಿತ್ತು.

### ೪) ಪೂಜ್ಯ ಜಗದ್ಗುರು ಶ್ರೀ ಲಿಂಗಾನಂದರು :

ಶ್ರೀ ಹಳಕಟ್ಟಿಯವರನ್ನು ವಚನ ಪಿತಾಮಹರೆಂದು ಕರೆದರೆ ಪೂಜ್ಯ ಲಿಂಗಾನಂದರನ್ನು ಪ್ರವಚನ ಪಿತಾಮಹನೆಂದು ಕರೆಯುತ್ತಾರೆ. ಹುಟ್ಟಿದ್ದು ಬಸವನಾಡು ಬಸವನ ಬಾಗೇವಾಡಿ ತಾಲೂಕಿನ ಮನಗೂಳಿ ಗ್ರಾಮ. ಓದಿದ್ದು ಬಿ ಎ, ತಿಳಿದದ್ದು ತತ್ವಜ್ಞಾನ, ಆಯ್ದುಕೊಂಡದ್ದು ಶರಣ ಸಂಸ್ಕೃತಿಯ ವಚನವಾಙ್ಮಯ ಪ್ರವಚನಕಾರರಾಗಿ ವಚನದ ಗಜರಾಜರಾಗಿ ಪ್ರವಚನ ದಾಸೋಹಗೈದ ಕೀರ್ತಿ ಪೂಜ್ಯ ಅಪ್ಪಾಜಿಯವರಿಗೆ ಸಲ್ಲಬೇಕು.

ವಿಶ್ವಗುರು ಬಸವಣ್ಣನವರು ಬೋಧಿಸಿದ ವಿಶ್ವಧರ್ಮದ ಸಾರವನ್ನು ಪ್ರವಚನಗಳ ಮೂಲಕ ಮಾತ್ರವಲ್ಲ ಸಾಹಿತ್ಯ ಕೃತಿಗಳ ಮೂಲಕ ಮಾಡಿದರು. ಅವರು ನೀಡಿದ ಪ್ರವಚನ ಸಾರಗಳ ಪುಸ್ತಕಗಳ ಪ್ರವಚನ ಸಾಹಿತ್ಯಕ್ಕೆ ಸಾಕ್ಷಿ. ಒಬ್ಬ ಪ್ರವಚನಕಾರರು ಅನೇಕ ಧರ್ಮ ಪ್ರಚಾರಕ ಪ್ರವಚನಕಾರರನ್ನು ತರಬೇತಿಗೊಳಿಸಿ ಅನೇಕ ಸಂಸ್ಥೆಗಳನ್ನು ಕಟ್ಟಿ ಧಾರವಾಡದಲ್ಲಿ ಪ್ರಪ್ರಥಮ ಮಹಿಳಾ ಜಗದ್ಗುರು ಪೀಠವನ್ನು ಜಗನ್ಮಾತಾ ಅಕ್ಕಮಹಾದೇವಿ ಅನುಭಾವ ಪೀಠಯೆಂಬ ಹೆಸರಿನಲ್ಲಿ ಸ್ಥಾಪಿಸಿ ಮಾತೆ ಮಹಾದೇವಿಯನರನ್ನು ಪ್ರಥಮ ಅಧಿಕಾರಿಯನ್ನಾಗಿ ಮಾಡಿದ ಕೀರ್ತಿ ಸಂಪೂಜ್ಯರಿಗೆ ಸಲ್ಲುತ್ತದೆ. ಪೂಜ್ಯರ ಪ್ರವಚನ ಕೇಳಲು ಬಂದ ಹುಡುಗಿ ಜಗದ್ಗುರು ಪೀಠವನ್ನು ಅಲಂಕರಿಸಿದಳೆಂಬಲ್ಲಿಗೆ ಅವರ ಪ್ರವಚನದ ಪರಿಣಾಮವನ್ನು ನಾವು ಊಹಿಸಬಹುದು. ಸ್ತ್ರೀ ಸಮಾನತಾ ತತ್ವವನ್ನು ಎತ್ತಿ ಹಿಡಿದವರು, ಕ್ರಾಂತಿಕಾರಿ ವಾಗ್ಮಿಗಳು, ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ವಿಶ್ವಕಲ್ಯಾಣ ಮಿಷನ್ ಸಂಸ್ಥೆಯನ್ನು ಸ್ಥಾಪಿಸಿದರು, ಅದರ ಅಧ್ಯಕ್ಷರಾಗಿ ಆ ಸಂಸ್ಥೆಯನ್ನು ಬೃಹತ್ತಾಗಿ ಬೆಳೆಸಿದರು, ಬಸವಣ್ಣನವರ ಐಕ್ಯಕ್ಷೇತ್ರ ಕೂಡಲಸಂಗಮ ಕ್ಷೇತ್ರವನ್ನು ಸರ್ವಾಂಗ ಸುಂದರವಾಗಿ ಕಟ್ಟಿದವರು. ಬಸವಧರ್ಮ ಪೀಠ

ರಚಿಸಿದವರು. ಇವರು ಅವಿಶ್ರಾಂತ ಕ್ರಿಯಾಮೂರ್ತಿಗಳು. ನಾಡಿನಾದ್ಯಂತ ಚರಿಸಿದ ಚರ ಜಂಗಮರು. ಜನಮಾನಸದಲ್ಲಿ ಬಸವ ತತ್ವದ ಬೀಜಗಳನ್ನು ಬಿತ್ತಿ ಬಸವ ಭಕ್ತಿ ವಾತಾವರಣವನ್ನು ನಿರ್ಮಾಣ ಮಾಡಿ ಬಸವಯುಗಕ್ಕೆ ನಾಂದಿ ಹಾಡಿದರು. ಜಂಗಮಜ್ಯೋತಿಯಾದರು. ಅವರದು ಪ್ರವಚನದ ಸಾರ್ಥಕ ಬಾಳುವೆ ೧೩-೦೧-೧೯೭೨ ರಂದು ಬಸವಧರ್ಮದ ಮಹಾಜಗದ್ಗುರು ಪೀಠವೇರಿದರು. ೩೦-೦೬-೧೯೯೫ ರಂದು ಲಿಂಗೈಕ್ಯರಾದರು.

ಶರಣರ ವಿಶ್ವಧರ್ಮದ ಉದಾತ್ತವಾದ, ಉನ್ನತವಾದ, ನಿತ್ಯ ನೂತನವಾದ ಸತ್ಯಗಳು ಪ್ರಪಂಚದ ಮೂಲೆ-ಮೂಲೆಗೂ ಹರಡಿ ಮಾನವರ ಹೃದಯಾಂತರಾಳದಲ್ಲಿ ಹದುಳ ಭಾವವನ್ನು ಹುಟ್ಟಿಸಿದವು. ಜೀವನದ ಎಲ್ಲರಂಗಗಳಲ್ಲಿ ಅನ್ಯಾಯ, ಅಸತ್ಯ, ಅನೀತಿ, ಅಸಮತೆಗಳು ತಾಂಡವಾಡುತ್ತಿರುವ ದಿನಮಾನಗಳಲ್ಲಿ ಸಮಾಜದ ಸ್ವಾಸ್ಥ್ಯಕ್ಕೆ ಪ್ರವಚನ ದಿವ್ಯ ಔಷಧಿ ಅಶಾಂತಿಯ ಕಗ್ಗತ್ತಲೆಯಲ್ಲಿ ತಡವಡಿಸುತ್ತಿರುವ ಇಂದಿನ ಶರವೇಗದ ಯುಗದಲ್ಲಿ ಶರಣರ, ಸಂತರ, ಅನುಭಾವಿ ಶಿವಯೋಗಿಗಳ, ಸುಜ್ಞಾನದ ಶಾಂತಿ ಜ್ಯೋತಿಯು ಕವಿದ ಕತ್ತಲೆಯನ್ನು ದೂರ ತಳ್ಳುತ್ತದೆ. ಶರಣರ ತತ್ವಗಳು ಎಷ್ಟೇ ಘನವಾಗಿದ್ದರೂ ಸರಿಯಾದ ಪ್ರಚಾರವಿಲ್ಲದ ಕಾರಣ ಜನಸಾಮಾನ್ಯರಿಗೆ ಮುಟ್ಟದ ಆ ಸಂದರ್ಭದಲ್ಲಿ ಶ್ರೀಗಳು ಪ್ರವಚನ ಆರಂಭಿಸಿದರು.

ಹುಟ್ಟು ಹೋರಾಟಗಾರರು ಬಸವತತ್ವದ ಅನುಷ್ಠಾನ ಉದ್ದೀಪನೆಗಾಗಿ ಅಹರ್ನಿಸಿ ಶ್ರಮಿಸಿದವರು. ಪೂಜ್ಯಶ್ರೀ ಲಿಂಗಾನಂದರು. ನಾಡಿನುದ್ದಗಲಕ್ಕೂ ಸಂಚರಿಸಿ ಹರಿವ ಗಂಗೆಯಂತೆ ಜ್ಞಾನವನ್ನೀಯುತ್ತ, ಉರಿವ ಜ್ಯೋತಿಯಂತೆ ಅರಿವಿನ ಬೆಳಕನ್ನು ಚೆಲ್ಲುತ್ತ ಭುವನಕ್ಕೆ ಬೆಳಕಾಗಿ ಬಸವತತ್ವದ ಲಿಂಗಾಯತಧರ್ಮದ ದಂಡನಾಯಕರಾಗಿ ಶರಣ ಸಾಹಿತ್ಯದ ಪ್ರಚಾರ-ಪ್ರಸಾರ, ಪ್ರಕಟನೆ ಮಾಡುತ್ತ ಜಗತ್ತಿನ ಇತಿಹಾಸದಲ್ಲಿಯೇ ಮೊಟ್ಟ ಮೊದಲ ಬಾರಿಗೆ ಸ್ತ್ರೀ, ಜಗದ್ಗುರು ಪೀಠ ಸ್ಥಾಪಿಸಿದ ಖ್ಯಾತಿ ಪೂಜ್ಯರಿಗೆ ಸಲ್ಲಬೇಕು.

"ಕೀರ್ತನ, ಪುರಾಣ, ಭಾಷಣ-ಉಪನ್ಯಾಸಗಳಲ್ಲಿರುವಂತೆ, ಕಥೆ ಮತ್ತು ತತ್ವವನ್ನೇ ಮುಖ್ಯವಾಗಿಡದೆ ಭಾವಬದ್ಧಗಳಿಗೆ ಆಹಾರವೊದಗಿಸುವ ಬುದ್ಧಿಜೀವಿ ವಿಚಾರವಾದಿಗಳು ಭಾವುಕ ಭಕ್ತ ಉಭಯತರನ್ನು ತಾಕಿಸುವಂತಹ ಒಂದು ವಿಶಿಷ್ಟ ಶೈಲಿಯನ್ನು ಪ್ರಪ್ರಥಮವಾಗಿ ಬೆಳಕಿಗೆ ತಂದ ಕೀರ್ತಿಗೆ ಸದ್ಗುರುಗಳು ಪಾತ್ರರಾಗಿರುವರು. ಪುರಾಣ, ಸಂಕೀರ್ತನೆಗಳಿಗೆ ಕೇವಲ ಮುದುಕರು, ವಿಧವೆಯರು ಸೇರುತ್ತಾರೆ, ಎಂಬ ಕಲ್ಪನೆಯೇ ಪ್ರಚಾರದಲ್ಲಿರುವಾಗ, ಬುದ್ಧಿಜೀವಿಗಳನ್ನು, ತರುಣರನ್ನು, ವಿದ್ಯಾರ್ಥಿವೃಂದವನ್ನು ಅತ್ಯದ್ಭುತವಾಗಿ ಆಕರ್ಷಿಸುವ ಕಿಂದರಿಜೋಗಿ ಪೂಜ್ಯ ಸ್ವಾಮೀಜಿ.

ಅವರ ವಿಶೇಷ ಶೈಲಿಯ ಎಷ್ಟು ಆಕರ್ಷಣೀಯವೆಂದರೆ ಉಳಿದೆಲ್ಲವನ್ನು ಬದಿಗೊತ್ತಿ ಜನರು ಕಿಕ್ಕಿರಿದು ನೆರೆದು ಪ್ರವಚನಗಳನ್ನು ಸವಿಯುತ್ತಾರೆ".೫೪ ಎಂದು ಪೂಜ್ಯ ಗಂಗಾಮಾತಾಜಿಯವರು, 'ಸದ್ಗುರು ಲಿಂಗಾನಂದರು' ಎಂಬ ಕಿರುಕೃತಿಯಲ್ಲಿ ನಮೂದಿಸಿದ್ದಾರೆ.

ಪ್ರವಚನ ಧರ್ಮ ಪ್ರಚಾರದ ಪವಿತ್ರಕ್ಕೆ ಅದೊಂದು ತಪಸ್ಸು. ಪ್ರವಚನವು ತನ್ನ ಮನಸ್ಸನ್ನು ವಿಕಾಸಗೊಳಿಸುವ, ತನ್ಮಯಗೊಳಿಸುವ ನೋವು ದಣಿವನ್ನು ಮರೆಸಿ ಆನಂದಲೋಕಕ್ಕೆ ಒಯ್ಯುವ ಸಮಷ್ಟಿ ತಪಸ್ಸು. ಧ್ಯಾನದಲ್ಲಿ ತನಗಷ್ಟೇ ಆನಂದಸಿದ್ಧಿ. ಪ್ರವಚನದಲ್ಲಿ ಸಹಸ್ರ-ಸಹಸ್ರಜನಕ್ಕೆ ಆನಂದಾನುಭೂತಿ. ಪ್ರವಚನವು ಅನೇಕ ಉನ್ನತ ಮಟ್ಟದ ಪ್ರಚಾರಕ ಸಾಧಕರನ್ನು ತರಬೇತುಗೊಳಿಸುವ ಶ್ರೇಷ್ಠ ಕ್ಷೇತ್ರ. ಪ್ರವಚನ ಕೇಳಿ ಪ್ರೇರೇಪಿತರಾದವರು ಅದೆಷ್ಟೋ ಜನ. ಬನಹಟ್ಟಿಯಲ್ಲಿ ನಮ್ಮ ಪ್ರವಚನ ಕೇಳಿದ ಒಬ್ಬ ಯುವಕ, 'ದುಶ್ಚಟಗಳನ್ನು ಬಿಟ್ಟು ಒಂದು ಅಂಗಡಿಯಲ್ಲಿ ಗುಮಾಸ್ತನಾಗಿ ಕೆಲಸಮಾಡುತ್ತಿದ್ದೇನೆ ನಾನೀಗ ವ್ಯಸನ ಮುಕ್ತ ಬದುಕನ್ನು ನಡೆಸಿದ್ದೇನೆ ತಮ್ಮ ಒಂದೊಂದು ಮಾತು ಬದುಕನ್ನು ಶ್ರೀಮಂತಗೊಳಿಸಿವೆ' ಎಂದಾಗ ನಮ್ಮ ಕಣ್ಣಲ್ಲಿ ನೀರಾಡಿತ್ತು.

ಇಂದ್ರಿಯಾನಂದ, ಬೌದ್ಧಿಕಾನಂದ ಮತ್ತು ಪರಮಾನಂದದಲ್ಲಿ ಒಂದು ನುಡಿ ನಾದಬಿಂದು ಕಳೆಗಳಿಗೆ ಪರಮಾನಂದವೇ ಶ್ರೇಷ್ಠ. ಪಾರಮಾರ್ಥ ಪಥದಲ್ಲಿ ಮುಂದುವರೆದ ಅನುಭಾವಿ ಜ್ಞಾನದ ಬೆಳಕಿನಲ್ಲಿ ಪರಮಸುಖಿಯಾಗಿರುತ್ತಾನೆ. ಅವನ ಅಪರಿಮಿತ ಅನುಭಾವವೇ ಪ್ರವಚನ ಸಾಹಿತ್ಯ ಪ್ರವಚನದ ಭಾಷೆ ಅದು ಹೃದಯದ ಭಾಷೆ. ಸೃಜನಶೀಲವಾದ ಪ್ರವಚನಕಾರನು ಹೃದಯದಿಂದ ಮಾತನಾಡುತ್ತಾನೆ. ಆದ್ದರಿಂದಲೇ ಆ ಮಾತುಗಳು ಹೃದಯವನ್ನು ಅರಳಿಸುತ್ತವೆ. ಆ ಅಮೂಲ್ಯ ನುಡಿಗಳು ಸಾಧಕನಿಗೆ ದಾರಿದೀಪಗಳು. ಅಂತರಂಗದಿಂದ ಹೊರಹೊಮ್ಮಿದ ಬೆಳಕಿನ ನುಡಿಗಳು ಪ್ರವಚನದ ನುಡಿಗಳು. ತರ್ಕ ಹಾಗೂ ಪಾಂಡಿತ್ಯಕ್ಕೆ ಅತೀವಾದ ಒಂದು ಮಹತ್ತರ ದರ್ಶನ ಅಲ್ಲಿರುತ್ತದೆ. ಪ್ರವಚನ ಸಾಹಿತ್ಯದಲ್ಲಿ ಸತ್ಸಂಗದ ನೆರಳು, ಪರಮಪ್ರೇಮದ ಅನುಭೂತಿ, ಅಮೃತತ್ವದ ಸವಿ. ಅಮರತ್ವದ ಅನುಭವ, ಮೋಕ್ಷದ ಗುರಿ ಎಲ್ಲವೂ ಇದರಲ್ಲಿ ಅಡಕವಾಗಿರುತ್ತದೆ. ಬಹಳ ದಿನಗಳಿಂದ ಮನಕ್ಕೆ ಅಂಟಿದ ಕಲೆಗಳನ್ನು ಕಳೆಯಲು ಪ್ರವಚನ ಸಾಗರದಲ್ಲಿ ಜಿಗಿದು ಬಿಡಬೇಕು. ಆ ಕ್ಷಣವೇ ನಾವು ಶುಚಿಯಾಗಬಹುದು. ಅಷ್ಟೊಂದು ಶಕ್ತಿ ಅದಕ್ಕಿದೆ. ಪ್ರವಚನಕಾರನ ಕಾಯಕ ಮಡಿವಾಳನ ಕಾಯಕದಂತೆ. ಮಾಸಿದ ಮನಸ್ಸನ್ನು ಶುಚಿಗೊಳಿಸುವ ಅನುಭಾವ ಮಾತುಗಳು ಬೇಕು.

---

೫೪ " " ಸದ್ಗುರು ಸ್ವಾಮಿ ಲಿಂಗಾನಂದರು. ಪೂಜ್ಯ ಮಾತೆ ಗಂಗಾದೇವಿ. ಪುಟಸಂಖ್ಯೆ-೩೩ ಮತ್ತು ೩೪. ಪ್ರ-ವಿಶ್ವಕಲ್ಯಾಣ ಮಿಶನ್ ಬೆಂಗಳೂರ-೧೦. (೧೯೮೬)

ಪ್ರವಚನದ ಉದ್ದೇಶ ಕೇವಲ ಜ್ಞಾನದ ಕ್ಷಿತೀಜ ವಿಸ್ತರಿಸುವುದಲ್ಲ, ಅಪರೂಪದ ಅಲೌಕಿಕ ಶಕ್ತಿ ಸಂಗ್ರಹಿಸುವುದಲ್ಲ, ನಮ್ಮನ್ನು ನಾವು ಮರೆತು ಪರಮ ಸತ್ಯವನ್ನು ಅರಿತು ಅನುಭವಿಸಿ ಆನಂದಿಸುವುದು.

ಪ್ರವಚನಕಾರನು ಅಧ್ಯಾತ್ಮ ಸಂಬಂಧಿಯಾದ ಪ್ರಾಥಮಿಕ ತಿಳುವಳಿಕೆ ಹೊಂದಿರಬೇಕು. ಪ್ರಕೃತಿ ಪ್ರೀತಿಸುವವನಾಗಿರಬೇಕು. ನಾಡು ನುಡಿಗಳ ರಕ್ಷಣೆಯಲ್ಲಿ ಆಸಕ್ತಿ ಹೊಂದಿರುವವನಾಗಿರಬೇಕು ವೈಚಾರಿಕ ಪ್ರಜ್ಞೆಯನ್ನು ಮೈಗೂಡಿಸಿಕೊಂಡಿರಬೇಕು. ಶಿಸ್ತು, ಶ್ರದ್ಧೆ, ಶುಚಿತ್ವಗಳ ಪೂರ್ವ ಸಿದ್ಧತೆ ಬೇಕು. ಅದೊಂದು ಪವಿತ್ರ ವೇದಿಕೆ ಅಲ್ಲಿ ಪ್ರವಾಚಕ ಪ್ರಾಮಾಣಿಕ ಸೇವೆ ಸಲ್ಲಿಸಬೇಕು. ಪ್ರವಚನ ನುಡಿಗಳಲ್ಲಿ ಮಾನವನ ಸಮಸ್ಯೆಗಳಿಗೆಲ್ಲ ಪರಿಹಾರವಿದೆ. ಶಾಂತಿ, ಸಮಾಧಾನ, ಆ ಶಿವನುಡಿಯಲ್ಲಿ ಮಡುಗಟ್ಟಿದೆ. ಅಂತರಂಗದ ವೃದ್ಧಿಯನ್ನು ಹೆಚ್ಚಿಸುವುದು ಪ್ರವಚನ.

ವಿಷಯಗಳನ್ನು ಸಂಗ್ರಹಿಸಿ ಸ್ಮರಣೆಯಲ್ಲಿಟ್ಟುಕೊಂಡು ಅನುಭವವನ್ನೇ ಶಬ್ದಗಳಲ್ಲಿ ಅಭಿವ್ಯಕ್ತ ಉಪದೇಶ. ಕಲಿಸುವುದು ಪ್ರವಚನ. ಪ್ರವಚನದಿಂದ ಪರಿವರ್ತನೆ ಸಾಧ್ಯ. ಸತ್ಯದ ಬೆಳಕು ತಿಳಿಯುವುದು ಪ್ರವಚನದಿಂದ. ಆದ್ದರಿಂದ ಸದಾ ನಮ್ಮ ಮೈಮನಗಳು ಶರಣರ ಸಂಗದಲ್ಲಿರಬೇಕು. ಮನ-ಮನಗಳನ್ನು ಹೃದಯ-ಹೃದಯಗಳನ್ನು ಬೆಸೆಯುವುದು ಪ್ರವಚನ.

ಬೋಧನೆ ಮತ್ತು ಶೋಧನೆ ಜೊತೆಯಾಗಿರಬೇಕು. ಪ್ರವಚನ ಸಾಹಿತ್ಯದಿಂದ ಸಮಾಜದ ಸಮಸ್ಯೆಗಳ ಕುರಿತು ತಿಳಿಯಬಹುದು. ಮೌಲ್ಯಗಳು ಮೌಢ್ಯವಾಗುವದನ್ನು ತಡೆಯಬಹುದು. ನಾವು ಮೌಲ್ಯಗಳ ಬಗ್ಗೆ ಆಲೋಚನೆ ಮಾಡಬೇಕು ಸಂಸ್ಕೃತಿ ಕಟ್ಟುತ್ತಿರುವ ಕೆಲಸ ಈ ಸಾಹಿತ್ಯದ್ದು. ಸಾಹಿತ್ಯಕ್ಕಿಂತ ಬದುಕು ದೊಡ್ಡದು. ಬದುಕು ನಿರ್ಮಾಣಗೊಳ್ಳಲು ಸಾಹಿತ್ಯದ ಅವಶ್ಯಕತೆಯಿದೆ. ಸಾಹಿತ್ಯ ಮಾನಸಿಕ ಸುಧಾರಣೆಯ ಸಾಧನ. ಅದು ಸಮಾಜದ ಅಭ್ಯುದಯಕ್ಕಾಗಿ ದುಡಿಯುವಂತಾಬೇಕು. ಈ ದೇಶಕ್ಕೆ ಜ್ಞಾನಿಯ ತಲೆ, ಸಂತನ ಹೃದಯ ಬೇಕಿದೆ. ದಯೆ, ಛಲ, ಕರುಣೆ, ಸ್ವಾಭಿಮಾನ, ಭಕ್ತಿ ದಾಸೋಹ, ಅಹಿಂಸೆ ಆಲಿಸುವ ಸಾಹಿತ್ಯ ಪ್ರವಚನಸಾಹಿತ್ಯ. ಇಂದು ಜಾಗತೀಕರಣದ ಜಾತ್ರೆಯಲ್ಲಿ ಗುರು ಗುರಿ ಇಲ್ಲದ ಯುವಕರು ಎಳೆಯ ಮಕ್ಕಳು ಪ್ರೀತಿಸುವ ಅಪ್ಪ ಅಮ್ಮಂದಿರು ಕಳೆದುಹೋಗಿದ್ದಾರೆ. ಇರದುದನ್ನೂ ಬಿಟ್ಟು ಇದ್ದುದರ ಕಡೆಗೆ ಸಾಗುವುದೇ ಜೀವನ.

ಆವೇಶ, ಕ್ರೋಧ, ಮದ, ಮತ್ಸರ, ಅಹಂಕಾರ, ವೈರತ್ವ ಅಸೂಯೆಯಂತಹ ತಾಮಸ ಗುಣಗಳು ಹೆಚ್ಚಾಗಿ ಒತ್ತಡದ ಬದುಕನ್ನು ಸೃಷ್ಟಿಸಿವೆ. ಬದುಕು ದುರ್ಬಲವಾಗಿವೆ. ಕಾರಣ

ಕಾದಂಬರಿ, ಕಥೆ, ಪುರಾಣ ಓದುವ ಹಾಗೆ ಪ್ರವಚನ ಸಾಹಿತ್ಯವನ್ನು ಕೇಳುವ ಓದುವ ಸದ್ಭಕ್ತರು ಬೇಕಿದ್ದಾರೆ.

ಜೀವನ ಮೌಲ್ಯ ಮತ್ತು ತತ್ವಸಿದ್ಧಾಂತಗಳನ್ನು ಜನಮನಕ್ಕೆ ತಲುಪಿಸುವ ಪ್ರಮುಖ ಮಾಧ್ಯಮ ಪ್ರವಚನ. ಪ್ರವಚನದಲ್ಲಿ ತಮ್ಮನ್ನು ಇಡಿಯಾಗಿ ಸಮರ್ಪಿಸಿಕೊಳ್ಳುವ ಶ್ರೋತೃಗಳಿರುತ್ತಾರೆ. ಒಬ್ಬ ಪ್ರವಚನಕಾರ ಸಮಾಜದ ಋಣವನ್ನು ವಾಣಿಸೇವೆಯ ಮೂಲಕ ತೀರಿಸಬೇಕು. ನೇರ-ಸರಳ ಸರಿಯಾದ ಮಾತು ಪ್ರವಚನದ್ದಾಗಿರುತ್ತದೆ. ಕೇಳುಗರಲ್ಲಿ ಪ್ರೇಮ ಧೈರ್ಯ ಶಾಂತಿಬೇಕು.

ಪ್ರವಚನಕಾರನಲ್ಲಿ ಪ್ರಭೆ ಮತ್ತು ಪ್ರಭಾವ ಎರಡೂ ಇರಬೇಕು. ಅವನು ಪ್ರವಚನ ಕ್ಷೇತ್ರದ ರಾಯಭಾರಿ. ಪ್ರವಚನಕ್ಕೆ ಅಧ್ಯಯನ ಮತ್ತು ಅನುಭಾವ ಬೇಕು. ಪ್ರವಚನಕಾರ ಹಸನ್ಮುಖಿಯಾಗಿ ಹುರುಪು ಹುಮ್ಮನಸ್ಸಿನಿಂದ ಹೇಳಿದಾಗ ಆತನ ಅನುಭಾವದ ನೆಲೆಯಿಂದ ಜ್ಞಾನ ವಿಜ್ಞಾನಗಳು ಆಧ್ಯಾತ್ಮಿಕ ಮೂಲ ವಿಶಿಷ್ಟತೆಗಳು ಕೇಳುಗರಲ್ಲಿ ಪರಿಣಾಮ ಮಾಡುತ್ತದೆ. ಪ್ರವಚನದ ಚಿಂತನೆಗಳು ಹದವಾಗಿ ಬಂದ ಮಾತುಗಳು. ಒಂದು ಚಿಂತನೆ ಹೊರ ಬರಲು ತ್ಯಾಗ, ಜಿಜ್ಞಾಸು ಅಧ್ಯಯನ ತುಂಬಿದೆ. ಸತ್ಕಾರ್ಯ ಎಂಬ ಸಂತಾನ ಹುಟ್ಟುತ್ತದೆ. ಆದ್ದರಿಂದಲೇ ಪ್ರವಚನ ಸಂಸ್ಕೃತಿ ಮುಂದುವರೆಯುತ್ತದೆ. ಅದು ಎಲ್ಲದರ ಸಂಸ್ಕೃತಿ ಜೀವನದಲ್ಲಿ ಬಳಲಿ ಬೆಂಡಾದವರಿಗೆ ಪ್ರವಚನ ದಿವ್ಯ ಔಷಧಿ. ದುಡಿದು ದಣಿದು ಬಂದವರಿಗೆ ನಿದ್ರೆ ಹೇಗೋ ಹಾಗೇ ಸಂಸಾರದ ತಾಪತ್ರಯದಲ್ಲಿ ಸಿಲುಕಿ ನರಳುವವರಿಗೆ ನೆರಳು ಈ ಪ್ರವಚನ. ಭೌತಿಕತೆಯ ಬೆಳವಣಿಗೆಯಿಂದ ನಾವು ನಮ್ಮ ಸಹಜತೆ ಮರೆತಿದ್ದೇವೆ ಕಾರಣ ದುಃಖಿತರಾಗಿದ್ದೇವೆ. ಕೃತ್ರಿಮತೆ ಬದುಕನ್ನು ಅಸಹನೀಯಗೊಳಿಸುತ್ತದೆ. ಮಾನವ ಮಹಾಮಾನವನಾಗುವುದು, ಹಣ, ಅಧಿಕಾರ, ಅಂತಸ್ತುಗಳಿಂದಲ್ಲ. ಆರೋಗ್ಯ ಪೂರ್ಣವಾದ ಹೃದಯದ ಮಾತುಗಳಿಂದ. ಪ್ರವಚನದ ಸಂಸ್ಕಾರ ಬೇಕು. ಕೇಳುವುದು ಎಲ್ಲರಿಗೂ ಸಾಧ್ಯವಾಗದು. ಅವಶ್ಯಕತೆಯುಳ್ಳವರಿಗೆ ಪ್ರವಚನದ ಮಾತುಗಳು. ಪ್ರವಚನ ಸಾಹಿತ್ಯದಲ್ಲಿ ಬೆಳಕಿನ ಮಾತುಗಳ ಉಗಮ. ಅವು ದಿವ್ಯತೆಗೆ ದಾರಿ. ಜೀವನಕ್ಕೆ ಅರ್ಥವನ್ನು ಸೊಬಗು, ಸಿರಿಯನ್ನು ನಡೆ ನುಡಿ, ವಿವೇಕ ವಿಚಾರವನ್ನು ಕಲಿಸುವುದು, ಭಾವನೆಯ ಬೆಳಗಿಸಿ ಬುದ್ಧಿಗೆ ದೇವ ಬಲ ತಂದುಕೊಡುವುದು.

"ಸುವಿವೇಕಿ, ದಾರ್ಶನಿಕ, ಕಲೆಗಾರ ಲೇಸಿಗನು
ಸವಿಚಾರ, ರಸಋಷಿಯು, ಬುದ್ಧಿ ಹೃದಯಗಳ
ಹವಣಾರಿತ ಹದಗಳನು ಇತ್ಯಾದಿ ಎನಲೇಕೆ ?
ಕವಿಯೆಂದು ಕರೆದು ಬಿಡು–ಮರುಳಸಿದ್ಧ"೫೫

ಪ್ರವಚನಕಾರ ಈ ಎಲ್ಲವೂ ಹೌದು. ಚೊಕ್ಕ ಅನಿಸಿಕೆಗಳನ್ನು ಪಕ್ವತೆಯೊಂದಿಗೆ ಆತ್ಮಸಾಕ್ಷಿಯೊಂದಿಗೆ ತಕ್ಕ ಮಾತಿನೊಂದಿಗೆ ಸಾಹಿತ್ಯ ರಚಿಸುತ್ತಾನೆ. ಬಡವ ಬಲ್ಲಿದರೆಂಬ ಭಾವವಿಲ್ಲ. ಎಲ್ಲರಿಗೂ ಆಹ್ವಾನ. ಪ್ರವಚನ ಕ್ಷೇತ್ರದಲ್ಲಿ ದಿವ್ಯ ಜೀವನ ಕಟ್ಟುವವರು ಅಲ್ಲಿರಬೇಕು. ಜೀವನದ ಪ್ರತಿಬಿಂಬವೇ ಅಡಗಿರುತ್ತದೆ. ಬಾಲಕರು ನಲಿಯುವಂತೆ, ಪಾಲಕರು ಪಾಲಿಸುವಂತೆ, ಹಿರಿಯರು ಒಪ್ಪುವಂತೆ ಮನಬುದ್ಧಿದೇಹಗಳು ಬೆಳೆವಂತೆ ಪ್ರವಚನಕಾರ ನುಡಿಯಬೇಕು. ಮಾತಿಗೆ ಅನುಭಾವ ಸೇರಿದಾಗ ಮಾತಿನಲ್ಲಿ ಮಾಂತ್ರಿಕತೆ ಬರುವುದು.

"ಪ್ರವಚನದಲ್ಲಿ ಅದ್ಭುತಗಳು, ರೋಚಕಗಳು, ರಹಸ್ಯಗಳು, ವಿಶ್ವ ಆಶ್ಚರ್ಯಗಳು ತುಂಬಿರುತ್ತವೆ. ನೊಂದವರ, ಬೆಂದವರ ಬಂಧನದಿ ಕುಂದಿದವರ ಬಾಳಿನ ಕಾಳಿಕೆಯ ಕಳೆಯಲು ಪ್ರವಚನಗಳು ಅತ್ಯವಶ್ಯ. ಸರಸ ಸಜ್ಜನಿಕೆ ಸಮತೆ ಪ್ರವಚನಕಾರ ಹೇಳುವ ಚಿಂತನೆಗಳನ್ನು ಬರೆದಿಡಬೇಕು. ಆ ಸ್ವರಗಳನ್ನು ಗ್ರಹಿಸಿಕೊಳ್ಳದೇ ಇದ್ದರೆ ಅವು ಮರೆಯಾಗಿ ಹೋಗುವವು. ಪ್ರವಚನದ ಚಿಂತನೆಯಿಂದ ಚಿಂತಿಸಿದ ಫಲ ಒಂದು ಅಮೂಲ್ಯ ಕೃತಿಗೆ ಸಹಕಾರಿಯಾಗಬಲ್ಲದು" ಪ್ರವಚನ ಪಿತಾಮಹ ಬಸವಧರ್ಮದ ಲಿಂ. ಪೂಜ್ಯ ಲಿಂಗಾನಂದ ಮಹಾಸ್ವಾಮಿಗಳ ಮಾತಿದು. ವಚನ ವಾಙ್ಮಯವನ್ನು ನಾಡಿನುದ್ದಗಲಕ್ಕೂ ಪ್ರವಚನಗಳ ಮುಟ್ಟಿಸಿದ ಖ್ಯಾತಿ ಪೂಜ್ಯರಿಗೆ ಸಲ್ಲುತ್ತದೆ. ತಮ್ಮ ವಿಶಿಷ್ಟ ಶೈಲಿಯಿಂದ ವಚನ ಸಾಹಿತ್ಯವು ಶಾಸ್ತ್ರವೂ ಹೌದು. ತತ್ವ ಜ್ಞಾನ, ದರ್ಶನ, ಧರ್ಮವೂ ಹೌದು ಎಂಬುದನ್ನು ಸ್ಪಷ್ಟಗೊಳಿಸಿದ್ದರು. ಪ್ರವಚನಕ್ಕೆ ಆಕರ್ಷಣಾ ಶೈಲಿ ಬೇಕು ಎಂಬುದು ಅವರ ಅಭಿಮತ.

ಸಾಮಾನ್ಯರು ಮಾತನಾಡಿದರೆ ಅಲ್ಲಿ ಲಭ್ಯವಾಗುವುದು. ಕೆರೆ ಬಾವಿ ಬತ್ತಿದಾಗ ಸಿಕ್ಕುವ ಗುಳ್ಳೆ ಗೊರಚೆ ಚಿಪ್ಪುಗಳಂತಹ ಸಾಮಾನ್ಯ ಲೌಕಿಕ ವಿಷಯಗಳು, ಪಂಡಿತರು, ವಿದ್ವಾಂಸರು ಮಾತನಾಡಿದಾಗ ಮುತ್ತು ರತ್ನ ಹವಳಗಳಂತಹ ಶಾಸ್ತ್ರೀಯ ವಿಷಯಗಳು ದಾರ್ಶನಿಕರು ಅನುಭಾವಿಗಳು ಮಾತನಾಡಿದಾಗ ಲಿಂಗವು ಅಂದರೆ ದಿವ್ಯ ಜ್ಞಾನಪ್ರಾಪ್ತವಾಗುತ್ತದೆ.

---

೫೫ " " 'ಮರುಳಸಿದ್ಧನ ಕಂತೆ' ಡಾ. ಸಿದ್ಧಯ್ಯ ಪುರಾಣಿಕರು. ಪುಟಸಂಖ್ಯೆ–೩. ನುಡಿ–೧೧.

ಅವು ಜ್ಯೋತಿರ್ಲಿಂಗದ ಕಿಡಿಗಳು.ಅವರು ಪ್ರವಚನ ಮಾಡಿ ಮೂಡಿಬಂದ ನುಡಿಗಳನ್ನು ಪುಸ್ತಕ ರೂಪದಲ್ಲಿ ತಂದಿರುವುದು.

೧) **ದೇವರು:** ಎಂಭತ್ತೆಂಟು ಪುಟದ ಪುಟ್ಟ ಪುಸ್ತಕ. ವಚನಶಾಸ್ತ್ರದ ಆಧಾರದ ಮೇಲೆ ಬರೆಯಲ್ಪಟ್ಟ ಈ ಕೃತಿ ಮೊಟ್ಟ ಮೊದಲು ಪರಮಸತ್ಯವನ್ನು ಘೋಷಿಸಿತು. ಸೃಷ್ಟಿಕರ್ತನ ಸ್ವರೂಪ, ಸೃಷ್ಟಿಪೂರ್ವದ ಸ್ವಯಂಭುವಿನಿಂದ ಹಿಡಿದು ಜೀವಾತ್ಮವಾಗುವವರೆಗೆ ನಿಖರವಾಗಿ ವಿವರಿಸುತ್ತದೆ. ಪೂಜ್ಯರು ಲಿಂಗಾಯತಧರ್ಮದ ದೇವರ ಸ್ವರೂಪವನ್ನು 'ದೇವರು' ಪುಸ್ತಕದಲ್ಲಿ ಪ್ರತಿಪಾದಿಸಿದ್ದಾರೆ.

೨) **ಲಿಂಗತತ್ತ್ವ ದರ್ಪಣ:** ಇದೊಂದು ಕ್ರಾಂತಿಕಾರಿ ಪುಸ್ತಕ. ಇಷ್ಟಲಿಂಗ ಲಿಂಗಾಯತ ಧರ್ಮದ ಗುಣಲಾಂಛನ. ಈ ಧರ್ಮಕ್ಕೆ ಸ್ವತಂತ್ರ ಧರ್ಮದ ಸ್ಥಾನ ಕಲ್ಪಿಸುವ ಎಲ್ಲ ಭೇದಗಳನ್ನು ನಿವಾರಣೆ ಮಾಡುವ ಪೂಜ್ಯ ವಸ್ತು. ಇಷ್ಟಲಿಂಗ ಜಾತಿಯ ಕುರುಹಲ್ಲ. ಅಖಂಡ ಸಮಾಜವನ್ನು ಬೆಸೆಯಬಲ್ಲ ದೇವರ ಕುರುಹು.

ಮನುಕುಲದ ಸ್ವಾತಂತ್ರ್ಯ-ಸಮಾನತೆ ಸಹೋದರತ್ವಕ್ಕೆ ಶ್ರೇಷ್ಠ ಸಾಧನ ಎಂಬುದನ್ನು 'ಲಿಂಗತತ್ತ್ವ ದರ್ಪಣ'ದಲ್ಲಿ ಮನದಟ್ಟು ಮಾಡಿಕೊಡುತ್ತಾರೆ.

೩) **ಲಿಂಗಪೂಜಾ ವಿಧಾನ:** ಲಿಂಗಾಯತ ಧರ್ಮದ ಆದಿಗುರು ಬಸವಣ್ಣ ಕನ್ನಡ ಧರ್ಮಭಾಷೆ ಪೂಜ್ಯರ ಆದೇಶದಂತೆ ಪೂಜಾವಿಧಿಯನ್ನು, ದೇವಸ್ತುತಿಯನ್ನು ಕನ್ನಡದಲ್ಲಿ ಹೇಳಿದರು. ೧೯೬೦ ರಲ್ಲಿ ಬರೆಯಲ್ಪಟ್ಟ ಕೃತಿ ಲಕ್ಷಾಂತರ ಶರಣರ ಮನೆಯಲ್ಲಿ ಲಿಂಗಪೂಜೆಗೆ ಬಳಕೆಯಾಗುತ್ತಿದೆ.

೪) **ಅಕ್ಕನ ಪ್ರವಚನ:** ಇದು ವೀರವಿರಾಗಿಣಿ ಕನ್ನಡ ಸಾಹಿತ್ಯದ ತರಂಗಿಣಿ ಜಗನ್ಮಾತೆ ಅಕ್ಕಮಹಾದೇವಿಯ ಜೀವನ ದರ್ಶನ ಮಾಡಿರುವ ಪ್ರವಚನ ಶೈಲಿಯ ಒಂದು ಕೃತಿ. ಇಂದು ಎಲ್ಲ ಪುರಾಣ ಪ್ರವಚನಕಾರರು ತಮ್ಮ ಪ್ರವಚನಕ್ಕೆ ಬಳಸುವ ಬಹುಶ್ರೇಷ್ಠ ಕೃತಿ. ತಿಂಗಳ ಪರಿಯಂತರ ಯಾರೇ ಆಗಲಿ ಓದಿ ಹೇಳಲು ಸಾಧ್ಯವಾಗಬಲ್ಲ ಕೃತಿ.

ಹೀಗೆ ಶ್ರೀ ಲಿಂಗಾನಂದರು ನಾಡಿನ ಮೂಲೆ ಮೂಲೆಗೆ ಮನೆಮಾತಾಗಿರುವುದು ತಮ್ಮ ಪ್ರವಚನದ ಮಾತುಗಳ ಮೂಲಕ ಅವರು ಆಡಿದ ಮಾತು ಗಾಳಿಯಲ್ಲಿ ಹಾರಿ ಹೋಗಬಾರದೆಂದು ಸಾಹಿತ್ಯದ ಮೂಲಕ ದಾಖಲಿಸಿದರು. **ಬರಹದಿಂದ ಸಾಹಿತಿ ಆಯುಷ್ಯವನ್ನು ಹೆಚ್ಚಿಸಿಕೊಳ್ಳುತ್ತಾನೆ.** ಆದ್ದರಿಂದಲೇ ಅವನು ಅಮರ. ಶರಣರು ತಾವು ನಡೆಯಿಸಿದ ಅನುಭಾವ ಚಿಂತನೆಗಳನ್ನು ರಚನೆಗಳ ಮೂಲಕ ಬರೆದಿಡುವುದರಿಂದಲೇ ಅವರು ಅಮರರು. ವಚನಗಳು

ಅಮರ ಸಾಹಿತ್ಯ. ಪ್ರವಚನಕಾರ ಒಂದು ಪ್ರವಚನಕ್ಕೆ ತಯಾರಿಮಾಡಿಕೊಳ್ಳಬೇಕು. ಬಹಳಷ್ಟು ವ್ಯಾಸಂಗ ಮಾಡಬೇಕು. ಓದಿದ ತಿಳಿದ ಜ್ಞಾನದ ಜೊತೆ ಸ್ವಾನುಭಾವವಷ್ಟು ಸೇರಿದರೆ ಒಂದು ವಿನೂತನ ಚಿಂತನೆ ಕಾಣಬರುತ್ತದೆ. ಇದು ಸಾಹಿತ್ಯದಲ್ಲಿ ಮೂಡಿಬಂದರೆ ಒಂದು ವಿಶಿಷ್ಟ ಪ್ರಕಾರವಾಗಿ ಸಾಹಿತ್ಯ ರಚನೆಯಾಗುತ್ತದೆ. ವ್ಯಾಸಂಗದ ಹರವು ಆಳಗಳು ಇವರು ರಚಿಸಿದ ಕೃತಿಗಳಲ್ಲಿ ಮೂಡಿ ಬಂದಿವೆ.

ಬಸವಧರ್ಮ ಇದು ವಿಶ್ವಧರ್ಮ. ಇದು ಹಿಂದೂ ಧರ್ಮದ ಒಂದು ಅಂಗವಲ್ಲ. ಇದೊಂದು ಸ್ವತಂತ್ರ ಪ್ರಗತಿ ಶೀಲಧರ್ಮ ಎಂದು ಬಲ್ಲವರೊಡನೆ ಸೆಣಸಿ ಭಾಷಣ ಬರಹಗಳಿಂದ ಖಚಿತಪಡಿಸಲು ಲಿಂಗಾನಂದ ಸ್ವಾಮಿಗಳವರೆಗೆ ಎಂಟೆದೆಯ ಬಂಟರೇ ಬೇಕಿತ್ತು. ಶರಣ ಸಾಹಿತ್ಯದಲ್ಲಿ ಒಳಹೊಕ್ಕು ನೋಡಿ 'ಕ್ಷ–ಕಿರಣ' ಬಿಟ್ಟು ಆ ಸಾಹಿತ್ಯ ಪರಿಕ್ಷಿಸಿ ಪ್ರಚಾರಕ್ಕಿಳಿದು ಪ್ರವಚನಗಳ ಮೂಲಕ ಪ್ರಚಾರ ಮಾಡಿದರು. ಪ್ರವಚನಕಾರನಿಗೆ ಪ್ರವಚನ ಪಟುತ್ವ ಸಂಘಟನಾಶಕ್ತಿ, ಪಾಂಡಿತ್ಯ ವಿವೇಚನಾಶಕ್ತಿ ಎಲ್ಲವೂ ಬೇಕು. ಇವು ಪ್ರವಚನಕಾರನ ಆಧ್ಯಗುಣಗಳು. ಮಮತೆ, ಸಾಧನೆ–ಪರಿಪರಿಯ ಕಲೆವಿದ್ಯೆ, ವಿಜ್ಞಾನ ಎಲ್ಲವೂ ಪ್ರವಚನದಲ್ಲಿ, ಪಾಠಿಯನ್ನು ಒರೆಸಲಿಕ್ಕೆ ಒದ್ದೆ ಬಟ್ಟೆಯೇ ಬೇಕು. ಗದ್ದೆ ತೋಟಕ್ಕೆ ಒದ್ದೆ ನೆಲವೇ ಬೇಕು. ಬುದ್ಧಿ ಮತ್ತು ಹೃದಯದ ಬಿರುಸು ತಿದ್ದಲಿಕ್ಕೆ ಮೃದುವಾದ ಹದವಾದ ಮಾತುಗಳು ಬೇಕು. **ಪ್ರವಚನ ಒಲಿದು ಒಲಿಸುವ ಕಲೆ**. ಜೀವನದ ಘನತೆ ಗೌರವಗಳನ್ನು, ಸೊಬಗು ಸೌಂದರ್ಯಗಳನ್ನು ಹೆಚ್ಚಿಸುತ್ತದೆ. ಕೀಡೆ ತುಂಬಿಯ ನೆನೆದು ತುಂಬಿಯಾಗುವ ಹಾಗೆ ಕೇಡಿಗನು ಶುಚಿಯಾಗುವನು. ಪ್ರವಚನ ಪುಣ್ಯಕಥೆಗಳಿಂದ, ಹದುಳ ಹರಡಿಸುವ ಲೇಸ ಹಬ್ಬಿಸುವ ಹದನ ಸಂಸ್ಕೃತಿ ಪ್ರವಚನ ಸಂಸ್ಕೃತಿ. ಹೃದಯವನ್ನು ಕರಗಿಸುವ, ಮನವ ಅರಳಿಸುವ ಕಣ್ಣಂಚಿನಲ್ಲಿ ದಯೆ ಪ್ರೀತಿ–ತುಂಬುವ ನಿಜವಾದ ಕಲೆ ಅದು ಪ್ರವಚನ ಕಲೆ ಬುದ್ಧಿ ಭಾವಗಳೆರಡು ಒಂದಾಗಿ ಬೆರೆತರೆ ಅಲ್ಲಿ ಪ್ರವಚನ ಸಾಹಿತ್ಯದ ಉಗಮ, ರಸಭಾವಗಳ ನಿರ್ಮಾಣ. ಲಲಿತ ಕಲೆಗಳಲ್ಲಿ ಪ್ರವಚನವೂ ಒಂದು.

ದ್ವೇಷದ ಎದೆಯಲ್ಲಿ ಮಲಗಿರುವ ಸ್ನೇಹ ಪ್ರೀತಿ ಆತ್ಮೀಯತೆಗಳನ್ನು ಎಬ್ಬಿಸುವುದು ಪ್ರವಚನ ಧರ್ಮ. ಅವರಂತೆ ನಡೆಯಿರಿ, ಇವರಂತೆ ನಡೆಯಿರಿ, ಬುದ್ಧ ಬಸವರಂತೆ ಆಗಿರಿ ಎಂದು ಹೇಳುವ ಬದಲು ನನ್ನಂತೆ ನಡೆಯಿರಿ. ನನ್ನಂತಾಗಿರಿ ಎನ್ನುವ ಎದೆಗಾರಿಕೆ ಬೇಕು. ಆಗಲೇ ಗಟ್ಟಿತನ ಮೂಡಿಬರಬಹುದು. ನಡೆ–ನುಡಿ ಆಚಾರಶೀಲನ ಮಾತು ಕೇಳುಗನ ಅಂತಃಕರಣವನ್ನು ಅರಳಿಸುತ್ತದೆ. ಹೃದಯದಲ್ಲಿ ಒಲವು, ವದನದಲಿ ಚೆಲುವು, ಮನದಲ್ಲಿ ಸುಖ, ಶಾಂತಿ, ಸೌಹಾರ್ದಭಾವ ಸದ್ಗುಣದ ಸಜ್ಜನಭಾವ ಪ್ರವಚನಕಾರನಲ್ಲಿ ಅಳವಟ್ಟರೆ ಆ ಮಾತು ಕೃತಿಗೆ ಗೌರವ.

ಪ್ರವಚನ ಅದರ ಅಭಿವ್ಯಕ್ತಿ ಬಹಳ ಮುಖ್ಯ. ಎಷ್ಟೇ ಅಧ್ಯಯನ ಮಾಡಿದ್ದರೂ ಹೇಳುವ ರೀತಿ, ವಿಷಯ ಪ್ರತಿಪಾದನೆ, ಸಾಹಿತ್ಯ ಸೌಂದರ್ಯ ಮತ್ತು ತತ್ವ ಸೌಂದರ್ಯ ಸಾಕ್ಷಾತ್ಕರಿಸುವ ವಿಧಾನ ಪ್ರಮುಖ. ಪುಣ್ಯಪುರುಷರ ಉದಾಹರಣೆ. ಮಹಾನುಭಾವರ ದೃಷ್ಟಾಂತ ಸುಭಾಷಿತದ ಸಾಲುಗಳು ಗಾದೆ ನುಡಿಗಳು, ಕವಿಯ ಕವನದ ಚರಣ ಪಲ್ಲವಿಗಳು ಪ್ರವಚನಕ್ಕೆ ಆಧಾರ. ಪ್ರವಚನಕಾರನಿಗೆ ಪ್ರವಚನವೇ ಲಿಂಗಪೂಜೆಯಾಗಿರಬೇಕು. ಅಲ್ಲಿಯ ಮಾತುಗಳು ಇಂದಿನ ಜನಾಂಗಕ್ಕೆ ಮುಖ್ಯ ದಾರಿದೀಪವೂ ಆಗಿರಬೇಕು. ಈ ಶತಮಾನಕ್ಕೆ ಪ್ರವಚನ ಚಿಂತನೆಗಳು ಮುಖ್ಯ. ಒಂದು ಚಿಂತನೆ ಚಿಂತೆ ದುಃಖ ದುಮ್ಮಾನ ಕಡಿಮೆ ಮಾಡಬಲ್ಲದು. ಪ್ರವಚನ ದಾಸೋಹ ಎಲ್ಲ ದಾಸೋಹಗಳಲ್ಲಿ ಶ್ರೇಷ್ಠ. ಪ್ರವಚನದ ವಾಣಿ ಜೀವಂತ ಧ್ವನಿವರ್ಧಕ. ಒಬ್ಬ ಅನುಭಾವಿ ಪ್ರವಚನ ಪಟು ಶ್ರೇಷ್ಠ ಸಾಹಿತ್ಯದ ಮಹಾಚೇತನ. ಪ್ರವಚನ ಜೀವನದ ಅವಿಭಾಜ್ಯ ಅಂಗವಾಗಬೇಕು. ಆ ಮಾತುಗಳು ಮೌಲ್ಯಯುತವಾಗಿರಬೇಕು. ಇದಕ್ಕೆ ಸಂಕುಚಿತ ಮನೋಭಾವನೆ ಸಲ್ಲದು. ಪ್ರವಚನಕಾರ ಧರ್ಮ, ತ್ಯಾಗ, ದೇವರು, ದಾರ್ಶನಿಕತೆ ಮುಂತಾದ ಮೌಲ್ಯಗಳಲ್ಲಿ ಶ್ರದ್ಧೆಯುಳ್ಳ ಭಾವಜೀವಿಗಳಾಗಿರಬೇಕು. ಗುಣೈಕ ದೃಷ್ಟಿಕೋನದವರಾಗಿರಬೇಕು. ವಿನಯಶಾಲಿಗಳು, ಸರಳ ಸಹಜತೆಯುಳ್ಳವರು ಆಗಿರಬೇಕು ಎಂಬುದನ್ನು ಶ್ರೀಗಳು ತಮ್ಮ ಪ್ರವಚನದ ಮೂಲಕ ತೋರಿಸಿಕೊಟ್ಟರು.

ಪ್ರವಚನವು ಆಯಸ್ಕಾಂತ ಕಬ್ಬಿಣ ಸೆಳೆಯುವ ಹಾಗಿರಬೇಕು. ಕಂಠಸ್ಥವಾಗಿರುವ ಸಾಹಿತ್ಯ ಗ್ರಂಥ ಸ್ವರೂಪದಲ್ಲಿ ಬರುವುದೇ ಪ್ರವಚನ ಸಾಹಿತ್ಯ ಜನಮನದ ಭೂಮಿಕೆಯಲ್ಲಿ ತತ್ವಶಾಸ್ತ್ರ ವಚನ ವಾಙ್ಮಯ, ನೀತಿ ಕಥೆ, ಹಾಡು ಎಲ್ಲವನ್ನು ಪ್ರವಚನವೆಂಬ ಬಿತ್ತುವ ಕೂರಿಗೆಯ ಮೂಲಕ ಬಿತ್ತಬೇಕು. ಆಗ ಪರಮಾನಂದವೆಂಬ ಪಸಲು ಬಲು ಹುಲುಸಾಗಿ ಬೆಳೆಯುತ್ತದೆ. ಪ್ರವಚನ ಸಾಹಿತ್ಯದಲ್ಲಿ ತಾತ್ವಿಕ ನಿಖರತೆ ತರ್ಕಬದ್ಧತೆ, ಸ್ಪಷ್ಟ ಚಿಂತನೆ ಅಭಿವ್ಯಕ್ತವಾಗಿರಬೇಕು.

ಧರ್ಮ, ಆಧ್ಯಾತ್ಮ, ವ್ಯಾಖ್ಯಾನ, ಚಿಂತನೆ ಪುಂಖಾನುಪುಂಖವಾಗಿ ಮೂಡಿಬಂದಿರಬೇಕು. ಯಾವುದೇ ವಿಷಯವನ್ನು ಚಿಂತನೆ ಮಾಡುವ ಜನಮನಕ್ಕೆ ಸಂವಹನ ಮಾಡಲೂ ಉಪಮೆ, ದೃಷ್ಟಾಂತ ಉದಾಹರಣೆ ಜೋಡಿಸಿಟ್ಟಿರಬೇಕು. ವಿಷಯದ ಮೇಲೆ ಲೀಲಾಜಾಲವಾಗಿ ಮಾತನಾಡುವುದು ಪ್ರಭುತ್ವವಿದ್ದರೂ ವಿಷಯ ಪ್ರತಿಪಾದನೆಯಲ್ಲಿ ಹೊಸತು ಇರಬೇಕು. ವಾಕ್‌ಧಾರೆಯಲ್ಲಿ ಮುತ್ತಿನ ಸುರಿಮಳೆ ಆಗುತ್ತಿರುತ್ತದೆ. ನೂತನ ಜ್ಞಾನ ರತ್ನಗಳನ್ನು ಹಿಡಿದಿಟ್ಟು ಶಬ್ದಗಳ ಸ್ಪರ್ಶಕೊಟ್ಟರೆ ಲಿಂಗನುಡಿಗಳ ಗಂಟು ನಿರ್ಮಾಣವಾಗುತ್ತದೆ.

"ಕೆರೆಹಳ್ಳ ಬಾವಿಗಳು ಮೈದೆಗೆದಡೆ

ಗುಳ್ಳೆ ಗೊರಚೆ ಚಿಪ್ಪುಗಳು ಕಾಣಬಹುದು

ವಾರಿಧಿ ಮೈದೆಗೆದಡೆ ಮುತ್ತು ರತ್ನಗಳ ಕಾಣಬಹುದು

ನಮ್ಮ ಕೂಡಲಸಂಗನ ಶರಣರು ಮನದೆರೆದು

ಮಾತನಾಡಿದಡೆ, ಲಿಂಗವೇ ಕಾಣಬಹುದು."೫೬

(ಬ. ಷ. ವ-೮೯೧)

'ಲಿಂಗತತ್ವ ದರ್ಪಣ' ಪ್ರೌಢವಿಚಾರಗಳ ಬಲು ಉಪಯುಕ್ತ ಕೃತಿ. ಮೊದಲ ಬಾರಿಗೆ ೧೯೬೧ ರಲ್ಲಿ ಪ್ರಕಟವಾದರೆ, ಮರು ವರ್ಷವೇ (೧೯೬೨ ರಲ್ಲಿ) ೫೦೦೦ ಪ್ರತಿಗಳ ಮರುಮುದ್ರಣ ಕಂಡಿತು. ಈ ಕೃತಿಗೆ ಶ್ರೀ ಜಯಚಾಮರಾಜ ಒಡೆಯರ್, ಮುನ್ನುಡಿ ಬರೆದಿದ್ದಾರೆ. ಜಗದ್ಗುರು ಸುತ್ತೂರ ಮಠದ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು, ಜಗದ್ಗುರು ಸಿರಿಗೆರೆಯ ತರಳಬಾಳು ಶಿವಕುಮಾರ ಮಹಾಸ್ವಾಮಿಗಳು, ನವಲಗುಂದದ ಶ್ರೀ ನಿ. ಪ್ರ ಬಸವಲಿಂಗಸ್ವಾಮಿಗಳವರು ಸಂದೇಶ ಬರೆದಿದ್ದಾರೆ. ಹೈಕೋರ್ಟಿನ ನಿವೃತ್ತ ನ್ಯಾಯಮೂರ್ತಿ ಟಿ. ಎನ್. ಮಲ್ಲಪ್ಪನವರು, ಇವರೆಲ್ಲರ ಮಾತಿನಲ್ಲಿ ಹೇಳುವುದಾದರೆ, ಈ ಕೃತಿಯಲ್ಲಿ ಲಿಂಗತತ್ವದ ಪ್ರತಿಪಾದನೆ ಸರ್ವತೋಮುಖವಗಿ ಚರ್ಚಿತವಾಗಿದೆಯೆಂಬುದು ಸರ್ವ ವಿಧಿತ. ಹೊಸದೃಷ್ಟಿಕೋನದಿಂದ ಕೃತಿಕಾರನು ಕೃತಿ ರಚಿಸಿದ್ದಾರೆಂಬುದು ಸತ್ಯ.

ಈ ಕೃತಿಯಲ್ಲಿ ಲಿಂಗಸಂಸ್ಕಾರ, ಲಿಂಗದ ವಿಕಾಸ, ಲಿಂಗದ ಸ್ವರೂಪ. ಕುರುಹಿನಿಂದ ಅರುಹು, ಇಷ್ಟಲಿಂಗದ ಅವಶ್ಯಕತೆ, ಲಿಂಗದ ಸಾಕಾರ ಸ್ವರೂಪ, ಲಿಂಗಪೂಜೆ ಮತ್ತು ಮೂರ್ತಿಪೂಜೆ, ಲಿಂಗಾಚಾರ, ಲಿಂಗದರ್ಪಣ, ಲಿಂಗದೊಲುಮೆ ಎಂಬ ಹತ್ತು ಅಧ್ಯಾಯಗಳಿದ್ದು, ಲಿಂಗಾಯತ ಧರ್ಮೀಯರಿಗೆ ಓದಲು ವಿಷಯ ತಿಳಿದುಕೊಳ್ಳಲು ಅತ್ಯಂತ ಉಪಯುಕ್ತ ಕೃತಿ. ದೇವರ ಸ್ವರೂಪದ ವಿಚಾರಗಳು ಇಲ್ಲಿ ಮತ್ತೆ ಮೈದೋರಿವೆ. ಶೈವರ ಲಿಂಗದ ಕಲ್ಪನೆ ಹಾಗೂ ಅರ್ಥಗಳಿಗೂ ಲಿಂಗಾಯತರ ಲಿಂಗದ ಕಲ್ಪನೆ ಹಾಗೂ ಅರ್ಥಗಳಿಗೂ ಇರುವ ಅರ್ಥಗಳನ್ನು ವಿವರಿಸಲಾಗಿದೆ. (ಪುಟ ೧೦) ಲಿಂಗವೇ ಶಿವನ ಚಿಹ್ನೆಯೆಂದು ಹೇಳುತ್ತ ಸರಿಯಾಗಿ ತಿಳಿಯದವರು ಅಲ್ಲ ಸಲ್ಲದ ಮಾತುಗಳನ್ನಾಡಿದರು: ಇದನ್ನು ಸಹಿಸಿಕೊಳ್ಳಲಾಗದೆಂದು ಎಚ್ಚರಿಸಿದ್ದಾರೆ.

---

೫೬ " " ಸಮಗ್ರ ವಚನಸಂಪುಟ-೧. ಸಂ-ಎಂ.ಎಂ.ಕಲಬುರ್ಗಿ. ಪುಟಸಂಖ್ಯೆ-೨೨೫. ವಚನಸಂಖ್ಯೆ-೮೬೨. ಪ್ರ-ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. (೨೦೦೧)

(ಪುಟ ೧೯) ಲಿಂಗದ ಮಾಹಿತಿಯನ್ನು ಅರಿತ ಮೇಲೆ ಬೇರೆ ವಿಷಯಗಳನ್ನು ಅರಿಯುವ ಅವಶ್ಯಕತೆ ಇಲ್ಲ. ಇದೆಲ್ಲವನ್ನು ಸದ್ಗುರುವಿನಿಂದ ತಿಳಿಯಬಹುದು. ದುರ್ಗುಣಗಳ ನಿವಾರಣೆಗೆ, ಶಿವನೊಡನೆ ಸಮರಸಕ್ಕೆ ಲಿಂಗವು ಬೇಕೇಬೇಕು. ಲಿಂಗವು ವಿಶ್ವಾತ್ಮನ ಕುರುಹಲ್ಲದೆ ಜಾತಿಯ ಕುರುಹಲ್ಲ, ಲಿಂಗಾಯತ ಧರ್ಮವು ಹೇಗೆ ದ್ವೈತ, ಅದ್ವೈತಗಳಿಂದ ಭಿನ್ನ; ಸಮಾಧಿ ಲಿಂಗ-ಸ್ಥಾವರಲಿಂಗ, ಇಷ್ಟಲಿಂಗಗಳ ವ್ಯತ್ಯಾಸ, ಇಷ್ಟಲಿಂಗ ಪೂಜೆ ಮೂರ್ತಿ ಪೂಜೆಯಲ್ಲ-ಎಂಬ ಅಂಶಗಳನ್ನು ವಿದ್ವಾಂಸರು ಮೆಚ್ಚುವಂತೆ ಪ್ರತಿಪಾದಿಸಿದ್ದಾರೆ. ೧೪೦ ಪುಟಗಳ ಈ ಪುಸ್ತಕ ಶಾಸ್ತ್ರೀಯವೂ ವೈಜ್ಞಾನಿಕವೂ, ಪ್ರಮಾಣಗಳಿಂದ ಕೂಡಿದುದೂ ಆಗಿದೆ.

'ದೇವಪೂಜಾ ವಿಧಾನ'ವೂ ಕ್ರಿ. ಶ. ೧೯೬೦ ರಲ್ಲಿ ಮೊದಲು ಮುದ್ರಣಗೊಂಡು ಅಲ್ಲಿಂದೀಚೆಗೆ ೧೬ ಮುದ್ರಣಗಳನ್ನು ಕಂಡಿದೆ. ಸುಮಾರು ೫೦ ಸಾವಿರ ಪ್ರತಿಗಳಾದರೂ ಮಾರಾಟವಾಗಿರಬೇಕೆಂದೆಸುತ್ತದೆ. ಕನ್ನಡದಲ್ಲಿ ಇಷ್ಟೊಂದು ಸಂಖ್ಯೆಯಲ್ಲಿ ಯಾವ ಪುಸ್ತಕವೂ ಮಾರಾಟವಾಗಿರಲಾರದು ಎಂದ ಮೇಲೆ ಇದರ ಮಹತ್ವ ಮತ್ತು ಜನಪ್ರಿಯತೆಗಳ ಅರಿವು ನಮಗಾಗುತ್ತದೆ.

ಮುನ್ನುಡಿಯನ್ನುಳಿದು ಇಲ್ಲಿ ನಾಲ್ಕು ಅಧ್ಯಾಯಗಳಿದ್ದು ಅವುಗಳಲ್ಲಿ ಅರ್ಚನೆಯ ಮಹತ್ವ, ಅರ್ಚನೆ ಅವಶ್ಯಕತೆ, ಇಷ್ಟಲಿಂಗದ ಪೂಜೆ, ಸಾಧಕನ ದಿನಚರಿ, ಸಂಕ್ಷಿಪ್ತ ಪೂಜಾ ವಿಧಾನ ಮತ್ತು ಶಾಸ್ತ್ರೋಕ್ತ ಪೂಜಾ ವಿಧಾನಗಳೆಂಬ ಅಂಶಗಳು ೮೦ ಪುಟಗಳಲ್ಲಿ ನಿರೂಪಣೆಗೊಂಡಿವೆ. ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ. "ಶೈವಧರ್ಮದ ಭಕ್ತಿಯು ಸುಂದರವಾಗಿ, ಸಮನ್ವಯವಾಗಿ, ವಿಕಾಸ ಹೊಂದಿರುವುದು-ಬಸವಧರ್ಮದಲ್ಲಿ. ಜ್ಞಾನ ಪ್ರಧಾನವಾದ ದೇವರ ಆರಾಧನೆ ವಿಸ್ತಾರಗೊಂಡು, ಸ್ವಾನುಭಾವದ ಪರಿಪಾಕದಿಂದ, ಪೋಷಿತವಾಗಿ, ಪುಷ್ಟವಾಗಿ ಬೆಳೆದು, ವಿಶ್ವಧರ್ಮದ ಸಲ್ಲಕ್ಷಣಗಳನ್ನು ಚೆಲ್ಲವರಿದುದು ಲಿಂಗವಂತ ಧರ್ಮದಲ್ಲಿ. ಲಿಂಗಾಯತ ಧರ್ಮವು ಪಂಡಿತ-ಪಾಮರ-ಮೇಲು-ಕೀಳು, ಹೆಣ್ಣು-ಗಂಡು ಎಂಬ ಭೇದವಿಲ್ಲದೆ ಪ್ರತಿಯೊಬ್ಬ ಸಾಧಕನಿಗೆ ತನ್ನಲ್ಲಿ ಇಂಬಿಟ್ಟುಕೊಂಡಿದೆ. ಇದರ ಅಗ್ಗಳಿಕೆ ಮಹಾನುಭಾವಿ ಬಸವಣ್ಣನಿಗೆ ಸಲ್ಲಬೇಕು. ಅವರು ಏಕದೇವೋಪಾಸನೆ ಕಡ್ಡಾಯವಾಗಿ ಬಳಕೆಗೆ ತಂದರು. ಲಿಂಗಪೂಜೆ ಅತೀ ಪುರಾತನ, ಆದರೆ ಬಸವಣ್ಣನವರು ಸ್ಥಾವರ ಲಿಂಗವನ್ನು ಹೋಲುವ, ಸಣ್ಣ ಪಂಚಸೂತ್ರ ಲಿಂಗಕ್ಕೆ, ವಿಶ್ವದಾಕಾರದ ಕಂತೆಯನ್ನು ತೊಡಿಸಿ, ಸದ್ಗುರುವಿನಿಂದ ಅಂತರಂಗದ ಚಿತ್ಕಳೆಯ ತುಂಬಿಸಿ, ಇಷ್ಟಲಿಂಗವನ್ನು ಅಂಗದ ಮೇಲೆ ಸದಾ ಧರಿಸಿ, ಅಂಗೈಯಲ್ಲಿಟ್ಟು ಪೂಜೆ ಮಾಡಲು ಹೇಳಿದರು. ಪೂಜಾರಿಯ ಕಪಿಮುಷ್ಠಿಯಿಂದ ಪಾರು ಮಾಡಿದರು. ಯೋಗ ಸಾಧನೆಗೆ ಅನುವು

ಮಾಡಿಕೊಟ್ಟರು. ವಿಶ್ವದಾಕಾರದಲ್ಲಿ ಸಾಕಾರ ಮಾಡಿಕೊಂಡು ಪೂಜಿಸುವುದರಿಂದ ವಿಶ್ವವೂ ಪೂಜ್ಯವಾಯಿತು. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಶರಣ ವಿಶ್ವಕುಟುಂಬಿಯಾದನು."

**ಪೂಜ್ಯ ಲಿಂಗಾನಂದರ ಕೃತಿ**

| | | | |
|---|---|---|---|
| ದೇವರು | – ೧೯೬೦ | ಲಿಂಗತತ್ವ ದರ್ಪಣ ಕನ್ನಡ | – ೧೯೬೦ |
| ಲಿಂಗಾಪೂಜಾ ವಿಧಾನ | – ೧೯೬೫ | ಅಕ್ಕನ ಪ್ರವಚನ | – ೧೯೬೨ |
| ಜಂಗಮದರ್ಶನ | – ೧೯೭೨ | ಚಿನ್ಮೂಲಾದ್ರಿಯ ಚಿತ್ಕಳೆ | – ೧೯೬೯ |
| ವಚನಾಮೃತ | – ೧೯೮೬ | ಚುಳುಕಾದ ಚೇತನ | |
| ವಚನ ಸಂಗೀತ | – ೧೯೮೦ | (ಲಿಂಗತತ್ವ ದರ್ಪಣ)ದ ಪುನರ್ | |
| ಲಿಂಗತತ್ವ ದರ್ಪಣ | – ೧೯೬೯ | ವಿಮರ್ಶಿತ ಕೃತಿ | – ೧೯೬೧ |
| ವಚನರಶ್ಮಿ | – ೧೯೮೬ | ಲಿಂಗತತ್ವ ದರ್ಪಣ–ಹಿಂದಿ | – ೧೯೬೧ |

ಜಗದ್ಗುರು ಮಾತೆ ಮಹಾದೇವಿಯವರ ಜೀವನ ಪರಿಚಯ ಕೃತಿ ಬಿಟ್ಟು ಉಳಿದೆಲ್ಲವು ಲಿಂಗಾಯತರ ಧರ್ಮ ತತ್ವಗಳ ಕುರಿತಾದ ಪ್ರವಚನಗಳೇ ಆಗಿವೆ.

"ತಾತ್ವಿಕ ವಿಷಯವನ್ನು ಸುಂದರವಾಗಿ ಮನಮುಟ್ಟುವಂತೆ ವಿವರಿಸುವುದು ಅವರ ವಿಶೇಷತೆ ಆಗಿತ್ತು. ಅವರು ದೇವರು ಎಂಬ ಕೃತಿಯಲ್ಲಿ ಸೃಷಿಯಲ್ಲಿ ಚೇತನ ಹಾಗೂ ಚೇತನಗಳಲ್ಲಿ ಅಪೂರ್ವ ಶಕ್ತಿ ಇದೆ. ವಿಶ್ವ ಚೈತನ್ಯವು ತನ್ನಲ್ಲೇ ಇದೆ. ಸೃಷ್ಠಿ ರಚನೆಗೆ ದೇವನೊಬ್ಬನಿದ್ದಾನೆ. ಸತ್ಯದ ನಿಧಿ ದೇವರು. ಸತ್ಯವೇ ದೇವರು, ಆತ್ಮನು ಪರಶಿವನ ಚಿದಂಶ ಪಿಂಡಮಧ್ಯದಲ್ಲಿ ಅಡಗಿದ್ದಾನೆ. ಪರಮಾತ್ಮನು ಸೃಷ್ಟಿ ಸ್ಥಿತಿ–ಲಯಕ್ಕೆ ಕಾರಣವು, ಈ ಸೃಷ್ಟಿ ಶಿವನ ಲೀಲಾ ವಿನೋದದ ಕಾರಣ ಉತ್ಪತ್ತಿಯಾಯಿತು. ಲೀಲೆ ಮುಗಿದಾಗ ಅವನಲ್ಲೇ ಅಡಗುತ್ತದೆ. ದೇವನು ಒಬ್ಬನೇ ಅವನು ವಿಶ್ವವನ್ನು ರಚಿಸಿ ವಿಶ್ವಮಯನಾಗಿದ್ದಾನೆ. ಅವನು ಸರ್ವಶಕ್ತ. ಜಗದ ತಂದೆ–ತಾಯಿ. ಕಲ್ಯಾಣಕಾರಕ, ಭಕ್ತಿಗೆ ಒಲಿಯುವನು. ಅವನಿಲ್ಲದ ಸ್ಥಳವಿಲ್ಲ. ವಿಶ್ವನೆಂಬ ಮಹಾಯಂತ್ರಕ್ಕೆ ಚಾಲಕ. ವಿಶ್ವತೋಚಕ್ಷು, ದೇವರ ಲೀಲೆ ವಿಚಿತ್ರವೆಂಬುದನ್ನೆಲ್ಲ ಪ್ರವಚನದಲ್ಲಿ ನಿರರ್ಗಳವಾಗಿ ಮಾತನಾಡುವ ಪೂಜ್ಯ ಲಿಂಗಾನಂದರ ಪ್ರವಚನ ಸಾಹಿತ್ಯ ಕೃತಿ 'ದೇವರು' ಪುಸ್ತಕದಲಿ ಸಾದರಪಡಿಸಿದ್ದಾರೆ."೫೭

---

೫೭ "  " ದೇವರು. ಸಂ–ಡಾ. ಬಿ.ಸಿ.ಜವಳಿ. ಪ್ರ– ತೋಂಟದಾರ್ಯ ಮಠ, ಗದಗ. (೧೯೯೫)

ವೀರಶೈವ ಪುಣ್ಯಪುರುಷರ ಸಾಹಿತ್ಯ ರತ್ನಮಾಲೆ- ೧೪೦ ನೇ ಕೃತಿ. ಪುಟ ೧೦೧-೧೦೩ ರಲ್ಲಿ. ಭಕ್ತಿ, ಗುರು, ಜಂಗಮ ಈ ಪದಗಳು ಹೇಗೆ ತತ್ವವಾಚಕವಾಗಿವೆಯೆಂಬುದನ್ನು ವಿವರಿಸಿದ್ದಾರೆ. ಇದು ಲಿಂಗಾಯತರಲ್ಲಿಯ ಪಂಗಡಗಳ ಬಗೆಗೆ ಇರುವ ಅಶಾಸ್ತ್ರೀಯ ಭಾವನೆಯನ್ನು ತೊಡೆದುಹಾಕಲು ಉಪಯುಕ್ತ ಶಿವಯೋಗ-ವಿವಿಧಯೋಗಗಳ ಪರಿಣಾಮ, ದೈವವಾದ ಹಾಗೂ ಪ್ರಯತ್ನವಾದಗಳಲ್ಲಿ ವ್ಯಕ್ತಿಗೆ ಎರಡೂ ಬೇಕು ಎಂಬ ಶರಣರ ದೃಷ್ಟಿ ಈ ಎಲ್ಲವುಗಳನ್ನು ಈ ಕೃತಿಯಲ್ಲಿ ಶ್ರೀ ಲಿಂಗಾನಂದ ಸ್ವಾಮಿಗಳು ಮನಂಬುಗುವಂತೆ ವಿವರಿಸಿದ್ದಾರೆ. ವಿವರಣೆ ಕಲೆ ಅವರಿಗೆ ಕರಗತವಾಗಿತ್ತೆಂಬುದನ್ನು ಕೃತಿಯ ಉದ್ದಕ್ಕೂ ಮನಗಾಣುತ್ತೇವೆ. ವಚನಶಾಸ್ತ್ರದ ಆಳವಾದ ಅಧ್ಯಯನಕ್ಕೆ ಈ ಕೃತಿ ಕೈಗನ್ನಡಿಯಾಗಿದೆ.

ವಚನಾಮೃತ: ಮೊದಲು ಈ ಕೃತಿ ಕ್ರಿ. ಶ. ೧೯೭೨ ರಲ್ಲಿ ಪ್ರಕಟವಾಗಿ, ಅದರ ನಾಲ್ಕನೆಯ ಮುದ್ರಣ ಕ್ರಿ. ಶ. ೧೯೮೫ ರಲ್ಲಾಗಿದೆ. ತನುವಿನ ಒಳ ಹೊರಗಿರುವ, ಆಂತರಿಕ, ಸಾಮಾಜಿಕ ಲೋಪದೋಷಗಳ ಭೀಕರ ರೋಗಗಳಿಗೆ, 'ಶರಣರ ವಚನಾಮೃತಗಳು ದಿವ್ಯೌಷಧಿಗಳು' ಎಂದು ಅರಿದು, ಅವುಗಳನ್ನು ಜನಸಾಮಾನ್ಯರಿಗೆ ಪಂಡಿತ-ಪಾಮರರಿಗೆ ಹಂಚಲು, ಈ "ವಚನಾಮೃತ"ವು ಹೊರ ಬರುತ್ತಿದೆಯೆಂದು ಪ್ರಕಾಶಕರು ಹೇಳಿದ್ದಾರೆ. ವಚನಗಳು ನೋಡಲಿಕ್ಕೆ ಸುಲಭವಾಗಿ ತೋರಿದರೂ ಬಹಳ ಅರ್ಥಗರ್ಭಿತ ತತ್ವವನ್ನು ಒಳಗೊಂಡಿದ್ದು, ಮಾರ್ಮಿಕವಾಗಿರುತ್ತವೆ. ಒಂದೊಂದು ವಚನವೂ ಸ್ವತಂತ್ರ ಘಟಕವಾಗಿದ್ದು, ವಿಶಿಷ್ಟ ತತ್ವವು ಪ್ರತಿಪಾದಿಸುತ್ತದೆ. ವಚನದಲ್ಲಿ ಅಡಗಿರುವ ತತ್ವ ಅರಿವಾಗಬೇಕಾದರೆ, ಅವುಗಳ ವಿವರಣೆ, ಅಲ್ಲಿಯ ತಾತ್ವಿಕ ವಿವೇಚನೆ ಅತ್ಯಗತ್ಯ ಶರಣರ ವಚನಗಳಿಗೆ, ತಾತ್ವಿಕವಾಗಿ, ಸಾಹಿತ್ಯಿಕವಾಗಿ, ಸಾಮಾಜಿಕವಾಗಿ, ರಾಜಕೀಯ ಸಿದ್ಧಾಂತವಾಗಿ, ಕೌಟುಂಬಿಕ ವ್ಯವಸ್ಥೆಯಾಗಿ-ಹೀಗೆ ನಾನಾ ನಿಟ್ಟಿನಿಂದ ನೋಡಿ ವ್ಯಾಖ್ಯಾನಿಸುವುದು, ಟೀಕೆ-ಟಿಪ್ಪಣಿ ಬರೆಯುವುದು ಇಂದು ಅತ್ಯಂತ ಅವಶ್ಯಕವಿದೆ; ಹೀಗೆ ಮಾಡಿದಾಗ ಮಾತ್ರ ವಚನ ಸಾಹಿತ್ಯದ ಮಾಹಿತಿ, ಅವು ಎತ್ತಿ ಹಿಡಿಯುವ ಸಿದ್ಧಾಂತಗಳು, ಜಾಗತಿಕ ಸಿದ್ಧಾಂತಗಳ ಹಿನ್ನೆಲೆಯಲ್ಲಿ ತೂಗಿ ನೋಡಲು (ಈ ವಚನಗಳು) ಅನುವು ಮಾಡಿಕೊಡುತ್ತವೆ. ಶರಣ ಸಾಹಿತ್ಯದ ಮಹತಿ ಹಲವು-ಮಡಿ ಹೆಚ್ಚಿಸುತ್ತದೆ. ಅವು, ಅಧ್ಯಾತ್ಮ ಪ್ರಮುಖವಾಗಿ ನುಡಿದ ಮಾತುಗಳಾಗಿದ್ದರೂ, ಉತ್ತಮ ಬದುಕಿನ ಎಲ್ಲ ಅಂಗಗಳನ್ನೂ ಒಳಗೊಳ್ಳುತ್ತವೆ. ಶರಣ ಸಾಹಿತ್ಯ ಜನರ ಅಂತರಾಳವನ್ನು ಪ್ರವೇಶಿಸಿ, ತನು-ಮನಗಳ ಕತ್ತಲೆಯನ್ನು ದೂರ ಮಾಡಲು ಸಹಕಾರಿಯಾಗುತ್ತದೆ. ವಚನಗಳು ದೈವೀಶಕ್ತಿಯನ್ನು ಶೋಧಿಸುವವರ ಬಾಯಿಂದ ಬಂದ ಅಂತಃಸ್ಫುರಣದ ಕಿಡಿಗಳು; ಸತ್ಯಾನ್ವೇಷಿಯ ಅನುಭವದ ಕಿಡಿಗಳು; ಇಲ್ಲಿ ಹೊರಗೆ ತೋರುವ ಅರ್ಥಕ್ಕಿಂತ ಹೆಚ್ಚಿನ ಗೂಢಾರ್ಥವಿರುವುದನ್ನು

ಗಮನಿಸಬೇಕು. ಶ್ರೀ ಲಿಂಗಾನಂದ ಸ್ವಾಮಿಗಳವರು, ಬಹುಕಾಲ ಬಸವಧರ್ಮ-ವಚನ ಸಾಹಿತ್ಯಗಳ ಬಗೆಗೇ ಚಿಂತನ ಮಾಡುತ್ತಿದ್ದುದರಿಂದ, ತತ್ವಶಾಸ್ತ್ರದ ವಿದ್ಯಾರ್ಥಿಯಾದುದರಿಂದ, ಬರಿ ಸಾಹಿತ್ಯದ ಸೊಗಡಿಗೆ ಮಾತ್ರ ಮಾರು ಹೋದವರಲ್ಲ. ಒಂದು ಮಾತು ಸುಂದರವಾಗಿರಬಹುದು, ಆದರೆ ಅರ್ಥ ಕಡಿಮೆ ಇರಬಹುದು. ಶರಣರ ಮಾತುಗಳಲ್ಲಿ ರಚನಾ ಸೌಂದರ್ಯಕ್ಕಿಂತ ಅರ್ಥದ ಮೇಲ್ಮೈಯನ್ನು ಕಾಣುವುದೇ ಶ್ರೇಯಸ್ಕರ. ಆಡಿದ ಮಾತು ಮುತ್ತಿನಂತಿರುವುದೇ ಬಸವಣ್ಣನ ಮತ, ಮಾತು ಜ್ಯೋತಿಯಾಗಿರಬೇಕು, ಜ್ಯೋತಿರ್ಲಿಂಗವಾಗಿರಬೇಕು ಎಂಬುದು ಪ್ರಭುದೇವರ ನುಡಿ. ವಚನಗಳ ವ್ಯಾಖ್ಯಾನಕ್ಕೆ ಪಾಂಡಿತ್ಯಕ್ಕಿಂತ ಹಿರಿದಾದ ಜೀವನಾನುಭವವೂ ಮುಖ್ಯ. ಜೀವಾನಾನುಭವ ಹೆಚ್ಚಿದಂತೆಲ್ಲ ವಚನಗಳ ಹೊಸ ಹೊಸ ಅರ್ಥ ಗಮನಕ್ಕೆ ಬರುತ್ತದೆ. ಈ ಹಿನ್ನೆಲೆಯಲ್ಲಿಯೇ ಹೊರಹೊಮ್ಮುವ ಪೂಜ್ಯಶ್ರೀ ಲಿಂಗಾನಂದ ಮಹಾಸ್ವಾಮಿಗಳವರ 'ವಚನ ನವನೀತ' ಮತ್ತು 'ವಚನರಶ್ಮಿ' ಕೃತಿಗಳು ಒಂದೇ ಧ್ಯೇಯ ಹೊತ್ತು ಪ್ರಕಟವಾದ ಕೃತಿಗಳಾಗಿವೆ.

ಇಷ್ಟಲಿಂಗದ ತಾತ್ವಿಕ ವಿವರ ನೀಡುತ್ತಾ ಶಿವಯೋಗದಿಂದ ಸತ್ಪರಿಣಾಮವನ್ನು ಹೇಳಿದ್ದಾರೆ: 'ಕರ್ಮಯೋಗದಿಂದ ಅನ್ನಮಯ ಕೋಶವಾದ ಶರೀರಕ್ಕೆ, ಹಠಯೋಗದಿಂದ ಪ್ರಾಣಮಯಕೋಶಕ್ಕೆ ಧ್ಯಾನಯೋಗದಿಂದ ಮನೋಮಯ ಕೋಶಕ್ಕೆ, ಜ್ಞಾನಯೋಗದಿಂದ ವಿಜ್ಞಾನಮಯ ಕೋಶವಾದ ಬುದ್ಧಿಗೆ, ಭಕ್ತಿಯೋಗದಿಂದ ಆನಂದಮಯ ಕೋಶವಾದ ಹೃದಯಕ್ಕೆ ಸಂಸ್ಕಾರವು ದೊರೆಯುತ್ತದೆ. ಈ ಐದು ತತ್ವಗಳನ್ನು ಲಿಂಗಾಪೂಜಾ ವಿಧಾನವನ್ನು ಲಿಂಗಾನುಸಂಧಾನುವನ್ನು ಕೊಟ್ಟು ಕೊನೆಯಲ್ಲಿ ಭಕ್ತಿಗೀತೆಗಳನ್ನು ಸಂಗ್ರಹಿಸಿದ್ದಾರೆ. (ಪುಟ ೧೭-೮೦)

**ಚುಳುಕಾದ ಚೇತನ** : ಗುರೂಜಿ ಮತ್ತು ಮಾತಾಜಿ ಇಬ್ಬರ ಹೆಸರಿನಲ್ಲಿ ಈ ಕೃತಿ ಪ್ರಕಟವಾಗಿದ್ದು, ಬಸವಣ್ಣನವರು ಲಿಂಗವನ್ನು ಎಡಗೈ ಹಸ್ತದಲ್ಲಿರಿಸಿಕೊಂಡು ಧ್ಯಾನ ಮಗ್ನರಾಗಿರುವ ಚಿತ್ರವನ್ನು ಹೊಂದಿದೆ. ಕ್ರಿ.ಶ. ೧೯೬೧ ರಲ್ಲಿ ಪ್ರಥಮ ಮುದ್ರಣ ಹೊರಬಂದರೆ, ಈ ಕೃತಿಯ ೩ನೆಯ ಮುದ್ರಣ ಕ್ರಿ.ಶ. ೧೯೯೧ ರಲ್ಲಿ ಹೊರಬಂದಿದೆ. ಹೀಗಾಗಿ ಈ ಎಲ್ಲಾ ಪುಸ್ತಕಗಳು ಜನರಿಂದ ಅಪಾರ ಬೇಡಿಕೆ ಪಡೆದವುಗಳಾಗಿವೆ. ಎಂದು ಹೇಳಬಹುದಾಗಿದೆ. ಹಿಂದಿನ ಲಿಂಗತತ್ವ ದರ್ಪಣವೇ ಬೇರೊಂದು ರೂಪ ತಾಳಿ ಈ ಹೆಸರು ಹೊತ್ತುದರಿಂದ ಇದರ ಅನೇಕ ವಿಷಯಗಳು ಆ ಪುಸ್ತಕದಲ್ಲಿದ್ದ ವಿಷಯಗಳೇ ಆಗಿವೆ. ಜಗದ್ಗುರು ಲಿಂಗಾನಂದ ಸ್ವಾಮಿಗಳು ವಿಷಯವನ್ನು ನೇರವಾಗಿ ಹಾಗೂ ನಿಖರವಾಗಿ ಹೇಳುವುದನ್ನು ನಾವಿಲ್ಲಿ ಕಾಣುತ್ತೇವೆ. ಸತ್ವದಲ್ಲಿ, ವಿವರಣೆಯಲ್ಲಿ-ವ್ಯಾಸಂಗದಲ್ಲಿ-ಎಲ್ಲದರಿಂದಲೂ ಶ್ರೀ ಲಿಂಗಾನಂದರ ಹೆಸರನ್ನು ಅಗ್ರ ಸಾಹಿತಿಗಳ ಪಂಕ್ತಿಯಲ್ಲಿ ಸೇರಿಸಲು ಅರ್ಹವಾಗಿದೆ. ಇದನ್ನು 'ಅಕ್ಕನ ಪ್ರವಚನ' ಕೃತಿ ಶಿವಶರಣರ,

ವಿಶ್ವಧರ್ಮದ, ಉದಾತ್ತ, ಉನ್ನತ, ನಿತ್ಯನೂತನ, ಸತ್ಯತತ್ವಗಳು ಪ್ರಪಂಚದ ಮೂಲೆ ಮೂಲೆಗೂ ಹರಡಿ ಮಾನವರ ಹೃದಯಾಂತರಾಳದಲ್ಲಿ ಹದುಳಿಗೆ ಭಾವವನ್ನು ಹುಟ್ಟಿಸಲೆಂಬ ಉದ್ದೇಶದಿಂದ ಹೊರಹೊಮ್ಮಿದುದಾಗಿದೆ. ಒಟ್ಟಾರೆ ಪೂಜ್ಯ ಲಿಂಗಾನಂದರು ಅಗ್ರ ಸಾಹಿತಿಗಳ ಪಂಕ್ತಿಯಲ್ಲಿ ಸೇರುತ್ತಾರೆ.

ಅಕ್ಕನ ಪ್ರವಚನ ಕೃತಿಯಲ್ಲಿ ಅಕ್ಕಮಹಾದೇವಿಯ ಬದುಕಿನ ವಿವರ ಅಲ್ಲದೆ ವೀರಶೈವ ಧರ್ಮದ ಅಥವಾ ಲಿಂಗಾಯತ ಧರ್ಮದ ತತ್ವಗಳನ್ನು ವಿಶ್ವಧರ್ಮದ ಹಿನ್ನೆಲೆಯಲ್ಲಿ ವಿಷಧೀಕರಿಸಲಾಗಿದೆ. ವೇದಕಾಲದಿಂದ ಆಗಾಗ ಭಾರತೀಯ ಸ್ತ್ರೀ ಮಿಂಚಿ, ಪ್ರತಿಭೆ ಮತ್ತು ಕಲಾನೈಪುಣ್ಯ ಹಾಗೂ ಆಧ್ಯಾತ್ಮಗಳಿಂದ ಶೋಭಿಸಿದ್ದರೂ ಸಾಮೂಹಿಕವಾಗಿ ಸ್ತ್ರೀಯರು ತಮ್ಮ ಉದ್ಧಾರದ ಕ್ರಾಂತಿಕಹಳೇನ್ನೂದಿದುದು ಬಸವಣ್ಣನ ಕಾಲದಲ್ಲಿಯೇ. ಅದರ ಪ್ರಭಾವದ ಘನತೆಯೇ ಮಹಾದೇವಿಯಕ್ಕ. ಅಕ್ಕಮಹಾದೇವಿ ಅತಿ ಮಾನವಳು. ದೈವೀಗುಣವುಳ್ಳವಳು, ಅಕ್ಕನ ತಾಯಿತಂದೆಗಳು ಶೈವರಾಗಿದ್ದರೂ ಲಿಂಗಾಯತ ಧರ್ಮ ಸ್ವೀಕರಿಸಿದ್ದರು. (ಪುಟ-೧೬) ಅಕ್ಕಮಹಾದೇವಿಗೆ ಕನ್ನಡ, ಸಂಸ್ಕೃತ ಭಾಷೆ ಅಧ್ಯಯನ ಆಗಿರುತ್ತದೆ. ಮಾತಾಪಿತರು ಲಿಂಗದೀಕ್ಷೆ ಮಾಡಿಸಿರುತ್ತಾರೆ. ಆಕೆಯ ಗುರುಗಳು ಯಾರು ಎಂಬುದು ವಾದಗ್ರಸ್ತವಾಗಿದೆ ಎಂದಿದ್ದಾರೆ ಶ್ರೀ ಲಿಂಗಾನಂದರು (ಪುಟ-೨೬) ಶಿಕ್ಷಾಗುರು ಅಕ್ಕನಿಗೆ ಬಸವಣ್ಣ ಎಂದಿದ್ದಾರೆ. (ಪುಟ-೨೯) ಲಿಂಗಾಯತರಲ್ಲಿ 'ಗುರುಶಿಷ್ಯನನ್ನು ತನ್ನಂತೆ ಮಾಡಬೇಕೆ' ಶಿಷ್ಯನು ಗುರುಕಾರುಣ್ಯದಿಂದ ಗುರುವೇ ಆಗುತ್ತಾನೆ. ಗುರುವಚನದಿಂದ ಭವಪಾಶ, ಜಾತಿ ಭೇದ, ಸೂತಕ ಪಾತಕ ಅರಿದು ಲಿಂಗದ ಕಡೆ ಆವರಿಸಿ ಸದ್ಭಕ್ತಿ ನೆಲೆಗೊಂಡು ನಿಜಮುಕ್ತಿಯಾಗುತ್ತದೆ ಎಂಬುದನ್ನು ಅಕ್ಕನ ಜೀವನದ ಮೂಲಕ ಬಿತ್ತರಿಸಲಾಗಿದೆ. ಈ ಗ್ರಂಥದ ಪುಟ ಪುಟಗಳಲ್ಲಿ ಬಸವಧರ್ಮದ ಮಹತ್ವವನ್ನು ತಿಳಿಸಿದ್ದಾರೆ. (ಪುಟ-೩೫ ನೋಡಿರಿ) ಇಷ್ಟಲಿಂಗದ ಮಹತ್ವನ್ನೂ ತಿಳಿಸಿದ್ದಾರೆ. 'ಕನಸು ಬೀಳುವುದು ಹೇಗೆ' ? ಎಂಬುದನ್ನು ಅಕ್ಕಮಹಾದೇವಿ ಕಂಡ ಕನಸಿನ ಹಿನ್ನೆಲೆಯಾಗಿ ವಿವರಿಸಿದ ಭಾಗವು ಓದುಗರ ದೃಷ್ಟಿಯಿಂದ ತಿಳಿದುಕೊಳ್ಳಬೇಕಾದ ಪ್ರಮುಖ ವಿಷಯವೇ. ಹಿಂದೆ ವಚನಗಳಿಗೆ ವ್ಯಾಖ್ಯಾನ ಬರೆದ ವಿಷಯಗಳು ಇಲ್ಲಿ ಸಮಯೋಚಿತವಾಗಿ ಬಳಕೆಗೊಂಡಿವೆ. ಆತ್ಮ ಪರಮಾತ್ಮ, ಸೃಷ್ಠಿ, ಮಾಯೆ, ಭಕ್ತಿ ಬಂಧನ, ಪುಣ್ಯ ಪಾಪ, ಕರ್ಮ, ಪುನರ್ಜನ್ಮ, ದೈವಾನುಗ್ರಹ ಅದಕ್ಕಾಗಿ ಭಕ್ತರ ಮೊರೆ, ಜಾಣ್ಮೆಯಿಂದ ಅಕ್ಕಮಹಾದೇವಿ ಭವಪಾಶದಿಂದ ಮುಕ್ತರಾದುದು ಈ ಎಲ್ಲಾ ವಿಷಯಗಳು ಶರಣರ ದರ್ಶನ ಶಾಸ್ತ್ರದ ಹಿನ್ನೆಲೆಯಲ್ಲಿ ಸಮರ್ಪಕವಾಗಿ ಹೇಳಲ್ಪಟ್ಟಿವೆ. ಜಗದ್ಗುರು ಲಿಂಗಾನಂದರ ಪಾಂಡಿತ್ಯಕ್ಕೆ ಈ ಗ್ರಂಥ ದರ್ಪಣವಾಗದೆ ಅವರ ಚಿಂತನ ಗಟ್ಟಿಗೊಂಡು ಮಾಧುರ್ಯದ ಫಲ ನೀಡುತ್ತದೆ.

ಉದಾಹರಣೆಗೆ 'ವಚನ ನವನೀತ'ದಲ್ಲಿಯ 'ಕಲ್ಯಾಣ ರಾಜ್ಯ', ಸ್ವಯಂಕೃತ ಬಸವಣ್ಣ', 'ನಿವೇದಿತ ಪುರುಷ ಬಸವಣ್ಣ', 'ಷಟ್‌ಪುರುಷ ಸಿದ್ಧಿಪುರುಷ ಬಸವಣ್ಣ', 'ಬಾಳಸಾರ್ಥಕ್ಯ', 'ಅರಿವಿನಿಂದ ಗುರುತ್ವ', ಇತ್ಯಾದಿ ಶೀರ್ಷಿಕೆಗಳಲ್ಲಿರುವ ವಚನಗಳ ವ್ಯಾಖ್ಯಾನಗಳನ್ನು ಅವಲೋಕಿಸಬೇಕು, ಅವಲೋಕಿಸಿ ಆಸ್ವಾದಿಸಬೇಕು. ಅದೇ ರೀತಿ 'ವಚನ ರಶ್ಮಿ'ಯಲ್ಲಿರುವ 'ಕಾರಣಿಕ ಬಸವಣ್ಣ', 'ಶಿವಯೋಗಿ ಬಸವಣ್ಣ' ಶೀರ್ಷಿಕೆಯಡಿಯಲ್ಲಿ ವ್ಯಾಖ್ಯಾನಗೊಂಡ ಆಯಾ ಧರ್ಮಗಳ ಆಚಾರ-ವಿಚಾರಗಳು, ಪ್ರತಿಯೊಂದು ಧರ್ಮಗುರುಗಳು ತಮ್ಮ ಶಿಷ್ಯ ಪರಂಪರೆಗೆ ಭಕ್ತ ಕುಲಕೋಟಿಗೆ ಪ್ರವಚನ ಮುಖಾಂತರ ಪರಂಪರೆಗಳನ್ನು ಬಿಡಲಾರದೆ ಅನುಸರಿಸಲು ಉಪದೇಶ ಮಾಡುತ್ತಾರೆ. ಹಾಗೆಯೇ ನಮ್ಮ ಶರಣರು "ಆಚಾರವೇ ಸ್ವರ್ಗ ಅನಾಚಾರವೇ ನರಕ" ಎಂದರು. "ಶೀಲ ಇದ್ದಲ್ಲಿ ಸಂಪತ್ತು ಇರುತ್ತೆ, ಹಾಗೇ ಆಚಾರವಿದ್ದಲ್ಲಿ ಸ್ವರ್ಗ ಇರುತ್ತೆ" ಎಂದು ಆಚಾರದ ಶ್ರೇಷ್ಠತೆಯನ್ನು ತಿಳಿಸಿದರು. ಧರ್ಮದ ನೆಲೆಗಟ್ಟುಗಳಾದ ಪರಂಪರೆ ಹಾಗೂ ಆಚಾರ-ವಿಚಾರಗಳನ್ನು ಸಮಗ್ರವಾಗಿ ತಿಳಿಸುವದೇ ಪ್ರವಚನ. ಸಮಾಜದ ಸಂಘಟನೆಗೆ ಪ್ರೇರಕವಾಗುತ್ತದೆ. ಎಂಬುದು ಪೂಜ್ಯ ಲಿಂಗಾನಂದರರ ಆಶಯವಾಗಿತ್ತು.

ಸಮಾಜ ವಿಭಜನೆಯಾದಾಗ ವ್ಯಕ್ತಿ-ವ್ಯಕ್ತಿಗಳಲ್ಲಿ ಸಾಮರಸ್ಯ ಇಲ್ಲವಾದಾಗ ಸಮಾಜವನ್ನು-ವ್ಯಕ್ತಿಗಳನ್ನು ಸೂಜಿಯಂತೆ ಕಾರ್ಯ ಮಾಡಿ ಒಂದುಗೂಡಿಸುವದೇ ಪ್ರವಚನ. ನೂರಾರು ವರ್ಷಗಳ ಹಿಂದೆ ಸಮಾಜದಲ್ಲಿ ಸಾಮರಸ್ಯ ಇಲ್ಲದಾಗ ಹಾನಗಲ್ಲ ಗುರು ಶ್ರೀಕುಮಾರೇಶ್ವರರು ಅಖಿಲ ಭಾರತ ಮಹಾ ಸಭೆ ಸ್ಥಾಪಿಸಿ ತನ್ಮುಖೇನ ಶ್ರೀ ಮದ್ವೀರಶೈವ ಶಿವಯೋಗಮಂದಿರವೆಂಬ ಗುರುಕುಲ ಸ್ಥಾಪಿಸಿ ಸಮಾಜದ ಉನ್ನತಿಗಾಗಿ ಗುರು-ವಿರಕ್ತರನ್ನು, ಸಿದ್ಧಗೊಳಸಿ ಅವರನ್ನು ಮಠಾಧೀಶರನ್ನಾಗಿಸಿ ಆಯಾ ಭಾಗದಲ್ಲಿ ಪ್ರವಚನ ಮುಖಾಂತರ ಸಮಾಜ ಸುಸ್ಥಿತಿಗೆ ತರಲು ಪ್ರಯತ್ನಿಸಿದ್ದು ಗುರು ಕುಮಾರ ಶಿವಯೋಗಿಗಳ ದೂರದೃಷ್ಟಿಯನ್ನು ಸಮಾಜ ಎಷ್ಟು ನೆನೆಸಿದರೂ ಕಡಿಮೆ. ಅಂತಹ ಸಮಾಜ ಸಂಘಟನೆ ಪ್ರೇರಕ ಶಕ್ತಿಯೇ ಪ್ರವಚನ.

ಮಾನ್ವಿ ತಾಲೂಕಿನ ಅಡವಿ ಅಮರೇಶ್ವರ ಕ್ಷೇತ್ರದ ಪೀಠಾಧಿಪತಿಗಳಾದ ಶ್ರೀ ಶಾಂತಮಲ್ಲ ಸ್ವಾಮಿಗಳು ಪುರಾಣ ಹೇಳದೇ ಇದ್ದರೂ ಆಶೀರ್ವಚನದಲ್ಲಿ ಸುಭಾಷಿತ ಸಂಸ್ಕೃತ ಶ್ಲೋಕಗಳನ್ನು ಪಾಂಡಿತ್ಯ ಪೂರ್ಣವಾಗಿ ಹೇಳಿ ಜನಮನವನ್ನು ಗೆದ್ದಿದ್ದಾರೆ. ಗದಗಿನ ಶ್ರೀ ಸೋಮಶೇಖರ ಶಾಸ್ತ್ರಿಗಳು ಕುಮಾರೇಶನ ಆಶೀರ್ವಾದದಿಂದ ಹೇಳುವ ಕಲೆಯನ್ನು ಕರಗತ ಮಾಡಿಕೊಂಡು ಕರ್ನಾಟಕ-ಮಹಾರಾಷ್ಟ್ರಗಳಲ್ಲಿ ತಮ್ಮ ಅಸ್ಖಲಿತವಾಣಿಯಿಂದ ಪ್ರವಚನ ಮುಖಾಂತರ ಸಮಾಜವನ್ನು ತಿದ್ದುವ ಮಾರ್ಗದರ್ಶಕರಾಗಿದ್ದಾರೆ. ಗುರು ಮಹಾಂತರ ಹಾಗೂ ಸಜ್ಜನರ ಆಶೀರ್ವಾದದಿಂದ ಹಲವು ಸಾಧಕರು ಅನೇಕ ವರ್ಷಗಳಿಂದ ಉಪದೇಶ ಮಾಡುತ್ತಾ ಹಲವಾರು

ಕಡೆ ಸಂಚರಿಸಿ, ತಮ್ಮ ಅಸ್ಖಲಿತವಾಣಿಯಿಂದ ಸಿಂಧನೂರ ತಾಲೂಕಿನ ಗೊರೆಬಾಳ ಗ್ರಾಮ ಒಂದರಲ್ಲಿಯೇ ೧೫ ವರ್ಷ ಪ್ರವಚನ ಯಶಸ್ವಿಗೊಳಿಸಿದ ಖ್ಯಾತಿ ಷ.ಬ್ರ. ಮಹಾಂತಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ನಂದವಾಡಗಿಯವರಿಗೆ ಸಲ್ಲುತ್ತದೆ.

೫) ಲಿಂ.ಪೂಜ್ಯ ಶಿವಬಸವ ಸ್ವಾಮಿಗಳು ನಾಗನೂರ ರುದ್ರಾಕ್ಷಿಮಠ ಬೆಳಗಾವಿ.

ಉತ್ತರ ಕರ್ನಾಟಕದಲ್ಲಿ ದಾಸೋಹಕ್ಕೆ ಹೆಸರು ಮಾಡಿದ ಮಠಗಳು ಎರಡು. ಒಂದು ಬೆಳಗಾವಿಯ ನಾಗನೂರ ರುದ್ರಾಕ್ಷಿಮಠ. ಎರಡನೆಯದು ಧಾರವಾಡದ ಮುರಘಾಮಠ. ಇವೆರಡೂ ಮಠಗಳು ಧಾರ್ಮಿಕ ಪ್ರಚಾರಕ್ಕೆ ಹೆಚ್ಚಿನ ಒತ್ತುಕೊಡದೇ ಶೈಕ್ಷಣಿಕ ಅಭಿವೃದ್ಧಿಗೆ ಹೆಚ್ಚಿನ ಮಹತ್ವ ಕೊಟ್ಟವುಗಳೆಂದರೆ ತಪ್ಪಾಗಲಾರದು.

ಬ್ರಿಟಿಷರ ಆಳ್ವಿಕೆಯಲ್ಲಿ ಬಡಮಕ್ಕಳ ಅಥವಾ ಶಿಕ್ಷಣ ಪಡೆಯಬೇಕೆಂಬ ಹಂಬಲದವರಿಗೆ ಅನುಕೂಲತೆಗಳಿರಲಿಲ್ಲ. ಶಾಲೆ-ಕಾಲೇಜಗಳ ಸಂಖ್ಯೆಗಳೂ ಕಡಿಮೆ. ಜಿಲ್ಲೆಯಲ್ಲಿ ಒಂದೆರಡು ಪ್ರೌಢಶಾಲೆಗಳು ಒಂದೇ ಒಂದು ಕಾಲೇಜುಗಳಿದ್ದವು. ಅಲ್ಲಿಗೆ ಹೋಗಿ ಶಿಕ್ಷಣ ಪಡೆಯುವದು ಅಸಾಧ್ಯದ ಮಾತಾಗಿತ್ತು. ಇದನ್ನರಿತ ಪೂಜ್ಯ ಶಿವಬಸವ ಸ್ವಾಮಿಗಳು ಉಚಿತ ಪ್ರಸಾದ ಹಾಗೂ ವಸತಿ ನಿಲಯಗಳನ್ನು ಸ್ಥಾಪಿಸಿ ಸಾಮಾನ್ಯರಿಗೂ ಶಿಕ್ಷಣ ದೊರಕುವಂತೆ ಮಾಡಿದ ಪುಣ್ಯಜೀವಿಗಳು.

ರುದ್ರಾಕ್ಷಿಮಠ ಮೂಲತಃ ಬೈಲಹೊಂಗಲ ತಾಲೂಕಿನ ನಾಗನೂರು. ಡಾ. ಶಿವಬಸವ ಸ್ವಾಮಿಗಳು ತಮ್ಮ ಕಾರ್ಯಕ್ಷೇತ್ರವನ್ನು ಬೆಳಗಾವಿಗೆ ಒಯ್ದು ಶೈಕ್ಷಣಿಕ ಬೆಳವಣಿಗೆಗೆ ಕಾರಣೀಕರ್ತರಾದರು. ಅಂದಿನ ಕಾಲದಲ್ಲಿ ಶಾಲೆ ಕಲಿಯಬೇಕನ್ನುವವರಿಗೆ ಸಾಮಾನ್ಯ ಜನರೂ ಮಾತನಾಡುತ್ತಿದ್ದ ಮಾತುಗಳೆಂದರೆ "ಬೆಳಗಾವಿಗೆ ಹೋಗ್ರಿ ಅಲ್ಲಿ ನಾಗನೂರ ಸ್ವಾಮಿ ಫ್ರೀ ಬೋರ್ಡಿಂಗ್ ಐತಿ, ಅಥವಾ ಧಾರವಾಡಕ್ಕ ಹೋಗ್ರಿ ಅಲ್ಲಿ ಮುರುಘಾಮಠದ ಫ್ರೀ ಬೋರ್ಡಿಂಗ್ ಅದ" ಎನ್ನುತ್ತಿದ್ದರು. ವಾಹನ ಸೌಕರ್ಯಗಳಿಲ್ಲ ಅಂದಿನ ಕಾಲದಲ್ಲಿ ಪೂಜ್ಯರು ಚಕ್ಕಡಿಯಲ್ಲಿ ಗ್ರಾಮೀಣ ಪ್ರದೇಶಗಳಿಗೆ ಹೋಗುತ್ತಿದ್ದರು. ಹೋದಲ್ಲಿ ವಚನಗಳನ್ನು ಹೇಳಿ ಅವುಗಳ ಮೇಲಿಂದ ಕೆಲವು ಹಿತನುಡಿಗಳನ್ನು ಹೇಳುತ್ತಿದ್ದರು. ಅಂತಹ ನುಡಿಮುತ್ತುಗಳನ್ನೇ ಪ್ರವಚನವೆಂದು ಕರೆದರೆ ತಪ್ಪಾಗಲಾರದು. ಅಂತಹ ನುಡಿಗಳನ್ನು ಹೇಳಿ ಪ್ರಸಾದನಿಲಯಕ್ಕೆ ಧನ-ಧಾನ್ಯ ಸಂಗ್ರಹಿಸಿಕೊಂಡು ಬಂದು ಪ್ರಸಾದನಿಲಯ ಸಾಗಿಸುತ್ತಿದ್ದರು; ಜೊತೆಗೆ ವಿದ್ಯಾರ್ಥಿಗಳಿಗೆ ವಸತಿಗಾಗಿ ಕಟ್ಟಡ ನಿರ್ಮಿಸಿದ್ದು ಸಣ್ಣ ಮಾತೇನಲ್ಲ!

ಅವರ ಮಾತುಗಳಲ್ಲಿ "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ಬಸವಣ್ಣನವರ ವಚನವನ್ನು ಆಧಾರವಾಗಿಟ್ಟುಕೊಂಡು ಮನುಷ್ಯರಿಗೆ ಅಹಂಕಾರ ಒಳ್ಳೆಯದಲ್ಲ, ಅಹಂಕಾರವು ಅವನತಿಗೆ ಕಾರಣವಾಗುವದೆಂದು ವಿವರಿಸುತ್ತಿದ್ದರು; ಇದರೊಂದಿಗೆ ತ್ರಿವಿಧ ದಾಸೋಹ ಮೂಡಲು ಹೇಳುತ್ತಿದ್ದರು ಅವು ಯಾವುವೆಂದರೆ ತನು, ಮನ, ಮತ್ತು ಧನ. ಎಲ್ಲ ದಾನಗಳಲ್ಲಿ ಅನ್ನದಾನ ಮತ್ತು ವಿದ್ಯಾದಾನಗಳು ಶ್ರೇಷ್ಠವಾದವುಗಳು, ನಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರೆಯಲಿ, ಹಾಗೂ ನಮ್ಮ ಮನೆತನ ಉದ್ಧಾರವಾಗಬೇಕಾದರೆ ಶಿಕ್ಷಣ ಅವಶ್ಯ ಎಂಬುದನ್ನು ಹೇಳಿ ಜನರಲ್ಲಿ ಶೈಕ್ಷಣಿಕ ಒಲವು ಮೂಡಿಸಿದರು. ಇದರೊಂದಿಗೆ ಭಾರತಕ್ಕೆ ಸ್ವಾತಂತ್ರ್ಯ ದೊರೆಯಲು ಶಿಕ್ಷಣ ಬೇಕೆಂಬುದನ್ನು ಅರಿತು ಪೂಜ್ಯರು ಅಂತಹ ಮಾತುಗಳನ್ನು ಹೇಳಲು ಮರೆಯುತ್ತಿರಲಿಲ್ಲ. ಜಾತಿ-ಧರ್ಮ, ಕುಲ, ಗೊತ್ರ ನೋಡದೇ ಎಲ್ಲ ಬಡಮಕ್ಕಳಿಗೆ ವಸತಿ ನಿಲಯದಲ್ಲಿ ಪ್ರವೇಶವಿತ್ತು ಪ್ರಸಾದದ ವ್ಯವಸ್ಥೆ ಇತ್ತು, ಪ್ರತಿದಿವಸ ನಡೆಯುವ ಪ್ರಾರ್ಥನೆಯಲ್ಲಿ "ಜಳಕ ಶರೀರ ಸ್ವಚ್ಛ ಮಾಡಿದರ ಪ್ರಾರ್ಥನೆ ಅಂತರಂಗವನ್ನು ಸ್ವಚ್ಛ ಮಾಡುತ್ತದೆ. ದೇವರು ಒಬ್ಬನೇ ಸತ್ಯ, ಪ್ರೀತಿ ಎಲ್ಲರಲ್ಲೂ ಇರಬೇಕು, ಜಾತಿ ಭೇದ ಮಾಡಬಾರದು. ಶಿಕ್ಷಣ ಸಮಾಜಕ್ಕೆ ಉಪಯೋಗ ಆಗಬೇಕು" ಇತ್ಯಾದಿ ಮಾತುಗಳನ್ನು ಹೇಳಿ ವಿದ್ಯಾರ್ಥಿಗಳಲ್ಲಿ ವಿಶಾಲ ಭಾವನೆ ಮೂಡುವಂತೆ ಮಾಡುತ್ತಿದ್ದರು.

### ೬) <u>ಡಾ. ಜ. ಚ. ನಿ.</u>

ಬೆಳಗಾವಿ ಜಿಲ್ಲೆ ಬೈಲುಹೊಂಗಲ ತಾಲ್ಲೂಕು ಕಿತ್ತೂರಿನ ಹತ್ತಿರದ ಅಂಬಡಗಟ್ಟಿಯಲ್ಲಿ ದುಂಡಯ್ಯ-ತಾಯವ್ವೆಯರ ಮಗನಾದ ೧೯೦೯ ರ ಅಕ್ಟೋಬರ್ ೨ ರಂದು ರಾಚಯ್ಯನ ಜನನ. ತಾಯಿ ತೀರಿಕೊಂಡ ಮೇಲೆ ಅಕ್ಕನ ಅಕ್ಕರೆಯಲ್ಲಿ ಬೆಳೆದ. ಊರಿನ ಗೌರಿ ಹುಣ್ಣಿಮೆ ಮುಂತಾದ ಹಬ್ಬಗಳು ಜಾನಪದ ವಾತಾವರಣಮಯವಾಗಿದ್ದು ಮುಂದೆ ಜಾನಪದ ಸಾಹಿತ್ಯ ರಚನೆಗೆ ಕಾರಣವಾಯಿತು.

ಧಾರವಾಡ ಜಿಲ್ಲೆ ನವಲಗುಂದ ತಾಲ್ಲೂಕಿನ ಅಡ್ನೂರಿನಲ್ಲಿ ಮಲ್ಲಿಕಾರ್ಜುನ ಗೌಡರು ತಂದೆಯವರು ಕಟ್ಟಿದ ಮಠಕ್ಕೆ ಮರಿ ಬೇಕೆಂದು ದುಂಡಯ್ಯನವರನ್ನು ಕೇಳಲು ಅವರು ಮಗನ ಅಭಿಪ್ರಾಯ ಕೇಳಿದರು, ಆತ ಒಪ್ಪಿದ. ವಿದ್ಯಾವಂತನಾಗಬಹುದೆಂದು ಒಬ್ಬನೇ ಮಗನಾದರೂ ತಂದೆಯವರು ಒಪ್ಪಿಗೆ ಕೊಟ್ಟರು.

---

**ಆಧಾರ.** "ದಾಸೋಹ" ಪ್ರಸಾದ ನಿಲಯದ ಅಮೃತ ಮಹೋತ್ಸವ ಸ್ಮರಣ ಸಂಪುಟ-೨೦೦೭.

ಮಲ್ಲಿಕಾರ್ಜುನ ಗೌಡರು ಹಾನಗಲ್ ಕುಮಾರ ಸ್ವಾಮಿಗಳ ಶಿವಯೋಗ ಮಂದಿರಕ್ಕೆ ಸೇರಿಸಲು ಹೇಳಿದರು. ಗುರುವಿರಕ್ತರೆಂಬ ಭೇದವಿಲ್ಲದೆ ಎಲ್ಲರೂ ಸಮರಸದಿಂದ ಬಿದಿರಿಯ ಶ್ರೀ ಕುಮಾರ ಪಟ್ಟಾಧ್ಯಕ್ಷರು ದೀಕ್ಷೆ ನೀಡಿ ಚಂದ್ರಶೇಖರದೇವ ಎಂದು ಹೆಸರಿಟ್ಟು ಯೋಗವನ್ನು ಹೇಳಿಕೊಟ್ಟರು. 'ಮಾಳವಿಕಾಗ್ನಿ ಮಿತ್ರ' ನಾಟಕವನ್ನು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದ ಮಾಡಿದರು. ಇದೇ ಅವರ ಮೊದಲ ಅನುವಾದ ಕೃತಿ ಆಯಿತು. ಮೂರನೇ ತರಗತಿಯಲ್ಲಿದ್ದಾಗಲೇ ಕಂದ ವೃತ್ತಗಳನ್ನು ಬರೆಯುತ್ತಿದ್ದರು. ಷಟ್ಪದಿಯಲ್ಲಿ ಪತ್ರಗಳನ್ನು ಬರೆಯುತ್ತಿದ್ದರು. ೧೦೦ ಪದ್ಯಗಳನ್ನು ಒಂದು ಘಂಟೆಯಲ್ಲಿ ಬರೆಯುತ್ತಿದ್ದರು. ಪೋಸ್ಟ್ ಕಾರ್ಡಿನಲ್ಲಿ ೪೦,೦೦೦ ಅಕ್ಷರಗಳನ್ನು ಬರೆಯುತ್ತಿದ್ದರು. ಅವರ ಸ್ನೇಹಿತರು ನವಲಗುಂದ ಮಠದ ಶ್ರೀ ಬಸವಲಿಂಗ ಸ್ವಾಮಿಗಳು ಇವರನ್ನು "ಪ್ರಿಂಟಿಂಗ್ ಪ್ರೆಸ್" ಎಂದು ಕರೆಯುತ್ತಿದ್ದರು. ಯಾವ ಪದ್ಯವನ್ನೇ ಆಗಲಿ, ಲೇಖನವನ್ನಾಗಲೀ ಒಂದೇ ಸಾರಿ ಅಳಿಸದೆ ಬರೆಯುತ್ತಿದ್ದರು. "ಸುಕುಮಾರ" ಎಂಬ ಪತ್ರಿಕೆಯಲ್ಲಿ ಲೇಖನವನ್ನು ಬರೆಯಲಾರಂಭಿಸಿದರು.

ಊರಿಗೆ ಹಿಂತಿರುಗಿದ ಮೇಲೆ ಆಂಜನೇಯ ದೇವಸ್ಥಾನದಲ್ಲಿ ಅಧ್ಯಾತ್ಮಕ್ಕೆ ಸಂಬಂಧಪಟ್ಟ ಭಾಷಣಗಳನ್ನು ಮಾಡಲಾರಂಭಿಸಿದರು.

ಅಕ್ಕನ 'ಯೋಗಾಂಗ ತ್ರಿವಿಧಿ'ಯನ್ನು ಪರಿಷ್ಕಾರ ಮಾಡಿಕೊಟ್ಟರು. ಅಕ್ಕನ ಲಾವಣಿ ಬರೆದರು. ಅಕ್ಕನ ಅಮೃತವಾಣಿ, ವಚನ ಸಂಕಲನ, ವಚನ ಸಾಹಿತ್ಯ ಸಂಪಾದನೆ, ವ್ಯಾಖ್ಯಾನ, ವಿಮರ್ಶೆ, ಕಾವ್ಯಗಳ ವಿವೇಚನೆ, ಕವನ ರಚನೆ ಮಾಡತೊಡಗಿದರು.

೧೯೩೯ ರಲ್ಲಿ ನಿಡುಮಾಮಿಡಿ ಮಠದ ೩೯ ನೆಯ ಪಟ್ಟಾಧಿಕಾರಿಗಳಾದರು. "ಶ್ರೀ ಮದ್ವೀರಶೈವ ಮತಸ್ಥಾಪನಾಚಾರ್ಯ ಶ್ರೀ ಶ್ರೀ ೧೦೦೮ ಜಗದ್ಗುರು ಪಂಡಿತಾರಾಧ್ಯ ಪರಂಪರಾಗತ ಶ್ರೀ ಗಿರಿರಾಜಮಣಿ ಖಚಿತ, ಕನಕ ಸೂರ್ಯ ಸಿಂಹಾಸನ ಪಟ್ಟಾಧ್ಯಕ್ಷ ಶ್ರೀ ಜ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಎಂಬ ನಾಮಾಂಕಿತವಾಯಿತು. ೨೫-೦೬-೧೯೪೮ ರಲ್ಲಿ ಜ. ಚ. ನಿ. ಅಧ್ಯಯನ ಪೀಠ ಮತ್ತು ಸಂಶೋಧನೆ ಸಂಸ್ಥೆಯನ್ನು ಸ್ಥಾಪಿಸಿದರು. ವಾಚನಾಲಯ, ಪುಸ್ತಕ ಭಂಡಾರ ತೆರೆದರು. ತಾಳೆಗರಿ ಸಂಗ್ರಹಿಸಿ ಸಂಪಾದನೆ, ಪ್ರಕಟಣೆ ಸಂಶೋಧನೆಗೆ ತೊಡಗಿದರು. "ಜೀವನ ಸಿದ್ಧಾಂತ" ಎಂಬ ದಾರ್ಶನಿಕ ಗ್ರಂಥಕ್ಕೆ ೧೯೭೨ ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ 'ಡಾಕ್ಟರೇಟ್' ಪದವಿ ದೊರೆಯಿತು.

'ಜಚನಿ'ಯವರು ೫-೧೧-೧೯೯೬ ಮಂಗಳವಾರ ಲಿಂಗೈಕ್ಯರಾದರು. ಎಂಭತ್ತೆಂಟು ವರ್ಷದ ಸಾಹಿತ್ಯದ ಜೀವನಕ್ಕೆ ವಿದಾಯ ಹೇಳಿದರು.

ಪೂಜ್ಯ ಶ್ರೀ ಜಗದ್ಗುರು ನಿಡುಮಾಮಿಡಿ ಚನ್ನಬಸವ ದೇಶಿಕೇಂದ್ರ ಸ್ವಾಮಿಗಳವರನ್ನು 'ಜ. ಚ. ನಿ.' ಎಂದು ಹೇಳುವುದು ರೂಢಿಯಲ್ಲಿ ಬಂದಿದೆ. ಇವರು ಕವಿ, ಸಾಹಿತ್ಯ ತಪಸ್ವಿ, ಕಲಾವಿದ, ದಾರ್ಶನಿಕ, ಸಂಶೋಧಕ, ವಚನಕಾರ, ವಾಗ್ಮಿ, ಮಹಾಕವಿ, ವಿಮರ್ಶಕ, ಲೇಖಕ, ಜಾನಪದ ವಿದ್ವಾಂಸ, ಜಗದ್ಗುರು. ೩೦೦ ಕ್ಕೂ ಹೆಚ್ಚು ಕೃತಿಗಳನ್ನು ಪದ್ಯ-ಗದ್ಯಗಳಲ್ಲಿ ರಚಿಸಿದ ವೀರಶೈವ ಏಕೈಕ ಸ್ವಾಮಿಗಳು. ಇವರಷ್ಟು ವೈವಿಧ್ಯಮಯ ಕೃತಿಗಳನ್ನು ರಚಿಸಿದ ಮತ್ತೊಬ್ಬರು ಸ್ವಾಮಿಗಳಿಲ್ಲ. ದೇಹ ಸಣ್ಣವಾದರೂ ಕಂಚಿನ ಕಂಠ, ಸದಾ ಹಸನ್ಮುಖರಾಗಿರುತ್ತಿದ್ದರು. ಯುವ ಲೇಖಕ, ಲೇಖಕಿಯರನ್ನು ಬೆನ್ನು ತಟ್ಟಿ ಪ್ರೋತ್ಸಾಹಿಸಿದವರು. ಕನ್ನಡ ಸಾಹಿತ್ಯದಲ್ಲಿ ಅನೇಕ ಹೊಸ ಪದಗಳನ್ನು ಸೃಷ್ಟಿಸಿದ ಸಾಹಿತ್ಯಬ್ರಹ್ಮ. 'ಜ. ಚ. ನಿ.' ಎಂದರೆ ಬಹುಮುಖ ಪ್ರತಿಭೆ. ಶಾಂತ, ಸರಳ, ಸೌಜನ್ಯತೆಗೆ ಎತ್ತಿದ ಕೈ.

ಡಾ. ಜ. ಚ. ನಿ. ಯವರು ಶ್ರೀಮಠದಲ್ಲಿ ಆಗಾಗ ಉಪನ್ಯಾಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತಿದ್ದರು. ಅನೇಕರನ್ನು ಕವಯತ್ರಿಯರಾಗಿ, ವಚನಕಾರ್ತಿಯರಾಗಿ ಮಾಡಿದ್ದಾರೆ. ಅಧ್ಯಾತ್ಮ ವಿಷಯಗಳಲ್ಲಿ ಕೃತಿ ರಚಿಸುವಲ್ಲಿ ಸಿದ್ಧಹಸ್ತರು. ನಿಜಗುಣರ ಕೃತಿಗಳ ಬಗ್ಗೆ ವ್ಯಾಖ್ಯಾನ ಬರೆದಿದ್ದಾರೆ. ಮುಪ್ಪಿನ ಷಡಕ್ಷರಿಗಳ 'ಸುಬೋಧಸಾರ' ಕೃತಿಯ ವಿಶ್ಲೇಷಣೆ ಮಾಡಿದ್ದಾರೆ. ಆಧುನಿಕ ವಚನಕಾರರಲ್ಲಿ ಇವರು ಪ್ರಮುಖರು. ಜೀವನದ ಸಾಕಷ್ಟು ಸಮಯವನ್ನು ವೀರಶೈವ ಪ್ರಚಾರಕ್ಕೆ, ಸಾಹಿತ್ಯ ರಚನೆಗೆ, ಪ್ರಕಟಣೆಗೆ ಶಿವಪೂಜೆಗೆ ಸೀಮಿತ ಮಾಡಿಕೊಂಡಿದ್ದರು. ದಾಸೋಹ ನಿತ್ಯ ನಿರಂತವಾಗಿ ಸಾಗಿ ಬಂದಿರುವ ಕ್ರಿಯೆ. ಇವರದು ಆಡಂಬರದ ವ್ಯಕ್ತಿತ್ವವಲ್ಲ, ಸರಳ ಸೌಜನ್ಯದ ವ್ಯಕ್ತಿತ್ವ, ಯಾವುದೇ ವಿಷಯದ ಬಗೆಗೆ ನಿರರ್ಗಳವಾಗಿ ಮಾತನಾಡುವ ಕಲೆಗಾರಿಕೆ ಅವರದು. ಉದಯೋನ್ಮುಖ ಲೇಖಕರಿಗೆ, ಕವಿಗಳಿಗೆ ಬೆನ್ನು ತಟ್ಟಿ, ಮುನ್ನುಡಿ ಬರೆದು, ಪ್ರೋತ್ಸಾಹ ನೀಡುವ ಧಾರಾಳತನ ಇವರದು. ಸಭೆ, ಸಮಾರಂಭಗಳಿಗೆ ಭಕ್ತಾದಿಗಳನ್ನು ಕಲೆಹಾಕಿ ಆಕರ್ಷಣೆ ಮಾಡುತ್ತಿದ್ದರು.

ಕಥೆ, ಕವನ, ವಚನ, ನಾಟಕ, ವಿಮರ್ಶೆ, ಕಾವ್ಯ ಮತ್ತು ಕಾವ್ಯಮೀಮಾಂಸೆ, ಮಹಾಕಾವ್ಯ, ಪ್ರಬಂಧ, ಸಂಗ್ರಹ, ಸಂಪಾದನೆ, ಸಂಶೋಧನೆ, ವಿಶ್ಲೇಷಣೆ, ಅಧ್ಯಾತ್ಮ, ಜಾನಪದ, ಅನುವಾದ, ತತ್ತ್ವ, ಚರಿತ್ರೆ, ಲಕ್ಷಣ ಶಾಸ್ತ್ರ, ಪತ್ರ ಸಾಹಿತ್ಯ, ಒಂದೇ ಎರಡೇ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೈಯಾಡಿಸಿ ಸೈ ಎನಿಸಿಕೊಂಡವರು.

"ಸಾಹಿತ್ಯವೇ ಬದುಕಿನ ಸರ್ವಸ್ವವಾಗುಳ್ಳ ವ್ಯಕ್ತಿಗಳು ವಿರಳ. ಅಂಥವರಲ್ಲಿ ಇವರು ಅಗ್ರಗಣ್ಯರು" ಎನ್ನುತ್ತಾರೆ ದೇ. ಜ. ಗೌ. ಇವರು ಶರಣರ ಮಾರ್ಗವನ್ನು ಅನುಸರಿಸಿಕೊಂಡು ಬಂದವರು. ಹನ್ನೆರಡು ವಚನ ಸಂಕಲನಗಳು ೬೦೬೧ ವಚನಗಳ ಸೃಷ್ಟಿಕರ್ತರು. ಇವರು ಕೃತಿಗಳು ಹಿಂದಿ, ಇಂಗ್ಲೀಷ್ ಭಾಷೆಗಳಿಗೆ ಅನುವಾದವಾಗಿವೆ.

**ಪ್ರಬಂಧ** ನಾನು-ನೀನು, ಕಾಯಿ-ಹಣ್ಣು, ಯೋಗಕ್ಷೇಮ, ಬೇವು-ಬೆಲ್ಲ, ದಾಸೋಹ ದೀಪ್ತಿ, ಕಾಯಕ ಕಲೆ, ಇರುಳು-ಹಗಲು.

**ಮಹಾಕಾವ್ಯಗಳು** ಸದಾಶಿವ ರುದ್ರಂ, ಮಣಿಮುಕುರಂ, ಚಂದ್ರಪ್ರಭಾ, ಸಜ್ಜಲ ಶರಣವ್ವೆ

**ಕವನ ಸಂಕಲನಗಳು** ಅಕ್ಕನ ಲಾವಣಿ, ಹೊನ್ನು ಹಕ್ಕಿ, ರನ್ನ ಚುಕ್ಕಿ, ಹೂಗೊನೆ, ಹೂಬೊಗಸೆ, ಹಾಲ್ಕೆನೆ, ಭಾವ ಗೀತಾಂಜಲಿ, ನುಡಿ ನೀಹಾರಿಕೆ.

**ಚಾರಿತ್ರಿಕ** ಪ್ರತಿಭಾ ಸಿದ್ಧರು, ಯುಗ ಮಹಿಳೆ ದುಗ್ಗಳೆ, ಆದರ್ಶ ಶರಣೆ ದುಗ್ಗಳೆ.

**ಶರಣರ ಕೃತಿಗಳು** ಅಕ್ಕನ ಬಾಳು, ಲಿಂಗಾನುಭವಿ, ಲಿಂಗಮ್ಮ, ನಿಜಸುಖಿ ಅಪ್ಪಣ್ಣ,

**ಸಂಶೋಧನೆ** ಜೇಡರ ದಾಸಿಮಯ್ಯ, ಸಂಶೋಧನಾತ್ಮಕ ಲೇಖನಗಳು. ಲಿಂಗವಂತ, ವೀರಶೈವ ವಿಚಾರ ವಾಹಿನಿ

**ಸಮೀಕ್ಷಾತ್ಮಕ ಕೃತಿಗಳು** ಅಕ್ಕನ ಬಾಳು, ಅಣ್ಣನ ಬದುಕು, ಅಲ್ಲಯ್ಯನ ಬೆಳಕು. ಸಮಕ್‌ಜ್ಞಾನಿ ಚನ್ನಬಸವಣ್ಣ.

**ಸೈದ್ಧಾಂತಿಕ ಸಾಹಿತ್ಯ** ಜೀವನ ಸಿದ್ಧಾಂತ (ಆರು ಸಂಪುಟಗಳು)

**ವಚನ ಸಾಹಿತ್ಯ** ಹನ್ನೆರಡು ವಚನಗಳ ಸಂಕಲನಗಳು, ಮಿಡಿ ವಚನ, ದುಡಿ ವಚನ, ವಚನಾಂಜಲಿ, ವಚನ ಮಂಜರಿ, ವಚನವಲ್ಲರಿ.

**ನಾಟಕ** ಆಯ್ದಕ್ಕಿ ಮಾರಯ್ಯ

**ವಚನ ವಿಶ್ಲೇಷಣೆ** ನಿರ್ವಚನ.

**ಪ್ರವಚನ ಸಾಹಿತ್ಯ** ಶತಕತ್ರಯ.

## ೭) ಶಿವಪುತ್ರ ಮಹಾಸ್ವಾಮಿಗಳು ಸಿದ್ಧಾರೂಢರಮಠ ಹುಬ್ಬಳ್ಳಿ :

ಪೂಜ್ಯ ಸಿದ್ಧಾರೂಢರ ಶಿಷ್ಯವರ್ಗ ಅಪಾರ-ಅಸಂಖ್ಯ. ಅವರಲ್ಲಿ ಅಗ್ರಗಣ್ಯರೆಂದರೆ ಶಿವಪುತ್ರ ಸ್ವಾಮಿಗಳು ಹಾಗೂ ಗುರುನಾಥರೂಢರು. ಜೀವನ ಪರಿಯಂತ ಮೌನಿಯಾಗಿಯೇ ಇದ್ದವರು ಗುರುನಾಥರೂಢರು ತರುವಾಯ ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರಗಳ ಕುರಿತು ಪ್ರವಚನ ಮಾಡಿದವರೆಂದರೆ ಶಿವಪುತ್ರ ಸ್ವಾಮಿಗಳು. ನಿಜಗುಣರ ಕೈವಲ್ಯ ಪದ್ಧತಿ, ಪರಮಾನುಭವ ಬೋಧೆ, ಅನುಭವಸಾರ, ಪಾರಮಾರ್ಥಗೀತೆ, ಪಾರಮಾರ್ಥ ಪ್ರಕಾಶಿಕೆ, ವಿವೇಕ ಚಿಂತಾಮಣಿ, ಮುಂತಾದ ಗ್ರಂಥಗಳಲ್ಲಿಯ ವಿಷಯ-ವಿಚಾರಗಳನ್ನು ಸರಳ ಭಾಷೆಯಲ್ಲಿ ವಿವರಿಸಿ ಜನರಿಗೆ ಆಧ್ಯಾತ್ಮದ ಸಿಹಿಯನ್ನು ಉಣಿಸಿದವರು. ಇವರು ವೇದಗಳನ್ನು, ಉಪನಿಷತ್‌ಗಳನ್ನು, ಭಗವದ್ಗೀತೆ, ಅಷ್ಟಾವಕ್ರಮುನಿಗೀತೆ, ಇತ್ಯಾದಿ ಸಂಸ್ಕೃತ ಗ್ರಂಥಗಳನ್ನು ಅಭ್ಯಾಸ ಮಾಡಿದ್ದರು. ಪ್ರವಚನದ ಕಾಲಕ್ಕೆ ಸಂಸ್ಕೃತದ ಶ್ಲೋಕಗಳನ್ನು ಹೇಳಿ ಅವುಗಳ ಅರ್ಥವನ್ನು ಸಾಮಾನ್ಯರಿಗೂ ತಿಳಿಯುವಂತೆ ಬೋಧಿಸುವ ಶೈಲಿ ಇವರದು. ನಿಜಗುಣರ ಯಾವದಾದರೊಂದು ಗ್ರಂಥದಲ್ಲಿಯ ಒಂದೇ ಒಂದು ಸಾಲು ಆಧಾರವಗಿಟ್ಟುಕೊಂಡು ಪ್ರವಚನ ಮಾಡುವ ಕಲೆ ಅದ್ಭುತವಾದುದು. ಇವರ ಮಧುರ ಧ್ವನಿ, ಶ್ಲೋಕಗಳನ್ನು ಸುಂಧರವಾಗಿ ಹೇಳುವ ರೀತಿ ಜನರಿಗೆ ಮೆಚ್ಚುಗೆಯಾಗಿದ್ದವು. ಯಾವದೇ ಗ್ರಂಥದ ಕುರಿತು ಪ್ರವಚನ ಮಾಡಿದರೂ ಅದು ಅದ್ವೈತಕ್ಕೆ ಸಂಬಂಧಿಸಿದಂತೆ ಹೇಳುತ್ತಿದ್ದರು. ಪ್ರತಿವರುಷ ತಪ್ಪದೇ ಹೋಗಿ ಪ್ರವಚನ ಮಾಡುತ್ತಿದ್ದ ಸ್ಥಳಗಳೆಂದರೆ ಬೈಲಹೊಂಗಲ ತಾಲೂಕಿನ ಹುಣಶೀಕಟ್ಟಿ, ಕಾದರವಳ್ಳಿ. ಹುಕ್ಕೇರಿ ತಾಲೂಕಿನ ಕರಗುಪ್ಪಿ, ಕುರಣಿ. ಅಥಣಿ ತಾಲೂಕಿನ ಸತ್ತಿ, ಶೇಗುಣಸಿ. ರಾಯಬಾಗ ತಾಲೂಕಿನ ಚಿಕ್ಕುಡ, ಪರಮಾನಂದವಾಡಿ, ಹಾರೂಗೇರಿ ಯಲ್ಪಾರಟ್ಟಿ ಮುಂತಾದವು.

ಇವರು ಸಮಯಕ್ಕೆ ತುಂಬಾ ಮಹತ್ವಕೊಡುತ್ತಿದ್ದರು. ಇವರು ಸಮಯ ನಿಷ್ಠ ಪ್ರವಚನಕಾರರು, ಬೆಳಿಗ್ಗೆ ೬ ಎಂದರೆ ೬ಕ್ಕೆ ಪ್ರವಚನ ಆರಂಭಿಸುತ್ತಿದ್ದರು. ಇದರಿಂದ ಜನರು ಸರಿಯಾದ ಸಮಯಕ್ಕೆ ಹೋಗಿ ಪ್ರವಚನ ಕೇಳುತ್ತಿದ್ದರು. ಹುಬ್ಬಳ್ಳಿಯಲ್ಲಿದ್ದಾಗ ತಮ್ಮ ಮಠದ ಹಾಗೂ ಆವರಣದ ಕಸಗೂಡಿಸುವ ಕೆಲಸ ತಾವೇ ಮಾಡಿ, ನಂತರ ನೀರು ಹೊಡೆದು ಪ್ರವಚನಕ್ಕೆ ಅಣಿಯಾಗುತ್ತಿದ್ದರು. ನಿಜಗುಣ ಶಿವಯೋಗಿಗಳ ಗ್ರಂಥಗಳಿಗೆ ಟೀಕಾ ತಾತ್ಪರ್ಯ ಬರೆದಿದ್ದಾರೆ.

೧) ಕೈವಲ್ಯ ಪದ್ಧತಿಯ "ಜ್ಞಾನ ಪ್ರತಿಪಾದನ ಸ್ಥಲ" (೧೯೬೦)

೨) ಪಾರಮಾರ್ಥಗೀತ. (೧೯೫೨)

೩) ಪರಮಾನುಭವ ಬೋಧೆ. (೧೯೫೩)

೪) ಅನುಭವ ಸಾರ. (೧೯೩೩)

## ೮) <u>ಪರಮಹಂಸ ಶಂಕರಾನಂದ ಸ್ವಾಮಿಗಳು ಹುಬ್ಬಳ್ಳಿ</u> :

ಪೂಜ್ಯ ಸಿದ್ಧಾರೂಢ ಯತಿವರ್ಯರು ಬದುಕಿದ್ದ ಕಾಲದಲ್ಲಿ ಶಂಕರಾನಂದ ಸ್ವಾಮಿಗಳು ಬದುಕಿದ್ದರು. ಹುಲಕೋಟಿಯ ಶೇಷಾನಂದ ಗುರುಗಳ ಬಳಿಯಲ್ಲಿ ವೇದಗಳನ್ನು, ಉಪನಿಷತ್ತುಗಳನ್ನು, ಭಗವದ್ಗೀತೆಯನ್ನು, ನಿಜಗುಣ ಶಿವಯೋಗಿಗಳ ಎಲ್ಲ ಗ್ರಂಥಗಳನ್ನು ಅಭ್ಯಾಸಮಾಡಿ ಅನುಭವ ಗಳಿಸಿಕೊಂಡವರು. ಕನ್ನಡ, ಸಂಸ್ಕೃತ ಹಾಗೂ ಮರಾಠಿ ಭಾಷೆಗಳನ್ನು ಬಲ್ಲವರಿವರು. ಸಂಸ್ಕೃತದಲ್ಲಿದ್ದ ವೇದಾಂತದ ವಿಚಾರಗಳನ್ನು ಸಾಮಾನ್ಯ ಜನರಿಗೂ ತಿಳಿಯುವಂತೆ ಪ್ರವಚನ ಮಾಡುವ ಕಲೆ ಇವರದಾಗಿತ್ತು. ಭಗವದ್ಗೀತೆ ಹಾಗೂ ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರಗಳನ್ನು ಬಲು ಮಾರ್ಮಿಕವಾಗಿ ಅಧಿಕಾರ ವಾಣಿಯಿಂದ ಹೇಳಬಲ್ಲವರು. ವಾಹನ ಸೌಕರ್ಯಗಳಿಲ್ಲದ ಅಂದಿನ ಕಾಲದಲ್ಲಿ ಚಕ್ಕಡಿಯಲ್ಲೇ ಪ್ರಯಾಣ ಬೆಳೆಸಿ ಹಳ್ಳಿ-ಹಳ್ಳಿಗೆ ಹೋಗಿ ವೇದಾಂತದತ್ತ ಜನರ ಒಲುಮೆ ಮಾಡಿಸಿದವರು. ಪ್ರತಿವರುಷ ತಪ್ಪದೇ ಪ್ರವಚನಕ್ಕೆ ಹೋಗುವ ಸ್ಥಳಗಳೆಂದರೆ ಕರಗುಪ್ಪಿ, ಗಾವಿನಾಳ, ಏಬರಟ್ಟಿ, ಯಲ್ಪಾರಟ್ಟಿ, ಹಾರೂಗೇರಿ, ಶೇಗುಣಸಿ, ಸತ್ತಿ, ಚಿಕ್ಕುಡ, ಜಮಖಂಡಿ, ಪರಕನಟ್ಟಿ ಇತ್ಯಾದಿ. ಜಾತಿ-ಮತ-ಪಂಥ-ಕುಲ ಮೀರಿನಿಂತ ಮಾಹಾತ್ಮರಿವರು. ಜಮಖಂಡಿಯ ಪರಿಶಿಷ್ಟ ಜಾತಿಯವರು ವಾಸಿಸುತ್ತಿರುವ 'ರುದ್ರಪೇಟೆ'ಯಲ್ಲಿ ರುದ್ರಾವದೂತರ ಮಠವಿದೆ. ಶಂಕರಾನಂದರು ವರ್ಷದಲ್ಲಿ ಮೂರುದಿವಸ ಅಲ್ಲಿಗೆ ಬಂದು ಅಲ್ಲೇ ವಾಸ್ತವ್ಯ ಮಾಡಿ ಅವರೊಂದಿಗೆ ಸಹಭೋಜನ ಮಾಡುತ್ತಿದ್ದರು. ಅವರ ಮುಖದಿಂದ ಪ್ರವಚನ ಕೇಳಿದ ಜನರು ಇನ್ನೂ ಬದುಕಿದ್ದಾರೆ. ಅವರು ಪ್ರತಿಪಾದಿಸುತ್ತಿದ್ದ ವಿಷಯ ಅದ್ವೈತ. ಅವರಿಗೆ ರಾಜಯೋಗಿ, ಪರಮಹಂಸ, ಸದ್ಗುರು ಸಮರ್ಥ, ಯೋಗಿಂದ್ರ ಎಂದು ಕರೆಯುತ್ತಾರೆ. ೧೯೬೨ ಜುಲೈದಲ್ಲಿ ಲಿಂಗೈಕ್ಯರಾದರು. ಅವರಿಂದ ರಚಿಸಲ್ಪಟ್ಟ ಗ್ರಂಥಗಳು ೧) ದಶೋಪನಿಷದ್ಭಾಷ್ಯ ರತ್ನ ಮಾಲಾ (೧೯೫೪) ೨) ವೇದಾಂತ ಚಂದ್ರಿಕೆ (೧೯೫೪) ೩) ಈಶಾವಾಶ್ಯೋಪನಿಷತ್ತಿನ ಷಡ್‌ಲಿಂಗ ವರ್ಣನೆ (೧೯೫೫)

೯) <u>ಸಿದ್ದಯ್ಯ ಸ್ವಾಮಿಗಳು ಸೊಲ್ಲಾಪುರ</u> :

ಸರಳ ಜೀವಿಗಳಾದ ಇವರು ಮೂಲತಃ ಹುಬ್ಬಳ್ಳಿಯವರು. ಕನ್ನಡ, ಮರಾಠಿ ಹಾಗೂ ಸಂಸ್ಕೃತ ಭಾಷೆಗಳನ್ನು ಬಲ್ಲವರು. ಹುಬ್ಬಳ್ಳಿಯ ಸಿದ್ಧಾರೂಢ ಮಠದಲ್ಲಿ ಹೆಚ್ಚಾಗಿ ವಾಸ್ತವ್ಯ ಮಾಡುತ್ತಿದ್ದರು. ನವಿಲುಗುಂದು, ಜಾವೂರು, ನರಗುಂದ, ಸೌಂದತ್ತಿ ತಾಲೂಕಿನ ಹರಳಕಟ್ಟಿ, ಮುಧೋಳ ತಾಲೂಕಿನ ಮಹಾಲಿಂಗಪೂರ, ಕುಳಲಿ ಮುಂತಾದ ಸ್ಥಳಗಳಲ್ಲಿ ಪ್ರವಚನ ಮಾಡಿದ್ದುಂಟು. ಹಿಂದಿ ಭಾಷೆಯ ನಿಶ್ಚಲದಾಸರ "ವಿಚಾರ ಸಾಗರ", "ವೃತ್ತಿಪ್ರಭಾಕರ" ಮುಂತಾದ ಶಾಸ್ತ್ರೀಯ ಗ್ರಂಥಗಳನ್ನು ಸುಲಭವಾಗಿ ಕನ್ನಡದಲ್ಲಿ ಬೋಧಿಸಿ ಮುಮುಕ್ಷುಗಳನ್ನು ಉದ್ಧರಿಸಿದವರು. ಪ್ರವಚನದ ಕಾಲಕ್ಕೆ ನಿಜಗುಣ ಶಿವಯೋಗಿಗಳ, ಸರ್ಪಭೂಷಣ ಶಿವಯೋಗಿಗಳ, ಮಹಾಲಿಂಗರಂಗರ ಮತ್ತು ಮರಾಠಿ ಭಾಷೆಯ ಸಂತರ ಪದ್ಯಗಳನ್ನು ಉದಾಹರಣೆಗಾಗಿ ತೆಗೆದುಕೊಳ್ಳುತ್ತಿದ್ದರು. ಶಾಸ್ತ್ರ ಅಧ್ಯಯನ ಮಾಡಬೇಕೆಂದು ಇವರ ಬಳಿಯಲ್ಲಿ ಬಂದವರಿಗೆ ಶಾಸ್ತ್ರದ ಪ್ರಕ್ರಿಯೆಗಳನ್ನು ತಿಳಿಸಿಹೇಳುತ್ತಿದ್ದರು. ವೇದ ಹಾಗೂ ಉಪನಿಷತ್ತುಗಳಲ್ಲಿ ಬರುವ ಶಬ್ದಗಳ ಹಾಗೂ ವಾಕ್ಯಗಳ ಅರ್ಥಗಳನ್ನು ಬಲು ಮಾರ್ಮಿಕವಾಗಿ ವಿವರಿಸುತ್ತಿದ್ದರು. 'ಉತ್ತಮ' ಅಧಿಕಾರಿಗಳಿಗೆ ಇವರ ಪ್ರವಚನ ತುಂಬಾ ಮೆಚ್ಚುಗೆಯಾಗಿತ್ತು. ಜಾತಿ ಮತ ಪಂಥ ಕುಲ ಇವುಗಳನ್ನು ಗಣನೆಗೆ ತೆಗೆದುಕೊಳ್ಳದೇ ಎಲ್ಲರಿಗೂ ಪ್ರವಚನ ನೀಡಿದರು.

೧೦) <u>ಅಗ್ನಿಹೋತ್ರಿ ಶಂಕರಭಟ್ಟರು</u> :

ಶಂಕರಭಟ್ಟರು ಸಿದ್ಧಾರೂಢರ ಸಮಕಾಲೀನವರು. ಮೂಲತಃ ಇವರು ಗದಗ ತಾಲೂಕಿನ ಹೊಂಬಳ ಗ್ರಾಮದವರು. ಕನ್ನಡ ಹಾಗೂ ಸಂಸ್ಕೃತ ಭಾಷೆಗಳನ್ನು ಆಳವಾಗಿ ಅಭ್ಯಾಸ ಮಾಡಿದವರು. ದಶೋಪ್‌ನಿಷತ್ತಗಳ, ಭಗವದ್ಗೀತೆ, ವಿದ್ಯಾರಣ್ಯರ ಪಂಚದಶಿ ಹಾಗೂ ನಿಜಗುಣ ಶಿವಯೋಗಿಗಳ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಪ್ರವಚನ ಮಾಡುತ್ತಿದ್ದರು.

ಜೀವಾತ್ಮನು ಎಚ್ಚರ, ಕನಸು ಹಾಗೂ ನಿದ್ರೆಯಲ್ಲಿ ತೋರಿದರೂ ಅವುಗಳಿಂದ ನಿರ್ಲಿಪ್ತನಿರುವನೆಂಬುದನ್ನು ಬಲು ಸ್ವಾರಸ್ಯವಾಗಿ ವಿವರಿಸುತ್ತಿದ್ದರು. ಪಂಚದಶಿ ಗ್ರಂಥದಲ್ಲಿ ಬರುವ ನೃತ್ಯದೀಪ, ನಾಟಕ ದೀಪ ಹಾಗೂ ತೃತ್ತಿದೀಪದ ಭಾಗಗಳನ್ನು ವಿವರಿಸಿ, ಜಿವೋಬ್ರಹ್ಮೆನಾಪರಃ ಎಂಬುದನ್ನು ಸ್ಪಷ್ಟಪಡಿಸುತ್ತಿದ್ದರು. ತತ್ವಜ್ಞಾನದ ಅಂತಿಮಗುರಿ "ಸರ್ವ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಃ" ಎಂಬುದೇ ಅವರ ಪ್ರವಚನಗಳ ಗುರಿಯಾಗಿತ್ತು. ಅವರು ಹುಬ್ಬಳ್ಳಿಯ ವಾಸವಿ ಕಲ್ಯಾಣ ಮಂಟಪದಲ್ಲಿ ಹಲವಾರು ವರುಷಗಳವರೆಗೆ ಪ್ರತಿ ನಿತ್ಯ ಪ್ರವಚನ

ಮಾಡುತ್ತಿದ್ದರು. ನರಗುಂದದ ಅವರ ಮಗನಾದ ಶ್ರೀ ಗಣಪತಿಯವರ ಮನೆಯಲ್ಲಿ ೧೯೭೧ ರಲ್ಲಿ ಒಂದು ತಿಂಗಳ ಪರಿಯಂತ ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯ ಗ್ರಂಥದ ಮೇಲೆ ಪ್ರವಚನ ಮಾಡಿದ್ದರು. ಸಂಸ್ಕೃತ ಭಾಷೆಯನ್ನಾಗಲಿ, ಕನ್ನಡ ಭಾಷೆಯನ್ನಾಗಲಿ ಉಪಯೋಗಿಸಿದರೂ ಕಠಿಣ ಶಬ್ದಗಳನ್ನು ಬಳಸದೇ ದಿನನಿತ್ಯದಲ್ಲಿ ಜನರಾಡುವ ಶಬ್ದಗಳನ್ನು ಉಪಯೋಗಿಸಿ ಲೌಕಿಕಕ್ಕೂ-ಅಲೌಕಿಕ್ಕೂ ತಾಧ್ಯಾತ್ಮ ಮಾಡುವ ಅವರ ಶೈಲಿ ಎಲ್ಲರಿಗೂ ಹಿಡಿಸುತ್ತಿತ್ತು. ಭಾಗವತದ ಹಾಗೂ ಭಗವದ್ಗೀತೆಯ ಶ್ಲೋಕಗಳನ್ನು ರಾಗಬದ್ಧವಾಗಿ ಹಾಡುವ ಕಲೆ ಅವರಲ್ಲಿತ್ತು. ಪ್ರವಚನಕ್ಕೆ ಮೊದಲು ಶಂಕರಾಚಾರ್ಯರ "ಚಿದಾನಂದ ರೂಪಶ್ಶಿವೋಹಂ" ಎಂಬ ಸ್ತೋತ್ರವನ್ನು ಕೂಡಿದ ಜನರಿಂದ ಹೇಳಿಸುತ್ತಿದ್ದರು. ತಮ್ಮ ಜೀವಿತದ ಕೊನೆಯ ಕ್ಷಣದವರೆಗೂ ಪ್ರವಚನ ಮಾಡಿದರು.

## ೧೧) ಜೋಳದರಾಶಿ ದೊಡ್ಡನಗೌಡ :

ಜೋಳದರಾಶಿ ದೊಡ್ಡನಗೌಡರು ನಾಡಿನುದ್ದಕ್ಕೂ ಜನರ ಕಿವಿಗೆ ಕಾವ್ಯದ ಕಂಪುಣಿಸಿದವರು, ಸಾಹಿತ್ಯ ಸಮ್ಮೇಳನಗಳಲ್ಲೂ ಕಾವ್ಯವಾಚನ ಪ್ರವಚನ ಮಾಡಿದವರು, ರಂಗನಟ, ಬರಹಗಾರರು ಆಗಿದ್ದ ಅವರು ತಮ್ಮಷ್ಟಕ್ಕೇ ತಾವೇ ಕನ್ನಡ ಸಾಂಸ್ಕೃತಿಕ ಪರಿಚಾರಕನಂತೆ ಕೆಲಸಮಾಡಿದರು.

ದೊಡ್ಡನಗೌಡರು ಗಮಕಿಗಳು. ಶೂನ್ಯ ಸಂಪಾದನೆಯಂತಹ ಮೌಲಿಕ ಕೃತಿಗಳನ್ನು ವಾಚನ ಮಾಡಿದವರು. ಪ್ರವಚನ ಕ್ಷೇತ್ರಕ್ಕೇ ವಿನೂತನ ಶೈಲಿ ಅಳವಡಿಸಿದರು. ಓದಿನಲ್ಲೂ ಸಿಗದ ಅರ್ಥಪದಗಳು ಗೌಡರ ಕಾವ್ಯವಾಚನದ ಮೂಲಕ ಸಿಗುತ್ತಿದ್ದವು. ಅವರು ತಮ್ಮ ಜೀವಿತದ ಅರ್ಧಪಾಲು ಸಾವಿರಾರು ಸಮ್ಮೇಳನ ಜಾತ್ರೆ ಉತ್ಸವಗಳಲ್ಲಿ ಕಾವ್ಯಗಾಯನ ಮತ್ತು ಪ್ರವಚನ ಮಾಡಿದವರು.

ಜೋಳದರಾಶಿಯು ಕರ್ನಾಟಕದ ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನ ಕನ್ನಡ ಸೀಮೆಯ ಆಂಧ್ರಗಡಿಯ ಕೊನೆಯ ಊರು. ಈ ದೊಡ್ಡನಗೌಡರು ದಿನಾಲೂ ನಸುಕಿಗೆ ಹರಿಹರನ ಪಂಪಾಶತಕ ಹಾಡುತ್ತಿದ್ದರು. ಬಹಳಷ್ಟು ಓದದ ದೊಡ್ಡನಗೌಡರಿಗೆ ಪ್ರಕೃತಿಯ ಕೊಡುಗೆ ಅಪಾರ. ಸಿನಿಮಾ, ನಾಟಕ, ಪ್ರವಚನ, ಕಾವ್ಯಗಾಯನ, ಹುಚ್ಚುಹಚ್ಚಿಕೊಂಡು ಊರೂರು ತಿರುಗಿದವರು. ಕೀರ್ತಿ ಜನಪ್ರೀಯತೆ ಅಪಮಾನ ಮುಜುಗರಗಳನ್ನು ಅನುಭವಿಸಿದವರು. ಒಬ್ಬ ಯಶಸ್ವೀ ಪ್ರವಚನಕಾರನ ಹಿಂದೆ ಸಾವಿರಾರು ನೋವುಗಳಿವೆ. ಕಷ್ಟದ ಹಾದಿಗಳಿವೆ, ಏಳುಬೀಳುಗಳಿವೆ.

**ತನ್ನ ಆಚಾರವಿಚಾರಗಳಿಂದ ಆತ ಜನಪ್ರೀಯನಾಗುತ್ತಾನೆ,** ಗೌಡರು ರೈಲ್ವೇ ಸ್ಟೇಷನಗಳಲ್ಲಿ ಮಲಗಿದ್ದಾರೆ, ಗಾಡಿ ಖರ್ಚು ಇಲ್ಲದೇ ಒದ್ದಾಡಿದ್ದಾರೆ. ಉಪವಾಸ ಅನುಭವಿಸಿದ್ದಾರೆ, ಅಗೌರವ ತೋರಿಸಿದ ಸಭೆಗಳಿಂದ ಸಭಾತ್ಯಾಗ ಮಾಡಿದ್ದಾರೆ. ಆಸಕ್ತಿ ಸಭೀಕರಿಲ್ಲದ ಕಡೆ ಚಿಂತಿಸಿದ್ದಾರೆ, ಇಂತಹ ಘಟನೆಗಳಿಂದ ಅವರ ಆತ್ಮ ಚರಿತ್ರೆ ನಿರ್ಮಾಣವಾಗಿದೆ. ಅವರು ಮಠವೊಂದರಲ್ಲಿ ಶೂನ್ಯಸಂಪಾದನೆಯಲ್ಲಿ ಬರುವ ಮಹಾದೇವಿ ಅಕ್ಕ ಮನೆ ಬಿಟ್ಟು ಹೋಗುವ ಪ್ರಸಂಗ ಹಾಡುತ್ತಾರೆ. ಮಠಾಧಿಪತಿಗೆ ಅದು ಹಿಡಿಸುವುದಿಲ್ಲ. ಅಕ್ಕನನ್ನು ಮತ್ತು ಗೌಡರನ್ನು ಹೀಯಾಳಿಸುತ್ತಾರೆ, ಕಲಾಕ್ಷೇತ್ರದಲ್ಲಿ ದುಡಿದ ಬಹುತೇಕ ಜನರ ಬಾಳಲ್ಲಿ ಇಂತಹ ಅಪಮಾನದ ವಿವರಗಳಿವೆ. ಕಲೆಗಳ ಬಗ್ಗೆ ಸಮಾಜದಲ್ಲಿ ಆಕರ್ಷಣೆ ಇದೆ, ಕಲಾವಿದರ ಬಗ್ಗೆ ತಾತ್ಸಾರವಿದೆ.

ದೊಡ್ಡನಗೌಡರು ಪ್ರವಚನಕ್ಕೆ ಗಮಕದ ಗತ್ತು ಗಮ್ಮತ್ತು ತಂದವರು. ಅ. ನ. ಕೃಷ್ಣರಾಯರು ತಮ್ಮ ಭಾಷಣದ ಮೂಲಕ ಸಾಹಿತ್ಯಾಸಕ್ತಿ ಹುಟ್ಟುವಂತೆ ಮಾಡಿದ್ದಾರೆ. ಆದರೆ ಇವರು ತಮ್ಮ ಕಾವ್ಯ ಗಾಯನ ಪ್ರವಚನ ಮೂಲಕ ಸಾಹಿತ್ಯಾಭಿರುಚಿ ಹುಟ್ಟಿಸುವ ಕೆಲಸ ಮಾಡಿದ್ದಾರೆ. ಇವರಲ್ಲಿ ಸಂಗೀತಪ್ರಜ್ಞೆ , ಸಾಹಿತ್ಯಾಭರುಚಿ ದೈವಭಕ್ತಿ ಆವೇಶ ಮೂರೂ ಮೇಳೈಸಿದ್ದವು ರಾಜಶೇಖರ ವಿಳಾಸ "ಶೂನ್ಯಸಂಪಾದನೆ", ಭರತೇಶ ವೈಭವ, "ಪ್ರಭುಲಿಂಗ ಲೀಲೆ" ಜೈಮಿನಿ ಭಾರತ, ಬಸವ ಪುರಾಣ, ಹರಿಹರನ ರಗಳೆಗಳು, ಗಿರಿಜಾಕಲ್ಯಾಣ, ಹರಿಶ್ಚಂದ್ರ ಕಾವ್ಯ ಹೇಳಿದರೆಂದರೆ ಶ್ರೋತೃಗಳು ಅಳುತ್ತಿದ್ದರು. ಇವರ ಕಾವ್ಯದ ಆಯ್ಕೆ ಉದಾರತೆ ಎದ್ದು ಕಾಣುತ್ತದೆ.

ದೊಡ್ಡನಗೌಡರು ನಟನೆ, ಗಾಯನದ ಜೊತೆ ಒಬ್ಬ ಶ್ರೇಷ್ಠ ಲೇಖಕರೂ ಹೌದು. ಅವರ ಆತ್ಮ ಚರಿತ್ರೆ 'ನಂದೇನಾನೋದಿದೆ', ಪ್ರಸಿದ್ಧ ತೆಲಗು ನಟರಾಗಿದ್ದ ಬಳ್ಳಾರಿ ರಾಘವರ ಶ್ರೇಷ್ಠ ಶಿಷ್ಯ ದೊಡ್ಡನಗೌಡರು ದ್ವಿಭಾಷಿಕರು, ಉಭಯಭಾಷಾ ಕವಿ, ಕನ್ನಡ, ತೆಲಗು, ಇವರ ಎರಡು ಶ್ವಾಸಕೋಶಗಳು. 'ವಚನಾಮೃತಮು', 'ಅನುಭವಾಲು-ಜ್ಞಾಪಕಾಲು', 'ಗೇಯಗುಂಜಾರಮು', ಅವರ ಪ್ರಮುಖ ತೆಲಗು ಕೃತಿಗಳು ಎಷ್ಟೇ ತಿರುಗಾಟ ಮಾಡಿದರು ತಮ್ಮ ಊರುಗಳಿಗೆ ಮರಳಿ ಬಂದು ಸಾಹಿತ್ಯ, ನಾಟಕ, ಸಂಗೀತ, ಆಧ್ಯಾತ್ಮಿಕ ಚಿಂತನೆಗಳು ಮೂಲಕ ತಮ್ಮ ಹುಟ್ಟೂರನ್ನೇ ಸಾಂಸ್ಕೃತಿಕ ತಾಣವಾಗಿಸಿದವರು ಗೌಡರು. ಏಕೀಕರಣ ಚಳುವಳಿಗಾರ, ರೈತ, ನಟ, ಗಾಯಕ, ಗ್ರಾಮ ಪಂಚಾಯತ ಅಧ್ಯಕ್ಷ ಹೀಗೆ ಹಲವು ಪಾತ್ರಗಳಲ್ಲಿ ಕೆಲಸ ಮಾಡಿದ ಗೌಡರದು ಬಹುಮುಖ ವ್ಯಕ್ತಿತ್ವ, "ಸಮಗ್ರ ಕರ್ನಾಟಕದ ಸಂಸ್ಕೃತಿಯನ್ನು ಗಮಕ ರಂಗಭೂಮಿ, ಸಿನಿಮಾ, ಭಾವಗೀತೆ, ಪ್ರವಚನ ಕ್ಷೇತ್ರಗಳ ಮೂಲಕ ನೋಡತೊಡಗಬೇಕು. ಆಗ ಕನ್ನಡ ಸಾಹಿತ್ಯದ ಆಳ ಅಗಲಗಳು ನಮ್ಮ ಅರುವಿಗೆ ಬರುತ್ತವೆ". '**ಇವರ ಕಾವ್ಯ ಗಾಯನದ ಬಗ್ಗೆ ಬದ್ಧತೆ ಎಷ್ಟಿತ್ತೆಂದರೆ**

**ಹರಿಶ್ಚಂದ್ರ ಕಾವ್ಯವನ್ನೋ ಅಥವಾ ಶೂನ್ಯ ಸಂಪಾದನೆಯನ್ನೋ ಹಾಡುತ್ತಿರುವಾಗ ನಟನೆ ಮಾಡುತ್ತಿರುವಾಗ ತಮಗೆ ಸಾವು ಬರಬೇಕೆಂದು ಅವರು ಬಯಸಿದ್ದರು. ತಮ್ಮ ಶವಸಂಸ್ಕಾರದ ವೇಳೆ ಅಪಸ್ವರದಲ್ಲಿ ಹಾಡುವ ಭಜನೆಯವರನ್ನು ಕರೆಸಬಾರದು'** ಎಂದು ಅವರ ಸಂಬಂಧಿಕರಿಗೆ ತಾಕೀತು ಮಾಡಿದ್ದರು.

ಜೋಳದರಾಶಿ ದೊಡ್ಡನಗೌಡರು ನಟನೆ, ಗಾಯನ, ಬರಹ, ಪ್ರವಚನ ಮುಂತಾಗಿ ಹಲವು ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದರು. ಧ್ವನಿಯ ಏರಿಳಿತಗಳಲ್ಲಿಯ ಪ್ರವಚನ ಭಾವಾವೇಶದ ಗಮಕ ಹೀಗೆ ಹಲವು ಭಾಷೆಗಳಲ್ಲಿ ಪ್ರಕಟಿಸುತ್ತಿದ್ದ ಗೌಡರದು ವರ್ಣರಂಜಿತ ವ್ಯಕ್ತಿತ್ವ

## ೧೨) <u>ರೋಣದ ಬಸಪ್ಪಶಾಸ್ತ್ರಿ</u> :

ಇವರು ಇಂದಿನ ಗದಗ ಜಿಲ್ಲೆಯ ರೋಣದವರು. ಬಸಪ್ಪನವರು ಸಿದ್ಧಾರೂಢ ಸ್ವಾಮಿಗಳ ಶಿಷ್ಯರು. ೧೯೪೫ ರಿಂದ ೧೯೭೦ ರ ಅವಧಿಯಲ್ಲಿ ಊರೂರು ತಿರುಗಿ ಪ್ರವಚನ ಮಾಡಿದ್ದರು. ಒಂದು ದೃಷ್ಟಿಯಿಂದ ನೋಡಿದರೆ ಇವರು ಸಂಚಾರಿ ಪ್ರವಚನಕಾರರು. ಒಂದು ಕಡೆ ನೆಲೆ ನಿಂತು ಪ್ರವಚನ ಮಾಡಿದವರಲ್ಲ. ಒಂದು ಊರಲ್ಲಿ ಒಂದು ದಿವಸ ಹೆಚ್ಚೆಂದರೆ ಮೂರು ದಿವಸಗಳವರೆಗೆ ಪ್ರವಚನ ಮಾಡಿ ಮುಂದಿನ ಊರಿಗೆ ಹೋಗುತ್ತಿದ್ದರು. ಯಾವುದೇ ಫಲಾಪೇಕ್ಷಯಿಲ್ಲದೆ ಪ್ರವಚನ ಮಾಡುತ್ತಿದ್ದರು. ಶಿವಶರಣರ ವಚನಗಳು, ನಿಜಗುಣ ಶಿವಯೋಗಿಗಳ, ಸರ್ಪಭೂಷಣ ಶಿವಯೋಗಿಗಳ, ಶಿಶುನಾಳ ಶರೀಪ ಶಿವಯೋಗಿಗಳ ಪದ್ಯಗಳ, ಒಂದೊಂದು ಸಾಲನ್ನು ಆಧಾರವಾಗಿಟ್ಟು ಪ್ರವಚನ ಮಾಡುತ್ತಿದ್ದರು. ಪ್ರವಚನದ ಕಾಲಕ್ಕೆ ಲೋಕಾನುಭವದ ಹಾಸ್ಯಚಟಾಕೆ ಹಾರಿಸುತ್ತಿದ್ದುದರಿಂದ ಇವರ ಪ್ರವಚನಕ್ಕೆ ಜನ ಸಾಗರವೇ ಹರಿದು ಬರುತ್ತಿತ್ತು. ರಾಮಾಯಣ, ಮಹಾಭಾರತದ ಹಲವಾರು ವ್ಯಕ್ತಿಗಳ ಗುಣಾವ ಗುಣಗಳನ್ನು ಪ್ರವಚನಕ್ಕೆ ಉಪಯೋಗಿಸಿ ಜನರ ಮನಸ್ಸಿಗೆ ಮುಟ್ಟುವಂತೆ ಪ್ರವಚನ ಮಾಡುತ್ತಿದ್ದರು. ಇವರು ತತ್ವಪದಗಳನ್ನು ಹಾಡಿ ಜನರನ್ನು ರಂಜಿಸುತ್ತಿದ್ದರು. ಮನೆಗಳಲ್ಲಿ, ಊರಲ್ಲಿ ಪ್ರತಿಯೊಬ್ಬರು ಪ್ರೀತಿಯಿಂದ-ಸಹಕಾರದಿಂದ ಬದುಕಬೇಕು, ದಿನಾಲೂ ದೇವರ ನಾಮಸ್ಮರಣೆ ಮಾಡಿದರೆ ಎಲ್ಲರ ಸಂಸಾರ ಸುಂದರವಾಗಬಲ್ಲದೆಂಬುದನ್ನು ಉದಾಹರಣೆ ಸಹಿತ ಹೇಳುತ್ತಿದ್ದರು. ಇವರು ಸಂಸ್ಕೃತ ಭಾಷೆಯನ್ನು ಬಳಸದೇ ಅಚ್ಚಕನ್ನಡದಲ್ಲಿ, ಜನರಾಡುವ ಭಾಷೆಯಲ್ಲಿ ಪ್ರವಚನ ಮಾಡುತ್ತಿದ್ದುದರಿಂದ ಜನರು ಇವರನ್ನು ಆದರದಿಂದ ಕಾಣುತ್ತಿದ್ದರು. ಪ್ರವಚನ ಹೇಳಬೇಕು ಅಂದ್ರ ರೋಣದ ಬಸಪ್ಪನೇ" ಎನ್ನುವ ಮಾತು ಅಂದು ಪ್ರಚಲಿತವಿತ್ತು. ಪ್ರತಿ ವರುಷ ತಪ್ಪದೇ

ಪ್ರವಚನ ಮಾಡುತ್ತಿದ್ದ ಗ್ರಾಮಗಳೆಂದರೆ ಹುಣಶೀಕಟ್ಟಿ, ಕಾದರವಳ್ಳಿ, ಬೈಲಹೊಂಗಲ ತಾಲೂಕು, ಕರಗುಪ್ಪಿ, ನಾವಿನಾಳ, ಘೋಡಗೇರಿ, ಕುರಣಿ, ಹುಕ್ಕೇರಿ ತಾಲೂಕು, ಮಮದಾಪುರ, ಬೆಟಗೇರಿ, ಕೌಜಲಗಿ, ಗೋಕಾಕ ತಾಲೂಕು. ಇವಲ್ಲದೆ ನರಗುಂದ ತಾಲೂಕಿನ ಹಲವಾರು ಹಳ್ಳಿಗಳಿಗೆ ತೆರಳುತ್ತಿದ್ದರು. ಹೆಚ್ಚಿನ ವಿದ್ಯಾಭ್ಯಾಸ ಮಾಡಿರದಿದ್ದರೂ ಇವರ ಅನುಭವದ ಮಾತುಗಳು ಜನರ ಸದ್ವರ್ತನೆಗೆ ಕಾರಣವಾಗಿದ್ದವು.

## ೧೩) ಲಿಂ. ಪೂಜ್ಯಶ್ರೀ ಸಿದ್ಧಗಿರಿಸ್ವಾಮಿಗಳು ಮಠಪತಿ ಮಧುರಖಂಡಿ.

ಇವರ ಹುಟ್ಟೂರು ಬಾಗಲಕೋಟೆಯ ಜಮಖಂಡಿ ತಾಲೂಕಿನ ಮಧುರಖಂಡಿ. ಇವರು ಗ್ರಹಸ್ಥರು. ಸುಮಾರು ೬೦ ವರ್ಷಗಳ ಕಾಲ ಪ್ರವಚನಗಳನ್ನು ನೀಡಿದ್ದಾರೆ. ನಿಜಗುಣರ ಷಟ್‌ಕೃತಿ. ವಚನಸಾಹಿತ್ಯಗಳ ಕುರಿತು ನಾಡಿನ ಹಲವೆಡೆ ಸಾವಿರ ಸಾವಿರ ಪ್ರವಚನಗಳನ್ನು ಇವರ ಪ್ರವಚನದ ಪರಿಣಾಮದಿಂದ ಮಧುರಖಂಡಿಯಲ್ಲಿ ಇಂದು ೨೫ ಜನ ವಿಚಾರ ಚಂದ್ರೋದಯ ಕಾವ್ಯವನ್ನು, ನಿಜಗುಣರ ಕೈವಲ್ಯಪದ್ಧತಿ ಗ್ರಂಥದ ಎಲ್ಲ ಸ್ಥಲಗಳ ಗೀತೆಯನ್ನು ಹಾಡುವ ಮಂಡಳಿಯೊಂದು ಸಿದ್ಧವಾಯಿತು. ಹೇಮರೆಡ್ಡಿಮಲ್ಲಮ್ಮ ನಾಟಕ ಕಂಪನಿಯ ಹುಟ್ಟಿಗೆ ಕಾರಣರಾದರು. ಆ ಮೂಲಕವೂ ಪ್ರವಚನ ಸಾಹಿತ್ಯವನ್ನು ಬೆಳಸಿದರು. ಮದರಖಂಡಿ ಮಧುರಖಂಡಿ ಆಗಿರುವದು ಇವರ ಪ್ರವಚನದಿಂದಲೇ. ಒಂದೇ ಒಂದು ಹೊಟೇಲಾಗಲಿ, ಸಾರಾಯಿ ಅಂಗಡಿಯಾಗಲ್ಲಿ ಇಲ್ಲಿ ಹುಟ್ಟದಿರುವದಕ್ಕೆ ಈ ಸಿದ್ಧಗಿರಿಯಯ್ಯನ ಆಧ್ಯಾತ್ಮಿಕ ಪ್ರವಚನವೂ ಒಂದು ಕಾರಣವಾಗಿದೆ. ಆಚಾರ ವಿಚಾರಗಳ ಹೊಂದಾಣಿಕೆಯ ಪವಿತ್ರ ಬದುಕು ಹಾಗೂ ಪ್ರವಚನ, ಇಡೀ ಸಮಾಜದ ಮೇಲೆ ಪರಿಣಾಮ ಬೀರಿತು. ಇವರು ಪರಂಪರೆ ನಿರ್ಮಿಸಿದ್ದಾರೆ. 'ಗಿರೀಶ ಶತಕ' ದಂತಹ ಕೃತಿಗಳನ್ನು ರಚಿಸಿದ್ದಾರೆ.

## ೧೪) ಪೂಜ್ಯ ಲಿಂ.ಶ್ರೀ ಶಂಭುಲಿಂಗ ಶಾಸ್ತ್ರೀಗಳು, ದರೂರ.

ಶ್ರೇಷ್ಠ ಚಿಂತಕರು ವೇದಾಂತ-ಸಿದ್ಧಾಂತ ಪಾರಾಂಗತರು, ತತ್ತ್ವಶಾಸ್ತ್ರದಲ್ಲಿ M.A ಪದವಿಧರರು, ಶರಣ ಸಿದ್ಧಾಂತ ಶಿರೋಮಣಿಗಳು, ವಿದ್ಯಾವಾರಿಧಿ ಗೀತಾ ಸರ್ವೋತ್ತಮ, ವಾಗ್ದೇವಿ ವರಪುತ್ರ ಬಿರುದಾಂಕಿತರಾದ ಪೂಜ್ಯ ಶಂಭುಲಿಂಗ ಶಾಸ್ತ್ರೀಗಳು ತಮ್ಮ ಆಯುಷ್ಯದ ೫೦ ವರ್ಷಗಳನ್ನು ಶಾಸ್ತ್ರ ಪ್ರವಚನಗಳಲ್ಲಿ ಕಳೆದಿದ್ದಾರೆ. ತರ್ಕ ವಿಚಾರದಲ್ಲಿ ಜನಸಾಮಾನ್ಯರಿಗೆ ಸರಿಯಾಗಿ ತಿಳಿಸಿಕೊಡುವ ಶ್ರೇಷ್ಠ ವಾಗ್ಮಿಗಳಾಗಿದ್ದರು. ಪ್ರಮಾಣ ಬದ್ಧವಾಗಿ ಶಾಸ್ತ್ರಬದ್ಧವಾಗಿ

ವಿಷಯವನ್ನು ಮಂಡಿಸುವ ಮತ್ತು ತತ್ತ್ವಗಳ ಬಗ್ಗೆ ಖಂಡಿಸುವ ಎದೆಗಾರಿಕೆ ಉಳ್ಳವರಾಗಿದ್ದರು. ಎಷ್ಟೇ ವಿರೋಧಗಳು ಬಂದರೂ ಶ್ರೀ ನಿಜಗುಣ ಶಿವಯೋಗಿಗಳು ಕೇವಲ ವೇದಾಂತಿಗಳಲ್ಲ ಅವರು ಸಿದ್ಧಾಂತಿಗಳೆಂದು ತರ್ಕಬದ್ಧವಾಗಿ ಸಾದರಪಡಿಸಿದ ಮಹಾನುಭಾವರು. ಗೀತೆ, ಉಪನಿಷತ್ತು, ವಚನ, ನಿಜಗುಣರ ಷಟ್‌ಶಾಸ್ತ್ರ ಪ್ರಕಟಪಡಿಸುವಲ್ಲಿ ಹರಸಾಹಸ ಮಾಡಿದ್ದಾರೆ. ಇವರು ವೇದಾಂತ-ಸಿದ್ಧಾಂತಗಳ ಸಮನ್ವಯ ಪ್ರವಚನಕಾರರು.

ವಿನೂತನ ಪಂಚೀಕರಣ, ಆತ್ಮಾನುಭಾವ, ಶ್ರೀವೃತ್ತಿ, ಕೈವಲ್ಯ ಪದ್ಧತಿ ವಿಚಾರ ಸಂಕೀರ್ಣ, ವಚನಸುಧೆ ಗ್ರಂಥಗಳನ್ನು ರಚಿಸಿ ಅಮೂಲ್ಯವಾದ ಪ್ರವಚನವನ್ನು ಸಮಾಜಕ್ಕೆ ನೀಡಿದ್ದಾರೆ. ಆತ್ಮಾನುಭಾವದ ಅಂತರಾಳ ಶ್ರೀಮನ್ ನಿಜಗುಣರ ವಚನಸುಧೆ, ಅನುಭವಸಾರ, ಕರ್ಮಣೆವಾದಿಕಾರಸ್ತೆ ಹೀಗೆ ವೈಚಾರಿಕ ಹತ್ತಾರು ಲೇಖನಗಳನ್ನು ಚಿಂತಕರ ಮುಂದಿಟ್ಟಿದ್ದಾರೆ. ತಮ್ಮ ಹಾಗೇ ಮೂರ್‍ನಾಲ್ಕು ಜನ ಪ್ರವಚನಕಾರರನ್ನು ಸಿದ್ಧಗೊಳಿಸಿದ್ದಾರೆ.

### ೧೫) <u>ಪ.ಪೂ.ಷ.ಬ್ರ ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು ಹಿರೇಮಠ ತೆಲಸಂಗ</u> :

ಉನ್ನತ ಶಿವಾನುಭವಿಗಳು, ಶಿಕ್ಷಣ ಪ್ರೇಮಿಗಳು, ಸಂಸ್ಕೃತ ಕನ್ನಡ ಉಭಯಭಾಷಾ ಪಂಡಿತರು, ಸರಳ ಜೀವನದ ಖ್ಯಾತ ಪ್ರವಚನಕಾರರು. ಪುರಾಣ ಪ್ರವಚನ ಶಿರೋಮಣಿಗಳು, ಅನುಭವ ವಿಶಾರದರು, ಶಿವಯೋಗ ಮಂದಿರದಲ್ಲಿ ಅಧ್ಯಯನ ಗೈದು, ಅಥಣಿ ತಾಲೂಕಿನ ತೆಲಸಂಗ ಹಿರೇಮಠದ ಪಟ್ಟಾಧ್ಯಕ್ಷರಾಗಿ ಹಳ್ಳಿ ಹಳ್ಳಿಗಳಲ್ಲಿ ಶರಣ ಸಾಹಿತ್ಯ ಸಿದ್ಧಾಂತ ಕುರಿತು ಪ್ರವಚನಗಳನ್ನು ಮಾಡಿ, ಗ್ರಾಮೀಣ ಭಾಗದಲ್ಲಿ ಶಿಕ್ಷಣ ಪ್ರಸಾರ ಕೈಕೊಂಡು, ಶಾಲಾ ಕಾಲೇಜುಗಳನ್ನು ಪ್ರಾರಂಭಿಸಿದ್ದು ಇವರ ಮಹತ್ ಸಾಧನೆಯಾಗಿದೆ.

ಕೇಳುಗರ ಹೃದಯ ಮಟ್ಟುವಂತೆ ಸರಳ ಸುಂದರವಾಗಿ ವಿಷಯ ವಿಶ್ಲೇಷಣೆ ಮಾಡುವ ಚಿಂತನಶೀಲ ಪ್ರತಿಭಾವಂತ ವಾಗ್ಮಿಗಳಾಗಿದ್ದಾರೆ. ಇಲಕಲ್ ಮಠದ ಅಂಗಸಂಸ್ಥೆಯಾದ ಶರಣ ಸಿದ್ಧಾಂತ ವಿದ್ಯಾಪೀಠದ ಮೂಲಕ ವಿಶೇಷ ಶಿಬಿರಗಳಲ್ಲಿ ಬೋಧಕರಾಗಿ, ಮಾರ್ಗದರ್ಶಕರಾಗಿ ಪಾಲ್ಗೊಂಡು ಸಮಾಜದ ಉನ್ನತಿಗಾಗಿ ಶ್ರಮಿಸಿದ ವಯೋವೃದ್ಧರಿವರು.

'ಪ್ರಭುಲಿಂಗಲೀಲಾ ಪ್ರವಚನ' ಎಂಬೀ ಪ್ರವಚನ ಗ್ರಂಥವು ಸಾಹಿತ್ಯದಲ್ಲೊಂದು ಮೈಲುಗಲ್ಲು. ಬಹುಶ್ರುತರಾದವರು ಸಾಹಿತ್ಯ ಕೃತಿಯೊಂದನ್ನು ಪ್ರವಚಿಸಿದಾಗ ಮೂಲ ಕೃತಿಯೂ ಹೇಗೆ ಉಜ್ವಲಗೊಳ್ಳುತ್ತದೆ ಎನ್ನುವದಕ್ಕೆ ಪೂಜ್ಯ ಷ.ಬ್ರ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು ಪ್ರವಚನ

ಮಾಡಿ ರಚಿಸಿದ "ಪ್ರಭುಲಿಂಗ ಲೀಲಾ ಪ್ರವಚನ" ಗದುಗಿನ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ಮಾತು ಸತ್ಯವಾಗಿದೆ.

೧೬) <u>ಪರಮಪೂಜ್ಯ ಡಾ.ಬಸವಲಿಂಗ ಪಟ್ಟದ್ದೇವರು, ಹಿರೇಮಠ ಸಂಸ್ಥಾನ ಭಾಲ್ಕಿ</u> :

ಕಲ್ಯಾಣ ನಾಡಿನಲ್ಲಿ ಬಸವತತ್ವದ ಕ್ರಾಂತಿ ಕಹಳೆಯನ್ನು ಮನೆ-ಮನೆಗೂ ತಲುಪಿಸಿ ಶರಣ ಸಾಹಿತ್ಯದ ಶ್ರೀಗಂಧವನ್ನು ಎಲ್ಲರಿಗೂ ಮುಟ್ಟುವಂತೆ ಪರಿಶ್ರಮಿಸಿ, ಶರಣ ಸಂಸ್ಕೃತಿ ಪ್ರಚಾರ, ಪ್ರಕಟಣೆ, ಪ್ರಸಾರದ ಹೊಣೆಹೊತ್ತು ಮಹಾರಾಷ್ಟ್ರ ಕರ್ನಾಟಕದ ಗಡಿಭಾಗದಲೆಲ್ಲ 'ಕನ್ನಡದ ಕಂಪು' ಹರಡಿದವರು. ಭಾಷಾಭಿಮಾನದ ಬೆಳಕು ಹಚ್ಚಿದ ತಾಯಿ ಇವರು. ಪೂಜ್ಯರು ತಮ್ಮ ಪ್ರವಚನ ಮತ್ತು ಆಶೀರ್ವಚನಗಳ ಮೂಲಕ ಶೈಕ್ಷಣಿಕ ಕ್ರಾಂತಿ ಮಾಡುತ್ತಿದ್ದಾರೆ. ತಮ್ಮ ಶ್ರೀಮಠದ ವತಿಯಿಂದ ಗಡಿಯಾಚೆಯಲ್ಲಿ ಸುಮಾರು ೩೫ಕ್ಕೂ ಹೆಚ್ಚು ಕನ್ನಡ ಮಾಧ್ಯಮ ಶಾಲೆಗಳನ್ನು ಆರಂಭಿಸಿದ್ದಾರೆ. ಉಚಿತ ವಸತಿ ಸಹಿತ ಪ್ರಸಾದ ನಿಲಯ ಆರಂಭಿಸಿದ್ದಾರೆ. ಬಡವರ ದೀನದಲಿತರ, ಅನಾಥ ಮಕ್ಕಳಿಗೆ ಆಶ್ರಯ, ರೈತರ ಮಕ್ಕಳಿಗೆ ಶಿಕ್ಷಣ, ವಿಕಲಚೇತನ ಮತ್ತು ಬಾಲಕಾರ್ಮಿಕರಿಗೆ ಶಿಕ್ಷಣ ನೀಡುತ್ತಿದ್ದಾರೆ. ಪುಸ್ತಕ ಪ್ರೇಮಿಯಾದ ಇವರು ಅನೇಕ ಗ್ರಂಥಗಳನ್ನು ರಚಿಸಿರುವುದಲ್ಲದೆ. ಕನ್ನಡ ಸಾಹಿತ್ಯ ಸಂಘಟಣೆಗಳ ಶರಣ ಸಾಹಿತ್ಯದ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ವಿವಿಧ ಭಾಷೆಯಲ್ಲೂ ಬಸವಸಂದೇಶ ಪ್ರಕಟಗೊಳಿಸಿದ್ದಾರೆ. ೨೫ ವರ್ಷಗಳವರೆಗೆ ಧರ್ಮ ಪ್ರಸಾರಕ್ಕೆ ಶೈಕ್ಷಣಿಕ ಅಭಿವೃದ್ಧಿಗೆ ಸಮರ್ಥಿಸಿಕೊಂಡ ಇವರಿಗೆ ಗುಲಬರ್ಗಾ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿ ಮತ್ತು ಕರ್ನಾಟಕ ರಾಜ್ಯಸರಕಾರವು ೨೦೧೨ ನೇ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿವೆ.

೧೭) <u>ಶ್ರೀಬ್ರ ಪೂಜ್ಯ ಸಹಜಾನಂದ ಮಹಾಸ್ವಾಮಿಗಳು ಬ್ರಹ್ಮವಿದ್ಯಾಶ್ರಮ, ಮಹಾಲಿಂಗಪುರ.</u>

ಮಾತೃಹೃದಯಿಗಳಾದ ಪರಮಪೂಜ್ಯರು ಅಪರೂಪದ ಅರುಹಿನ ಸಂತರು. ವೇದಾಂತಸಿದ್ಧಾಂತಗಳ ಸಮನ್ವಯವಚಾರ್ಯರು. ಅವಿಶ್ರಾಂತವಾಗಿ ಉಪದೇಶಾಮೃತವನ್ನ ಸರ್ವರಿಗೂ ಸಮಾನವಾಗಿ ಧಾರೆ ಎರೆಯುವ ಅನುಭಾವಿ ತತ್ವಚಿಂತಕರು. ವಿದ್ಯಾಸಂಪನ್ನರಾದ ಪೂಜ್ಯರು ಸಿದ್ಧಾರೂಢ ಬ್ರಹ್ಮವಿದ್ಯಾಶ್ರಮವನ್ನು ಸ್ಥಾಪಿಸಿ, ಅನೇಕ ಪ್ರವಚನ ಕೃತಿಗಳನ್ನು

ಕೃಷಿಗೈದಿದ್ದಾರೆ. 'ಶಿವಪಥ'ವು ಇವರ ಶ್ರೇಷ್ಠ ಕೃತಿಯಾಗಿದೆ. ಹಿಂದಿ ಭಾಷೆಯಲ್ಲಿರುವ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿರುವರು. ಇವರು ಪೂಜ್ಯ ಸಿದ್ಧಯ್ಯ ಅಪ್ಪಗಳ ಮಾರ್ಗದರ್ಶನದಲ್ಲಿ ಅಧ್ಯಾತ್ಮಬೋಧೆ ಪಡೆದಿದ್ದಾರೆ. ಧಾರ್ಮಿಕ ಕಾರ್ಯಕ್ರಮಗಳನ್ನು ಮಾಡಿ ಜಮಖಂಡಿ ತಾಲೂಕಿನ ಹಿಪ್ಪರಗಿಯಲ್ಲಿ ಸತತ ೧೦ ವರ್ಷಗಳ ಕಾಲ ಪ್ರವಚನ ಕಲೆಯನ್ನು ಕಲಿತಗೊಳ್ಳಬೇಕೆನ್ನುವ ನೂರಾರು ಸಾಧಕರಿಗೆ ಸಾಧನಾ ಶಿಬಿರಗಳನ್ನು ಏರ್ಪಡಿಸಿ, ಸಾಧಕರ ದೊಡ್ಡ ಬಳಗವನ್ನೇ ಕಟ್ಟಿರುವರು.

ಸಿದ್ಧಾರೂಢರ ಜ್ಯೋತಿ ಪಾದಯಾತ್ರೆಯ ಮೂಲಕ ಜನಜಾಗೃತಿ ಮಾಡಿದ ಇವರು ದೀನದಲಿತರ, ಬಡವರ ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸಿದವರಾಗಿದ್ದಾರೆ,

## ೧೮) <u>ಡಾ. ವಿಜಯಕುಮಾರ ಮಹಾನುಭಾವಿಗಳು.</u>

ಇವರ ಬದುಕಿನ ಉಳಿದೆಲ್ಲ ಬಾಗಿಲುಗಳು ಮುಚ್ಚಿದಾಗ ಅನುಭಾವ ಪಥದ ದ್ವಾರ ತೆರೆಯಿತು. ಜ್ಞಾನ ದಾಸೋಹದ ಅನುಭಾವ ಪ್ರವಚನ ಅನಿವಾರ್ಯವಾಯಿತು. ಪರಮಾತ್ಮ ತನ್ನ ತತ್ವದ ಮಣಿಹಕ್ಕೆ ಈ ವಿಜಯಕುಮಾರರು ಅಣಿಯಾದರು. ಬಾಳಿನಲ್ಲಿ ದೈವಾನುಗ್ರಹಕ್ಕಿಂತ ಮಿಗಿಲಾದುದು ಏನಿದೆ? ಜ್ಞಾನ ದಾಸೋಹದ ಮಣಿಹದಲ್ಲಿ ಬಾಳು ಧನ್ಯ ಎಂದು ತಿಳಿದು ಶ್ರೇಷ್ಠ ಪ್ರವಚನಕಾರರಾಗಿ ಅನೇಕ ಕೃತಿಗಳನ್ನು ರಚಿಸಿದ್ದಾರೆ.

ಅನುಭಾವದ ದಾರಿದ್ರ್ಯದಲ್ಲಿರುವವರಿಗೆ ಅನುಭಾವದೈಶ್ವರ್ಯ ದರ್ಶನ ಮಾಡಿಸುವುದೇ ಪರಮಾತ್ಮನ ಸೇವೆ. ದೈಹಿಕ ಮಾನಸಿಕ ರೋಗಾದಿಗಳಿಂದ ಬಳಲುವವರಿಗೆ ದಿವ್ಯಯೋಗದ ಸಂಜೀವಿನಿ ಚಿಕಿತ್ಸೆ ನೀಡುವುದೇ ಪರಮಾತ್ಮನ ಸೇವೆ. ಜೀವನ ಪ್ರೀತಿಯನ್ನು ಕಳೆದಕೊಂಡು ನಿರ್ಭಾಗ್ಯರಿಗೆ ಜೀವನ ಪ್ರೀತಿಯನ್ನು ಹುಟ್ಟಸುವುದೇ ಪರಮಾತ್ಮನ ಸೇವೆ.

"ಪರಮ ಪೂಜ್ಯ ಡಾ. ವಿಜಯಕುಮಾರ ಮಹಾನುಭಾವಿಗಳ ಸಂಕಲನ ಕೃತಿಯಲ್ಲಿ ಬಸವಣ್ಣನವರ ೩೧೦ ವಚನಗಳಿವೆ. ಹಾಡಲು ಬರುವ ವಚನಗಳು ಸಾಹಿತ್ಯಕ ಮೌಲ್ಯವುಳ್ಳ ಶ್ರೇಷ್ಠವಚನಗಳು ಇಲ್ಲಿವೆ. ಯಾರು ಈ ವಚನಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುತ್ತಾರೋ ಅವರು ಜೀವನದಲ್ಲಿ ಉತ್ತೀರ್ಣರಾಗುತ್ತಾರೆ. ಹೆಚ್ಚೇನು ಪರಮಾತ್ಮನಲ್ಲಿ ಪರಮಾತ್ಮರೇ ಆಗುತ್ತಾರೆ".೫೯

"ಪರಮಪೂಜ್ಯರೂ, ಅನುಭಾವಿಗಳೂ, ತಪಸ್ವಿಗಳೂ, ದಿವ್ಯಯೋಗಿಗಳೂ ಆದ ಡಾ॥ ವಿಜಯಕುಮಾರ ಮಹಾನುಭಾವಿಗಳವರ 'ತಪಸ್ಸು' ಎನ್ನುವ ಕೃತಿಯು ಈ ಕ್ಷೇತ್ರದಲ್ಲಿಯೇ ಪ್ರಥಮಕೃತಿಯಾಗಿದೆ. ತಮಗೆ ತಾವೇ ಮಾರ್ಗದರ್ಶಕರಾಗಿ ಅನುಭಾವ ಪಥದಲ್ಲಿ ನಡೆದ ಸಾಹಸಿಗಳು ಪೂಜ್ಯರು. ಮಹಾದೇವಿಯಕ್ಕ, ಅಲ್ಲಮಪ್ರಭುದೇವರ ವಚನಗಳಲ್ಲಿ ತಪಸ್ಸಿನ ಹೊಳಪುಗಳು ಸಿಗುತ್ತವೆ. ಅವರ ಪಥದಲ್ಲಿ ಹೆಜ್ಜೆ ಇಟ್ಟು ನಡೆದಿರುವ ಶ್ರೀಗಳು ಅನುಭಾವ ಸಂಪನ್ನರು".೬೦

"ಇನ್ನೊಬ್ಬರನ್ನು ನಿಂದಿಸಿಯೋ, ಟೀಕಿಸಿಯೋ ಜೀವನವನ್ನೆಲ್ಲಾ ಟೀಕೆ, ನಿಂದೆಯಲ್ಲಿ ಕಳೆಯುವ ಜನ ಒಂದೆಡೆಯಾದರೆ, ಪರಮಾತ್ಮನಷ್ಟೇ ಸಾಕು, ಉಳಿದುದು ಬೇಡ ಎಂದು ಭಕ್ತಿ, ಜ್ಞಾನಪಥದಲ್ಲಿರುವ ಪೂಜ್ಯರು ಆತ್ಮಾವಲೋಕನದಲ್ಲಿ ನಿರತರು. ಅಂತರಂಗ, ಬಹಿರಂಗಶುದ್ಧಿಗೆ ಮನಕೊಟ್ಟವರು. ನುಡಿದಂತೆ ನಡೆ. ಇದೇ ಜನ್ಮ ಕಡೆ. ಈ ಭಾಷೆಯಲ್ಲಿ ನಂಬಿಕೆ ಇಟ್ಟವರು ಶರಣರು ನಡೆದರು ನುಡಿದರು, ನುಡಿದರು ನಡೆದರು. ವಿಚಾರ ಆಚಾರ, ಜ್ಞಾನ ಭಕ್ತಿ ಪಾಲಿಸಿದರು. ಪೂಜ್ಯರು ಕೂಡ ಈ ನುಡಿ-ನಡೆ ಒಂದಾದ ಪಥದಲ್ಲಿ ಎಚ್ಚರದಿಂದ ನಡೆಯುತ್ತಿರುವವರು".೬೧ "ಅವರ ಅನುಭಾವವೆಲ್ಲವೂ ತಪಸ್ಸು ಕೃತಿಯಲ್ಲಿ ಮೈದಾಳಬೇಕಿತ್ತು. ಇನ್ನೂ ತಿಳಿಯಬೇಕು, ಎನ್ನುವ ಹಂಬಲವನ್ನು ಈ ಕೃತಿ ಮೂಡಿಸುತ್ತದೆ. 'ಕಾಯ ಕಾಂತಾರದೊಳಗೆ ಜೀವಾತ್ಮ ನೊಂದ.' ಇದು ಪೂಜ್ಯರು ಶ್ರೇಷ್ಠ ಅನುಭಾವಗೀತ. ಆತ್ಮನು ಪರಿಭವದಲ್ಲಿ ಸಿಲುಕಿಕೊಂಡಿರುವ ಪರಿಯನ್ನು ಹಲವು ದೃಷ್ಟಾಂತಗಳಲ್ಲಿ ಹೃದಯಂಗಮವಾಗಿ ಹಾಡಿದ್ದಾರೆ. ಅಕ್ಕಮಹಾದೇವಿ ಅಲ್ಲಮಪ್ರಭುದೇವರ ನಂತರ ಅನುಭಾವದ ಹಾಡುಗಳು, ವಚನಗಳು ಶ್ರೇಷ್ಠವಾದ ರೀತಿಯಲ್ಲಿ ಅಭಿವ್ಯಕ್ತಗೊಳ್ಳುತ್ತಿವೆ".೬೨ "ಸಕಲ ಜೀವಜಾಲದ ಅಂತಃಸತ್ವವೇ ಭೂವ್ಯೋಮಗಳನ್ನು ತುಂಬಿ ತುಳುಕುವ ಪರಮ ಚೈತನ್ಯವೇ ದರ್ಶನ ಕೊಡು ಬಾ

---

೫೯ " " 'ಬಸವಣ್ಣನವರ' ವಿಜಯಕುಮಾರ ಮಹಾನಭಾವಿಗಳು. ಬೆನ್ನುಡಿಯಿಂದ ಆಯ್ದಿದೆ. (೧೯೮೯)

೬೦ " " 'ಬಸವಣ್ಣನವರ' ವಿಜಯಕುಮಾರ ಮಹಾನಭಾವಿಗಳು. ಬೆನ್ನುಡಿಯಿಂದ ಆಯ್ದಿದೆ. ಸಂಖ್ಯೆ-೪. (೧೯೮೯)

೬೧ " " ಅದೇ ಪುಸ್ತಕ ಸಂಖ್ಯೆ-೫.

೬೨ " " ಅದೇ ಪುಸ್ತಕ ಸಂಖ್ಯೆ-೫.

ಎಂದು ಪೂಜ್ಯರು ಭಾವತುಂಬಿ ಹಾಡಿದ ಈ ಹಾಡು ಪರಮಾತ್ಮನ ಹಂಬಲದ ಶ್ರೇಷ್ಠ ವಚನವಾಗಿದೆ. "ಬಾನಿನ ನೀಲಿಯ ಅಂಗಳದಲ್ಲಿ ತೋರು ನಿನ್ನ ಸ್ವರೂಪ." ಪರಮಾತ್ಮನ ದರ್ಶನಕ್ಕಾಗಿ ಜೀವಾತ್ಮ ಹಂಬಲಿಸುತ್ತಿರುವ ಚಿತ್ರ ಈ ವಚನದಲ್ಲಿ ಅಭಿವ್ಯಕ್ತವಾಗಿದೆ. ಇವು ಕುಳಿತು ಬರೆದವುಗಳಲ್ಲ. ತಪಸ್ಸಿನಲ್ಲಿ ಹಾಡಿಕೊಂಡವುಗಳು" ಶರಣಾಗತಿ ಎಂದರೆ ಒಪ್ಪಿಕೊಳ್ಳುವುದು, ಕೊಟ್ಟುಕೊಳ್ಳುವುದು, ಯಾರಿಗೆ? ಪರಮಾತ್ಮನಿಗೆ, ಪರವಸ್ತುವಿಗೆ, ಜಗದೊಡೆಯನಿಗೆ, ಈ ಪರಮಾತ್ಮನಿಗೆ ನಾವು ಕೊಟ್ಟು ಕೊಂಡರೂ ಅಷ್ಟೆ, ಅವನಿಗೆ ನಮ್ಮಿಂದ ಏನೂ ಆಗಬೇಕಾಗಿಲ್ಲ, ಆಗಬೇಕಾಗಿರುವುದು ನಮಗೆ. ಎಲ್ಲಿ ಅರ್ಪಣೆ ಇಲ್ಲ, ಅಲ್ಲಿ ಸುಖ ಇಲ್ಲ, ಧನ್ಯತೆ ಇಲ್ಲ, ಸಂತೋಷ ಇಲ್ಲ.

೧) ಅನುಭಾವ ಮಾರ್ಗದಲ್ಲಿ ಪ್ರಗತಿ ಹೊಂದಬೇಕಾದರೆ ಅರ್ಪಣೆ ಅನಿವಾರ್ಯ. ಏನು ನುಡಿಯುವೆವೋ ಆ ನುಡಿಗಳು ಕೃತಿಯಲ್ಲಿ ಅಭಿವ್ಯಕ್ತವಾಗಬೇಕು.

೨) ಪರಿಪೂರ್ಣ ಶರಣಾಗತಿ ವ್ಯಕ್ತಿಯನ್ನು ಉನ್ನತಿಗೆ ಕರೆದುಕೊಂಡು ಹೋಗುತ್ತದೆ. ಅಹಂಕಾರ ಮತ್ತು ಆಶೆಗಳು ಶರಣಾಗತಿಗೆ ಇರುವ ಅಡ್ಡಿಗಳು. ಎಲ್ಲಿ ಶರಣಾಗತಿ ಇಲ್ಲ ಅಲ್ಲಿ ಅರ್ಪಣೆ ಇಲ್ಲ.

೩) ಪರಿಪೂರ್ಣ ಶರಣಾಗತಿ ಅಲ್ಪ ಕಾಲದಲ್ಲಿ ಸಾಧ್ಯವಾಗದು. ಪೂರ್ಣ ಶರಣಾಗತಿ ಎಂದರೆ ತನು, ಮನ, ಧನ ಎಲ್ಲದರ ಪರಿಪೂರ್ಣ ಅರ್ಪಣೆ. ತನುವಿನ ಪ್ರತಿ ಪ್ರಜ್ಞೆಯ ಪ್ರಾಣನ ಸ್ತರದಲ್ಲಿ ಇರುವ ಅಹಂಕಾರ ಮತ್ತು ವ್ಯಕ್ತಿ ಸ್ವಾತಂತ್ರ್ಯವನ್ನು ಛಿದ್ರಿಸಬೇಕು ಪೂರ್ಣ ವ್ಯಕ್ತಿತ್ವವನ್ನು ಒಪ್ಪಿಸಿಕೊಳ್ಳಬೇಕು.

೪) ಪರಮಾತ್ಮನಿಗೆ ಭಕ್ತನು ಶರಣಾಗುವುದರಿಂದ ಭಕ್ತನು ಪರಮಾತ್ಮನಂತೆ ಪೂರ್ಣನಾಗುತ್ತಾನೆ. ಶಕ್ತಿ ಚೈತನ್ಯ ಮತ್ತು ವ್ಯಕ್ತಿತ್ವ ವಿಕಾಸ ಪರಮಾತ್ಮನಂತೆ ವ್ಯಾಪಕಗೊಳ್ಳುತ್ತವೆ. ವ್ಯಕ್ತಿ ಈ ಮುಂಚೆ ಹೊಂದಿರದ ದಿವ್ಯ ಶಕ್ತಿ, ದಿವ್ಯ ಪ್ರೇಮ ವ್ಯಕ್ತಿಯಲ್ಲಿ ಚಿಲುಮೆಯಂತೆ ಚಿಮ್ಮುತ್ತವೆ.

ಪ್ರವಚನವು ಹೇಗೆ ಯೋಗ್ಯರಾಗಿ ಬಾಳಬೇಕು ಎಂಬುದನ್ನು ಕಲಿಸುತ್ತದೆ. ಇಲ್ಲಿ ಕಥೆ ಇದೆ. ತತ್ವ ಇದೆ; ಧರ್ಮ ಇದೆ; ಕಾವ್ಯ ಇದೆ; ದರ್ಶನ ಇದೆ; ಅನುಭಾವ ಇದೆ; ನೀತಿ ಇದೆ; ಸಹೃದಯರನ್ನು ಹತ್ತಿರ ಕರದುಕೊಳ್ಳುವ ಚೆಂದದ ಶ್ರೇಷ್ಠ ದೃಷ್ಟಾಂತ ಕಥೆಗಳಿವೆ. ಮಹಾತ್ಮರ ದರ್ಶನವಿದೆ. ಜೀವನದಲ್ಲಿ ಏನೇನಿದೆಯೋ ಅದೆಲ್ಲ ಇಲ್ಲಿದೆ. ಆದರೆ ಅದೆಲ್ಲವೂ ವಿಜಯಕುಮಾರ ಮಹಾನುಭಾವಿಗಳ ಕಾವ್ಯ ಸೃಷ್ಟಿಯಲ್ಲಿ ಅರಳಿದೆ.

## ೧೯) ಪೂಜ್ಯ ಶ್ರೀ ಬಸವಾನಂದ ಮಹಾಸ್ವಾಮಿಗಳು ಮನಗುಂಡಿ.

ಆರೋಗ್ಯ ಮತ್ತು ಆಧ್ಯಾತ್ಮಿಕ ಪ್ರವಚನಕಾರರು, ಪ್ರವಚನ ಪ್ರವೀಣರು ಬಸವ ತತ್ವ ನಿಷ್ಠರು, ಚಿಕಿತ್ಸಾ ತಜ್ಞರು ಆದ ಪರಮಪೂಜ್ಯ ಬಸವಾನಂದ ಸ್ವಾಮಿಗಳು ಬಸವ ತತ್ವದಲ್ಲಿ ಶರಣರ ನುಡಿಯಂತೆ ನಡೆದು ಪ್ರಸ್ತುತ ಸಮಾಜದಲ್ಲಿ ಆರೋಗ್ಯ ಮತ್ತು ಆಧ್ಯಾತ್ಮ ಎಂಬೆರಡು ದೃಷ್ಟಿಯ ಮೂಲಕ ಶರಣ ಸಂಸ್ಕೃತಿಯನ್ನು ಬೆಳೆಸುತ್ತಾ, ತೋರುವ ಜಗತ್ತನ್ನು ಕಾಣುವ ಕಂಗಳಿಲ್ಲದಿದ್ದರೂ ಬದುಕನ್ನು ಸಕಾರಾತ್ಮಕವಾಗಿ ನೋಡುವ ಜನಜಾಗೃತಿಯತ್ತ ಮನಸ್ಸು ಮಾಡಿರುವ ಇವರು ಹಾಸನ ಜಿಲ್ಲೆ ಗೋನಿ ಸೋಮನಹಳ್ಳಿ ಎಂಬ ಗ್ರಾಮದಲ್ಲಿ ೧೯೭೧ ನವ್ಹಂಬರ ೧೩ ರಂದು ಬಡಕೃಷಿ ಕುಟುಂಬದಲ್ಲಿ ಜನಿಸಿದರು. ಮೈಸೂರಿನ ಅಂಧ ಮಕ್ಕಳ ಶಾಲೆಯಲ್ಲಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಪೂರೈಸಿ ಪಿ.ಯು.ಸಿ. ಯಲ್ಲಿ ಉನ್ನತ ದರ್ಜೆಯಲ್ಲಿ ಪಾಸಾಗಿ ಸಾವಿರ ಸಾಹಸಗಳ ಸಮೂಹವನ್ನೇ ಎದುರಿಸುವ ಛಲಗಾರರಾದರು. ಹೊಸ ವಿಚಾರಗಳೊಂದಿಗೆ ವೈಚಾರಿಕ ಪ್ರಜ್ಞೆ ಹೆಚ್ಚುತ್ತಿರುವ ಕಾಲದಲ್ಲಿ ಹಾಸನಕ್ಕೆ ಆಗಮಿಸಿದ ಪರಮಪೂಜ್ಯ ಶ್ರೀ ಲಿಂಗಾನಂದ ಸ್ವಾಮಿಗಳ ಪ್ರವಚನಕ್ಕೆ ಪ್ರಭಾವಿತರಾಗಿ ಕೂಡಲ ಸಂಗಮಕ್ಕೆ ಆಗಮಿಸಿ ಲಿಂಗದೀಕ್ಷೆ ಮತ್ತು ಸಮಾಜ ಸೇವೆ ದೀಕ್ಷೆಯನ್ನು ಹೊಂದಿ, ಮಾತೃಹೃದಯಿ ಗದುಗಿನ ತೋಂಟದಾರ್ಯ ಮಠದ ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳ ಅಂತಕರಣದ ಆಶೀರ್ವಾದ ಮತ್ತು ಮಾರ್ಗದರ್ಶನ ಪಡೆದು ಶ್ರೇಷ್ಠ ಪ್ರವಚನಕಾರರಾಗಿ ಸಮಾಜೋದ್ಧಾರ್ಮಿಕ ಕಾರ್ಯಗಳನ್ನು ಕೈಗೊಂಡಿದ್ದಾರೆ.

ಜಾತಿ, ಮತ, ಲಿಂಗ, ವರ್ಣ ವರ್ಗ ಈ ಎಲ್ಲ ತಾರತಮ್ಯಗಳನ್ನು ಮೀರಿದ ಮೂಢನಂಬಿಕೆ ಕಂದಾಚಾರಗಳು ಸಂಕುಚಿತ ಮನೋಭಾವನೆಗೆ ಜಾಗವಿಲ್ಲದ ಸಮಾಜವನ್ನು ನಿರ್ಮಾಣ ಮಾಡಬೇಕೆಂಬ ಕನಸು ಬಸವಾದಿ ಶಿವಶರಣರದ್ದಾಗಿತ್ತು. ಮಾನಸಿಕ ಕ್ಷೋಭೆಗೆ ಒಳಗಾದಂತಹ ಸ್ವಾರ್ಥ ಮನುಷ್ಯನ ಸ್ವಾರ್ಥತೆಗೆ ಸಮಾಜದಲ್ಲಿ ಅಶಾಂತಿ ಹೆಚ್ಚುತ್ತಿರುವ ಇಂದಿನ ದಿನಮಾನಗಳಲ್ಲಿ ಈ ಮಹಾಶರಣರು ಕಂಡ ಕನಸುಗಳನ್ನು ಸಾಕಾರಗೊಳಿಸುವಲ್ಲಿ ಅಹರ್ನಿಸಿ ದುಡಿಯುತ್ತಿರುವವರು ಧಾರವಾಡ ಜಿಲ್ಲೆಯ ಮನಗುಂಡಿಯ ಈ ಪೂಜ್ಯ ಬಸವಾನಂದ ಮಹಾಸ್ವಾಮಿಗಳು.

ದೃಷ್ಟಿ ವಿಕಲಚೇತನರಾದರೂ ಸಹ ತಮ್ಮ ಅಂತರಂಗದ ದೃಷ್ಟಿಯಿಂದ ಶ್ರೀ ಗುರು ಬಸವ ಮಹಾಮನೆ ಸ್ಥಾಪಿಸಿ ಪ್ರವಚನಗಳ ಮೂಲಕ ಯೋಗ, ಆರೋಗ್ಯ ಶಿಬಿರ, ಮತ್ತು ಗ್ರಂಥ ಪ್ರಕಟನೆ ಮಾಡುತ್ತಿದ್ದಾರೆ. ಸಮಾಜದ ಜಂಜಾಟದಲ್ಲಿ ಬಂಧಿಯಾಗಿರುವ ಮಾನವನ ಬದುಕನ್ನು

ಮುಕ್ತಗೊಳಿಸಿ ಅವರನ್ನು ಬೆಳೆಸಿದ ಹಾದಿಗೆ ಸಾಧಿಸುವ ಕಾರ್ಯ ಶ್ಲ್ಯಾಘನೀಯವಾದದ್ದು. ಪೂಜ್ಯರು! ಸಾಹಿತ್ಯ, ಕೃಷಿ, ಗೋಶಾಲೆ ನಿರ್ಮಾಣ, ಗೋ ಮತ್ತು ಅರಣ್ಯ ಸಂರಕ್ಷಣೆ ಯೋಗ, ಧ್ಯಾನ, ಸಂಗೀತ ಮೊದಲಾದವುಗಳನ್ನು ಸಾಧಿಸಿದ ಪರಿ ಅಚ್ಚರಿ ಮೂಡಿಸುವಂತದ್ದು, ಲೇಖಕರಾಗಿ, ಯೋಗ ಸಾಧಕರಾಗಿ ಆರೋಗ್ಯ ದಾಸೋಹಿಗಳಾಗಿ, ಪ್ರವಚನಕಾರರಾಗಿ ಮಾಡಿದ ಈ ಮೇಲಿನ ಸಾಧನೆಗಳು ಸಮಕಾಲೀನ ಪ್ರವಚನಕಾರರಿಗೆ ಮಾದರಿಯಾಗಿವೆ. ಭವ್ಯ ಶರಣ ಪರಂಪರೆಯ ಸಾರವನ್ನು ಹೀರಿ ಬೆಳೆದಿರುವ ಶ್ರೀಗಳು ನಾಡಿನ ಜನಮನ ಗೆದ್ದವರಾಗಿದ್ದಾರೆ. ಶರಣರ ಅನುಭವ ಸಾರವನ್ನು ಪ್ರಕೃತಿ ಚಿಕಿತ್ಸೆಯ ಸ್ವಾನುಭವವನ್ನು ನೂರಾರು ಊರುಗಳಲ್ಲಿ ಸಾವಿರಾರು ಜನಮನಗಳಿಗೆ ಸುಹಾಸ್ಯಪೂರ್ಣವಾಗಿ, ತಾತ್ವಿಕವಾಗಿ, ಆತ್ಮೀಯವಾಗಿ ನೀಡುವ ಪ್ರವಚನಗಳು ಸರಳ ಶೈಲಿಯಲ್ಲಿ ಅರ್ಥವಾಗಿವೆ. ಅನೇಕರು ಅವರ ಪ್ರವಚನದ ಮಾತುಗಳಿಗೆ ಪ್ರಭಾವಿತರಾಗಿ ದೈಹಿಕವಾಗಿ, ಮಾನಸಿಕವಾಗಿ ಸಂತೋಷದಿಂದ ಬಾಳುತ್ತಿದ್ದಾರೆ.

## ೨೦) <u>ಪೂಜ್ಯ ಶ್ರೀ ಮ.ನಿ.ಪ್ರ ಪ್ರಭುಚನ್ನಬಸವ ಮಹಾಸ್ವಾಮೀಜಿ ಅಥಣಿ.</u>

ಕರ್ನಾಟಕದ ಉತ್ತರ ಗಡಿ ಅಂಚಿನಲ್ಲಿರುವ ಅಥಣಿ ಶ್ರೀ ಮುರುಘೇಂದ್ರ ಶಿವಯೋಗಿಗಳ ಲೀಲಾಕ್ಷೇತ್ರ, ಅಲ್ಲಿಯ ಜಂಗಮಲಿಂಗ ಕ್ಷೇತ್ರದ ಶ್ರೀ ಮೊಟಗಿಮಠದ ಚರಜಂಗಮ ಪ್ರಭುಚನ್ನಬಸವಮಹಾಸ್ವಾಜಿಯವರು ಸಮಾಜ ಮುಖಿ ಚಿಂತನೆಗಳ ಚಿಂತಕ, ವಾಗ್ಮಿ, ಕವಿ, ಸಾಹಿತಿ ಹೊಸತೊಂದನ್ನು ಕಟ್ಟುವ ಶ್ರೇಷ್ಠ ಪ್ರವಚನ ಚೇತನರು.

ಪ್ರವಚನ ಮಾಡುತ್ತ, ಮಾಡಿದ್ದನ್ನು ಬರೆಯುತ್ತಾ, ಬರೆದುದನ್ನು ಕೃತಿರೂಪಕ್ಕೆ ತಂದು ಪ್ರಕಟಸುತ್ತಾ, ಕಲೆ-ಜಾನಪದ, ಚಿಂತನ, ವೈದ್ಯಕೀಯ, ಸುಸಂಸ್ಕಾರದಂತಹ ಹತ್ತಾರು ಮೌಲಿಕ ಕಾರ್ಯಕ್ರಮಗಳನ್ನು ರೂಪಿಸುತ್ತಾ, ಯುವ ಸಂಘಟನೆ ಕಟ್ಟಿ ಒಂದು ವೇದಿಕೆ ಸಿದ್ಧಗೊಳಿಸಿ, ಶಿಬಿರ ಪಾದಯಾತ್ರೆ ಮೂಲಕ ಯುವಕರಿಗೆ, ಮಹಿಳೆಯರಿಗೆ ನೊಂದವರಿಗೆ ಧ್ವನಿ, ಶಕ್ತಿ, ಸ್ಪೂರ್ತಿಯಾಗಿದ್ದಾರೆ. 'ಅಥಣೀಶ' ನಾಮಾಂಕಿತದಲ್ಲಿ ೧೫ ಪುಸ್ತಕ ಪ್ರಕಟಿಸಿದ್ದಾರೆ. ೨೦ ಧ್ವನಿ ಸುರುಳಿ ಹೊರತಂದಿದ್ದಾರೆ. ಹಲವಾರು ಕ್ಯಾಸೆಟ್ಟುಗಳಿಗೆ ಸಾಹಿತ್ಯ ರಚಿಸಿದ್ದಾರೆ.

ಗಡಿಭಾಗದಲ್ಲಿರುವ ಕನ್ನಡಿಗರು ಸೌಲಭ್ಯವಿಲ್ಲದೆ ನೊಂದುಕೊಂಡಾಗ ಅಂತಹ ಹಳ್ಳಿಗಳಿಗೆ ಜನಜಾಗೃತಿ ಪಾದಯಾತ್ರೆ ಕೈಕೊಂಡು ಕನ್ನಡದ ನೆಲದಲ್ಲಿ ಬಾಳುವಂತೆ ಪ್ರೇರಣೆ ನೀಡಿದ್ದಾರೆ. ದುಶ್ಚಟ ನಿವಾರಣೆ ಅಜ್ಞಾನದ ಆಚರಣೆ ಕಿತ್ತೊಗೆಯಲು ನಿರಂತರ ಪರಿಶ್ರಮಿಸುತ್ತಿದ್ದಾರೆ.

ಶ್ರೀಗುರು ಬಸವೇಶ್ವರ ವಿದ್ಯಾವಿಕಾಸ ಸಂಸ್ಥೆ (ರಿ) ಆರಂಭಿಸಿದ್ದಾರೆ. 'ಅನಿಕೇತನ' ಪ್ರಾಥಮಿಕ ಮತ್ತು ಪ್ರೌಢಶಾಲೆ ನಡೆಸುತ್ತಿದ್ದಾರೆ. ೫೦೦ ಮಕ್ಕಳಿಗೆ ಶ್ರೀ ಅರಿವಿನ ಅನ್ನದಾತರಾಗಿದ್ದಾರೆ. ಬಿಸಿಯೂಟದ ಅಕ್ಷರ ದಾಸೋಹ ಸರಕಾರದ ಯೋಜನೆಯನ್ನು ಸಮಾಜಮುಖಿ ಯೋಜನೆಯಾಗಿ ರೂಪಿಸಿ ಪ್ರತಿದಿನ ಸುಮಾರು ಸಾವಿರಾರು ಮಕ್ಕಳಿಗೆ ಬಿಸಿಯೂಟ ನೀಡುತ್ತಿದ್ದಾರೆ. ಜೊತೆಗೆ ಭಾವೈಕ್ಯತೆ ತುಂಬುವ ತಿಂಗಳ ಶಿವಾನುಭವ 'ಭಾವೈಕ್ಯ ಬೆಳದಿಗಳು' ಕಾರ್ಯಕ್ರಮ ಹಮ್ಮಿಕೊಂಡಿದ್ದಾರೆ. ಸಮಾಜ, ಸಾಹಿತ್ಯ, ಸತ್ಕಾರ್ಯಕ್ಕಾಗಿ ದುಡಿದ ಮಹನಿಯರಿಗೆ ಬಸವಭೂಷಣ ಪ್ರಶಸ್ತಿ ನೀಡುತ್ತಿದ್ದಾರೆ.

- ಟೀಕೆಗಳು ಸಾಯುತ್ತವೆ-ಕೆಲಸಗಳು ಉಳಿಯುತ್ತವೆ.
- ನಾನಲ್ಲ ನನ್ನದಲ್ಲ, ನನ್ನಿಂದಲ್ಲ-ನೀನೆಯಲ್ಲ, ನಿನ್ನದೇಯಲ್ಲ, ನಿನ್ನಿಂದಲೇಯಲ್ಲ.
- ಪರಿಶ್ರಮದಿಂದಲೇ ವ್ಯಕ್ತಿ ಪರಿಪೂರ್ಣನಾಗುತ್ತಾನೆ.
- ಕಲ್ಲು ಬಂಡೆಯ ಹಾಗೆ ಗಟ್ಟಿ ಮಾಡಿಕೂ ಎದೆಯ.
- ಸರ್ಕಸ್ ಮಾಡುವ ಸ್ವಾಮಿಗಳು ನಮಗೆ ಬೇಡ ಸಮಾಜದ ಸರ್ವಿಸ್ ಮಾಡುವ ಸ್ವಾಮಿಗಳು ಬೇಕು.

ಹೀಗೆ ಅನೇಕ ಪ್ರವಚನಗಳ ಮಾತುಗಳನ್ನು ಗ್ರಂಥರೂಪದಲ್ಲಿ ತಂದಿದ್ದಾರೆ.

## ೨೧) ಪೂಜ್ಯ ಮಾತೋಶ್ರೀ ನೀಲಮ್ಮತಾಯಿ ಅಸುಂಡಿ :

ಪ್ರವಚನ ಮಾಡುವ ಪುರುಷರೇ ಅಥವಾ ಶರಣರೇ ಹೆಚ್ಚಾಗಿರುವ ಸಂದರ್ಭದಲ್ಲಿ ಸ್ತ್ರೀಯರೂ ಪ್ರವಚನ ಮಾಡಲು ಪ್ರಾರಂಭಿಸಿದವರಲ್ಲಿ ನೀಲಮ್ಮ ತಾಯಿ ಅಂಸುಂಡಿಯವರೂ ಒಬ್ಬರು. ಚಿಕ್ಕವಯಸ್ಸಿನಲ್ಲಿಯೇ ಆಧ್ಯಾತ್ಮಜೀವಿಯಾಗಿ ಬೆಳೆದು ಬಂದಿರುವದು ಸೋಜಿಗವೆನಿಸಿದರೂ ಸತ್ಯವಾದ ಮಾತಾಗಿದೆ. ಪ್ರವಚನ ಮಾಡುವದರೊಂದಿಗೆ ಶಿವಶರಣರ ವಚನಗಳನ್ನು, ನಿಜಗುಣ ಶಿವಯೋಗಿಗಳ, ಸರ್ಪಭೂಷಣ ಶಿವಯೋಗಿಗಳ ಹಾಗೂ ಇತರ ತತ್ವಜ್ಞಾನಿಗಳ ತತ್ವಪದಗಳನ್ನು ಹಾಡುವದನ್ನು ರೂಢಿಸಿಕೊಂಡಿದ್ದಾರೆ. "ಆತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ" ಎಂಬುದನ್ನು ಅರಿತವರು. ಸರಳ ಜೀವನ ಸಾತ್ವಿಕ ವಿಚಾರಗಳು ಜನರನ್ನು ಆಕರ್ಷಿಸಲು ಸಹಾಯಕವಾಗಿವೆ.

ಇಂದಿನ ಸಮಾಜವು ಕಲುಷಿತವಾಗಲು ಧಾರ್ಮಿಕ ಅಥವಾ ಆಧ್ಯಾತ್ಮ ಜೀವನದ ಕೊರತೆಯೇ ಕಾರಣ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಮನುಷ್ಯ ಕೇವಲ ಬದುಕಿದರೆ ಸಾಲದು, ಏಕೆ ಬದುಕಬೇಕು? ಎಂಬುದನ್ನು ಅರಿಯಬೇಕಾಗಿದೆ. ಸ್ತ್ರೀ ಪುರುಷರು ಸಮಾನರೆಂಬುದನ್ನು ಹನ್ನೆರಡನೆಯ ಶತಮಾನದ ಶಿವಶರಣರು ಸಾರಿರುವದನ್ನು ಬಲು ಮಾರ್ಮಿಕವಾಗಿ ವಿವರಿಸುವರು. ಭಾರತೀಯ ಪರಂಪರೆಯಲ್ಲಿ ಮಹಿಳೆಯೂ ಕೂಡ ತತ್ವಶಾಸ್ತ್ರವನ್ನು ಬಲ್ಲಂತಹ ಮೈತ್ರೇಯಿ, ಗಾರ್ಗಿ, ಚೂಡಾಲಿ ಮುಂತಾದವರ ಜೀವನದ ಘಟನೆಗಳನ್ನು ಬಲು ಸ್ವಾರಸ್ಯವಾಗಿ ಹೇಳುವರು.

ಮನುಷ್ಯ ಜನ್ಮ ಶ್ರೇಷ್ಠವಾದದು ಇದನ್ನೂ ಹಾನಿ ಮಾಡಿಕೊಳ್ಳದೇ ಶಿವಶರಣರ ತೋರಿದ ಅಥವಾ ಸಾಗಿದ ಮಾರ್ಗದಲ್ಲಿ ಸಾಗಿದರೆ ನಮ್ಮ ಜೀವನ ಶರಣ ಜೀವನವಾಗುತ್ತದೆ.

ಇವರ ಪ್ರವಚನಗಳಲ್ಲಿ ಕೌಟುಂಬಿಕ ಜೀವನಕ್ಕೆ ಉಪಯುಕ್ತವಾದ ಘಟನೆಗಳನ್ನು ಹಾಗೂ ಕಥೆ-ಉಪಕಥೆಗಳನ್ನು ಅಲ್ಲದೆ ಶಿವಶರಣರ ಜೀವನದಲ್ಲಿ ಘಟಿಸಿದ ಸಂದರ್ಭಗಳನ್ನು ವಿವರಿಸುವದರಿಂದ ಜನರು ಒಳ್ಳೆಯವರಾಗಿ ಬದುಕಬೇಕೆಂದು ಭಾವಿಸಿದ್ದಾರೆ.

ಗ್ರಾಮೀಣ ಪ್ರದೇಶಗಳಿಗೆ ಹೋಗಿ ಪ್ರವಚನ ಮಾಡುವದರಿಂದ ಗ್ರಾಮೀಣ ಜನರು ದುಶ್ಚಟದಿಂದ ದೂರವಾಗಲು ಸಹಕಾರಿಯಾಗಿವೆ. ಒಂದು ಗ್ರಾಮ ಒಂದು ಕುಟುಂಬದಂತೆ ಬಾಳಬೇಕೆಂದೂ, ಜಾತಿಗಳನ್ನು ಎತ್ತಿ ಆಡಬಾರದೆಂದೂ, ಸ್ತ್ರೀ-ಪುರುಷರು ಸಮಾನರೆಂದು ಭಾವಿಸಬೇಕೆಂದು ಉದಾಹರಣೆಗಳೊಂದಿಗೆ ಪ್ರವಚನ ಮಾಡುತ್ತಿರುವದು ನಿಜವಾಗಿ ಹೆಮ್ಮೆಯ ಸಂಗತಿ.

## ೨೨) ಪೂಜ್ಯ ಅಕ್ಕ ಅನ್ನಪೂರ್ಣತಾಯಿ ಬೀದರ.

ಪೂಜ್ಯ ಶ್ರೀ ಅಕ್ಕ ಅನ್ನಪೂರ್ಣತಾಯಿಯವರ ಪ್ರವಚನದಲ್ಲಿ ಬಸವದರ್ಶನ, ಶರಣದರ್ಶನ, ವಚನದರ್ಶನ, ಮತ್ತು ಅಂತರಂಗದರ್ಶನ, ಒಮ್ಮೆಲೆ ಆಗುತ್ತವೆ. ಅಕ್ಕನವರ ಪ್ರವಚನಾಮೃತದಿಂದಲೇ ಬಸವಸೇವಾ ಪ್ರತಿಷ್ಠಾನವು ನಮ್ಮ ಕಣ್ಣೆದುರಿಗೆ ಅಲ್ಪ ಅವಧಿಯಲ್ಲಿಯೇ ಬೆಳೆದು ಹೆಮ್ಮರವಾಗಿದೆ. ಸುಮಾರು ವರ್ಷಗಳಿಂದ ಶ್ರಾವಣಮಾಸದಲ್ಲಿ ತಾಯಿಯವರು ಪ್ರವಚನಾಮೃತವನ್ನು ಬೀದರಿನ ಬಸವಸೇವಾ ಪ್ರತಿಷ್ಠಾನದ ಶರಣ ಉದ್ಯಾನದಲ್ಲಿ ಉಣಬಡಿಸುತ್ತಿದ್ದಾರೆ.

ಬೀದರ ಬಸವ ಸೇವಾ ಪ್ರತಿಷ್ಠಾನದ ಪೂಜ್ಯ ಶ್ರೀ ಅಕ್ಕ ಅನ್ನಪೂರ್ಣತಾಯಿಯವರು ತುಂಬ ಎಳೆಯ ವಯಸ್ಸಿನಲ್ಲಿಯೇ ಆಧ್ಯಾತ ಕ್ಷೇತ್ರಕ್ಕೆ ಕಾಲಿರಿಸಿದವರು. ತಮ್ಮ ಅಪೂರ್ವ ಸಾಧನೆಯಿಂದ ಸ್ವಲ್ಪ ಸಮಯದಲ್ಲಿ ಅಪ್ರತಿಮ ಪ್ರವಚನಕಾರರೆಂದು ನಾಡಿನಾದ್ಯಂತ ಹೆಸರು ಗಳಿಸಿರುವರು. ಗಹನವಾದ ವಚನಧರ್ಮ ಸಾರವನ್ನು ಅತ್ಯಂತ ಸರಳವಾಗಿ ಎಲ್ಲ ವರ್ಗದ ಜನರಿಗೆ ಸುಲಭವಾಗಿ ಅರ್ಥವಾಗುವಂತೆ, ಜನ ಮಾನಸದ ಮೇಲೆ ಅಚ್ಚಳಿಯದ ಪ್ರಭಾವ ಬೀರುವಂತೆ ಹೇಳುವುದು ಅವರಿಗೆ ಕರತಲಾಮಲಕವಾಗಿದೆ. ಅಕ್ಕನ ಪ್ರವಚನ ಆಲಿಸಲು ಲಗುಬಗೆಯಿಂದ ಧಾವಿಸಿ ಬರುತ್ತಿರುವ ದೃಶ್ಯ ನೋಡುವುದೇ ಕಣ್ಣಿಗೆ ಒಂದು ಹಬ್ಬ ಇದು ಅವರ ಪ್ರವಚನದ ಜನಪ್ರಿಯತೆಯನ್ನು ಎತ್ತಿ ತೋರಿಸುತ್ತದೆ.

"ಶರಣ ಸಂಸ್ಕೃತಿಯಡಿಯಲ್ಲಿ ಕಲ್ಯಾಣಮಹೋತ್ಸವನ್ನು ಏರ್ಪಡಿಸುತ್ತಾ ಶಿವಾನುಭವ ಸಂಪದ ನಡೆಸುತ್ತ ವಚನ ಮಹೋತ್ಸವ ಆಚರಿಸುತ್ತ ಶರಣರ ವಚನ ಸಂದೇಶಗಳ ಮೇಲೆ ಶೂನ್ಯಸಂಪಾದನೆಯಿಂತ ಮೌಲಿಕ ಕೃತಿಗಳ ಮೇಲೆ ಪ್ರವಚನ ನೀಡಿ ಬಸವ ಬೆಳೆ ಹುಲುಸಾಗಿ ಬೆಳಿದಿದ್ದಾರೆ. ಬಸವ ಸಂಪದದಿಂದ ಶ್ರಾವಣ ಸಂಪದದವರೆಗೆ ೩೨ ಕೃತಿಗಳನ್ನು ಬರೆದಿದ್ದಾರೆ. ಶರಣ ಸಂದೇಶದ ಪ್ರಚಾರಕ್ಕೆ ಧ್ವನಿ ಸುರುಳಿ ಹೊರತಂದಿದ್ದಾರೆ".೬೩

## ೨೩) ಪೂಜ್ಯ ಶರಣ ಶ್ರೀ ಇಬ್ರಾಹಿಮ್ ಸುತಾರ, ಮಹಾಲಿಂಗಪುರ.

ಶರಣಸಂತ ತತ್ವಪ್ರವೀಣ, ಕನ್ನಡ ಕಬೀರ, ಅಭಿನವ ಶರೀಫ, ಹಿಂದು ಮುಸ್ಲಿಂ ಭಾವೈಕ್ಯತೆಯ ಹರಿಕಾರ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮುಂತಾದ ಬಿರುದು, ಪ್ರಶಸ್ತಿಗಳಿಗೆ ಭಾಜನರಾದ ಶ್ರೀ ಇಬ್ರಾಹಿಂ ಸುತಾರ ಅವರು ಕನ್ನಡದಲ್ಲಿ ಬಹು ಜಾಣ್ಮೆಯಿಂದ ಉಪನ್ಯಾಸ ನೀಡಬಲ್ಲ ಶ್ರೇಷ್ಠ ಪ್ರವಚನಕಾರರಾಗಿದ್ದಾರೆ. ಆಧ್ಯಾತ್ಮಿಕ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುವ ಮೂಲಕ ನಾಡಿನ ಜನಮನಗೆದ್ದಿರುವರು.

ಯಾವ ವರ್ಣದವರಾದರೇನು? ಯಾವ ಆಶ್ರಮದವರಾದರೇನು? ಎಲ್ಲರಿಗೂ ವೇದಾಂತ ಮಂದಿರದ ಮಹಾದ್ವಾರ ಸದಾ ತೆರೆದಿರುತ್ತದೆ ಎಂಬ ಸಾರವನ್ನೊಳಗೊಂಡ "ಶ್ರದ್ಧೆಯುಳ್ಳವರು ತತ್ವಜ್ಞಾನಕ್ಕೆ ಸರ್ವರೂ ಅಧಿಕಾರಿಗಳು" ಈ ಅಪರೂಪ ಗ್ರಂಥದ ಮೂಲಕ ಕನ್ನಡ ಸಾರಸ್ವತ ಲೋಕಕ್ಕೆ ತಮ್ಮನ್ನು ಪರಿಚಯಿಸಿಕೊಂಡಿರುವರು.

---

೬೩ " " ಶ್ರಾವಣಸಂಪದ– ಪೂಜ್ಯ ಶ್ರೀ ಅಕ್ಕನವರ ಪ್ರವಚನಾಮೃತ ಸಂ. ರಮೇಶ ಕನಕಟ್ಟಾ, ಬಸವಸಂಪದ ಪ್ರಕಾಶನ ಬೀದರ. ಪುಟಸಂಖ್ಯೆ–೩,೪. (೨೦೧೧)

ಮಹಾಲಿಂಗಪುರದ ಸೂಫಿಸಂತ, ಪ್ರವಚನಗಳ ಮೂಲಕ ಸೌಹಾರ್ದತಾ ಸೇತುವೆ ನಿರ್ಮಿಸಿದ, ಸರ್ವಧರ್ಮ ಸಮನ್ವಯದ ಪ್ರವಚನಕಾರ. ಕಳೆದ ೪೦ ವರ್ಷಗಳಿಂದ ಆಧ್ಯಾತ್ಮ ಸಂವಾದ, ಸಂಗೀತ ಮೇಳ ಕಟ್ಟಿಕೊಂಡು ಮಹಾರಾಷ್ಟ್ರ, ಆಂಧ್ರಪ್ರದೇಶ, ದೆಹಲಿ, ಓರಿಸ್ಸಾ, ರಾಜಸ್ತಾನ ಮುಂತಾದ ರಾಜ್ಯಗಳಲ್ಲಿ ಸರ್ವ ಮಹಾತ್ಮರ ಸಾಹಿತ್ಯ ಬಳಸಿ, ಸಹಸ್ರಾರು ಜನರಿಗೆ ಪ್ರವಚನ ಸಂದೇಶ ಉಣಬಡಿಸಿದ್ದಾರೆ.

ಅಥಣಿ ತಾಲೂಕಿನ ಶೇಗುಣಸಿ ಗ್ರಾಮವು ಮೂಲಭೂತ ಸೌಕರ್ಯಗಳಿಲ್ಲದ ಹಳ್ಳಿಯಾಗಿತ್ತು. ಪ್ರವಚನಗಳ ಮೂಲಕ ಯುವಕರನ್ನು ಹುರಿದುಂಬಿಸಿ ಶ್ರಮದಾನದ ಮೂಲಕ ತೇರದಾಳದವರೆಗೆ ಇರುವ ೯.ಕಿ.ಮೀ. ರಸ್ತೆಯನ್ನು ನಿರ್ಮಿಸಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ. ಸಾಕ್ಷರತಾ ಶಿಬಿರಗಳು, ಯೋಗಾಸನ ಶಿಬಿರಗಳು, ಕುಡಿಯುವ ನೀರಿನ ಟ್ಯಾಂಕ್ ನಿರ್ಮಾಣ, ಶಾಲಾಕೊಠಡಿಗಳ ಸಹಾಯಾರ್ಥ ಪ್ರವಚನ ಸೇವೆ, ದೇವದಾಸಿ ಪದ್ಧತಿ ನಿರ್ಮೂಲನಾ ಆಂದೋಲನದಲ್ಲಿ ಸಕ್ರೀಯ ಪಾತ್ರವಹಿಸಿರುವರು. "ಪರಮಾರ್ಥ ಲಹರಿ", ತತ್ತ್ವಜ್ಞಾನಕ್ಕೆ ಸರ್ವರೂ ಅಧಿಕಾರಿಗಳು ಮತ್ತು ಭಕ್ತಿ ಪ್ರಧಾನವಾದ ಹಲವು ಪದ್ಯಗಳನ್ನು ರಚಿಸಿದ್ದಾರೆ. ಪುಣ್ಯವನೇ ಮಾಡು, ಯಾರು ಜಾಣರು,? ಭಾವೈಕ್ಯತೆ ಎಂದರೇನು? ಪ್ರವಚನಭಾಗ-೧ ಮತ್ತು ೨ ಹೀಗೆ ಹೆಚ್ಚು ಸಿ.ಡಿ. ಗಳನ್ನು ಕನ್ನಡದ ಜನಮನ ತಣಿಸಿದ್ದಾರೆ.

ಜೀವನದುದ್ದಕ್ಕೂ ಭಾವೈಕ್ಯತೆಯ ಸಂದೇಶವನ್ನು ಸಾರುತ್ತ ವಿಶ್ವಪ್ರೇಮವನ್ನು ಬೆಳೆಸುವುದು ಇವರ ಜೀವನದ ಗುರಿಯಾಗಿದೆ.

### ೨೪) ವೇ.ಪಂ.ಎಮ್. ಕಲ್ಲಿನಾಥಶಾಸ್ತ್ರೀಗಳು, ಅಡ್ನೂರ.

ಪ್ರವಚನ ಒಂದು ಪ್ರಯೋಗ. ಈ ದಾರಿಯಲ್ಲಿ ಪ್ರಾಮಾಣಿಕವಾಗಿ ಸಾಗುತ್ತ ಸಮಗ್ರ ಕರ್ನಾಟಕದ ತುಂಬಾ ಪುರಾಣ, ಕಥಾಕೀರ್ತನ, ಪ್ರವಚನ ನೀಡಿ ಜನರಲ್ಲಿ ಹದುಳ ಭಾವವನ್ನು ತಂದವರು ಶ್ರೀ ಕಲ್ಲಿನಾಥಶಾಸ್ತ್ರಿಗಳು. ಅವರು ನವಲಗುಂದ ತಾಲೂಕಿನ ಅಡ್ನೂರಲ್ಲಿ ೨೨-೦೪-೧೯೫೫ ರಂದು ಮುರಗಿಮಠದ ಶ್ರೀ ಚೆನ್ನಯ್ಯ ಮತ್ತು ಮಾತೆ ಮಹಾಲಿಂಗಮ್ಮರ ಪವಿತ್ರ ಉದರದಿಂದ ಜನಿಸಿದರು. ಪಂ. ಪುಟ್ಟರಾಜ ಕವಿ ಗವಾಯಿಗಳವರ ದಿವ್ಯ ಸಾನಿಧ್ಯದಲ್ಲಿ ಸುಮಾರು ೧೨ ವರ್ಷಗಳ ಕಾಲ ಸಂಗೀತ, ಸಾಹಿತ್ಯ, ಅಧ್ಯಯನ ಮಾಡಿ ಕಥಾಕೀರ್ತನೆ ಮತ್ತು ಪುರಾಣ ಪ್ರವಚನ ಕಲಾವಿದರಾಗಿ ಇಡೀ ನಾಡಿಗೆ ಪರಿಚಿತರಾಗಿದ್ದಾರೆ. ಸಂಸ್ಕೃತ, ಹಿಂದಿ, ಇಂಗ್ಲೀಷ ಭಾಷೆಯ ಮೇಲೆ ಹಿಡಿತ ಸಾಧಿಸಿದ ಇವರು ೨೫ ಕ್ಕೂ ಹೆಚ್ಚು ಧ್ವನಿಸುರುಳಿಗಳನ್ನು

ಹೊರತಂದಿದ್ದಾರೆ. ಮಠಮಾನ್ಯಗಳು ಸಂಘಟನೆಗಳು, ಸಂಘ ಸಂಸ್ಥೆಗಳು ಸನ್ಮಾನಿಸಿ ಇವರನ್ನು ಗೌರವಿಸಿವೆ.

ಪ್ರವಚನಗಳ ಮೂಲಕ ಜನಜಾಗೃತಿ, ವ್ಯಸನಮುಕ್ತ ಸಮಾಜ ನಿರ್ಮಾಣ, ಲಿಂಗದೀಕ್ಷೆ ಕಾರ್ಯಕ್ರಮ, ಸಾಮರಸ್ಯ ಗೋಷ್ಠಿ, ಸಮಾಜದಲ್ಲಿ ಸದ್ಭಾವನೆ ಬಿತ್ತುವ ಕಾರ್ಯ, ಸಸಿ ನೆಡುವುದು ಹೀಗೆ ಹತ್ತು ಹಲವು ಕಾರ್ಯಗಳನ್ನು ಕೈಕೊಂಡ ಧೀಮಂತ ವ್ಯಕ್ತಿತ್ವದ ಶಾಸ್ತ್ರೀಗಳು ಬಲು ಅಪರೂಪದ ಪ್ರವಚನಕಾರರಾಗಿ ನಮ್ಮ ಮುಂದೆ ಇದ್ದಾರೆ.

## ೨೫) ಶ್ರೀ ಶಿವಲಿಂಗ ಶಾಸ್ತ್ರೀಗಳು ಸಂಕನೂರ, (ಗುಡೂರ)

೧೯೩೭ ರಲ್ಲಿ ಕೊಪ್ಪಳ ಜಿಲ್ಲೆಯ ಮಂಗಳೂರಲ್ಲಿ ಜನಿಸಿದ ಇವರು ಕೇವಲ 'ಮುಲ್ಕಿ'ಯವರೆಗೆ ಶಿಕ್ಷಣ ಪಡೆದು ಗವಿಮಠದ ಜಗದ್ಗುರು ಶ್ರೀ ಶಿವಶಾಂತವೀರ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ಸಂಸ್ಕೃತ ಅಧ್ಯಯನ ಮಾಡಿ ಹಲವಾರು ವರ್ಷಗಳ ಕಾಲ ಕನ್ನಡ ರಂಗಭೂಮಿಗೆ ಕಲಾಸೇವೆ ಸಲ್ಲಿಸಿ, ಇಂದು ಅಪೂರ್ವ ಪ್ರವಚನ ಚೇತನರಾಗಿ ಬಾಳುತ್ತಿದ್ದಾರೆ. ರಂಗಕಲಾಕ್ಷೇತ್ರದಿಂದ ಆಧ್ಯಾತ್ಮಿಕ ಕ್ಷೇತ್ರಕ್ಕೆ ಬಂದದ್ದು ಒಂದು ವಿಶಿಷ್ಟ ಸಾಧನೆ. ಇಂದು ನಾಡಿನ ಎಲ್ಲ ಹರಗುರು ಚರಮೂರ್ತಿಗಳ ಆಶೀರ್ವಾದ ಪಡೆದು ಹಿರಿಯ ಶ್ರೇಷ್ಠ ಪ್ರವಚನಕಾರರ ಸಾಲಿನಲ್ಲಿ ಸೇರುತ್ತಾರೆ. ಪುರಾಣ ಪ್ರವಚನಗಳ ಕಥನ ಪ್ರಸಾರವೇ ಆರಾಧನೆ ಎಂದು ಭಾವಿಸಿದ್ದಾರೆ. ನಟ–ನಿರ್ದೇಶಕರಾಗಿ, ನಾಟಕ ಕಂಪನಿ ಮಾಲಿಕರಾಗಿ, ಸಂಗೀತ, ಪ್ರವಚನ, ಕವಿಯಾಗಿ, ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಸೇವೆ ಅನುಪಮ. ಅವರ ಕೃತಿಗಳಲ್ಲಿ ಪ್ರವಚನ ಶೈಲಿ ನಿರೂಪಣೆ ಇದೆ. ಜನಸಾಮಾನ್ಯರಿಗೂ ತಿಳಿಯ ಪಡಿಸುವ ಅನುಭಾವವಿದೆ. ತತ್ವಾನುಭವ ಸಂಪನ್ನರಾದ ಶಾಸ್ತ್ರೀಗಳು ಜನರ ಮನಸ್ಸುಗಳನ್ನು ಶರಣ ವಾಙ್ಮಯದ ಕಡೆಗೆ ಬರುವಂತೆ ಪ್ರವಚನ ನೀಡಿದ್ದಾರೆ.

ಶಿವಯೋಗ ಮಂದಿರದಲ್ಲಿ ವಟು ಸಾಧಕರಿಗೆ ಕೊಪ್ಪಳ ಗವಿಮಠದಲ್ಲಿರುವ ವಟು ಸಾಧಕರಿಗೆ ಪ್ರವಚನ ಪಾಠ ಹೇಳಿದ್ದಾರೆ. ಸಾಪ್ತಾಹಿಕ ಪ್ರವಚನ ನೀಡಿದ ವಿಷಯಗಳನ್ನು 'ಸಪ್ತಸೂತ್ರಗಳ ಪ್ರವಚನ' 'ಅಂತರಂಗದಲ್ಲೊಂದು ಕುರುಕ್ಷೇತ್ರ' ಮತ್ತು ಮಾಸ ಪರಿಯಂತರ ವಚನಗಳ ಮೇಲೆ ಮಾಡಿದ ಪ್ರವಚನಗಳ '೧೦೧ ಬೆಡಗಿನ ವಚನಗಳ ಪ್ರವಚನಗಳು ಕೃತಿ' ರಚಿಸಿದ್ದಾರೆ. ಪರಂಪರೆ ಹೊಸ ಮುನ್ನುಡಿ, ಇವನಾರವ, ಪರಿಸರ ಪ್ರೇಮಿ ದಸರಯ್ಯ,

ಸಮಾಜಕ್ಕೆ ಹಾಲೂನಿಸಿದ ಹಾಲಯ್ಯ ಹೀಗೆ ಪ್ರವಚನಕಾರರಿಗೆ ಉಪಯುಕ್ತ ಕೃತಿಗಳನ್ನು ರಚಿಸಿದ್ದಾರೆ. ಎಲ್ಲರು ನಮ್ಮವರೇ ಎಂಬ ಕಿರು ನಾಟಕ ಆಕಾಶವಾಣಿಯಲ್ಲಿ ಪ್ರಸಿದ್ಧಿಯಾಗಿದೆ.

ಇವರ ಸಾಹಿತ್ಯ ಕೃತಿಗಳು ಪ್ರವಚನದ ರಚನೆಗಳು, ಪ್ರವಚನ ಲೇಖನಗಳು ಮತ್ತು ಪ್ರವಚನದ ಪ್ರಸಂಗಗಳೇ ಆಗಿವೆ. ಇವರ 'ಕಾರ್ತಿಕ ದೀಪ', ಶಿರಶರಣರ ವಚನ ಪ್ರವಚನದ ರಸದೌತನದ ತುಂಬು ಬಟ್ಟಲು. ಇವರು ಇಂದಿನ ಪ್ರವಚನಕಾರರ ಪರಂಪರೆಯಲ್ಲಿ ಗಣನೀಯ ವ್ಯಕ್ತಿಗಳಾಗಿದ್ದಾರೆ. ವಚನಗಳಿಗೆ ಅರ್ಥಸಹಿತ ವಿವರಣೆ ನೀಡುತ್ತಾ, ಕಥೆ ಉಪಕಥೆಗಳ ಮೂಲಕ ವಚನದ ತಾತ್ಪರ್ಯ ತಿಳಿಸುವ ಅನುಭಾವಿ ವಚನ ಪ್ರವಚನಕಾರರಾಗಿದ್ದಾರೆ. ಹಲವಾರು ಚಿಂತನೆಗಳನ್ನು ಹಂಚಿಕೊಳ್ಳುವುದರ ಮೂಲಕ ಜನಜಾಗೃತಿ ಮಾಡಿದ್ದಾರೆ.

## ೨೬) ಪೂಜ್ಯ ಶ್ರೀ ಸಿದ್ಧೇಶ್ವರ ಶಾಸ್ತ್ರೀಗಳು ತೆಲ್ಲೂರು.

ಇವರು ಆಕಾಶವಾಣಿ ಬಿ. ಹೈ. ಶ್ರೇಣಿ ದೂರದರ್ಶನ ಕಲಾವಿದರು, ಹಾಗೂ ಕಥಾಕೀರ್ತನ ಪುರಾಣ ಪ್ರವಚನಕಾರರು. ವೀರೇಶ್ವರ ಪುಣ್ಯಾಶ್ರಮ ಗದಗಿನಲ್ಲಿ ಪಂಡಿತ ಪುಟ್ಟರಾಜ ಗುರುಗಳ ಸೇವೆಗೈದು ಸಂಗೀತ, ಸಂಸ್ಕೃತ, ಕಾವ್ಯ ಹಾಗೂ ಸಾಹಿತ್ಯ ಪುರಾಣ, ಪ್ರವಚನ, ಕೀರ್ತನದ ಅಧ್ಯಯನ ಮಾಡಿ ಇಂದು ಇಡೀ ನಾಡಿಗೆ ಹಿರಿಯ ಪ್ರವಚನಕಾರರಲ್ಲಿ ಚಿರಪರಿಚಿತರಾಗಿದ್ದಾರೆ ಕಲ್ಬುರ್ಗಿ ಜಿಲ್ಲೆಯ ತೆಲ್ಲೂರಿನಲ್ಲಿ ೪-೨-೧೯೬೨ ರಲ್ಲಿ ಜನಿಸಿದ ಇವರು ಬೆಂಗಳೂರಿನಿಂದ ಗುಲಬುರ್ಗಾದವರೆಗೆ ಗ್ರಾಮ, ಪಟ್ಟಣ, ಮಠ-ಮಾನ್ಯಗಳಲ್ಲಿ ಸಂಘ ಸಂಸ್ಥೆಗಳ ಆಶ್ರಯದಲ್ಲಿ ಪ್ರವಚನ ಪ್ರವೀಣ, ಪ್ರವಚನ ಭಾಸ್ಕರ, ಹೀಗೆ ಹತ್ತಾರು ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಕರ್ನಾಟಕ ಕೀರ್ತನ ಕಲಾವೇದಿಕೆಯ ಗದಗದ ಅಧ್ಯಕ್ಷರಾಗಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತ ಹಾಗೂ ಶರಣ ಸಾಹಿತ್ಯ ಪರಿಷತ್ತು ಬೆಂಗಳೂರು ಇದರ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಪ್ರವಚನಗಳಿಂದ ಬೀದರ, ಬೆಳಗಾವಿಯ ಗಡಿಭಾಗದಲ್ಲಿ ಕನ್ನಡ ಜಾಗೃತಿಯ ಕೆಲಸ ಮಾಡಿದ್ದಾರೆ. ಮುಂಬೈ ಮತ್ತು ಗುಜರಾತಗಳಲ್ಲಿ ಶರಣರನ್ನು ಕುರಿತು ಮಾತನಾಡಿದ್ದಾರೆ. ನವಲಗುಂದ ನಾಗಲಿಂಗ ಶಿವಯೋಗಿ. ಎಡೆಯೂರ ಸಿದ್ಧಲಿಂಗೇಶ್ವರ, ಶಿವಶರಣೆ ಅಕ್ಕಮಹಾದೇವಿ ಹೀಗೆ ನೂರು ಕ್ಯಾಸೆಟ್‌ಗಳಲ್ಲಿ ಕಥಾ-ಕೀರ್ತನ ಪ್ರವಚನ ಮಾಡಿದ್ದಾರೆ. ಅಲ್ಲದೆ ಶಿವಭಕ್ತ ಸಿರಿಯಾಳ, ಚಿಕ್ಕೇನಕೊಪ್ಪ ಚನ್ನವೀರ ಶರಣರು, ನೆಲದ ಮೇಲಿನ ನಕ್ಷತ್ರ ಗುರು ಪುಟ್ಟರಾಜರು ಕೃತಿಗಳನ್ನು ರಚಿಸಿದ್ದಾರೆ.

## ೨೭) ಶರಣ ಶ್ರೀ ಎಸ್. ಸಿ. ಘಟ್ನಟ್ಟಿ ಗುರುಗಳು ಹುನ್ನೂರ :

ವಿಜಾಪುರದ ಜ್ಞಾನಯೋಗಾಶ್ರಮದ ಪರಮ ಪೂಜ್ಯ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರ ಜ್ಞಾನಸಾಗರದಲ್ಲಿ ಮಿಂದು ಒಂದಾದವರು, ನಾಡಿನ ನಾನಾ ಮಠಗಳ, ನಾನಾ ಪೂಜ್ಯರ ಆಧ್ಯಾತ್ಮದ ಒಡನಾಡಿಗಳಾದ ಇವರು ಒಂದೇ ತತ್ವಸಿದ್ಧಾಂತಕ್ಕೆ ಸೀಮಿತರಾಗದೆ ನಿಸ್ಸೀಮ ಪಥದಲ್ಲಿ ಸಾಗಿದ ನಿಸ್ಕಪಟ ಹೃದಯದ ಪ್ರವಚನಕಾರರು. ಪ್ರತಿಯೊಂದು ವಿಷಯದ ಮೇಲೆ ಪ್ರಭುತ್ವ ಹೊಂದಿದ ಇವರು ದೈಹಿಕ ಶಿಕ್ಷಕರಾಗಿ, ಪ್ರಾಚಾರ್ಯರಾಗಿ, ಚಿತ್ರಕಲಾವಿದರಾಗಿ, ಶ್ರೇಷ್ಠ ತಬಲಾವಾದಕರಾಗಿ, ಕಾರ್ಯಕ್ರಮಗಳ ನಿರೂಪಕರಾಗಿ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ತಮ್ಮ ಬಹುಮುಖ ಪ್ರತಿಭೆ ತೋರಿದವರು.

ತಾವೇ ಪ್ರವಚನ ಮಾಡಿದ "ಒಂದೊಂದು ಹೆಜ್ಜೆ" ಎಂಬುದು ಇವರ ಅಮೂಲ್ಯ ಕೃತಿಯಾಗಿದೆ. ಮನುಷ್ಯ ಜೀವನದ ಸಾರ್ಥಕ ಬದುಕಿನ ಗುಟ್ಟನ್ನು ಅರುಹಿದ್ದಾರೆ. ಶರಣ ಜೀವಿಗಳಾದ ಇವರು ಸಂಘಟನಾಕಾರರು ಪ್ರವಚನ ಸಾಧಕರಿಗೆ ಸಾಧನಾ ಶಿಬಿರಗಳಲ್ಲಿ ಉಪದೇಶಮೃತವನ್ನು ದಯಪಾಲಿಸಿದವರು, ಅನೇಕ ಶಿಕ್ಷಣಸಂಸ್ಥೆಗಳಿಗೆ, ಮಠಮಾನ್ಯಗಳಿಗೆ, ಆಶ್ರಮಗಳಿಗೆ ಸಂಘಸಂಸ್ಥೆಗಳಿಗೆ ಮಾರ್ಗದರ್ಶನ ಮಾಡಿದವರಿವರು.

## ೨೮) ಪೂಜ್ಯಶ್ರೀ ಮಹಾಂತ ಸ್ವಾಮೀಜಿ ಮುದಗಲ್ :

ನಾಡಿನ ಹೆಸರಾಂತ ವಚನ ಪ್ರವಚನಕಾರರು ನಿರಂತರ ಚರಜಂಗಮರಾಗಿ, ಧಾರ್ಮಿಕ ಸಮನ್ವಯ ಪ್ರವಚನಕಾರರು, ದಿನ ಪತ್ರಿಕೆಯ ಅಂಕಣಕಾರರು, ಶ್ರೀ ಮಹಾಂತ ಗುರುಬಸವ ಸ್ಪಿರಿಚ್ಯುವಲ್ ಮತ್ತು ಎಜ್ಯುಕೇಶನಲ್ ಟ್ರಸ್ಟ್ ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾಗಿ ಶೈಕ್ಷಣಿಕ, ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡಿದ್ದಾರೆ.

ವಚನ ಪ್ರಜ್ಞೆ, ವಚನವಾಹಿನಿಯಂತಹ ಹತ್ತಾರು ಪ್ರವಚನ ಕೃತಿಗಳನ್ನು ಪ್ರಕಟಪಡಿಸಿದ್ದಾರೆ. "ಜೀವನ ವೆಂದರೇನು?" ಪ್ರವಚನ ಸಿ.ಡಿ. ಜನಮನ್ನಣೆಗಳಿಸಿದೆ ಇಲಕಲ್ ಮಹಾಂತಸ್ವಾಮಿಗಳ 'ಮಹಾಂತ ಜೋಳಿಗೆಯ' ಪರಿಕಲ್ಪನೆಯನ್ನು ಇವರು ಮುಂದುವರೆಸಿದ್ದಾರೆ.

## ಪ್ರವಚನಕಾರರ–ವೈಶಿಷ್ಟ್ಯ

ಪ್ರವಚನದಲ್ಲಿ ಬಳಸುವ ಭಾಷೆ ಶ್ರೀ ಸಾಮಾನ್ಯನಿಗೆ ಸಾಮಾನ್ಯವಾದುದು ಅದೊಂದು ಉತ್ಕೃಷ್ಟಭಾಷೆ ಪ್ರಮುಖ ಪ್ರವಚನಕಾರರು ತಾವು ವ್ಯಕ್ತಗೊಳಿಸುವ ಭಾಷಾ ಸೌಂದರ್ಯದಿಂದ ಪ್ರವಚನ ಸಾಹಿತ್ಯ ಶ್ರೀಮಂತವಾಗಿದೆ. ತಾತ್ವಿಕ ತಳಹದಿಯ ಮೇಲೆ ನೈತಿಕತೆಯನ್ನು ಪ್ರವಚನಗಳು ತಿಳಿಸುತ್ತವೆ ವೈಜ್ಞಾನಿಕಯುಗದಲ್ಲಿ ಪ್ರವಚನ ಸಾಹಿತ್ಯ ನಿತ್ಯನೂತನ ರೀತಿಯಲ್ಲಿ ಬಳಕೆಯಾಗಿದೆ. ಇದೊಂದು ಪರಿಣಾಮ ಮಾಧ್ಯಮ.

ಪ್ರವಚನ ಬದುಕು ಕಟ್ಟಿಕೊಡುತ್ತದೆ. ಸಮಸ್ಯೆಗಳಿಗೆ ಪರಿಹಾರ ತಿಳಿಸುತ್ತದೆ, ಜೀವನ ಮೌಲ್ಯಗಳು ಇದರಲ್ಲಿವೆ. ಮಾನವೀಯ ಸ್ಪರ್ಶ ಪ್ರವಚನ ಆಗಿದೆ. ಎಲ್ಲ ನವರಸಗಳು ಇದರಲ್ಲಿ ತುಂಬಿರುತ್ತವೆ. ಇಲ್ಲಿಯ ನೆಲ, ಜಲ, ಸಂಸ್ಕೃತಿ ಎಲ್ಲವನ್ನು ಒಳಗೊಂಡಿರುತ್ತದೆ, ಪ್ರವಚನದಲ್ಲಿ ಒಟ್ಟಾರೆ ಏನನ್ನಾದರೂ ಬಳಸುವ ಸ್ವಾತಂತ್ರ್ಯವಿದೆ, ತಿಳಿಹಾಸ್ಯ ಅದಕ್ಕೆ ಮತ್ತಷ್ಟು ಪುಷ್ಠಿಕೊಡುತ್ತದೆ. ಪ್ರವಚನ ಸಾಹಿತ್ಯ ಆಧುನಿಕ ಕನ್ನಡವಾಗಿದೆ.

ಪ್ರವಚನದ ಮೂಲ ಉದ್ದೇಶ ಎಲ್ಲರೂ ಧರ್ಮವಂತರಾಗಿ ನೀತಿವಂತರಾಗಿ, ಆಧ್ಯಾತ್ಮದ ತಳಹದಿಯ ಮೇಲೆ ನಡೆಯಬೇಕು ಎನ್ನುವುದಾಗಿದೆ. ಪ್ರವಚನವು ನೀತಿ ಪ್ರಧಾನವಾದುದು. ಮಾನವನ ಬದುಕಿಗೆ ಮಾನವೀಯ ಸ್ಪರ್ಶಕೊಡುವ ಮಾತುಗಳು ಇಲ್ಲಿವೆ. ಎಲ್ಲ ವರ್ಗದ ಎಲ್ಲ ಜಾತಿಯ ಜನ ಇಲ್ಲಿ ಭಾಗವಹಿಸುತ್ತಾರೆ. ದುಃಖದ ಕ್ಷಣಗಳನ್ನು ಮರೆಯುವ ಆನಂದವನ್ನು ಮೆರೆಯುವ ಸಾಧನ ಪ್ರವಚನ. ಎಲ್ಲ ಧರ್ಮದ ಪ್ರವಚನಕಾರರ ಉದ್ದೇಶವೂ ದೈವತ್ವ ಹೊಂದುವುದಾಗಿದೆ. ಕನ್ನಡ, ಸಂಸ್ಕೃತಿ, ಭಾಷೆ ಹುಟ್ಟಿದಂದಿನಿಂದಲೂ ಪ್ರವಚನ ಕ್ಷೇತ್ರ ಹುಟ್ಟಿಕೊಂಡಿದೆ. ಇದಕ್ಕೆ ಸರಿಯಾದ ಲಿಖಿತ ಸಾಹಿತ್ಯ ಇರಲಾರದ್ದರಿಂದ ಇದು ಅಷ್ಟು ಜನಪ್ರಿಯವಾಗಿಲ್ಲ. ಶಾಂತಿ, ನೆಮ್ಮದಿ, ಬದುಕು ಯಾರಿಗೆ ಬೇಡ? ಯಾವುದೇ ಪ್ರಕಾರವಾಗಿಯಾದರು ಈ ಪ್ರವಚನ ಸಾಹಿತ್ಯ ಬೆಳೆದು ಬಂದಿದೆ. ಇದಕ್ಕೆ ಇಂತದ್ದೇ ಕಾಲಘಟ್ಟ ಎಂದು ಹೇಳಲು ಸಾಧ್ಯವಿಲ್ಲ. ಪ್ರವಚನ ಎನ್ನುವುದೊಂದು ಮಾಧ್ಯಮ ಶ್ರೀ ಸಾಮಾನ್ಯರಿಂದ ದೊಡ್ಡವರವರೆಗೆ ಇದು ಬೇಕು. ಇದು ಆಧ್ಯಾತ್ಮದ ಹಿನ್ನೆಲೆಯಿಂದ ಬಂದುದು. ದೇವರು ಮತ್ತು ಮಾನವನ ಸ್ವರೂಪ ತಿಳಿಸುವ ಶ್ರೇಷ್ಠಮಾಧ್ಯಮ ಇದು. ಐತಿಹಾಸಿಕ ಆಧಾರವುಳ್ಳ ಮಾತು ಪ್ರವಚನದ ವ್ಯಾಪ್ತಿಯನ್ನು ಹೆಚ್ಚಿಸುತ್ತದೆ.

ನೀತಿಯುತ ಮತ್ತು ಧರ್ಮಸಹಿತ ಆಚಾರ ಪ್ರಧಾನದ ಮಾತುಗಳಿಗೆ ಸಾಹಿತ್ಯದ ಹೊದಿಕೆ ಉಡಿಸಿದರೆ ಪ್ರವಚನ ಸಾಹಿತ್ಯ ರಚನೆಗೊಳ್ಳುತ್ತದೆ. ಪ್ರವಚನವೂ, ಒಂದು ಕಲೆ. ಕಲಾತ್ಮಕ ಮಾತುಗಳು ಹೆಚ್ಚು ಜನಪ್ರಿಯತೆಗೊಳ್ಳುತ್ತವೆ. ಪ್ರವಚನಕಾರನಿಗೆ ಸ್ಥಿತಪ್ರಜ್ಞೆ, ಆ ಸಮಯ ಪ್ರಜ್ಞೆ, ಪ್ರಮುಖ. ಒಬ್ಬ ಪ್ರವಚನಕಾರನ ನಿತ್ಯವೂ ಪರೀಕ್ಷೆ ಎದುರಿಸುತ್ತಾನೆ. ಹೊಸಹೊಸ ಹುಡುಕಾಟ ಅವನದಾಗಿರುತ್ತದೆ. ಅವನಿಗೆ ಆಧ್ಯಾತ್ಮದ ತಿಳುವಳಿಕೆ ಜೊತೆ ಸಾಮಾನ್ಯಜ್ಞಾನವೂ ಇರಬೇಕಾಗುತ್ತದೆ. ಗಣಿತ, ವಿಜ್ಞಾನ, ಹಿಂದಿನ ಇಂದಿನ ಉಪಮೆ ಉಪಮಾನಗಳು ಅವನಿಗೆ ಗೊತ್ತಿರಬೇಕು. ಆ ಪ್ರಸ್ತುತ ವಿಷಯಕ್ಕೆ ತನ್ನ ಸ್ವಂತ ಅನುಭವದ ನುಡಿಗಳನ್ನು ಸೇರಿಸಿ ಒಂದು ಸುಂದರ ಸಾಹಿತ್ಯ ಪ್ರತಿಮೆ ರೂಪಿಸುತ್ತಾನೆ. ಎಲ್ಲ ವಿಷಯಗಳನ್ನು ಸ್ವಾನುಭಾವವೇ ಪ್ರವಚನಸಾಹಿತ್ಯವಾಗಬಲ್ಲದು.

ಪ್ರವಚನಕಾರನಿಗೆ ಆಳವಾದ ಜ್ಞಾನ ಇರಬೇಕು. ಸಿಟ್ಟು, ದ್ವೇಷ, ಅಲ್ಪಜ್ಞಾನ ಪ್ರವಚನಕಾರನಿಗೆ ಇರಬಾರದು. ಪ್ರವಚನಕ್ಕೆ ಸ್ವತಂತ್ರ ಸಾಹಿತ್ಯವಿಲ್ಲ. ಬಹಳಷ್ಟು ಪ್ರವಚನಕಾರರೂ ಮತ್ತು ಅವರ ಸಾಹಿತ್ಯ ಜನಪ್ರಿಯತೆ ಪಡೆಯಲಿಲ್ಲ. ಕಾರಣ ಮಾತಿನ ಕಲೆಗಾರಿಕೆ ಇಲ್ಲದ್ದರಿಂದ ಒಂದಿಷ್ಟು ಉದಾಹರಣೆಗಳನ್ನು ಮೂಲ ವಿಷಯಕ್ಕೆ ಸೇರಿಸಲಾರದೇ ಪ್ರವಚನ ಪ್ರಭಾವ ಆಗಲಾರದು.

ಪ್ರವಚನಕಾರನು ನವ್ಯ, ನವೋದಯ ಕಾಲದ ಕವಿ ಸಾಹಿತಿಗಳ ಪುಸ್ತಕ ಓದಿರುತ್ತಾನೆ. ಅಲ್ಲದೆ ಅಲ್ಲಲ್ಲಿ ನಡೆದ ಸಣ್ಣಪುಟ್ಟ ಅನುಭವವಿರುತ್ತದೆ. ಪುರಾಣಗ್ರಂಥಗಳನ್ನು, ವಚನ ಸಾಹಿತ್ಯವನ್ನು, ತತ್ವಜ್ಞಾನ, ಸಣ್ಣ ಹಾಸ್ಯ ಕಥೆಗಳನ್ನು ಹೀಗೆ ಎಲ್ಲವನ್ನೂ ಬಲ್ಲವನಾಗಿರುತ್ತಾನೆ. ಜೊತೆಗೆ ತನ್ನ ಅನುಭವದ ರಸಧಾರೆ ಸುರಿಸುತ್ತಾನೆ ಆಗೊಂದು ವಿಶಿಷ್ಠ ವಿನೂತನ ಸಾಹಿತ್ಯದ ಆಕಾರ ಮೈದಾಳುತ್ತದೆ. ಅದುವೇ ಪ್ರವಚನ ಸಾಹಿತ್ಯ.

ಭಾಷಾಶೈಲಿ, ಸರಳ ಉಡುಪು, ವಿನಯಗುಣ, ಪ್ರೀತಿಸುವ ಹೃದಯ ಕನಸು, ಹಾಸ್ಯಪ್ರಜ್ಞೆ ಕನ್ನಡಸಾಹಿತ್ಯದ ಜ್ಞಾನ, ವಿವಿಧ ವಿಷಯಗಳ ಜ್ಞಾನ, ಸಮಯ ಪ್ರಜ್ಞೆ, ವಿಶಾಲದೃಷ್ಠಿ ಹೀಗೆ ಹತ್ತು ಹಲವು ಗುಣಲಕ್ಷಣಗಳನ್ನುಳ್ಳವ ಪ್ರವಚನಕಾರ. ಧರ್ಮ ಮತ್ತು ಆಧ್ಯಾತ್ಮದ ಜೊತೆ ಮಾನವೀಯ ಮೌಲ್ಯಗಳನ್ನು ಬಿತ್ತುವ, ಕಾರ್ಯ ಅಲ್ಲಿ ನಡೆಯಬೇಕು.ಆಗ ಸಹಸ್ರ–ಸಹಸ್ರ ಜನ ಅಲ್ಲಿ ಸೇರಬಹುದು. ಪ್ರವಚನದ ವ್ಯಾಪ್ತಿ ವಿಶ್ವವಿಶಾಲ. ಒಂದೇ ಧರ್ಮದ ತತ್ವ ಸಿದ್ಧಾಂತಗಳನ್ನು ತಿಳಿಸುವುದರ ಜೊತೆಗೆ ಏನೆಲ್ಲವನ್ನು ಕ್ರೋಢೀಕರಿಸಿ ಪ್ರವಚನ ಮಾಡಿದಾಗ ಅದರ ವ್ಯಾಪ್ತಿ ವೃದ್ಧಿಸುತ್ತದೆ. ಪ್ರವಚನಕಾರನನ್ನು ಸಮಾಜ ಗುರುತಿಸುತ್ತದೆ. ಪ್ರವಚನಕಾರನು ಪುರಾಣ,

ಕೀರ್ತನೆಯ ಹಾಗೆ ನಾಟಕೀಯತೆ ಬಳಸಿದರೆ ಮನರಂಜನೆಯಾಗಬಹುದು, ಆತ್ಮ ರಂಜನೆಯಾಗದು.

ಒಬ್ಬ ಪ್ರವಚನಕಾರನು ಉತ್ತಮ ಪ್ರವಚನ ನೀಡುವ ಹಂಬಲದಿಂದ ಹಲವಾರು ಕೃತಿಗಳನ್ನು ಓದಿ ವಿಷಯ ಸಂಗ್ರಹಿಸುವ ಭರದಲ್ಲಿ ತಾನೇ ನೀಡಿದ ಪ್ರವಚನವನ್ನು ಬರೆದಿಡಲು ವಿಫಲನಾಗುತ್ತಾನೆ. ಮಾತುಗಾರನಿಗೆ ಬರಹದ ಕೊರತೆ ಇರುತ್ತದೆ. ಒಬ್ಬ ಪ್ರವಚನಕಾರನ ಮಾತುಗಳನ್ನು ಆಸಕ್ತರೂ ಟಿಪ್ಪಣಿ ಮಾಡಿಕೊಳ್ಳುತ್ತಾರೆ. ಅಷ್ಟೇ ಅಲ್ಲ ತಾವು ತಮ್ಮ ಭಾಷಣದಲ್ಲಿ, ಬರೆಯುವ ಕೃತಿಗಳಲ್ಲಿ ಬಳಸಿಕೊಳ್ಳುತ್ತಾರೆ. ಒಬ್ಬ ಅನುಭಾವಿ ಪ್ರವಚನಕಾರನ ವಾಣಿಯಿಂದ ಬಂದ ಮಾತುಗಳು ಇನ್ನೊಬ್ಬನ ಭಾಷಣ ಮತ್ತು ಬರೆಯುವ ಪುಸ್ತಕಕ್ಕೆ ಸಹಕಾರಿಯಾಗಬಲ್ಲವು. ಅಂದರೆ ಪ್ರವಚನ ಸಾಹಿತ್ಯ ಏಕಕಾಲಕ್ಕೆ ಹಲವಾರು ಕೃತಿಗಳನ್ನು ಮತ್ತು ಅನೇಕ ಮಾತುಗಾರರ ಮಾತಿಗೂ ಆಹಾರವಾಗಬಲ್ಲದು. ಹೀಗೆ ನಿರಂತರ ಬೆಳೆಯುವ, ಬೆಳಗುವ ಸಾಹಿತ್ಯ ಇದಾಗಿದೆ. ಮಾಸ ಪರಿಯಂತರ ಹೇಳಿದರೂ ಮಾಸದ ಪ್ರವಚನವಾಗಿದೆ.

## ಪ್ರವಚನಕಾರರು–ಆಧುನಿಕ ಕಾಲ

ಪ್ರವಚನ ಪರಂಪರೆ ಮೊದಲಿನಿಂದ ಇದ್ದರೂ ಅದರ ವ್ಯಾಪ್ತಿ ವಿಸ್ತಾರವಿರುವರಿಂದ ಒಂದು ಕಾಲಘಟ್ಟ ಗುರುತಿಸಿಕೊಳ್ಳುವ ಅವಶ್ಯಕತೆ ಇದೆ. ಕಾರಣ ಆಯಾ ಧರ್ಮದ ಗುರುಗಳು, ಅನುಭಾವಿಗಳು, ಕಾಲ–ಕಾಲಕ್ಕೆ ತತ್ವೋಪದೇಶ ಮಾಡುತ್ತಾ ಬಂದಿದ್ದಾರೆ. ಹಾಗೆ ನೋಡಿದರೆ ಅದರ ಪಟ್ಟಿ ದೊಡ್ಡದಾಗುತ್ತದೆ ಆದ್ದರಿಂದ ಕಾಲಮಿತಿ ಹಾಕಿಕೊಳ್ಳುವ ಅನಿವಾರ್ಯತೆ ಇದೆ.

ಹತ್ತೊಂಭತ್ತನೇ ಶತಮಾನದಿಂದೀಚೆಗೆ ಅನೇಕ ಪ್ರವಚನಕಾರರು ಆಗಿಹೋಗಿದ್ದಾರೆ. ನೀತಿ ಪ್ರಧಾನ, ತತ್ವಪ್ರಧಾನ ಮಾತುಗಳನ್ನು ತಮ್ಮ ದಿವ್ಯವಾಣಿಯ ಮೂಲಕ ತಿಳಿಯಪಡಿಸಿದ್ದಾರೆ. ಬಂಥನಾಳದ ಶಿವಯೋಗಿಗಳು ಪ್ರವಚನಕಾರರು ತಮಗೆ ಬಂದ ಸಂಭಾವಣೆಯನ್ನು ಆ ಊರಿನ ಶಿಕ್ಷಣಕ್ಷೇತ್ರಕ್ಕೆ ದಾಸೋಹ ಮಾಡಿ ಅಲ್ಲೊಂದು ದೇವಸ್ಥಾನ ಕಟ್ಟುವುದಕ್ಕಿಂತ ಶಾಲಾ ಕಾಲೇಜು ಕಟ್ಟಿದ್ದಾರೆ. ಒಬ್ಬ ಪ್ರವಚನಕಾರರ ತಾನು ಮಾತನಾಡಿದ್ದನ್ನು ಬರೆದಿಡಲು ವಿಫಲನಾದರೂ ಒಂದು ಸಂಸ್ಥೆ ಕಟ್ಟುವುದರ ಮೂಲಕ ಸಮಾಜ ಸೇವೆ ಮಾಡಿದ್ದಾರೆ. ಬಿಜಾಪುರದ ಪೂಜ್ಯ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಪ್ರವಚನ ಮಾಡಿದಲ್ಲೆಲ್ಲಾ ಆ ಊರಿಗೆ ಮೂಲಭೂತ ಸೌಕರ್ಯ ನೀಡುವುದರ ಜೊತೆಗೆ ಸಮಾಜಸೇವೆ ಮಾಡಿದ್ದಾರೆ. ಅದರಲ್ಲಿ ಬಂಥನಾಳದ ಶ್ರೀ ಸಂಗನಬಸವ ಶಿವಯೋಗಿಗಳು, ಬಿಜಾಪುರ ಜ್ಞಾನ ಯೋಗಾಶ್ರಮದ ಶ್ರೀ ಮಲ್ಲಿಕಾರ್ಜುನ

ಮಹಾಸ್ವಾಮಿಗಳು, ಮುಧೋಳದ ಮೃತ್ಯುಂಜಯ ಮಹಾಸ್ವಾಮಿಗಳು, ಜೋಳದರಾಶಿ ದೊಡ್ಡನಗೌಡರು ಹೀಗೆ ಅನೇಕ ಜನ ಪ್ರವಚನಕಾರರು ನಾಡು, ನುಡಿಯನ್ನು ಶ್ರೀಮಂತಗೊಳಿಸಿದ್ದಾರೆ.

ಒಂದೇ ತತ್ವ ಸಿದ್ಧಾಂತ ಒಂದೇ ಧರ್ಮಕ್ಕೆ ಅಂಟಿಕೊಂಡು ಆ ಧರ್ಮದ ತಿರುಳನ್ನು ಜನಮಾನಸಕ್ಕೆ ಮುಟ್ಟಿಸುವ ಪ್ರಾಮಾಣಿಕ ಕಲ್ಯಾಣ ಕಾರ್ಯ ಮಾಡುವವರು ಒಂದು ಸೀಮಿತವಾದ ವಲಯ ಹೊಂದಿರುತ್ತಾರೆ.

ಉದಾ: ಮಾತೆ ಮಹಾದೇವಿ ಶ್ರೀ ಲಿಂಗಾನಂದರು, ಇಳಕಲ್ಲಿನ ಮಹಾಂತ ಸ್ವಾಮಿಗಳು ಒಬ್ಬ ಪ್ರವಚನಕಾರರು ಇಡೀ ವಿಶ್ವಸಮುದಾಯವನ್ನು ಪ್ರವಚನ ರೂಪದಲ್ಲಿ ಪಕೃತಿಯ ವರ್ಣನೆ ಜಗದ ಮಧ್ಯದಲ್ಲಿ ಜಗದೀಶನ ಇರುವಿಕೆ ತಿಳಿಸುತ್ತಾ ಪ್ರವಚನ ನುಡಿಗಳನ್ನು ಕಟ್ಟುತ್ತಿರುತ್ತಾರೆ.

ಒಂದು ಪ್ರವಚನದ ಪರಿಣಾಮ ಪ್ರವಚನಕಾರನ ಚಾರಿತ್ರ್ಯದ ಹಿನ್ನೆಲೆ ಮೇಲೆ ಅವಲಂಬಿತವಾಗಿರುತ್ತದೆ. ಶ್ರೀ ಸಿದ್ಧೇಶ್ವರ ಸ್ವಾಮಿಗಳು ಜನಸಾಮಾನ್ಯರ ಭಾಷೆಯಲ್ಲಿ ಪ್ರವಚನ ಮಾಡಿದರೂ ಅದು ವಿನೂತನವಿರುತ್ತದೆ. ಪಂಡಿತೋತ್ತಮರನ್ನು ಮೊದಲು ಮಾಡಿಕೊಂಡು ಸಾಮಾನ್ಯನವರೆಗೂ ಅವರ ಮಾತು ಹಿಡಿಸುತ್ತದೆ. ಅದರ ಹಿಂದಿನ ನೈತಿಕತೆ ಬಹುದೊಡ್ಡದು. ಆದರೆ ಕೀರ್ತನೆಯಲ್ಲಿ ಮೊದಲು ತತ್ವ ಆಮೇಲೆ ಒಂದು ಸಂಗೀತ ರೂಪಕ ಕಥಾನಕ ಕೀರ್ತನಕಾರನ ಉಡುಗೆ-ತೊಡುಗೆ ಎಲ್ಲವನ್ನು ಅವಲಂಬಿಸಿರುತ್ತದೆ.

### ೫.೨. ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಮುಖ ಪ್ರವಚನಕಾರರ ಪಾತ್ರ :

ಮದ್ದು, ಗುಂಡು, ಬಂದೂಕು, ಬೆತ್ತ ಹೊಡೆದಾಟ ಬಡೆದಾಟ ಹಿಂಸೆಗಳಿಂದ ಬದಲಾವಣೆ ತರಲು ಆಗದ್ದು, ಪ್ರವಚನದ ಪ್ರಭಾವೀ ಮಾತುಗಳಿಂದ ಸಾಧ್ಯವಾಗುವುದು. ಮಹಾತ್ಮ ಗಾಂಧೀಯವರ ಅಹಿಂಸಾ ಚಳುವಳಿ ಇದಕ್ಕೆ ಸಾಕ್ಷಿ. ಪ್ರಭಾವಶಾಲಿ ಧ್ವನಿಯ ಸ್ವಾಮಿ ವಿವೇಕಾನಂದರ ಸಿಂಹ ಗರ್ಜನೆಯ ಮಾತುಗಳು ಸ್ವತಂತ್ರ್ಯ ಚಳುವಳಿಗೆ ಯುವಶಕ್ತಿಯನ್ನು ಜಾಗೃತಿಗೊಳಿಸಿದವು. ಅವರ ಸರಳೀ ಉಪನ್ಯಾಸಗಳೂ ಸಹ ಪ್ರವಚನದ ಮಾತುಗಳೇ ಆಗಿವೆ.

## ೧) <u>ಸ್ವಾಮಿ ವಿವೇಕಾನಂದರು</u> :

"ನಿಮ್ಮ ವಿವಾಹ ಮತ್ತು ನಿಮ್ಮ ಐಶ್ವರ್ಯ ನಿಮ್ಮ ಜೀವನ ಬರಿಯ ಇಂದ್ರಿಯ ಭೋಗಕ್ಕೆ ಅಲ್ಲ. ವ್ಯಕ್ತಿಗತ ಸುಖಕ್ಕೆ ಅಲ್ಲ, ಮರೆಯದಿರಿ! ನಿಮ್ಮ ಜನ್ಮವಿರುವುದೇ ಜಗನ್ಮಾತೆಯ ಅಡಿದಾವರೆಯಲ್ಲಿ ಬಲಿದಾನಕ್ಕಾಗಿ! ಮರೆಯದಿರಿ, ಅಂತ್ಯಜರು, ಮೂಢರು, ದರಿದ್ರರು, ನಿರಕ್ಷರಕುಕ್ಷಿಗಳು, ಚಂಡಾಲರು ಮತ್ತು ಚಮ್ಮಾರರು ಎಲ್ಲರೂ ನಿಮ್ಮ ರಕ್ತ ಬಂಧುಗಳಾದ ಸಹೋದರರು! ವೀರಾತ್ಮರೇ, ಧೀರರಾಗಿ, ನೆಚ್ಚುಗೆಡದಿರಿ. ಭಾರತೀಯರು ನಾವು ಎಂದು ಹೆಮ್ಮೆ ತಾಳಿ." ಭಾರತೀಯರೆಲ್ಲ ನಮ್ಮ ಸಹೋದರರು. ಅವರು ನಮ್ಮ ಪ್ರಾಣ, ಭಾರತೀಯ ದೇವ ದೇವತೆಗಳೆಲ್ಲರೂ ನಮ್ಮ ದೇವರು. ಭಾರತೀಯ ಸಮಾಜ ನಮ್ಮ ಬಾಲ್ಯದ ತೊಟ್ಟಿಲು, ತಾರುಣ್ಯದ ನಂದನವನ, ವೃದ್ಧಾಪ್ಯದ ವಾರಾಣಾಸಿ. "ಭಾರತ ಭೂಮಿಯೇ ನಮ್ಮ ಪರಂಧಾಮ. ಭಾರತದ ಶುಭವೆ ನಮ್ಮ ಶುಭ."[೬೪]

ಈ ಸಿಂಹ ಗರ್ಜನೆಯ ಮಾತುಗಳು ಸ್ವಾತಂತ್ರ್ಯ ಸಂಗ್ರಾಮಕ್ಕೆ ಮತ್ತು ದೇಶಾಭಿಮಾನಕ್ಕೆ ಯುವಕರಲ್ಲಿ ಸ್ಫೂರ್ತಿ ನೀಡಿದವು.

## ೨) ಸಿದ್ಧಾರೂಢ ಸ್ವಾಮಿಗಳು :

ಹುಬ್ಬಳ್ಳಿಯ ಸಿದ್ಧಾರೂಢ ಮಠದ ಸ್ವಾಮಿಗಳು ಮಹಾನ್ ದಾರ್ಶನಿಕರು, ಯೋಗಿಗಳು, ಸಂತರು, ಧರ್ಮನಿರಪೇಕ್ಷಕರು, ಸಮಾಜ ರಾಷ್ಟ್ರಹಿತದಲ್ಲಿ ಅತ್ಯಂತ ಆಸಕ್ತಿ ಉಳ್ಳವರು.

"೧೯೦೮ ರಲ್ಲಿ ಹುಬ್ಬಳ್ಳಿಯಲ್ಲಿ ಸ್ವಾತಂತ್ರ್ಯ ಹೋರಾಟಗಾರರು ಏರ್ಪಡಿಸಿದ್ದ ಸಭೆಯನ್ನು ಉದ್ದೇಶಿಸಿ ಮಾತನಾಡಲು ಟಿಳಕರು ಹುಬ್ಬಳ್ಳಿಗೆ ಬಂದರು. ಬ್ರಿಟಿಷ ಸರಕಾರ ಹುಬ್ಬಳ್ಳಿ ನಗರದ ಸೀಮೆಯಲ್ಲಿ ಟಿಳಕರು ಭಾಷಣ ಮಾಡಕೂಡದೆಂದು ನಿರ್ಬಂಧ ಹಾಕಿದಾಗ, ಸ್ವಾತಂತ್ರ್ಯ ಹೋರಾಟಗಾರರು ಸಿದ್ಧಾರೂಢ ಸ್ವಾಮಿಗಳಿಗೆ ಶರಣು ಹೋದರು. ಸ್ವಾಮಿಗಳು ಕೂಡಲೇ ಊರ ಹದ್ದಿನ ಹೊರಗಿದ್ದ ಮಠದ 'ಪಾಂಜರಪೋಳ'ದಲ್ಲಿ (ಬಿಡಿ ಆಕಳನ್ನು ಇಡುವ ಸ್ಥಳದಲ್ಲಿ) ಸಭೆ ಆಗಲಿ ಎಂದರು. ಇಷ್ಟೇ ಅಲ್ಲ ಸಭೆಗೆ ತಾವೇ ಅಧ್ಯಕ್ಷರಾಗಲು ಒಪ್ಪಿಗೆ ಇತ್ತರು."

---

೬೪ " ". ಜ್ಞಾನವಾಹಿನಿ ಕಾರ್ಯಕ್ರಮ (ಸ್ವದೇಶಮಂತ್ರ)-ಪ್ರಕಟನಾ ಸೂಚಿಯಿಂದ ಆಯ್ದುಕೊಂಡಿದೆ. ಶ್ರೀ ರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರ-೫೭೦೦೨೦. (೨೦೦೩-೨೦೦೪)

“ಸಭೆಯ ನಂತರ ಟಿಳಕರು ಸ್ವಾಮಿಗಳನ್ನು ಕಂಡಾಗ ಅವರು ‘ನಿಮ್ಮ ಗೀತಾರಹಸ್ಯದಲ್ಲಿ ಗೀತೆ ಕರ್ಮಯೋಗ ಹೇಳುತ್ತದೆ. ಎಂದು ಬರೆದಿದ್ಧೀರಿ. ಅದು ಸರಿಯಾಗಿಲ್ಲ. ಗೀತೆ ಜ್ಞಾನಯೋಗ ಹೇಳುತ್ತದೆ. ಆದರೆ ನೀವು ಬರೆದದ್ದು ಇಂದಿನ ಪರಿಸ್ಥಿತಿಯಲ್ಲಿ ಬಹಳ ಲಾಭದಾಯಕವಾಗಿದೆ. ನಿಷ್ಕರ್ಮಿಗಳಾದ ಯುವ ಜನ ಕರ್ಮ ಮಾರ್ಗದಲ್ಲಿ ಅಭಿರುಚಿ ಬೆಳೆಸಿಕೊಂಡು ಸ್ವಾತಂತ್ರ್ಯ ಸಮಯದಲ್ಲಿ ಭಾಗತೆಗೆದುಕೊಳ್ಳುತ್ತಿದ್ದಾರೆ. ಇದು ಶ್ಲಾಘನೀಯ, ಅದಕ್ಕೆ ನೀವು ಅಭಿನಂದನೀಯರು’, ಎಂದು ಹೇಳಿ ಅವರ ಬೆನ್ನು ಚಪ್ಪರಿಸಿದರಂತೆ.”

“ಗಾಂಧೀಜಿ ೧೯೪೨ ರಲ್ಲಿ ಕರ್ನಾಟಕದ ಪ್ರವಾಸ ಕೈಗೊಂಡಾಗ ಹುಬ್ಬಳ್ಳಿಯ ಕೊಪ್ಪಿಕರ ರೋಡನಲ್ಲಿ ‘ಗುಳುಕವ್ವನ ಕೆರೆ’ಯಲ್ಲಿ ಒಂದು ಸಭೆ ಏರ್ಪಾಟಾಗಿತ್ತು ಅದಕ್ಕೆ ಅಧ್ಯಕ್ಷತೆ ವಹಿಸಲು ಶ್ರೀ ಸಿದ್ಧಾರೂಢ ಸ್ವಾಮಿಗಳನ್ನು ವಿನಂತಿಸಲು ಅವರು ಒಪ್ಪಿಕೊಂಡರು. ಇಷ್ಟೇ ಅಲ್ಲ, ಸಭೆಗೆ ಖಾದಿ ಬಟ್ಟೆ ಹಾಕಿಕೊಂಡು ಬಂದರು. ಅವರು ತಮ್ಮ ಭಾಷಣದಲ್ಲಿ ಗಾಂಧೀಜಿಯವರಂಥಹ ಆದರ್ಶ ಜನನಾಯಕರು, ಸ್ವಾತಂತ್ರ್ಯ ಹೋರಾಟಕ್ಕೆ ಪಣ ತೊಟ್ಟಿರುವಾಗ, ಸ್ವಾತಂತ್ರ್ಯ ಅಸಾಧ್ಯವಾದ ಮಾತಲ್ಲ, ಪ್ರತಿಯೊಬ್ಬ ಭಾರತೀಯನೂ ಅವರಂತೆಯೇ ಹೆಜ್ಜೆ ಹಾಕಬೇಕು. ಗಾಂಧೀಜಿಯವರತ್ತ ಕೈ ಮಾಡಿ “ಈ ಮನುಷ್ಯ ಸಾಗರಕ್ಕೆ ಬೇಲಿ ಕಟ್ಟುತ್ತಾನೆ. ಇವರಿಂದ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಗುವುದು ಖಂಡಿತ. ಆದರೆ ಆ ಹೊತ್ತಿಗೆ ನಾವು ದೇಹದಲ್ಲಿ ಇರುವುದಿಲ್ಲವಾದ್ದರಿಂದ ಈತನನ್ನು ಈಗಲೇ ಅಭಿನಂದಿಸುತ್ತೇನೆ.”೬೫ ಎಂದರಂತೆ.

ಡಾ. ಚಂದ್ರಶೇಖರ ಕಂಬಾರವರ ಮುನ್ನುಡಿಯಲ್ಲಿ ಇರುವ ‘ಸಚಿತ್ರಭಾರತ-ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಮತ್ತು ಗಾಂಧೀಜಿ’ ಈ ಕೃತಿ ಅಮೂಲ್ಯವಾದುದು.

### ೩) <u>ಹರ್ಡೇಕರ ಮಂಜಪ್ಪನವರು</u> :

ಮಂಜಪ್ಪನವರು ಅಖಂಡ ೬೧ ವರುಷಗಳ ತಮ್ಮ ಜೀವನದಲ್ಲಿ ರಾಷ್ಟ್ರೀಯ ಬದುಕನ್ನು ಮೇಲೆತ್ತುವ ಮಹಾಮಣಿಹವನ್ನು ಪೂರೈಸಿದರೆನ್ನಬಹುದು. ಶಿಕ್ಷಕನಾಗಿ, ಪತ್ರಿಕೋದ್ಯಮಿಯಾಗಿ, ಲೇಖಕನಾಗಿ, ಗ್ರಂಥಕತೃವಾಗಿ, ಖಾದಿ ಚಳುವಳಿಕಾರನಾಗಿ, ಬಸವಧರ್ಮದ ಮಿಶನರಿಯಾಗಿ, ಗಾಂಧೀತತ್ವದ ಅನುಯಾಯಿ ಪ್ರಚಾರಕನಾಗಿ, ಜೀವನ ಶಿಕ್ಷಣದ ರೂವಾರಿಯಾಗಿ, ಹಲವು ಹತ್ತು ಮುಖವಾಗಿ ಕಾರ್ಯಗೈದರು.

---

೬೫ ““ಸಚಿತ್ರಭಾರತ- ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಮತ್ತು ಗಾಂಧೀಜಿ. ಲೇ-ಸೋಮಲಿಂಗ ಅಪ್ಪಣ್ಣ ಮಳಗಲಿ. ಸ್ವಾತಂತ್ರ್ಯ ಯೋಧರು. ಶ್ರೀ ಅಚ್ಯುತರಾಮಚಂಧ್ರ ಒಡವಿ ಬಿ.ಇ. ನಿವೃತ್ತ ಮುಖ್ಯ ಅಭಿಯಂತರರು. ಪುಟಸಂಖ್ಯೆ-೧೬೬ ೬೨೫ ಪ್ರ- ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ ಸಂಘ (ರಿ) ಬೆಳಗಾವಿ. ೧ನೇ ಮುಖ್ಯ ರಸ್ತೆ ಶಿವಾಜಿನಗರ ಬೆಳಗಾವಿ- ೫೯೦೦೧೬ (೨೦೧೦)

ರಾಷ್ಟ್ರೀಯ ಐಕ್ಯತೆ, ಹಿಂದೂ ಜನಾಂಗದ ಸಂಘಟನೆ, ರಾಷ್ಟ್ರಕಲ್ಯಾಣ ಅವರ ಜೀವನದ ಧ್ಯೇಯಗಳಾಗಿದ್ದವು.

ಅವರೊಬ್ಬರು ಶ್ರೇಷ್ಠ ಪ್ರವಚನಕಾರರು. ಶರಣ ಸಂಸ್ಕೃತಿ ಕುರಿತು ರಾಷ್ಟ್ರೀಯ ಐಕ್ಯತೆ ಕುರಿತು, ಸ್ವಾತಂತ್ರ್ಯ ಸಂಗ್ರಾಮದ ಕುರಿತು ಮಾಡಿದ ಪ್ರವಚನಗಳು ಇಂದಿಗೂ ಸ್ಮರಣೀಯ. ಪಾದಯಾತ್ರೆಯ ಮೂಲಕ ಜನಜಾಗೃತಿ ಕಾರ್ಯ ಕೈಕೊಂಡರು. ಬಸವತತ್ತ್ವ ಮತ್ತು ಗಾಂಧಿ ತತ್ವಪ್ರಸಾರಕ್ಕೆ ಹಳ್ಳಿ-ಹಳ್ಳಿಗಳನ್ನು ಸಂಚರಿಸಿದರು. ಬಂಥನಾಳದ ಯುವಕ ಶ್ರೀ ಸಂಗನಬಸವ ಶಿವಯೋಗಿಗಳವರೆಗೆ ರಾಷ್ಟ್ರಸೇವಾ ದೀಕ್ಷೆ ನೀಡಿದರು.

೧೮೭೫ನೇ ಇಸ್ವಿಯ ಶ್ರಾವಣಮಾಸ ಪೂರ್ತಿ ಒಂದು ತಿಂಗಳ ಕಾಲ ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಬಂಥನಾಳ ಮಠದಲ್ಲಿ ಪೂಜ್ಯ ಶ್ರೀ ಸಂಗನಬಸವ ಮಹಾಸ್ವಾಮಿಗಳವರ ಸಮ್ಮುಖದಲ್ಲಿ ಬಸವಣ್ಣನವರ ವಚನ ಪ್ರವಚನ ಮಾಡಿದರು. ಪುರಾಣಗಳು ಕಾಲ್ಪನಿಕವಾಗಿ ಶುಷ್ಕವಾದ ಮೂಢನಂಬಿಕೆ ಬೆಳೆಸುತ್ತವೆಂಬುದರ ಅರಿವಾಗಿ ಮಂಜಪ್ಪನವರು ವೈಚಾರಿಕವಾಗಿ ಅರಿವು-ಆಚಾರ-ಅನುಭಾವಗಳ ರಸಘಟ್ಟಿಗಳಾದ ಬಸವಣ್ಣನವರ ವಚನಗಳ ಪ್ರವಚನ ಮಾಡಿದರು. ಒಳಪಂಗಡಗಳನ್ನು ತೆಗೆದು ಹಾಕುವದರ ಕಡೆಗೇನೇ ವಿಶೇಷವಾಗಿ ಒತ್ತುಕೊಟ್ಟು ಹೇಳತೊಡಗಿದರು. ಪ್ರವಚನ ಮಂಗಲ ಸಮಯಕ್ಕೆ ೨೦೦ ಜನ ಸ್ತ್ರೀ-ಪುರುಷರಿಗೆ ಲಿಂಗದೀಕ್ಷೆ ಮಾಡಿದರು. ಒಳಪಂಗಡ ಭೇದ ನಿವಾರಣೆಗಾಗಿ ಶ್ರಮಿಸಿದರು.

ಬಂಥನಾಳ ಪ್ರವಚನದ ನಂತರ ವಿಜಾಪುರ ಜಿಲ್ಲೆಯ ೭ ತಾಲೂಕುಗಳು, ೫೫ ಹಳ್ಳಿಗಳಲ್ಲಿ ೫ ತಿಂಗಳ ಕಾಲ ಸಂಚರಿಸಿದರು. ನೂರಾರು ವ್ಯಾಖ್ಯಾನಗಳಾದವು. ಬಂಥನಾಳ ಸ್ವಾಮಿಗಳೊಡನೆಯೇ ಸಂಚಾರ. ತಂಬಾಕು, ಸೆರೆ, ಚಹ ಬಿಡಿಸುವುದು. ಖಾದಿ ಧರಿಸುವಂತೆ ಮಾಡುವುದು. ಲಿಂಗಾಯತರ ಒಳಪಂಗಡದ ನಿವಾರಣೆಗಾಗಿ ಲಿಂಗದೀಕ್ಷೆ ಸಮಾರಂಭ ಜರುಗಿಸಿದರು. ಇಂಡಿ, ಸಿಂದಗಿ, ಬಾಗೇವಾಡಿ, ಹುನಗುಂದ, ಮುದ್ದೇಬಿಹಾಳ ಮುಂತಾದೆಡೆಗಳಲ್ಲಿ ಪಾದಯಾತ್ರೆ ಮಾಡಿದರು.

ತಮ್ಮ ಹುಟ್ಟು ಹಬ್ಬದ ದಿನ ೬೦ ಪುಟಗಳ ಚಿಕ್ಕ ಕೃತಿ "ಎಚ್ಚತ್ತ ಭಾರತ"ವನ್ನು ಪ್ರಕಟಿಸಿದರು. ಈ ಪುಸ್ತಕದಲ್ಲಿ ಭಾರತದ ೫೦೦೦ ವರುಷಗಳ ಏರಿಳಿತದ ಚಿಂತನ-ಮಂಥನವನ್ನು ವೈಚಾರಿಕವಾಗಿ ಮಾಡಿದ್ದಾರೆ. ಸ್ವತಂತ್ರ ಭಾರತದ ಕನಸು ಕಾಣುತ್ತಿದ್ದ ಮಂಜಪ್ಪನವರು ಭಾರತದೇಶವು ಮುಂದೆ ಸಾಗಬೇಕಾದ ದಾರಿಯನ್ನು ಸೂಚಿಸಿದ್ದಾರೆ.

೧೯೨೧ ರಲ್ಲಿ ಗ್ರಂಥ ರಚನೆಯನ್ನು ಮುಖ್ಯ ಉದ್ಯೋಗವಾಗಿಸಿ ರಾಷ್ಟ್ರಜೀವನ ಗ್ರಂಥಮಾಲೆ ಪ್ರಾರಂಭಿಸಿದರು. ರಾಮತೀರ್ಥರ ಉಪನ್ಯಾಸಗಳನ್ನು ಮತ್ತು ಭಾರತೀಯರ ದೇಶಭಕ್ತಿ ಮುಂತಾದ ಅನೇಕ ಗ್ರಂಥಗಳನ್ನು ರಚಿಸಿದರು. ಗಾಂಧೀಜಿಯವರ ಮೇಲಿನ ಶ್ರದ್ಧೆ ಭಕ್ತಿ ವಿಶ್ವಾಸಗಳಿಂದಾಗಿ ಮಂಜಪ್ಪನವರು ೧೮/೦೧/೧೯೨೨ ರಂದು 'ಗಾಂಧೀಶಕೆ' ಎಂದು ಪತ್ರಗಳಲ್ಲಿ ಪುಸ್ತಕಗಳಲ್ಲಿ ಬರೆಯತೊಡಗಿದರು. ಗಾಂಧೀಜಿಯವರ ಸತ್ಯಾಗ್ರಹ ತತ್ವ ಪ್ರಚಾರವನ್ನು ಇಡೀ ಕಾರವಾರ ಜಿಲ್ಲೆಯಾದ್ಯಂತ ತೀವ್ರವಾಗಿ ಪ್ರಚಾರಗೊಳಿಸತೊಡಗಿದರು. ಈ ಪ್ರಚಾರ ಬೆಳಗಾವಿ ಜಿಲ್ಲೆಗೂ ಪಸರಿಸಿದರು.

೧೯೨೦ ಅಗಷ್ಟು ೧ ರಿಂದ ಖಾದಿ ಬಟ್ಟೆ ಧರಿಸತೊಡಗಿದರು. ತಾವೇ ಸ್ಥಾಪಿಸಿದ 'ಜ್ಞಾನಪ್ರಸಾರಕ ಸಂಘದ' ಮೂಲಕ ಖಾದಿ ಪ್ರಸಾರಕ ಕಾರ್ಯಕ್ರಮ ಹಾಕಿಕೊಂಡರು. ಮಂಜಪ್ಪನವರು ಖಾದಿಧೋತರ, ಖಾದಿನಿಲುವಂಗಿ, ತಲೆಯ ಮೇಲೆ ಕಂಬಳಿ ಟೊಪ್ಪಿಗೆ ಧರಿಸುತ್ತಿದ್ದರು.

ಮಂಜಪ್ಪನವರು ದೇಹದ ಅನಾರೋಗ್ಯ ಮತ್ತು ರಕ್ತದೊತ್ತಡದಿಂದಾಗಿ ದಿನೇ ದಿನೇ ಕ್ಷೀಣವಾಗತೊಡಗಿದರು. ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ದೊರೆಯುವ ಕೆಲವೇ ತಿಂಗಳು ಮೊದಲು ಅಂದರೆ ಜನೆವರಿ ೩, ೧೯೪೭ ರಂದು ಲಿಂಗದೊಳಗಾದರು.

ಶ್ರೀಯುತರು ಲಿಂಗದೊಳಗಾಗುವುದಕ್ಕಿಂತ ಮುಂಚೆ ಅವರ ಅಭಿಮಾನಿಗಳು, ಅನುಯಾಯಿಗಳು ಸಂದೇಶ ನೀಡಲು ಕೇಳಿದಾಗ–ಮಂಜಪ್ಪನವರು "ನಾನು ಸಂದೇಶ ನೀಡಲಾರೆ. ದೇಶದ ಜನತೆಗೆ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ ಬೇಡಿಕೊಳ್ಳುತ್ತೇನೆ ಎಂದು ಕೆಳಗಿನಂತೆ ಹೇಳಿಕೆ ನೀಡಿದರು–

**"ಪವಿತ್ರರಾಗಿರಿ, ಧೀರರಾಗಿರಿ,**
**ಸ್ವತಂತ್ರ ರಾಷ್ಟ್ರವೀರರಾಗಿರಿ"**

ಇದು ನನ್ನ ಕಡೆಯ ಮನವಿ ಎಂದರು.

ತಮ್ಮ ಬಾಳಿನ ಕೊನೆಯುಸಿರಿನವರೆಗೂ ದೇಶ, ದೇಶದ ಜನತೆಗಾಗಿ ಚಿಂತನ ಮಾಡಿದ, ರಾಷ್ಟ್ರಧರ್ಮವನ್ನೇ ಕನವರಿಸಿದ, ರಾಷ್ಟ್ರದ ಏಳ್ಗೆಯನ್ನೆ ಮಂತ್ರದಂತೆ ಜಪಿಸಿದವರು 'ನಿರಂಜನ ಶರಣ' ಮಂಜಪ್ಪನವರು."[೬೬]

---

೬೬ " "ನಿರಂಜನ ಶರಣ–ಕರ್ನಾಟಕ ಗಾಂಧಿ 'ಹರ್ಡೇಕರ ಮಂಜಪ್ಪನವರು' ಲೇ–ಸಿದ್ಧಣ್ಣ ಲಂಗೋಟಿ(ಚಾಂದಕವಠೆ) ಪುಟಸಂಖ್ಯೆ–೧೪,೧೫,೨೫ ಮತ್ತು ೨೫. ಪ್ರ–ಜಗಜ್ಯೋತಿ ಬಸವೇಶ್ವರ ಅನುಭಾ ಪೀಠ, ರಾಮದುರ್ಗ. (೨೦೧೨)

## ೪) ಇಂಚಗೇರಿ ಶ್ರೀ ಸ. ಸ. ಮಾಧವಾನಂದ ಪ್ರಭುಗಳು :

ಪುಣ್ಯಭೂಮಿ ಭಾರತ ದೇಶದ ಸ್ವಾತಂತ್ರ್ಯಕ್ಕಾಗಿ ಶ್ರೀ ಕ್ಷೇತ್ರ ಇಂಚಗೇರಿ ಸಂಪ್ರದಾಯದ ಅಗ್ರೇಸರ ಶಿಷ್ಯರಾದ ಮಹಾದೇವಪ್ಪನವರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಇಂಚಗೇರಿ ಮಠದಲ್ಲಿ ಮಾಘ ಸಪ್ತಾಹದೊಳಗೆ ಪಣತೊಟ್ಟರು. ಮಹಾದೇವಪ್ಪನವರು ಜನತೆಯನ್ನು ಕುರಿತು "ನೀವೆಲ್ಲ ಭಾರತೀಯರು, ಬ್ರಿಟಿಷ ಸರಕಾರಕ್ಕೆ ಜನ ಮತ್ತು ಧನ ಸಹಾಯ ಮಾಡಬೇಡಿರಿ. ಸ್ವಾತಂತ್ರ್ಯಕ್ಕೆ ಸಿದ್ಧರಾಗಬೇಕು" ಎಂದು ಹೇಳಿದರು. ಇವರ ಭಾಷಣ ಮುಗಿದ ಕೂಡಲೇ ಮಹಾದೇವಪ್ಪನರನ್ನು ಬಂಧಿಸಿ ಸೆರೆಮನೆಯಲ್ಲಿ ಇಟ್ಟರು.

ಮಹಾದೇವಪ್ಪನವರು ಶ್ರೀ ಕ್ಷೇತ್ರ ಇಂಚಗೇರಿ ಸಂಪ್ರದಾಯದ ಅನುಯಾಯಿಗಳನ್ನು ಅಲ್ಲಲ್ಲಿಗೆ ಸಂಘಟಿಸಿ ಗುಂಪುಗೂಡಿ, ಸ್ವಾತಂತ್ರ್ಯ ಚಳುವಳಿಗೆ ಸಜ್ಜಾಗಿ ಅವಿರತವಾಗಿ ಸ್ವಾತಂತ್ರ್ಯ ಸಿಗುವವರೆಗೆ ಭೂಗತರಾಗಿ ಹೋರಾಟ ನಡೆಸಿದ್ದರು. ಮಹಾದೇವಪ್ಪನವರು ಚಳುವಳಿಗೋಸುಗ ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ, ಗುಜರಾತ ಇನ್ನೂ ಹಲವಾರು ಪ್ರಾಂತಗಳಿಗೆ ಭೆಟ್ಟಿ ಕೊಟ್ಟು ನಿಷ್ಠಾವಂತ ಕಾರ್ಯಕರ್ತರನ್ನು ಭೆಟ್ಟಿಯಾಗಿ ಮುಂದೆ ದಿಲ್ಲಿಗೆ ಹೋಗಿ ಮಹಾತ್ಮಾ ಗಾಂಧೀಜಿಯವರನ್ನು ಕಂಡು ದೇಶದ ಸ್ವಾತಂತ್ರ್ಯದ ಸಲುವಾಗಿ ಯಾವ ರೀತಿಯ ಯೋಜನೆಗಳನ್ನು ಹಾಕಬೇಕು ಎಂಬುದನ್ನು ಕೂಲಂಕೂಶವಾಗಿ ಚರ್ಚಿಸಿದರು. ೧೯೪೦ ರ ಹೊತ್ತಿಗೆ ಚಳುವಳಿಗೋಸುಗ ಮಹಾದೇವಪ್ಪನವರು ಊರಿಂದೂರಿಗೆ ಸಂಚರಿಸಿ ಭಕ್ತಿ ರಸದೊಂದಿಗೆ ರಾಷ್ಟ್ರಾಭಿಮಾನದ ಕಲ್ಪನೆಯನ್ನು ಜನತೆಗೆ ತಿಳಿಕೊಡುತ್ತಿದ್ದರು.

"ಮಹಾದೇವಪ್ಪನವರು ಖೋಜಾನಟ್ಟಿ ಗ್ರಾಮಕ್ಕೆ ಬಂದರು. ತುಂಬಾ ಭಕ್ತಿಯಿಂದ ಊರಿನ ಜನರು ಅವರನ್ನು ಬರಮಾಡಿಕೊಂಡರು. ಅಂದು ಮಹಾದೇವಪ್ಪನವರು ಊರಿನ ಬಸವೇಶ್ವರ ದೇವಸ್ಥಾನದಲ್ಲಿ ಹಲವಾರು ದೃಷ್ಟಾಂತವನ್ನೊಳಗೊಂಡ ಪ್ರವಚನ ಹೇಳಿದರು. ಆ ಪ್ರವಚನದ ಒಟ್ಟು ಅಭಿಪ್ರಾಯ 'ಪರಕೀಯರು ನಮ್ಮನ್ನು ಆಳುತ್ತಿದ್ದಾರೆ, ಅವರಿಂದ ನಾವು ಸ್ವತಂತ್ರರಾಗಬೇಕು, ದೇಶದ ಸ್ವಾತಂತ್ರ್ಯ ನಮ್ಮ ಸ್ವಾತಂತ್ರ್ಯ, ಸ್ವತಂತ್ರರಾಗಬೇಕಾದರೆ ಯಾವ ಯೋಜನೆಯಿಂದ ಸಾಧ್ಯ, ನಾವೆಲ್ಲರೂ ಏನು ಮಾಡಬೇಕು' ಎಂಬ ವಿಚಾರಗಳಿಂದೊಡಗೂಡಿತ್ತು. ಜನರಲ್ಲಿ ಕ್ರಾಂತಿಕಾರಕ ಪ್ರಚೋದನೆಯನ್ನು ಹುಟ್ಟಿಸುವಂತಹದಾಗಿತ್ತು. ಬ್ರಿಟಿಷರು ನಮ್ಮ ದೇಶವನ್ನು ಆಳುತ್ತಿದ್ದಾರೆ. ನಾವು ದೇಶಕ್ಕಾಗಿ ಹೋರಾಡದಿದ್ದರೆ ನಾವೆಂಥ ನಾಮಧಾರಿಗಳು? ಭಾರತಾಂಬೆಯ ಮಕ್ಕಳಾದರೂ ಹೇಗಾದೇವು? ಎಂದಾಗ ಎಲ್ಲ ಭಕ್ತರು ಒಮ್ಮೆಲೆ ರಾಜಾಧಿರಾಜ ಶ್ರೀ ಸದ್ಗುರುನಾಥ ಗಿರಿಮಲ್ಲೇಶ್ವರ ಮಹಾರಾಜ ಕೀ ಜೈ ಎಂದು ಘೋಷಣೆ ಕೂಗಿದರು."೬೭

---

೬೭ " "ಇಂಚಗೇರಿ ಸಂಪ್ರದಾಯ-ಒಂದು ಅಧ್ಯಯನ. ಸಂ-ಬಿ.ಬಿ. ಶಿರಡೋಣಿ. ಪುಟಸಂಖ್ಯೆ-೧೬೦ ರಿಂದ ೧೬೪. ಪ್ರ-ಡಾ. ಆರ್.ಸಿ.ಹಿರೇಮಠ. ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ. (೨೦೦೩)

# ಅಧ್ಯಾಯ-೬

## ಪ್ರವಚನದ ಮೌಲ್ಯ ವಿವೇಚನೆ

ಪ್ರವಚನವೆಂಬುದು ಅಂತರಂಗವನ್ನು ತಲುಪುವ, ಹೃದಯವನ್ನು ಕಲಕುವ ವಿಶಿಷ್ಟ ಅಭಿವ್ಯಕ್ತಿ. ಮಹಾತ್ಮರ, ಶರಣರ, ದಾರ್ಶನಿಕರ, ಶಿವಯೋಗಿಗಳ ಮಾತಿಗೂ ಮೀರಿದ ಭಾವನಾತ್ಮಕವಾದ ಸಂವಹನ ಮಾಧ್ಯಮದ ಮೂಲಕ ಸರ್ವರಿಗೂ ತಿಳಿಸುವಂತೆ ಮಾಡುವ ಹ್ರದ್ಯವಾದ ಸಂವಾದ-ಸಂವಹನ. ಪ್ರವಚನವೆಂದು ಇದನ್ನು ಲೌಕಿಕವಾಗಿ ಕರೆಯಲಾಗುತ್ತಿದೆ. ಒಂದು ಮಾತು ಲಕ್ಷಸಂಖ್ಯೆಯ ಜನರ ಮನಸ್ಸನ್ನು ತಲುಪಿ ಅಧ್ಯಾತ್ಮದಂಥ ಅತ್ಯಂತಿಕ ಮೌಲ್ಯವನ್ನು ಬಿತ್ತುವ ಬಹುದೊಡ್ಡ ಸಂವಹನ ಸಾಧನೆ. ಒಟ್ಟಾರೆ ಆಧ್ಯಾತ್ಮಿಕ ಸಾಧಕರ ಅನುಭವವನ್ನು ತನ್ನಲ್ಲಿ ಅಳವಡಿಸಿಕೊಂಡು ಅದನ್ನು ಅಭಿವ್ಯಕ್ತಿ ಎಂಬುದು ಮಾತುಗಾರಿಕೆಯೇ ಆಗಲೀ, ಲಿಖಿತ-ಅಲಿಖಿತ ಆಂಗಿಕ ಸಂಕೇತಗಳೇ ಆಗಲಿ ಕಾಲಾಂತರಕ್ಕೆ ವಿಚಾರಗಳನ್ನು ರವಾನೆ ಮಾಡುವ ಜ್ಞಾನ ಸಾಧನಗಳಾಗಿವೆ. ಹೀಗೆ ಮಾತುಗಳು ಪ್ರವಚನವಾಗಿ ಪರಿವರ್ತನೆಯಾಗ ಬೇಕಾದರೆ ಅದಕ್ಕೂ ಸಾಧನವಿದೆ. ಮಾತುಗಳಲ್ಲಿ ಲೌಕಿಕ ವಿಚಾರಗಳಿರಬಹುದು, ಆಧ್ಯಾತ್ಮಿಕ ವಿಚಾರಗಳಿರಬಹುದು ತಾಂತ್ರಿಕ-ವೈಜ್ಞಾನಿಕ ವಿಚಾರಗಳೂ ಇರಬಹುದು. ಆದರೆ ಅವುಗಳ ಹಿಂದೆ ಒಂದು ಅರ್ಥವಿರುವದಂತೂ ಸತ್ಯ. ಲೌಕಿಕದ ಮಾತುಗಳನ್ನಾಗಲೀ ವಿಚಾರಗಳನ್ನಾಗಲೀ ಆಧಾರವಾಗಿಟ್ಟುಕೊಂಡು ಅದನ್ನು ಪಾರಮಾರ್ಥಿಕವಾದ ನೆಲೆಯಲ್ಲಿ ಮೌಖಿಕವಾಗಿ ಪ್ರಕಟಪಡಿಸುವದು ಪ್ರವಚನದ ಉದ್ದೇಶವಾಗಿದೆ. ಇಂಥ ಉದ್ದೇಶ ಈಡೇರಬೇಕಾದರೆ ಅದಕ್ಕೆ ಅಭ್ಯಾಸ-ಅನುಭವ ಎರಡೂ ಅನಿವಾರ್ಯ ಹಾಗೂ ಅವಶ್ಯ. ಅವುಗಳಲ್ಲಿ ಒಂದಿಲ್ಲದಿದ್ದರೆ ಜನರ ಮನಸ್ಸಿಗೆ ಪರಿಣಾಮ ಬೀರುವದಿಲ್ಲ. ಆದ್ದರಿಂದಲೇ ಹಲವಾರು ಜನರ ಪ್ರವಚನಗಳು ಜನರಿಗೆ ಹಿಡಿಸುವದಿಲ್ಲ; ಕೆಲವರ ಪ್ರವಚನ ಜನರಿಗೆ ಮೆಚ್ಚಿಗೆಯಾಗುತ್ತವೆ. ಹೀಗೆ ಇಂಥ ಪ್ರವಚನಕಾರರ ಮಾತುಗಳು ಅಥವಾ ಪ್ರವಚನಗಳು ಲೌಕಿಕರಿಗೆ ಮಾರ್ಗದರ್ಶನವಾಗುತ್ತವೆ. ಅಲ್ಲದೇ ಆಧ್ಯಾತ್ಮದತ್ತ ಮನಸ್ಸನ್ನು ತೊಡಗಿಸಲು ಅನುಕೂಲವಾಗುತ್ತವೆ.

ಪ್ರವಚನಗಳಲ್ಲಿ ಜೀವನಮೌಲ್ಯ ಮತ್ತು ಜೀವಮೌಲ್ಯಗಳನ್ನು ಅಳವಡಿಸಿಕೊಂಡಿರುವುದರ ಜೊತೆಜೊತೆಗೆ ಮಾನವೀಯ ಮೌಲ್ಯಗಳಿಲ್ಲದಿದ್ದರೆ ಪ್ರವಚನಕ್ಕೆ ಮೆರಗು ಬರಲಾರದು; ಜೀವಮೌಲ್ಯ ಆತ್ಮೋದ್ಧಾರದಾಗಿದ್ದು, ಜೀವನಮೌಲ್ಯ ವ್ಯಕ್ತಿಯ ಉದ್ಧಾರದ್ದಾಗಿದೆ. ಮಾನವೀಯ ಮೌಲ್ಯಗಳನ್ನು ರೂಢಿಸಿಗೊಳ್ಳುವವರು ಸಮಾಜದ ಉದ್ಧಾರಕ್ಕೂ ಬಳಸುತ್ತಾರೆ. ನಿರ್ಗುಣ, ನಿರಾಕಾರ ನಿರುಪಮ, ನಿರವಯವ ಆಗಿರುವ ಪರಮಾತ್ಮನ ಸ್ವರೂಪ ವಿವರಿಸಬೇಕಾದರೆ

ಸ್ವತಃ ಅವನು ಅನುಭಾವಿಯಾಗಿರಬೇಕು. ಅದನ್ನು ಪ್ರವಚನದ ಮೂಲಕ ವಿವರಿಸುವಾಗ ಅದರಲ್ಲಿ ತಾದಾತ್ಮ್ಯ ಹೊಂದಿರಬೇಕು. ಅಂದಾಗ ಅದಕ್ಕೊಂದು ನೆಲೆ ಹಾಗೂ ಬೆಲೆ ಬರುವದು ಕೇವಲ ವಚನಗಳನ್ನು ವಿವರಿಸುವದು ಪ್ರವಚನವಾಗಲಾರದು. ವಚನಗಳನ್ನು ಪಚನ ಮಾಡಿಕೊಳ್ಳುವದರೊಂದಿಗೆ, ಜಗತ್ತಿನ ಮಹಾಪುರುಷರ, ಧಾರ್ಮಿಕ ಮುಖಂಡರ, ತತ್ವವೇತ್ತರ, ಅನುಭಾವಿಗಳ ಪದ್ಯಗಳನ್ನು, ಮಾತುಗಳನ್ನು ಅಳವಡಿಸಿಕೊಂಡು ವಿವರಿಸಿದರೆ ಅದು ಸುಂದರವಾದ ಪ್ರವಚನವಾಗುವದು. ಒಂದನ್ನು ಅರಿತರೆ ಎಲ್ಲವನ್ನು ಅರಿತಂತಾಗಿರಬೇಕು ಇದು ಪ್ರವಚನದ ಗುಟ್ಟು, ಇಲ್ಲಿ ಧರ್ಮ, ಜಾತಿ, ಕುಲ, ವರ್ಣ, ವರ್ಗರಹಿತವಾದ ಮಾತುಗಳು ತುಂಬಿರಬೇಕು. ಇದುವೇ ಸತ್ಯ ಉಳಿದುದೆಲ್ಲ ಮಿಥ್ಯ ಎಂಬ ಭಾವನೆ ಬರಬಾರದು; ಒಂದು ವೇಳೆ ಬಂದುದಾದರೆ ಅಲ್ಲಿ ಪ್ರವಚನಕ್ಕೆ ಚ್ಯುತಿ ಬರುತ್ತದೆ. ಪ್ರವಚನದ ಗಾಂಭೀರ್ಯತೆಯೂ ಕೇಳುಗರಿಗೆ ಕಠಿಣವೆನಿಸುವದು. ಅಂತಹ ಸಂದರ್ಭಗಳಲ್ಲಿ ತಿಳಿಹಾಸ್ಯವನ್ನು ಪ್ರವಚನದಲ್ಲಿ ಬೆರೆಸುವದರಿಂದ ಗಹನ ವಿಚಾರವೂ ಸಹ ನೆನಪಿನಂಗಳದಲ್ಲಿ ಉಳಿದುಕೊಳ್ಳುವದು. ಹಾಸ್ಯವಿದೆ ಎಂದ ಮಾತ್ರಕ್ಕೆ ಪ್ರವಚನವೆಲ್ಲವೂ ಹಾಸ್ಯವಾಗಿರಬೇಕೆಂದು ಭಾವಿಸಬಾರದು, ಏಕೆಂದರೆ ಪ್ರವಚನವು ಹುಡುಗಾಟಿಕೆಯ ಮಾತಾದೀತು. ತಿಳಿಹಾಸ್ಯವು ಪ್ರವಚನಕ್ಕೆ ಪೂರಕವಾಗಿರಬೇಕೆ ವಿನಃ ಮಾರಕವಾಗಿರಬಾರದು. ಅದು ಪ್ರವಚನದ ಮೌಲ್ಯವನ್ನು ಲೋಪಗೊಳಿಸಬಲ್ಲದು. ಗಂಭೀರವಾದ ಮತ್ತು ಗೂಢಾರ್ಥವುಳ್ಳ ತತ್ತ್ವವೊಂದರ ವಿವೇಚನೆಯ ಸಂದರ್ಭದಲ್ಲಿ ಜನಸಾಮಾನ್ಯರಿಗೆ ಅರ್ಥೈಸುವ ಉದ್ದೇಶದಲ್ಲಿ ಲಘುಹಾಸ್ಯದ ಅಗತ್ಯವಿದೆಯೇ ಹೊರತು ಅದೇ ಪ್ರಧಾನವಾಗಬಾರದು.

ಪ್ರಕೃಷ್ಟ ವಚನ, ಶ್ರೇಷ್ಠವಾದ, ಹಿತಮಿತವಾದ, ಉತ್ಕೃಷ್ಟವಾದ ಮಾತು. ವಚನವೆಲ್ಲವೂ ಪ್ರವಚನ. ಮಾತಿಗೆ ವಿಶೇಷ ಗಾಂಭೀರ್ಯ ತಂದುಕೊಡುವುದೇ ಪ್ರವಚನ. ಪ್ರವಚನ ಮೂಲತಃ ಸಂಸ್ಕೃತ ಪದ ಪ್ರಕೃಷ್ಟ ವಚನ. ಉತ್ಕೃಷ್ಟವಾದ ಮಾತು. ಉತ್ತಮವಾದ, ಶ್ರೇಷ್ಠವಾದ, ಆಡುವ ವಿಷಯವನ್ನು ನಾನಾ ವಿವರಣೆಗಳಿಂದ ತಿಳಿಸುವವರ ರೀತಿ, ನುಡಿ, ಉಪನ್ಯಾಸ ಪ್ರವಚನವಾಗಿದೆ. ಸಾಮಾನ್ಯವಾಗಿ ಪ್ರವಚನ ಶಬ್ದದ ಬಳಕೆ 'ಧರ್ಮ'ದೊಂದಿಗೆ ತಳುಕು ಹಾಕಿಕೊಂಡಿದ್ದು ಮನುಷ್ಯ ಮಾಡಿದ ಚೋದ್ಯ. ಅದಕ್ಕು ಮುನ್ನ ಧರ್ಮ ಎಂಬ ಅದ್ಭುತ ಶಬ್ದವನ್ನು ಮತದ ಚೌಕಟ್ಟಿಗೆ ಸಿಕ್ಕಿಸಿದ್ದೂ ಮನುಷ್ಯನ ವ್ಯಕ್ತಿತ್ವ ಕಡಿಮೆಯೆ. ಏಕೆಂದರೆ ಈ ಭೂಮಿಯಲ್ಲಿ ಪ್ರತಿಯೊಂದು ಕ್ರಿಯೆ ಕರ್ಮ ಹಾಗೂ ವಿದ್ಯೆಗೂ ಜೀವನಕ್ಕೂ ಅದರದ್ದೆ ಆದ ಸಿದ್ಧಾಂತವಿದೆ. ಆದರೆ ಅಷ್ಟು ಸರಳವಾಗಿ ಯೋಚನೆ ಮಾಡದೇ ಹೋದರೆ ಮಾನವ. ಧರ್ಮವನ್ನು ಮತದ ಚೌಕಟ್ಟಿಗೆ ಸಿಕ್ಕಿಸಿ ಸಮಾಜವನ್ನು ಹತೋಟಿಯಲ್ಲಿಡಲು ಆರಂಭಿಸಿದ. ಬಹುಷಃ ಮೊದಲು ಅದರ ಹಿಂದೆ

ಸದುದ್ದೇಶವಿತ್ತೇನೋ? ಮರ್ಕಟದಂತೆ ಆಡುವ ಮನುಷ್ಯನನ್ನು ಅಂಕೆಯಲ್ಲಿಡಲು ಧರ್ಮದ ಹೆಸರನ್ನು ಬಳಸಲಾಯಿತು. ಉದ್ದೇಶವಿದ್ದದ್ದು ಕೇವಲ ಜ್ಞಾನ ಪ್ರಸಾರ ಸರ್ಕಸ್‌ನಲ್ಲಿ ದೈತ್ಯ ಆನೆಯನ್ನು ಹತೋಟಿಯಲ್ಲಿಡಲು ಲಾಠಿಯೋ, ಅಂಕುಶವೋ ಉಪಯೋಗ ಮಾಡಿದಂತೆ! ಆನೆ ಕೆರಳಿದರೆ ಲಾಠಿಯೂ ನಿಲ್ಲದು ಅಂಕುಶವೂ ನಿರರ್ಥಕ. ಆದರೂ ಆ ಮೂಕಪ್ರಾಣಿ ಲಾಠಿಗೆ ಶರಣಾಗುತ್ತದೆ. ಹಾಗೇ ಧರ್ಮ ಎನ್ನುವ ಲಾಠಿಯ ಉಪಯೋಗ. ಹೀಗೆ ಜ್ಞಾನ ನೀಡುವ ಉಪನ್ಯಾಸಗಳು ಧಾರ್ಮಿಕ ಉಪನ್ಯಾಸಗಳಾದವು. ಅದೇ ಗುಂಗಿನಲ್ಲಿ ಉಪನ್ಯಾಸಗಳೆಲ್ಲ ಧಾರ್ಮಿಕ ಪ್ರವಚನಗಳಾದವು.

ಉಪದೇಶ, ಬೋಧನೆಯ ಹಳಹದಿಯಲ್ಲಿ ಆರಂಭವಾದ ಪ್ರಕಾರಗಳು ಪ್ರವಚನಕ್ಕೆ ಆಯ್ಕೆ ಮಾಡುವ ಗ್ರಂಥ ಕಾವ್ಯದ ಮೇಲೆ ಅದರ ಸಾಹಿತ್ಯಿಕ ಮೌಲ್ಯವನ್ನು ಗುರುತಿಸಬಹುದು. ಪ್ರವಚನದಲ್ಲಿ ಸಾಹಿತ್ಯವೇ ಪ್ರಮುಖ ಅಂಗ. ಪ್ರವಚನಕಾರನ ಸಾಮರ್ಥ್ಯ ಮೇಲೆ ಅವು ಕಳೆಗಟ್ಟುತ್ತವೆ. ಆಯಾ ಶ್ರೋತೃ ವರ್ಗವನ್ನು ಗಮನಿಸಿ ಪ್ರವಚನ ನೀಡಿದರೆ ಯಶಸ್ವೀ ಪ್ರವಚನಕಾರ ಆಗಬಹುದು. ಅಲಂಕಾರವಿದೆ, ಛಂದವಿದೆ, ಶಬ್ದ ಸೌಂದರ್ಯವಿದೆ, ಭಾಷಾ ಪ್ರಬುದ್ಧತೆ ಇದೆ, ಉಪನಿಷತ್ತುಗಳದ್ದೆ ಒಂದು ಪರಿ, ವೇದ–ಆಗಮಗಳದ್ದು ಒಂದು ಪರಿ ಭಗವದ್ಗೀತೆ ಬೈಬಲ್, ಕುರಾನ್, ಪುರಾಣಗಳು, ಧರ್ಮಪದಗಳು, ಗ್ರಂಥಸಾಹೇಬ ಹೀಗೆ ಎಲ್ಲವೂ ಬೆಳಕಿನ ಕಿಂಡಿ ತೆರೆಯುತ್ತವೆ. ಅವರವರ ಭಾವಕ್ಕೆ ಅವರವರ ಕೀರ್ತಿಗೆ ಅನುಸಾರ.

ಪ್ರವಚನಗಳು ಧರ್ಮ ಬೋಧನೆ ಆಳಿದಾಗ ಅಲ್ಲಿ ಸಾಹಿತ್ಯದ ಮೌಲ್ಯಮಾಪನ ನಿಂತಂತೆ. ವ್ಯಕ್ತಿವರ್ಗ ಮತ್ತು ಪಂಥದ ಆಧಾರದ ಮೇಲೆ ವರ್ಗೀಕರಣ ಗೊಂಡಾಗ ಅಲ್ಲಿಯೂ ಅವರವರ ಮೂಗಿನ ನೇರಕ್ಕೆ ಸರಿ ಎನಲಾಗುತ್ತದೆ. ಇದು ಸರಿ ಅಲ್ಲ.

ಪ್ರವಚನದ ನುಡಿಗಳು ಸರಳವೂ ಧ್ವನಿಪೂರ್ಣವೂ ಆದಷ್ಟು ಉತ್ತಮ ಪರಿಣಾಮವನ್ನುಂಟು ಮಾಡುತ್ತವೆ. ಸಾಹಿತ್ಯ ಮತ್ತು ವಿಚಾರಗಳಿಗೆ ಸಂಬಂಧಿಸಿದಂತೆ ಉತ್ತಮ ಸಾಹಿತ್ಯವು ಸೌಂದರ್ಯವನ್ನು ಕೊಡುವದು. ಇದರೊಂದಿಗೆ ಪ್ರವಚನಕಾರನ ಅಭ್ಯಾಸದ ಹರವು–ಇರವು ಗೊತ್ತಾಗುವದು. ಕಿರಾಣಿ ಅಂಗಡಿಯಲ್ಲಿ ಸಾಕಷ್ಟು ಸಾಮಾನುಗಳಿದ್ದರೆ ಗ್ರಾಹಕರ ಬೇಡಿದ್ದನ್ನು ಕೊಡಲು ಸಾಧ್ಯವಾಗುವದು. ಒಂದು ವೇಳೆ ಕಡಿಮೆ ಸಾಮಾನುಗಳಿದ್ದರೆ ಗ್ರಾಹಕ ಅದೊಂದನ್ನೇ ಅವಲಂಬಿಸಿರುವುದಿಲ್ಲ. ಇದರಂತೆ ಪ್ರವಚನಕಾರರಲ್ಲಿ ಆಧ್ಯಾತ್ಮಿಕದೊಂದಿಗೆ ಸಾಹಿತ್ಯದ ವಿವೇಚನೆ, ಭಾಷಾಜ್ಞಾನ ತಕ್ಕಮಟ್ಟಿಗೆ ಇತರ ಭಾಷೆಗಳ ಪರಿಚಯವಿದ್ದರೆ ಕೇಳುಗರಿಗೆ ಮನದಟ್ಟಾಗುವದು. ಆಧ್ಯಾತ್ಮದ ಅನುಭವವು ಬರಹರೂಪಕ್ಕಿಳಿದಾಗ ಆಧ್ಯಾತ್ಮ ಬರಹವಾಗುತ್ತದೆ

ಎಂಬುದನ್ನು ಪ್ರವಚನಕಾರರು ಅರಿತಿರಬೇಕು. ಕೇವಲ ಶಾಸ್ತ್ರಗಳನ್ನಷ್ಟೇ ವಿವರಿಸಿದರೆ ಅದು ಶುಷ್ಕವೆನಿಸುವದಲ್ಲದೆ ಕೇಳುಗರು ಆಧ್ಯಾತ್ಮದತ್ತ ಮನಸ್ಸು ಮಾಡಲಾರರು.

ಮೇಲಿನ ಅಂಶಗಳನ್ನು ಗಮನಿಸಿದಾಗ ಪ್ರವಚನವು ಮೌಲ್ಯ ವಿವೇಚನೆ ಯಾವರೀತಿ ಇರಬೇಕೆಂಬುದನ್ನು ಪರಿಶೀಲಿಸಬೇಕಾಗುವದು. ಮೌಲ್ಯ ಎಂದರೆ ಬೆಲೆ. ಈ ಶಬ್ದದ ಮೇಲಿಂದಲೇ "ಮೌಲ್ಯಮಾಪನ" ಎಂಬ ಶಬ್ದ ಉತ್ಪತ್ತಿಯಾಯಿತು. ಇಂಗ್ಲೀಷಿನ Evaluation ಇದಕ್ಕೆ ಸರಿಸಮಾನಾದುದು. ಇನ್ನು ವಿವೇಚನೆ ಎಂದರೆ ಯೋಚನೆಯೊಂದಿಗೆ ವಿಷಯವನ್ನು ವಿಶದೀಕರಿಸುವದು ಹಾಗೂ ಸಮನ್ವಯಗೊಳಿಸುವದೆಂದು ಭಾವಿಸಬೇಕು. ವಿಷಯದ ವಿವೇಚನೆಯು ಮೌಲ್ಯಕ್ಕೆ ಚ್ಯುತಿ ಬಾರದಂತೆ ನೋಡಿಕೊಳ್ಳಬೇಕಾಗುವದು. ತನ್ನ ಯೋಚನೆಗಳನ್ನಾಗಲಿ, ಯೋಜನೆಗಳನ್ನಾಗಲಿ ವಿಷಯ ವಿವೇಚನೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಅಳವಡಿಸದೇ ಮೂಲ ಮೌಲ್ಯದೊಂದಿಗೆ ಸಮೀಕರಿಸಬೇಕು.

ಪ್ರವಚನದ ಮೌಲ್ಯ ವಿವೇಚನೆ ಮಾಡುವಾಗ ತುಂಬಾ ಎಚ್ಚರಿಕೆ ಅವಶ್ಯವಿದೆ. ಪ್ರವಚನವು ಅಧ್ಯಾತ್ಮ ವಿಷಯಗಳನ್ನೊಳಗೊಂಡಿದ್ದರೂ ಉದಾಹರಣೆಗಳು ಲೌಕಿಕಕ್ಕೆ ಸಂಬಂಧ ಪಟ್ಟಿರುತ್ತವೆ. ಇಂಥ ಸಂದರ್ಭದಲ್ಲಿ ಲೌಕಿಕ ವಿಚಾರಗಳನ್ನು ಆಧ್ಯಾತ್ಮದೊಂದಿಗೆ ಸಮೀಕರಿಸಿ ವಿವರಿಸುವದು ಅನಿವಾರ್ಯವೆನಿಸುವದು.

"ತಂದೆ ನೀನು, ತಾಯಿ ನೀನು;

ಬಂಧುನೀನು, ಬಳಗ ನೀನು;

ಎನಗೆ ನೀನಲ್ಲದೆ ಮತ್ತಾರೂ ಇಲ್ಲವಯ್ಯಾ!

ಕೂಡಲಸಂಗಮದೇವಾ,

ಹಾಲಲದ್ದು ನೀರಲದ್ದು ನಿಮ್ಮ ಧರ್ಮ."!೬೮

ಮೇಲಿನ ನುಡಿಯ ಸಾಮಾನ್ಯ ಮೌಲ್ಯ ವಿವೇಚನೆ ಮಾಡಿದಾಗ ಕೂಡಲಸಂಗಮ ದೇವನೇ ತಂದೆ, ತಾಯಿ, ಬಂಧು, ಬಳಗ ಎಂದು ಹೇಳಿ ನೀನಲ್ಲದೆ ಮತ್ತಾರೂ ನನಗೆ ಇಲ್ಲವೆಂದು ಹೇಳಿರುವದು ಕಂಡುಬರುತ್ತದೆ.

---

೬೮ " " ವಚನ ಸಾಹಿತ್ಯ ಸಂಗ್ರಹ ಸಂ-ಸಂ.ಶಿ. ಭೂಸನೂರಮಠ. ಪುಟಸಂಖ್ಯೆ-೨೮೯. ವಚನಸಂಖ್ಯೆ-೪೯. ಪ್ರ-ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು. (೨೦೦೬)

ಕೂಡಲ ಸಂಗಮದೇವನ ಮೇಲಿನ ಭಕ್ತಿಯ ಪರಾಕಾಷ್ಠತೆಯನ್ನು ಇಲ್ಲಿ ಗಮನಿಸಬೇಕು. ಅನನ್ಯಭಾವದ ರೂಪವೇ ಬಸವಣ್ಣನವರಿಗೆ ತಂದೆ, ತಾಯಿ, ಬಂಧು, ಬಳಗವಾಗಿದೆ. ನೀನೊಬ್ಬನೇ ನನಗೆ ಸರ್ವಸ್ವ ನೀನಿಲ್ಲದಿದ್ದರೆ ನನಗೆ ಅಸ್ತಿತ್ವವೇ ಇಲ್ಲ ಎಂಬ ಅಭಿಪ್ರಾಯ ಬಸವಣ್ಣನವರದ್ದು. "ಮತ್ತಾರು ಇಲ್ಲವಯ್ಯ" ಎನ್ನುವಲ್ಲಿ ಸಂಸಾರದ ತಂದೆ, ತಾಯಿ, ಬಂಧು ಬಳಗದವರು ನನಗೆ ಸಂಸಾರದ ಬಂಧನಕ್ಕೆ ಒಳಪಡಿಸಿದವರೇ ವಿನಃ ಸಂಸಾರದ ಬಂಧನದಿಂದ ಬಿಡುಗಡೆ ಮಾಡುವವರಲ್ಲ. ಆ ಬಂಧನವನ್ನು ಕಳಚಿಕೊಂಡು ಬಂದಿರುವ ನನಗೆ ನೀನೆ ತಂದೆ, ತಾಯಿ, ಬಂಧು, ಬಳಗ ಎಂದು ಒಪ್ಪಿಕೊಂಡಿರುವೆ. ಆದ್ದರಿಂದ ನನ್ನನ್ನು ಅಪ್ಪಿಕೊಂಡು ರಕ್ಷಣೆ ಮಾಡು ಎಂಬುದು ಇದರ ವಿವೇಚನೆ. ಈ ವಿಚಾರವನ್ನೇ ಇನ್ನಷ್ಟು ಹಿಗ್ಗಿಸಿದಷ್ಟು ಮೌಲ್ಯ ವಿವೇಚನೆಯ ವಿಸ್ತಾರವೂ ಆಗುತ್ತದೆ. 'ಕೂಡಲ ಸಂಗಮ' ಎಂಬುದು ಸಾಂಕೇತಿಕವಾದ ವಾಕ್ಯ ಅಥವಾ ಶಬ್ದ. ಅದನ್ನು ಆಧಾರವಾಗಿಟ್ಟುಕೊಂಡು ಬಸವಣ್ಣನವರು ನಿರಾಕಾರನಾದ, ನಿರುಪಮನಾದ, ನಿರವಯವನಾದ, ಪರಿಪೂರ್ಣನಾದ ದೇವನನ್ನೇ ತಂದೆ, ತಾಯಿ, ಬಂಧು, ಬಳಗ ಎಂದು ಕರೆದಿದ್ದಾರೆ. ಕಾಣುವ ವಸ್ತುಗಳ ಮೇಲೆ, ವ್ಯಕ್ತಿಗಳ ಮೇಲೆ ವಿಶ್ವಾಸವಿಡುವದು ಸ್ವಾಭಾವಿಕ. ಆದರೆ ಬಸವಣ್ಣನವರು ಕಾಣದ ದೇವನನ್ನೇ ಎಲ್ಲವೂ ಎಂದು ಭಾವಿಸಿರುವರು ತುಂಬಾ ಮಾರ್ಮಿಕವಾದುದಾಗಿದೆ. ನನಗೆ ಮತ್ತಾರೂ ಇಲ್ಲವೆಂಬುದು ಅಣ್ಣನವರ ಸ್ಪಷ್ಟ ನಿರ್ಣಯವೇ ಅಂತಿಮವಾಗಿದೆ. ಇದರಂತೆ ಶಿವಶರಣರ ವಚನಗಳನ್ನಾಗಲಿ, ಇತರ ಯಾವುದೇ ಪಾರಮಾರ್ಥಿಕ ವಿಷಯಗಳನ್ನು ನೋಡಿದಾಗ ಮೌಲ್ಯ ಮಾಪನದ ಸಂಗತಿ ನಮಗೆ ಗೋಚರವಾಗುವದು. ಉದಾಹರಣೆಗಾಗಿ ಅಕ್ಕಮಹಾದೇವಿಯ ವಚನದ ಒಂದೇ ಒಂದು ಸಾಲನ್ನು ಮೌಲ್ಯ ವಿವೇಚನೆ ಮಾಡಬಹುದು.

"ಲೋಕದಲ್ಲಿ ಹುಟ್ಟಿದ ಬಳಿಕ, ಸ್ತುತಿನಿಂದೆಗಳು ಬಂದಡೆ

ಮನದಲ್ಲಿ ಕೋಪವ ತಾಳದೆ, ಸಮಾಧಾನಿಯಾಗಿರಬೇಕು".[೬೯]

ಇಲ್ಲಿ ಲೋಕದಲ್ಲಿ ಹುಟ್ಟಿದ್ದು ಸ್ವಾಭಾವಿಕವಾದುದು ಎಂಬುದು ಮೊದಲನೆಯ ಶಬ್ದ. 'ಸ್ತುತಿನಿಂದೆಗಳು ಬಂದರೆ' ಎಂಬುದು ಎರಡನೆಯ ಶಬ್ದ. 'ಕೋಪವ ತಾಳದೆ' ಎಂಬುದು ಮೂರನೆಯ ಶಬ್ದ', 'ಸಮಾಧಾನಿಯಾಗಿರಬೇಕು' ಎಂಬುದು ನಾಲ್ಕನೆಯ ಶಬ್ದ. ಈ ನಾಲ್ಕೂ ಶಬ್ದಗಳು ಮೌಲ್ಯಯುತವಾದವುಗಳಾಗಿವೆ.

---

೬೯ " " ವಚನ ಸಾಹಿತ್ಯಸಂಗ್ರಹ ಸಂ-ಸಂ.ಶಿ. ಭೂಸನೂರಮಠ. ಪುಟಸಂಖ್ಯೆ-೩೯೪. ವಚನಸಂಖ್ಯೆ-೧೦೨. ಪ್ರ-ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು. (೨೦೦೬)

ಈ ಮೌಲ್ಯಾಧಾರಿತ ಶಬ್ದಗಳಿಗೆ ವಿವೇಚನೆ ಮಾಡಿದಾಗ ವಿಶಿಷ್ಟ ವಿಷಯ-ವಿಚಾರಗಳು ಗೋಚರಿಸುತ್ತವೆ. ಹುಟ್ಟು ಸ್ವಾಭಾವಿಕವಾದರೂ ಅದನ್ನು ಸಾರ್ಥಕ ಮಾಡಿಕೊಳ್ಳುವಾಗ ಬರುವ ತೊಂದರೆಗಳನ್ನು ಅಕ್ಕಮಹಾದೇವಿ ಪೂರ್ವದಲ್ಲಿ ವಿವರಿಸಿದ್ದಾಳೆ. ಅವೆಲ್ಲವೂ ಕೇವಲ ಉದಾಹರಣೆಗಳಷ್ಟೆ ! ಆಧ್ಯಾತ್ಮದ ಶಿಖರವನ್ನೇರಲು ಸ್ವರೂಪ ಅರಿಯುವಾಗ ಲೋಕದ ಜನರು ಆಡುವ ನುಡಿಗಳನ್ನು, ನಡೆಯುವ ರೀತಿಯ ವಿಚಿತ್ರವಾಗಿರುತ್ತದೆ. ವಂದನೆ-ನಿಂದನೆ ಪ್ರತಿಯೊಬ್ಬರಿಗೂ ಬರುತ್ತಿರುತ್ತವೆ. ವಂದನೆ ಬಂದಾಗ ಅಭಿಮಾನ ಪಡದೆ, ನಿಂದನೆ ಬಂದಾಗ ಕುಗ್ಗದೆ, ಇರುವ ಸ್ಥಿತಿಯೇ ಸ್ಥಿತಪ್ರಜ್ಞೆ. ಈ ಅವಸ್ಥೆ ಬರುವದು ಸುಲಭದ ಮಾತಲ್ಲ ಅದಕ್ಕೆ ಸಾಧನೆ ಬೇಕೇಬೇಕು. ಈ ಸ್ಥಿತಿಯನ್ನು ಅಕ್ಕಮಹಾದೇವಿ ಪಡೆದಿದ್ದರಿಂದಲೇ ಕೋಪ ಬರುವದಿಲ್ಲವೆನ್ನುತ್ತಾಳೆ. ಪ್ರತಿಯೊಂದು ಸಮಸ್ಯೆಗೆ ಮೂಲಕಾರಣ ಕೋಪ. ಕೋಪ ನಾಶವಾದರೆ ಸಾಕು ಸಮಾಧಾನವು ತನ್ನಿಂದ ತಾನೇ ಪ್ರಕಟವಾಗುವದು. "ಸರ್ವದುಃಖದ ನಿವೃತ್ತಿಯೆಂದರೆ ಕೋಪದ ನಿವೃತ್ತಿಯೇ ಆಗಿದೆ. ಲೋಕದ ಜನರ ನಿಂದನೆ, ವಂದನೆ, ಅಭಿಮಾನ, ಆರೈಕೆ-ಹಾರೈಕೆ ಪಾರಮಾರ್ಥದ ಸುಖಕ್ಕೆ ಪೂರಕವಾದುವುಗಳಲ್ಲ."

ಜನಕ ಮಹಾರಾಜರಿಗೆ ಅವರ ಗುರುಗಳಾದ ಅಷ್ಟಾವಕ್ರಮುನಿಗಳು ಬೋಧಿಸಿದ ಗ್ರಂಥ "ಅಷ್ಟಾವಕ್ರಮುನಿ ಗೀತ" ಅದರಲ್ಲಿ ಒಂದು ಸಾಲು ಈ ರೀತಿಯಾಗಿದೆ. "ಅವಿಚಾರಕೃತೋ ಬಂಧಃ ವಿಚಾರಕೃತೋ ನಿವರ್ತತೇಃ" ಇದರ ಮೌಲ್ಯವಿವೇಚನೆಗೆ ತೊಡಗಿದಾಗ ಸಂಕ್ಷಿಪ್ತ ಅರ್ಥ ಅವಿಚಾರದಿಂದ ಬಂಧವಾಗಿದೆ, ವಿಚಾರಿಸಿದರೆ ಅದರ ಅಂದರೆ ಬಂಧನದ ಪರಿಹಾರವಾಗುವದೆಂದು ಹೇಳಬಹುದು. ಆದರೆ ಇಷ್ಟಕ್ಕೆ ಮೌಲ್ಯವಿವೇಚನೆ ನಿಲ್ಲುವದಿಲ್ಲ. ಒಂದು ಮಗು ಜನ್ಮವೆತ್ತಿದಾಗ ಅದಕ್ಕೆ 'ನಾಮ' 'ಸಂಬಂಧ' ಯಾವುದೂ ಇರುವದಿಲ್ಲ. ಅದಕ್ಕೆ 'ತಾಯಿ ನಾನು ಅವ್ವ, ಇವನು ನಿಮ್ಮ ಅಪ್ಪ, ಇವರು ನಿನ್ನ ಅಣ್ಣ-ತಮ್ಮ ಅಕ್ಕ' ಮುಂತಾದ ಬಾಂಧವ್ಯದ ಹೆಸರನ್ನು ತಿಳಿಸುವಳು. ಅದರಂತೆ ಅದಕ್ಕೆ ಒಂದು ನಾಮವನ್ನು ಕೊಟ್ಟು ನೀನು ಇಂಥ ತಂದೆ-ತಾಯಿ, ಮನೆಯ ಹೆಸರನ್ನು ಗಟ್ಟಿಯಾಗಿ ಮುದ್ರೆಯೊತ್ತುತಾರೆ. ಆ ಮಗು ದೊಡ್ಡದಾಗುತ್ತ ಬಂದಾಗ ಮನೆಯ ಜನರು ಕರೆಯುತ್ತಿದ್ದ ಹೆಸರಿನಿಂದಲೇ ಕೊನೆಯವರೆಗೂ ಸಾಗುತ್ತದೆ. ನಾನು ಇಂಥ ಹೆಸರಿನವ ಹೀಗೆ ನಾನಾ ಉಪಾಧಿಗಳನ್ನು ಅದು ಅಂಟಿಸಿಕೊಂಡು ಜೀವನ ಸಾಗುತ್ತದೆ. ಅದರೊಂದಿಗೆ ಅವುಗಳ ಬಗ್ಗೆ ಅಭಿಮಾನವೂ ಹುಟ್ಟುತ್ತದೆ. ನಾಮ ರೂಪುಗಳ ಮೇಲೆ ಅಹಂಕಾರ ಪ್ರಾಪ್ತಿಯಾಗುತ್ತದೆ. ಮಿಥ್ಯವಾದ ಇವೆಲ್ಲವುಗಳನ್ನು ಅರಿಯಲು ಸಾಧ್ಯವಾಗದೇ ಸಂಸಾರದ ತೊಳಲಾಟದಲ್ಲಿ ಬಿದ್ದು ಒದ್ದಾಡುತ್ತದೆ. ಈ ರೀತಿ ಇರುವಾಗ ಈ ಸಂಸಾರದ ಕೋಟಲೆಯಿಂದ ಬಿಡುಗಡೆ ಹೇಗಾಗುವದೆಂದು ತಿಳಿದು ಗುರುಗಳ ಕಡೆಗೆ ಒಂದು ಪರಿಹಾರ

ಕೇಳುವನು. ಆವಾಗ ಗುರುಗಳು ನೀನು ನಾಮ ರೂಪಗಳಿಂದ ಅತೀತ ಇರುವ ನಿರ್ಮಲ ಶಿವಸ್ವರೂಪಿಯೇ ಆಗಿರುವಿ ಎಂದು ಬೋಧಿಸಿ ಅದರ ಉಪಾಯ ಹೇಳುವರು. ಸಂಸಾರದಲ್ಲಿ ಕೇಳಿ-ಕೇಳಿ ನಿನಗೆ ಬಂಧನವಾಗಿದೆ, ಅದನ್ನು ನಾನು ಹೇಳುವ ಪ್ರವಚನಗಳಿಂದ ಕೇಳಿ-ಕೇಳಿ ಬಿಡುಗಡೆ ಹೊಂದುವಂತವನಾಗು ಎಂದು ಹೇಳಿ ಅವನನ್ನು ಸ್ವರೂಪಿಯನ್ನಾಗಿ ಮಾಡುವರು. ನೀನು ಸಂಸಾರದಲ್ಲಿದ್ದರೂ ಆಧ್ಯಾತ್ಮದ ವಿಚಾರ ಅರಿತಿದ್ದರೆ ನಿನಗೆ ಸಂಸಾರದ ಬಾಧೆ ಅಂಟಿಕೊಳ್ಳುತ್ತಿರಿಲಿಲ್ಲ. ನೀನು ಅವಿಚಾರದಿಂದ ಬಂಧನಕ್ಕೆ ಒಳಗಾಗಿರುವಿ ಇದನ್ನು ತೊಡೆದುಹಾಕಲು ವಿಚಾರವೊಂದೇ ಸಾಕು. ಆರುನಾನೆಂದು ಅರಿತರೆ ಈ ಎಲ್ಲ ಬಂಧನಗಳಿಂದ ಬಿಡುಗಡೆ ಹೊಂದುವಿ ಎಂದು ಬೋಧಿಸುತ್ತಾರೆ. ಇಲ್ಲಿ ಅಷ್ಟಾವಕ್ರರು ಕೇವಲ ಎರಡೇ ಶಬ್ದಗಳು ಇಷ್ಟೊಂದು ಮೌಲ್ಯವಿವೇಚನೆಗೆ ದಾರಿಯಾಗಿವೆ. "ಅವಿಚಾರ"-"ವಿಚಾರ" ಇವೆರಡೂ ಮನುಷ್ಯಜನ್ಮದ ಸಾರ್ಥಕತೆಯನ್ನು ಸಂಪೂರ್ಣವಾಗಿ ವಿವರಿಸಲು ಶಕ್ತವಾಗಿವೆ. ಇವೆರಡು ಶಬ್ದಗಳ ಆಧಾರದಿಂದ ಪ್ರವಚನ ಸಾಗಿದರೆ ಜನರೇ ಸ್ವತಃ ಮನಸ್ಸಿನಲ್ಲಿ ಮೌಲ್ಯವಿವೇಚನೆಗೆ ಸಿದ್ಧರಾಗುತ್ತಾರೆ ಹಾಗೂ ಆತ್ಮಾನುಸಂಧಾನ ಪ್ರಾಪ್ತವಾಗುವದು.

ಕರ್ಮಯೋಗಿ ಸಿದ್ಧರಾಮನ ಈ ವಚನ ನೋಡಬಹುದು.

"ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ,
ಮತ್ತಾರ ಹಿತಕ್ಕಲ್ಲ ನೋಡಯ್ಯ.
ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ,
ಮತ್ತಾರ ಹಿತಕ್ಕಲ್ಲ ನೋಡಯ್ಯ.
ತನ್ನ ಬಿಟ್ಟನ್ಯಹಿತವ ನೋಡಿದಡೆ, ಕೂಡಿಕೊಂಬ ನಮ್ಮ
ಕಪಿಲಸಿದ್ಧ ಮಲ್ಲಯ್ಯನವರ."೭೦

ಪ್ರವಚನದ ಕಾಲಕ್ಕೆ ಈ ಪದ್ಯದ ಉದಾಹರಣೆ ತೆಗೆದುಕೊಂಡರೆ ತನ್ನ ಚಿಂತನೆಯೊಂದಿಗೆ ಸಾಮಾಜದ ಚಿಂತನೆಯ ಲೋಕವನ್ನೇ ಕಾಣಬಹುದು. ಈ ವಚನ ನೋಡಲು ಬಲು ಹಗುರವಾಗಿ ಕಾಣುವದು, ಆದರೆ ಹರವಿದಾಗ ವಿಶ್ವದಳತಕ್ಕೆ ಸಮಾನವಾಗುವದು. ಇಲ್ಲಿ ಯಾವದೇ ಕೆಲಸವನ್ನು ಮಾಡುವದು ಸಹಜವಾದರೂ ಅದು ತನ್ನ ಸುಖಕ್ಕಾಗಿ

---

೭೦ " " ಸಿದ್ಧರಾಮೇಶ್ವರ ವಚನಸಂಪುಟ. ಸಂ-ಎಸ್. ವಿದ್ಯಾಶಂಕರ. ಪ್ರ-ಕನ್ನಡ ಪುಸ್ತಕ ಪ್ರಾಧಿಕಾರ ಬೇಂಗಳೂರು. (೨೦೦೧)

ಮಾಡಬಾರದೆಂದೂ, ಅದು ಅನ್ಯರಿಗೂ ಹಿತವಾಗಬೇಕೆಂಬ ಇಚ್ಛೆ ಇಲ್ಲಿ ಪ್ರಕಟವಾಗಿದೆ. ಅದರಂತೆ ನೋಟವೂ ಸಹ ಸ್ವಂತಕ್ಕಾಗಿ ಇರದೇ ಸಮಾಜವನ್ನು ನೋಡುವ ನೋಟವಾಗಿರಬೇಕೆಂಬುದು ಸ್ಪಷ್ಟವಾಗುತ್ತದೆ. ತಾನೂ ಬದುಕಬೇಕು, ಇನ್ನೊಬ್ಬರೂ ಬದುಕಬೇಕು. ಸ್ವಾರ್ಥ ಜೀವನ ಎಂದಿಗೂ ಶಿವನ ಸಮೀಪಕ್ಕೆ ಒಯ್ಯಲಾರದು. ಅದಕ್ಕಾಗಿಯೇ ಈ ನುಡಿಯು ಸಾಮಾಜೀಕರಣವಾಗಿದೆ. ಮನುಷ್ಯನಾದವನು ಮಾಡುವದು, ನೋಡುವದು ಸ್ವಾರ್ಥಕ್ಕಾಗಿ ಎಂದು ತಿಳಿದುಕೊಂದರೆ ಪ್ರಾಣಿಗೂ–ಮನುಷ್ಯನಿಗೂ ಅಭೇದ ಹೇಳಿದಂತಾಗುವದು. ಮನುಷ್ಯ ಸಮಾಜ ಜೀವಿ. ತಾನೂ ಬದುಕಬೇಕು ಇನ್ನೊಬ್ಬರೂ ಬದುಕಬೇಕೆಂಬ ತತ್ವ ಇಲ್ಲಿ ಪ್ರಕಟವಾಗಿದೆ. "ಬದುಕು" ಮೌಲ್ಯವಾದರೆ, ಬದುಕುವ ರೀತಿ–ನೀತಿ ವಿವೇಚನೆಗೆ ಒಳಪಟ್ಟಿವೆ. ಪ್ರವಚನದ ಮೌಲ್ಯ ವಿವೇಚನೆಯು ಆಧ್ಯಾತ್ಮದ ತುಟ್ಟತುದಿನ್ನೇರಲು ನಿಚ್ಚಣಿಕೆಯಾಗಿರಬೇಕು. ಯಾವ ದೃಷ್ಟಿಯಿಂದ ಯಾರೇ ನೋಡಿದರೂ ಅದು ಭೇದ ಕಲ್ಪನೆಗೆ ಒಳಪಟ್ಟಿರಬಾರದು. ಸತ್ಯವನ್ನು ಯಾರೇ ಆಚರಿಸಿದರೂ ಅದು ಸತ್ಯವೇ. ಸಕ್ಕರೆಯನ್ನು ಯಾರೇ ತಿಂದರೂ ಅದು ಸಿಹಿಯಾಗಿಯೇ ಇರುತ್ತದೆ. ಒಂದು ವೇಳೆ ಅದು ಕಹಿ ಇದೆಯೆಂದು ಹೇಳಿದರು ಅವರು ಸಕ್ಕರೆಯನ್ನು ತಿಂದಿಲ್ಲವೆಂದೇ ಭಾವಿಸಬೇಕಾಗುವದು.

"ಸತ್ಯದ ಮನೆಯಲ್ಲಿ ಶಿವನಿರ್ಪನಲ್ಲದೆ
ಅಸತ್ಯದ ಮನೆಯಲ್ಲಿ ಶಿವನಿರ್ಪನೆ ?
ಇಲ್ಲಿಲ್ಲ ನೋಡಿರೋ!
ಇದು ಕಾರಣ, ನಮ್ಮ ಅಖಂಡೇಶ್ವರಲಿಂಗವನೊಲಿಸಬೇಕಾದಡೆ
ಸತ್ಯವನೆ ಸಾಧಿಸಬೇಕು ಕಾಣಿರೋ!"[೭೧]

– ಷಣ್ಮುಖ ಸ್ವಾಮಿಗಳು

ಇಲ್ಲಿ ಸತ್ಯದ ಸಾಧಕನಾಗಬೇಕಾದುದೇ ಮುಖ್ಯವಾಗಿದೆ. ಜಗತ್ತಿನ ತತ್ವಜ್ಞಾನಿಗಳು, ದಾರ್ಶನಿಕರು, ಶರಣರು, ಸಂತರು, ಸತ್ಯದ ಮೌಲ್ಯವನ್ನು ಎತ್ತಿಹಿಡಿದಿರುವದು ನಮಗೆಲ್ಲ ಗೊತ್ತಿದ್ದ ಸಂಗತಿ. 'ಸತ್ಯ'ವನ್ನು ಅದರ ಮೌಲ್ಯವನ್ನು ವಿವೇಚಿಸುತ್ತ ಹೋದರು ನಮ್ಮ ಋಷಿಮುನಿಗಳು ದೇವತ್ವದ ಔನ್ನತ್ಯಕ್ಕೇರಿಸಿದ್ದಾರೆ. "ಸತ್ಯವೇ ದೇವರು" ಎಂದು ನಿರ್ಣಯಿಸಿದ್ದಾರೆ.

---

೭೧ " " ವಚನ ಸಾಹಿತ್ಯಸಂಗ್ರಹ. ಸಂ–ಸಂ.ಶಿ. ಭೂಸನೂರಮಠ. ಪುಟಸಂಖ್ಯೆ–೧೭೩. ವಚನಸಂಖ್ಯೆ–೧. ಪ್ರ–ಕನ್ನಡ ಮತ್ತು ಸಂಸ್ಕೃತಿ ಬೆಂಗಳೂರು.೦೨. (೨೦೦೬)

"ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರನು" ಎಂಬ ವಾಕ್ಯವನ್ನು ಲೋಕಾರೂಢಿಯಲ್ಲೂ ತಂದು ಅದರ ಮೌಲ್ಯವಿವೇಚನೆಯನ್ನು ಸಾರ್ವತ್ರೀಕರಣಗೊಳಿಸಿದ್ದಾರೆ. ಇದರೊಂದಿಗೆ ಹರಿಶ್ಚಂದ್ರನೆಂದು ಸತ್ಯಹರಿಶ್ಚಂದ್ರನೆಂದು ನಿರ್ಧರಿಸಿ ಅವನನ್ನು ದೇವತಾ ಮನುಷ್ಯನನ್ನಾಗಿ ಮಾಡಿರುವದು ಸತ್ಯದ ಮಹತ್ವ ತಿಳಿಸಿದ್ದಾರೆ. ಅದ್ವೈತದ ಪ್ರತಿಪಾದಕರಂತೂ "ಬ್ರಹ್ಮವೊಂದೇ ಸತ್ಯ ಉಳಿದುದೆಲ್ಲ ಮಿಥ್ಯೆಯೆಂದು, ಜೀವವು ಬ್ರಹ್ಮನಕ್ಕಿಂತ ಭಿನ್ನವಾದುದಲ್ಲವೆಂದು ಈ ರೀತಿ ಹೇಳುವದರ ಮೂಲಕ "ಸತ್ಯದ" ಅತ್ಯುನ್ನತ ಪ್ರತಿಪಾದಕರೆನಿಸಿದ್ದಾರೆ. "ಸತ್ಯಂ–ಶಿವಂ–ಸುಂದರಂ" ಎಂದು ಸಾಧಿಸಿ ಯಶಸ್ವಿಗೊಳಿಸಿದವರಿಗೇನೂ ಕೊರತೆಯಿಲ್ಲ. ಸತ್ಯದ ಮೌಲ್ಯವಿವೇಚನೆ ಮಾಡುವಾಗ ಸತ್ಯ ಹರಿಶ್ಚಂದ್ರನ ಉದಾಹರಣೆಯು ಅಂದಿನ ಅಂದರೆ ಪುರಾಣ ಕಾಲದ ವಿಚಾರವಾದರೆ, ಮಹಾತ್ಮಾ ಗಾಂಧೀಜಿಯವರು ಸತ್ಯದ ನೆಲೆಯ ಮೇಲೆ ನಿಂತು ನಮ್ಮ ದೇಶಕ್ಕೆ ಸ್ವಾತಂತ್ರ್ಯಕೊಡಿಸಿದ್ದು ಇಂದಿನ ಮೌಲ್ಯವಿವೇಚನೆಗೆ ಆಹಾರವಾಗಿದೆ.

ನಿಜಗುಣ ಶಿವಯೋಗಿಗಳು ಅಪ್ರತಿಮ ಪಂಡಿತರು, ಉಭಯಭಾಷಾ ಪರಿಣತರು, ದಿವ್ಯಜ್ಞಾನಿಗಳು. ಅವರ ಕೈವಲ್ಯ ಪದ್ಧತಿಯಲ್ಲಿ ಐದು ಸ್ಥಳಗಳನ್ನಾಗಿ ವಿಂಗಡಿಸಿದ್ದಾರೆ. ೧) ಶಿವಕಾರುಣ್ಯ ೨) ಜೀವಸಂಬೋಧನ ೩) ನೀತಿ–ಕ್ರಿಯಾಚರ್ಯ ೪) ಯೋಗ ೫) ಜ್ಞಾನ. ಈ ಐದು ಸ್ಥಳಗಳನ್ನೊಳಗೊಂಡ ಸೂತ್ರಪದ್ಯದ ಮೊದಲನೆಯ ನುಡಿಯನ್ನು ಮೌಲ್ಯವಿವೇಚನೆ ಮಾಡಬಹುದಾಗಿದೆ.

"ದುರಿತಕರ್ಮವನೊಲ್ಲದಿರು ಪುಣ್ಯವನೆ ಮಾಡು

ಹರನಡಿವಿಡಿ ಶಾಂತರೊಡನಾಡು ॥

ಕರುಣವಿರಲಿ ಜೀವರೊಳು ನೀತಿವಿದನಾಗು ।

ಮೊರೆ ಪೂರ್ದಿದರನೆಂದು ಬೆಸಸುವ."೭ ॥

ಮೇಲಿನ ಪದ್ಯ ಶಿವಕಾರುಣ್ಯ ಸ್ಥಳಕ್ಕೆ ಸಂಬಂಧಪಟ್ಟುದಾಗಿದೆ. ಶಿವನ ಕರುಣೆ ಪಡೆಯಲು ಬೇಕಾಗುವ ಮೌಲ್ಯಗಳನ್ನು ನಿಜಗುಣರು ವಿವರಿಸಿದ್ದಾರೆ. ೧) ಒಳ್ಳೆಯ ಕರ್ಮಗಳನ್ನು ಮಾಡು ೨) ಪುಣ್ಯದ ಕಾರ್ಯಗಳನ್ನು ಮಾಡು ೩) ಹರನ ಅಡಿಯನ್ನು ಹಿಡಿ ೪) ಶಾಂತರೊಡನೆ ನಿನ್ನ ಒಡನಾಟವಿರಲಿ ೫) ಎಲ್ಲ ಜೀವದಲ್ಲಿ ದಯೆ ಇರಲಿ ೬) ನೀತಿಯಿಂದ ಬದುಕನ್ನು ಸಾಗಿಸು.

---

೭ " " ಶ್ರೀಮನ್ನಿಜಗುಣ ಶಿವಯೋಗಿ ವಿರಚಿತ. 'ಕೈವಲ್ಯಪದ್ಧತಿ' ಸಂ–ಕುಮಾರ ನಿಜಗುಣ. ಪುಟಸಂಖ್ಯೆ–೧. ಪದ–೧. ಚರಣ–೧. ಪ್ರ–ನಿಜಗುಣಾನುಭವ ಮಂಟಪ, ಚಿಲುಕವಾಡಿ. (೨೦೦೧)

ಈ ಮೌಲ್ಯಗಳ ವಿವೇಚನೆ ಮಾಡಿದಾಗ ಶಿವನ ಕಾರುಣ್ಯವಾಗಲು ತುಂಬಾ ಕಷ್ಟದ ಕೆಲಸವೆಂಬುದು ಕಂಡು ಬರುವದು. ಒಳ್ಳೆಯ ಕರ್ಮಗಳೆಂದರೇನು ? ಎಂಬ ಪ್ರಶ್ನೆಗೆ ಅವರೇ ಉತ್ತರಕೊಟ್ಟಿದ್ದಾರೆ. ದುರಿತ ಕರ್ಮವನ್ನು ಮಾಡಬೇಡ ಅಂದರೆ ಮತ್ತೊಬ್ಬರಿಗೆ ಮನಸ್ಸಿನಿಂದಾಗಲಿ, ಶರೀರದಿಂದಾಗಲಿ, ಬುದ್ಧಿಯಿಂದಾಗಲಿ ತೊಂದರೆ ಮಾಡದಿರುವದೇ ಒಳ್ಳೆಯ ಕರ್ಮ. ಅದರಂತೆ ಪುಣ್ಯದ ಕರ್ಮಗಳನ್ನು ಮಾಡಬೇಕು ಎಂದರೆ "ಪರೋಪಕಾರಂ ಇದಂ ಶರೀರಂ" ಎಂಬಂತೆ ಬಂದಿರುವ ಈ ಶರೀರ ಹಾಗೂ ಮನಸ್ಸು ಬುದ್ಧಿಗಳಿಂದ ಪರೋಪಕಾರ ಮಾಡಬೇಕು. ಮತ್ತೊಬ್ಬರ ಸುಖದುಃಖದಲ್ಲಿ ಭಾಗವಹಿಸಬೇಕು. ಶರೀರವು ಸಮಾಜದ ಒಳಿತಿಗೆ ಎಂಬ ಭಾವನೆ ಬರಬೇಕು. ದಾನಧರ್ಮ ಮಾಡಿ ಪುಣ್ಯ ಗಳಿಸಬೇಕು. ದೇವರು ಇದ್ದಾನೆಂಬ ದೃಢವಾದ ನಂಬಿಕೆ ಬರಬೇಕು. ಅಲ್ಲಿ ಸಂಶಯ ಪಡುವದು ಸರ್ವಥಾ ಯೋಗ್ಯವಲ್ಲ. ಏಕೆಂದರೆ ಪರಶಿವನು ಕಣ್ಣಿಗೆ ಕಾಣುವದಿಲ್ಲ ನಂಬುವದು ಹೇಗೆಂದು ಪ್ರಶ್ನಿಸಿದರೆ, ಉಸಿರಾಟದ ಪ್ರಾಣವಾಯು (ಆಮ್ಲಜನಕ) ಕಣ್ಣಿಗೆ ಕಾಣುವದಿಲ್ಲ; ಹೂವಿನ ಸುವಾಸನೆ ಕಾಣುವದಿಲ್ಲ ಆದರೂ ಅವು ಅನುಭವಕ್ಕೆ ಬರುತ್ತವೆ. ಅದರಂತೆ ನಿರಾಕಾರನಾದ, ಅವ್ಯಕ್ತವಾದ ಶಿವನು ಅನುಭವಗೋಚರವಾಗಿರುವದರಿಂದ ಅವನನ್ನು ನಂಬಬೇಕೆಂದಿದ್ದಾರೆ. ಒಳ್ಳೆಯವರ ಸಂಗಮಾಡಬೇಕೆಂದು ಹೇಳಿದ್ದಾರೆ. ಕಾರಣವೇನಂದರೆ "ಸತ್ಸಂಗಂ ಪರಂ ಲಾಭಂ" ಎಂದಿದೆ ಶ್ರುತಿ. ಇವರೇ ಹೇಳಿರುವಂತೆ "ಮತಿಗೆ ಮಂಗಳವೀವುದಾವುದುತ್ತಮ ಸಂಗ"[೭೩] ಎಂದಿದ್ದಾರೆ. ಅವರಿಂದ ಜ್ಞಾನ ಪಡೆಯಲು ಸಾಧ್ಯವಾಗುತ್ತದೆ; ಆದ್ದರಿಂದ ಶಾಂತರೊಡನಾಡು ಎಂದಿರುವದು ಸೂಕ್ತವಾಗಿದೆ. ತನ್ನಂತೆ ಪರರು, ಅವರ ಜೀವ, ನನ್ನ ಜೀವ ಎಲ್ಲವೂ ಒಂದೇ ಎಂದು ಭಾವಿಸಬೇಕು. ಎಲ್ಲ ಜೀವದ ಮೇಲೆ ಕರುಣವಿರಲಿ ಎಂದಿದ್ದಾರೆ. ಇದನ್ನೇ ವಿಶ್ವಗುರು ಬಸವಣ್ಣನವರು "ದಯವೇ ಧರ್ಮದ ಮೂಲ"ವೆಂದಿರುವದು ಸರಿಸಾಟಿಯಾಗಿದೆ. ಅದರಂತೆ ಜೀವನದಲ್ಲಿ ನೀತಿ ಬಹುಮುಖ್ಯ. ನೀತಿವಂತನಿಗೆ ಎಲ್ಲಿಯೂ ಭಯವಿಲ್ಲ. ನೀತಿಯುಕ್ತವಾದ ಜೀವನ ಲೋಕಸತ್ಯ ಕಾಣಲು ಸುಲಭವಾದ ಸಾಧನವಾಗಿದೆ.

---

೭೩ " " ಶ್ರೀಮನ್ನಿಜಗುಣ ಶಿವಯೋಗಿ ವಿರಚಿತ. 'ಕೈವಲ್ಯಪದ್ಧತಿ' ಸಂ-ಕುಮಾರ ನಿಜಗುಣ. ಪುಟಸಂಖ್ಯೆ-೮೪.
(ನೀತಿಕ್ರಿಯಾಚರ್‍ಯಸ್ಥಲ-ಪದ-೧೪. ಪ್ರ-ನಿಜಗುಣಾನುಭವ ಮಂಟಪ, ಚಿಲುಕವಾಡಿ. (೨೦೦೧)

"ಆಚಾರಕ್ಕರಸಾಗು ನೀತಿಗೆ ಪ್ರಭುವಾಗು ।
ಮಾತಿನಲಿ ಚೂಡಾಮಣಿಯಾಗು । ನನಕಂದ
ಜ್ಯೋತಿಯೇ ಆಗು ಜಗಕ್ಕೆಲ್ಲ."೭೪ ॥

ಮೇಲಿನ ಗರತಿಯ ಮೂರು ಸಾಲುಗಳನ್ನು ಜೀವನದಲ್ಲಿ ಅಳವಡಿಸಿಕೊಂಡರೆ ಸಾಕು. ಜೀವನ ಮೌಲ್ಯಗಳ ವಿವೇಚನೆಗೆ ಬೆಲೆಬರುತ್ತದೆ. ಸಕಳೇಶ ಮಾದರಸನ ವಚನವು ಮೌಲ್ಯವಿವೇಚನೆಗೆ ತುಂಬಾ ಒಳ್ಳೆಯದಾಗಿದೆ.

"ಜ್ಯೋತಿ ಮುಟ್ಟಿದ ಬತ್ತಿ ಎಲ್ಲ ಜ್ಯೋತಿಯಪ್ಪವಯ್ಯ ।
ಸಾಗರ ಮುಟ್ಟಿದ ನದಿಗಳೆಲ್ಲ ಸಾಗರವಪ್ಪುವಯ್ಯ ।
ಪ್ರಸಾದವ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪುವಯ್ಯ ।
ಲಿಂಗದ ಮುಟ್ಟಿದ ಅಂಗವೆಲ್ಲ ಲಿಂಗವಪ್ಪುವಯ್ಯ ।
ಸಕಳೇಶ್ವರದೇವಾ ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯ."೭೫

ಇದೊಂದು ಅದ್ಭುತವಾದ, ಮಾರ್ಮಿಕವಾದ ವಚನವು ಬತ್ತಿಗೆ ಜ್ಯೋತಿ ಮುಟ್ಟಿದಾಗ ಬೆಳಗುವದು ಒಂದು ಕ್ರಿಯೆಯೆಂದು ಭಾವಿಸದೇ ಅದು ಜ್ಞಾನದ ಬೆಳಕು ಎಂಬುದನ್ನು ವಿವರಿಸಿದ್ದಾರೆ. ಅದರಂತೆ ಸಾಕಷ್ಟು ನದಿಗಳು ಹರಿದರೂ ಅವೆಲ್ಲ ಹೋಗಿ ಕೂಡುವದು ಸಾಗರವನ್ನೇ; ಅಂದರೆ ಎಲ್ಲ ತತ್ವಗಳು ವಿಚಾರಗಳು ಒಂದೇ

ಎಂಬ ವಿಶಾಲ ಭಾವನೆಗೆ ಸಾಗರ ಸಾಕ್ಷಿಯಾದಂತಿದೆ. ಪದಾರ್ಥ ಪ್ರಸಾದವಲ್ಲ; ಪ್ರಸಾದ ಪದಾರ್ಥವಲ್ಲ ಆದರೆ ಪದಾರ್ಥವನ್ನು ಪ್ರಸಾದವನ್ನಾಗಿ ಪರಿವರ್ತಿಸುವದೇ ಮೌಲ್ಯದ ವಿವೇಚನೆಯಾಗಿದೆ. ಪದಾರ್ಥ ಪದಾರ್ಥವಾಗಿ ಉಳಿಯದೇ ಅದು ಪ್ರಸಾದವಾಗಿ ಪರಿಣಮಿಸುವದು; ಯಾವಾಗ ಅಂದರೆ ಶರಣರು ಮುಟ್ಟಿದಾಗ ಎಂದು ಹೇಳಬೇಕಾಗುವದು. ಜ್ಯೋತಿ–ಬತ್ತಿ, ನದಿ–ಸರೋವರ, ಪದಾರ್ಥ–ಪ್ರಸಾದ ಇವು ಸಾಂಕೇತಿಕವಾಗಿ ಉದಾಹರಿಸಿ ಮುಂದಿನ ಎರಡು ಸಾಲುಗಳಲ್ಲಿ ಅದ್ಭುತವಾದ ಅರ್ಥ ಕೊಟ್ಟಿದ್ದಾರೆ.

---

೭೪ " " ಸಾಹಿತ್ಯನಂದನ ಪ್ರಥಮ ಪಿ.ಯು.ಸಿ. ಕನ್ನಡ ಪದ್ಯಭಾಗ–೬. ಬೆಳ್ಳಕ್ಕಿ ಹಿಂಡು ಬೆದರ್ಯಾವು(ಜಾನಪದ) ಪುಟಸಂಖ್ಯೆ–೩೫. ಪದ್ಯಸಂಖ್ಯೆ–೧೨. (೨೦೧೧)

೭೫ " " ವಚನಸಾಹಿತ್ಯ ಸಂಗ್ರಹ. ಸಂ–ಸಂ.ಶಿ. ಭೂಸನೂರಮಠ. ಪುಟಸಂಖ್ಯೆ–೪೨೯. ವಚನಸಂಖ್ಯೆ–೧. ಪ್ರ–ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು–೦೨. (೨೦೦೬)

ವೇದಾಂತದಲ್ಲಿ ಈ ಸಾಲುಗಳಿಗೆ ತೂರ್ಯಾತೀತ ಅವಸ್ಥೆಯ ಸಾಲುಗಳೆಂದು ಕರೆಯಬಹುದು, ಶರಣರ ದೃಷ್ಟಿಯಿಂದ ನೋಡಿದರೆ ಐಕ್ಯ ಸ್ಥಲವೆಂದು ಕರೆಯಬಹುದು. ಆದರೆ ಅವೆರಡೂ ಒಂದೇ ಎಂಬುದು ಅನುಭವಿಕರ ನುಡಿ. ಲಿಂಗವನ್ನು ಮುಟ್ಟಿದ ಅಂಗ ಲಿಂಗಮಯವಾಗಿತ್ತೆಂದು ಹೇಳುವದೆಂದರೆ "ಲಿಂಗಾಂಗ ಸಾಮರಸ್ಯ" ಎಂದೇ ಅರ್ಥ. ಅದರಂತೆ "ನಿಮ್ಮನ್ನು ಮುಟ್ಟಿದವ ನಿಮ್ಮಂತಾದನು" ಅಂದರೆ ಅಭೇದ ಕಲ್ಪನೆ ಆಗಿದೆ. "ಏಕಮೇವಾದ್ವಿತೀಯಂ ಬ್ರಹ್ಮ" ಆಗದೆ 'ಏಕ' ಎಂದರೆ ಒಂದು, 'ಏವಂ' ಅಂದರೆ ಒಂದೇ, 'ಅದ್ವಯಂ' ಅಂದರೆ ಎರಡಿಲ್ಲ ಎಂದೂ ಅರ್ಥ. ನಾನು-ನೀನು ಒಂದೇ ಇದರ ಅರ್ಥ ಇಬ್ಬರೂ ಶಿವಸ್ವರೂಪಿಗಳೇ ಆಗಿದ್ದೇವೆ. ಅಜ್ಞಾನದಿಂದ ನಾನು ಬೇರೆ, ನೀನು ಬೇರೆ ಆಗಿದ್ದೆವು. ಆದರೆ ಜ್ಞಾನದ ಬಲದಿಂದ ಇಬ್ಬರೂ ಒಂದೇ ಎಂಬ ದೃಢಜ್ಞಾನವಾಗಿದೆ ಎಂದು ಭಾವಿಸಿರುವದು ಕಂಡು ಬರುತ್ತದೆ.

ಪ್ರವಚನದ ಮೌಲ್ಯ ವಿವೇಚನೆಯು ಆಧ್ಯಾತ್ಮದ ಅರಿವಿಗೆ ನಿಲುಕುವಂತಹದ್ದಾಗಿದೆ. ಅಂತಹ ನಿಲುವನ್ನು ಮುಟ್ಟಲು ಮೌಲ್ಯ ವಿವೇಚನೆಯು ಸಾಧಕರಿಗೆ ಸಾಧನವಾಗಿದೆ. ಇಂತಹ ಸಾಧನೆಯನ್ನು ವಿವರಿಸುವದೇ ಪ್ರವಚನವಾಗಿದೆ.

ಪ್ರವಚನವು ಸಮಷ್ಟಿಪ್ರಜ್ಞೆಯಡಿಯಲ್ಲಿ ಸಮೂಹವನ್ನು ತಲುಪಿ, ತನ್ನ ಸಾರ್ಥಕತೆಯನ್ನು ಹೊಂದುವುದರಲ್ಲಿ ನಾಡಿನ ಆಂತರಿಕ ಸ್ವಾಸ್ಥ್ಯದೊಂದಿಗೆ ವಿವಿಧ ಆಯಾಮಗಳ ಪರಿಸರವೂ ಸಮೃದ್ಧವಾಗಬಲ್ಲದು. ಒಂದು ಪ್ರಾಕೃತಿಕ ಮತ್ತು ಸಾಂಸ್ಕೃತಿಕ ಪರಿಸರದಲ್ಲಿ ಸಾಹಿತ್ಯವೆಂಬುದು ಮೌಖಿಕ ಮಾಧ್ಯಮದ ಮೂಲಕ ಪ್ರಸಾರ-ಪ್ರಚಾರವಾಗಿ ಒಂದು ನಾಡಿನ ಸಮೃದ್ಧತೆಗೆ ಕಾರಣವಾಗುವುದರಲ್ಲಿ ಮಹತ್ವದ ವಿದ್ಯಮಾನವಿದೆ. ಅದು ಒಂದು ಪಠ್ಯರೂಪದಲ್ಲಿರುವ ಮಹಾಕಾವ್ಯವು ಏಕಕಾಲದಲ್ಲಿ ಜನಮಾನಸದಲ್ಲಿ ತಳವೂರುವುದು ಪ್ರವಚನದಂಥ ಶಕ್ತ ಶ್ರವ್ಯಮಾಧ್ಯಮದ ಮೂಲಕವೇ!. ಇದು ಪ್ರವಚನ ಶ್ರವ್ಯಮಾಧ್ಯಮವು, ಮನಸ್ಸನ್ನು ಹದಗೊಳಿಸುವುದರ, ಪಕ್ವಗೊಳಿಸುವುದರ ಮೂಲಕ ನಾಡಿನ ಸಾಂಸ್ಕೃತಿಕ ಮೌಲ್ಯವನ್ನು ಎತ್ತಿ ಹಿಡಿಯುತ್ತದೆ. ಇದು ರಾಜಕೀಯ, ಆರ್ಥಿಕ, ಸಾಮಾಜಿಕ, ಲೌಕಿಕ, ಭೌತಿಕ-ಎಲ್ಲಾ ಕ್ಷೇತ್ರಗಳಲ್ಲಿ ದೃಢಮನಸ್ಸಿಗೆ ಕಾರಣವಾಗುತ್ತದೆ. ಸಂಸ್ಕೃತಿಯ ಹಿನ್ನೆಲೆಯಲ್ಲಿ ಶ್ರೀಮಂತವಾಗಿರುವ ನಾಡು-ಯಾವುದೇ ಕಾಲದಲ್ಲಿಯೂ ಶಾಶ್ವತವಾಗಿ ಶ್ರೇಷ್ಠವೆನಿಸಿಕೊಳ್ಳುತ್ತದೆ. ಅಲ್ಲಿ 'ಬರ'ವೆಂಬುದೇ ಇಲ್ಲ; ಅಲ್ಲಿ ಕೊರತೆಯೆಂಬುದೇ ಇರುವುದಿಲ್ಲ; ಅಲ್ಲಿ ಸಾವು, ನೋವುಗಳು ತಾತ್ಕಾಲಿಕವಾದ ಕ್ಷಣಿಕ ಅನುಭವವಾಗಿ ಮರೆಮಾಡುತ್ತವೆ. ಒಂದು ಅರ್ಥದಲ್ಲಿ ಸಾವು-ನೋವುಗಳನ್ನು ಗೆಲ್ಲುವ ಶಕ್ತಿಯೂ ಪ್ರವಚನದ ಸಂವಹನ ಸಾರ್ಥಕ್ಯದಲ್ಲಿದೆ!

ಶರಣರ ಚರಿತ್ರೆ ಮತ್ತು ಚಾರಿತ್ರೆಗಳು ಸಮಾಜದಲ್ಲಿ ಉರ್ಜಿತಗೊಂಡು ಬದುಕಿಗೆ ಮಾರ್ಗದರ್ಶನ ನೀಡುವಂತಾಗಬೇಕೆಂಬ ಸದುದ್ದೇಶದಿಂದ ವಚನಗಳಿಗೆ ಟೀಕು, ವ್ಯಾಖ್ಯಾನ, ಭಾಷೆವಿವರಣೆ ಪ್ರವಚನಗಳು ರಚನೆಗೊಂಡವು. ಸಾಹಿತ್ಯ ಪ್ರಕಾರವಾಗಿ ಮನ್ನಣೆ ಪಡೆದವು.

ಕನ್ನಡದಲ್ಲಿ ಇಂತ ಸಾಹಿತ್ಯ ಪ್ರಕಾರಕ್ಕೆ ಸುದೀರ್ಘ ಇತಿಹಾಸವಿದೆ. ಕನ್ನಡ ಮತ್ತು ಕನ್ನಡೇತರ ಭಾಷೆಗಳಿಂದ ಸಂಸ್ಕೃತ-ಪಾಕೃತ ಭಾಷೆಗಳಿಗೆ ಟೀಕು, ವ್ಯಾಖ್ಯಾನ ಭಾಷೆ ಬರೆದು ನೂರಾರು ಕೃತಿ ರಚನೆಗೆ ಜೈನರು ಆಧ್ಯರಾಗಿದ್ದರೆ, ವೀರಶೈವರು ಬಾಧ್ಯರು. ಇಂದಿಗೂ ಟೀಕಿನಮಠ, ವ್ಯಾಖ್ಯಾನ ಶಾಲೆ, ಪ್ರವಚನ ಮಂದಿರ, ಟೀಕುಚಾರ್ಯರು ಪ್ರವಚನಕಾರರೆಂಬ ಅನ್ವರ್ಥಕ ನಾಮಗಳು ನಮ್ಮಲ್ಲಿವೆ. ಇಲ್ಲಿ ಟೀಕು, ವ್ಯಾಖ್ಯಾನ ಭಾಷೆಗಳು ಲಿಖಿತ; ಕೀರ್ತನ-ಪ್ರವಚನಗಳು ಮೌಖಿಕ ಎಂಬೆರಡು ಪ್ರಸಾರ ಮಾಧ್ಯಮಗಳಾಗಿ ಧರ್ಮ-ಸಾಹಿತ್ಯ ಪರಿಚಲನೆಗೊಳಿಸಿರುವದು ಕರ್ನಾಟಕದಲ್ಲಿ ಮೌಖಿಕ ಪರಿಚಲನೆಯ ವಾರಸುದಾರರಾಗಿ ಸಾರುವಯ್ಯಗಳು (ಸುವಿಭಾ ಸಂಗಯ್ಯ) ಪ್ರವಚನಕಾರರು ನಿರ್ವಹಿಸಿದ ಕೆಲಸವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಪ್ರವಚನ ಎಂಬುದಕ್ಕೆ ಮಾತು, ನುಡಿ, ವಿವರಣೆ, ಒಳ್ಳೆಯ ಮಾತು, ಧಾರ್ಮಿಕ ವಿಷಯವನ್ನು ವಿವರಿಸುವುದು ಎಂದು ಮುಂತಾದ ಅರ್ಥಗಳಿವೆ. ಪ್ರವಚನಗಳು ತತ್ತ್ವ ಪ್ರಧಾನವಾದ ಓದು ಗಬ್ಬಗಳು. ಪ್ರವಚನಗಳಲ್ಲಿ ನಿರ್ಧಿಷ್ಟವಾದ ಕಥೆಗೆ ಸ್ಥಾನವಿಲ್ಲ. ಮಾರ್ಮಿಕವಾದ ದೃಷ್ಟಾಂತಗಳನ್ನು ಬಳಸಿಕೊಂಡು ತರ್ಕ, ಪವಾಡ ರಹಿತವಾದ, ತತ್ತ್ವದರ್ಶನದ ವಿವರಣೆ ಇರುತ್ತದೆ. ಸಂಗೀತ, ಸಾಹಿತ್ಯ, ವೇಷಭೂಷಣ ಆಂಗೀಕಾಭಿನಯಗಳಿಂದ ಜನರನ್ನು ಆಕರ್ಷಿತರನ್ನಾಗಿಸುವ ಪ್ರಬಲ ಮಾಧ್ಯಮವಿದು.

ಧರ್ಮವೆಂದರೆ ಯೋಗ, ಅಂದರೆ ಯೋಗಾಚರಣೆಯೇ ಧರ್ಮಾಚರಣೆ ಎನಿಸಿಕೊಳ್ಳುತ್ತದೆ. ಯೋಗವೆನ್ನುವುದು ಕಾಲ್ಪನಿಕ ಅಂಶವಲ್ಲ. ಅದು ಅಂತರಂಗದಲ್ಲಿ ಜರುಗುವ ಪ್ರಾಯೋಗಿಕ ಕ್ರಿಯೆ. ಒಳಗಣ್ಣು ತೆರೆಯುವುದು ಇದರ ಪ್ರಮುಖ ಅಂಶ. ಆಗ ಯೋಗಸಾಧಕನು ಶಿವನಾಗಿ, ಮುಕ್ಕಣ್ಣನಾಗಿ ಬ್ರಹ್ಮಾಂಡವನ್ನು ಅರಿಯುವಂತಾಗುತ್ತಾನೆ. ಇದನ್ನೇ ಸ್ವಾಮಿ ವಿವೇಕಾನಂದರು 'ಯೋಗಿಯು ಭೂತ-ವರ್ತಮಾನ-ಭವಿಷ್ಯತ್‌ಗಳು ಓದುವ ಪುಸ್ತಕದಂತೆ' ಎಂದು ತಿಳಿಸುತ್ತಾರೆ. ಯೋಗದೀಕ್ಷೆಯನ್ನು ಬಲ್ಲ ಗುರು, ಶಿಷ್ಯನ ಅಂತರಂಗದ ಅಷ್ಟಾವರಣಗಳನ್ನು ತಿಳಿಸಿ ಆತ್ಮಸಾಕ್ಷಾತ್ಕಾರ ಮಾಡಿಸುತ್ತಾನೆ. ಆಗ ಆತ ಕಣ್ಣು ಮುಚ್ಚಿರಲಿ ಅಥವಾ ತೆರೆದಿರಲಿ ಆತ್ಮಜ್ಯೋತಿ ಹೊಳೆಯತೊಡಗುತ್ತದೆ. ಮಂತ್ರವೊಂದನ್ನು ತಿಳಿಸಿ ಅದನ್ನು ಪ್ರಯೋಗಿಸುವ ವಿಧಾನವನ್ನು, ಧ್ಯಾನ ಮಾಡುವಾಗಿನ ಆಸನವನ್ನು (ಯೋಗಾಸನವನ್ನು)

ತಿಳಿಸುತ್ತಾನೆ. ಈ ಆಸನವು ಬ್ರಹ್ಮಚಾರಿಗಳಿಗೆ ಒಂದು ವಿಧವಾಗಿದ್ದರೆ, ಸಂಸಾರಿಕರಿಗೆ ಇನ್ನೊಂದು ವಿಧವಾಗಿರುತ್ತದೆ. ಸಾಧಕ ಧ್ಯಾನದಲ್ಲಿ ಬಿಂದುರೂಪದ ಆತ್ಮವನ್ನು ಊರ್ಧ್ವಮುಖಿಯಾಗಿಸುತ್ತಾನೆ. ದಿನಗಳು ಕಳೆದಂತೆ ಕಲೆಗಳನ್ನು ಕಾಣುತ್ತಾನೆ, ನಾದಗಳನ್ನು ಕೇಳುತ್ತಾನೆ ಹಾಗೂ ಜೀವಾತ್ಮನು ಪರಮಾತ್ಮನಲ್ಲಿ ಒಂದುಗೂಡುವುದನ್ನು ಅನುಭವಿಸುತ್ತಾನೆ. ಇದು ಬ್ರಹ್ಮತ್ವವನ್ನು ಅರಿಯುವ ಕ್ರಿಯೆ. ಅಂತರಂಗದಲ್ಲಿ ಜರುಗುವ ಈ ಕ್ರಿಯೆ ಅನುಭಾವ, ಹೀಗೆ ಬ್ರಹ್ಮತ್ವವನ್ನು ಅರಿತವನು ಬ್ರಾಹ್ಮಣ ಎನಿಸುತ್ತಾನೆ.

ಶಿಷ್ಯನಿಗೆ ದೀಕ್ಷೆ ಕೊಡುವ ಗುರು ಪೂರ್ಣಸ್ಥಿತಿ ತಲುಪಿದವನಾಗಿರುತ್ತಾನೆ ಹಾಗೂ ದೀಕ್ಷೆ ಕೊಡಲು ಗುರುವಿನಿಂದ ಅದರ ಕ್ರಮ ತಿಳಿದು ಅಪ್ಪಣೆ ಪಡೆದವನೂ ಆಗಿರುತ್ತಾನೆ. ಇಂಥವನು, ಶಿಷ್ಯ ಸದಾ ಸನ್ಮಾರ್ಗದಲ್ಲಿ ಮುಂದುವರಿಯುವಂತೆ ಮಾರ್ಗದರ್ಶನ ಮಾಡುತ್ತಿರುತ್ತಾನೆ, ಶಿಷ್ಯನಿಗೆ ಉಂಟಾಗುವ ಸಂಶಯಗಳಿಗೆ ಪರಿಹಾರ ಸೂಚಿಸುವವನಾಗಿರುತ್ತಾನೆ. ಕೆಲವೊಮ್ಮೆ ಧ್ಯಾನಮಾರ್ಗದಲ್ಲಿ ಉಂಟಾಗುವ ಪ್ರತಿಬಂಧಕಗಳನ್ನು ದೂರೀಕರಿಸುತ್ತಾನೆ. ಶ್ರೋತೀಯ ಬ್ರಹ್ಮನಿಷ್ಠ ಗುರು ಎಂದು ತಿಳಿಯಲ್ಪಡುವ ಇವನ ಪ್ರತಿಯೊಂದು ಮಾತು ವೇದವಾಗಿರುತ್ತದೆ, ಅಂದರೆ ಅನುಭಾವದಿಂದ ಬಂದುದಾಗಿರುತ್ತದೆ. ಅದನ್ನೇ ಪ್ರವಚನ ಎನ್ನುತ್ತಾರೆ. ಇದನ್ನು ಬಸವಣ್ಣನವರು ಹೀಗೆ ತಿಳಿಸುತ್ತಾರೆ.

ಒಂದು ವಸ್ತುವನ್ನು ಅಥವಾ ದೃಶ್ಯವನ್ನು ವರ್ಣಿಸಲು ಕೆಲವರನ್ನು ಕೇಳಿಕೊಂಡಿದೆ ಎಂದು ಭಾವಿಸಿರಿ. ಎಲ್ಲರ ವರ್ಣನೆಗಳೂ ಒಂದೇ ರೀತಿಯಾಗಿರಲು ಸಾಧ್ಯವಿಲ್ಲ. ಅವರವರ ಗ್ರಹಿಕೆ ಹಾಗೂ ಅಭಿವ್ಯಕ್ತಿಗಳಿಗೆ ಅನುಗುಣವಾಗಿ ನಿರೂಪಣೆಗಳೂ ಬೇರೆಬೇರೆಯಾಗಿರುತ್ತವೆ. ಅಂತರಂಗದ ನಿರೂಪಣೆಗೂ ಈ ಮಾತು ಅನ್ವಯವಾಗುತ್ತದೆ. ಅಂದರೆ ಅವರೆಲ್ಲರ ನಿರೂಪಣೆಗಳು ಬೇರೆಬೇರೆಯಾಗಿರುತ್ತವೆ. ಅಂತರಂಗ ಜ್ಞಾನದ ಬಗೆಗಿರುವ ಈ ಅಭಿಪ್ರಾಯಗಳನ್ನೇ ಮಾತುಗಳೆಂದು ಕರೆದಿದ್ದಾರೆ. ಇನ್ನು ಅನುಭಾವಿಗಳ ಬಾಯಿಂದ ಕೇಳಿದ ಅಂಶಗಳನ್ನು ಉಳಿದವರು ನಿರೂಪಿಸುವಾಗ ಉಂಟಾಗುವ ವ್ಯತ್ಯಾಸ ವಾಸ್ತವತೆಯಿಂದ ಮತ್ತಷ್ಟು ದೂರವಾಗಿರುತ್ತದೆ. ಈ ಕಾರಣಕ್ಕಾಗಿಯೇ ಒಂದೇ ಮತದವರ ವಿಚಾರಗಳು ಬೇರೆಬೇರೆಯಾಗಿರುತ್ತವೆ. ವೇದಗಳು, ಆಗಮಗಳು, ಉಪನಿಷತ್ತುಗಳು ಇವೇ ಮುಂತಾದವುಗಳಲ್ಲಿ ತಿಳಿಸಿರುವ ಅಂತರಂಗದ ಅನುಭವವನ್ನು ಲಕ್ಷಿಸದೆ ಅಲ್ಲಿರುವ ಯಾವುದಾವುದೋ ಶಬ್ಧವನ್ನು ಲಕ್ಷಿಸುತ್ತ ವ್ಯರ್ಥ ಕಾಲಹರಣ ಮಾಡುವುದನ್ನು ಕಾಣುತ್ತೇವೆ. ಐವರು ಕುರುಡರು ಆನೆಯನ್ನು ವರ್ಣಿಸುವ ಕತೆ ಇದಕ್ಕೆ ಸಂಕೇತವನ್ನು ಹೇಳಬಹುದು.

ಮೇಲೆ ತಿಳಿಸಿದ ಧಾರ್ಮಿಕ ಸಾಹಿತ್ಯವು ಕೆಲವರಿಗೆ ಪಚನವಾಗುವುದಿಲ್ಲ. ಅಂಥವರಿಗೆ ಕಥಾರೂಪದ ಸಾಹಿತ್ಯ ಆಕರ್ಷಕವಾಗಿರುತ್ತದೆ. ಮುಖ್ಯ ವಿಚಾರವನ್ನು ಗುಪ್ತವಾಗಿರಿಸಿ ಕಥಾನಕವಾಗಿ ರಚಿಸಿರುವ ಸಾಹಿತ್ಯ ಅಪಾರವಾಗಿದೆ. ರಾಮಾಯಣ, ಮಹಾಭಾರತ ಮುಂತಾದ ಪ್ರಾಚೀನ ಕಾವ್ಯಗಳು ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತ ಬಂದಿವೆ. ಕಥಾರೂಪದ ಈ ಸಾಹಿತ್ಯ ಕೃತಿಗಳನ್ನು ಪುರಾಣಗಳು ಎಂದು ಕರೆದಿದ್ದಾರೆ. ಅಂತರಂಗದ ಜ್ಞಾನವನ್ನು ಶಾಸ್ತ್ರಗಳ ರೂಪದಲ್ಲಿಯೇ ಹೇಳಲಿ, ಪುರಾಣಗಳ ರೂಪದಲ್ಲಿಯೇ ಹೇಳಲಿ ಅದೆಲ್ಲ ಪ್ರವಚನವೇ ಆಗಿರುತ್ತದೆ. ಅತೀತವಾದ ಶಕ್ತಿಯಲ್ಲಿ ನಂಬಿಕೆ ಮತ್ತು ವಿಶ್ವಾಸವಿಡುವುದನ್ನು ಜೀವನದ ಎಲ್ಲ ತರಹದ ಸವಾಲನ್ನು ಎದುರಿಸುವ ಶಕ್ತಿಯನ್ನು ಪ್ರವಚನ ತಿಳಿಸಿಕೊಡುತ್ತದೆ. ನಮ್ಮ ಸೋಲು, ನಿರಾಶೆ, ಎಲ್ಲವು ದೇವರು ನಮಗೆ ಕಲಿಸಲು ಬಯಸುವ ಪಾಠಗಳು. ಬದುಕಿನ ವೈಫಲ್ಯಗಳು, ನಮ್ಮ ನಂಬಿಕೆ ಮತ್ತು ಆತ್ಮವನ್ನು ರೂಪಿಸುತ್ತವೆ. ನಮ್ಮೊಳಗೆ ಒಂದು ಅಗೋಚರ ಶಕ್ತಿಯಿದೆ. ನಾವು ಏಕಾಂತವನ್ನು ಬಯಸಿ ಅರಸುತ್ತಾ ಅಂತರ್ಮುಖಿಯಾಗಬೇಕು. ಜೀವನದಲ್ಲಿ ಪ್ರತಿ ಕಷ್ಟದ ಸನ್ನಿವೇಶವೂ ನಮ್ಮ ಈ ಜಗತ್ತಿನಲ್ಲಿ ದೇವರಿದ್ದಾನೆ ಎಂಬುದನ್ನು ದೃಢಿಕರಿಸುತ್ತದೆ. ಬದುಕಿನ ಪ್ರತಿ ಹೆಜ್ಜೆಯಲ್ಲಿ ನಾನು ಉತ್ತಮಗೊಳ್ಳಲು ಇದು ಸಹಾಯ ಮಾಡುತ್ತದೆ.

ಪ್ರವಚನಕಾರರು ತಮ್ಮ ವಿಚಾರಗಳನ್ನು ಜನರ ಮುಂದೆ ಇಡುವುದಕ್ಕಾಗಿ ನಿರೂಪಣೆಯ ಮಾಧ್ಯಮ ಅಂಗೀಕರಿಸಿದರು. ಆ ಪ್ರತಿ ಶಬ್ದದಲ್ಲಿಯೂ ಮಾನವ ಕಲ್ಯಾಣದ ಕಳಕಳಿಯೇ ಇದೆ. ಅನೇಕ ಆಧಾರ ಗ್ರಂಥಗಳನ್ನು ಅವಲೋಕನ ಮಾಡಿ ಪ್ರವಚನವನ್ನು ನಿರೂಪಿಸುತ್ತಾನೆ. ಸಾಮಾನ್ಯ ಪ್ರಾಪಂಚಿಕನಿಗೂ ಮನುಷ್ಯ ಹೇಗೆ ನಡೆಯಬೇಕೆಂಬುದನ್ನು ಎಲ್ಲರಿಗೂ ತಿಳಿಯುವಂಥಹ ಭಾಷೆಯಲ್ಲಿ ದಿನನಿತ್ಯದ ಉದಾಹರಣೆಗಳೊಂದಿಗೆ ಸರಳವಾಗಿ ಹೇಳುತ್ತಿರುತ್ತಾನೆ. ಜೀವನದ ಬಗ್ಗೆ ವಿಶ್ವಾಸ ಹುಟ್ಟುವಂತೆ ಮಾಡುವುದೇ ಇದರ ಉದ್ದೇಶವಿರುತ್ತದೆ. ಪ್ರೇಮ ಪೂರ್ಣ ಅಮೃತಮಯ ಶಬ್ದಗಳಿಂದ ಪರಿವರ್ತನ ಸಾಧ್ಯ ಪ್ರವಚನದ ಮಾತುಗಳೆಂದರೆ ಪ್ರಾಪಂಚಿಕ ತಾಪತ್ರಯಗಳಿಂದ ಬೆಂದು ಬಳಲಿದ ಜನರಿಗೆ 'ಸಂಜೀವಿನಿ'ಗಳಾಗಿರುತ್ತವೆ.

**೧೯೬೬ ರಲ್ಲಿ 'ಶ್ರೀ ಸಮರ್ಥ ಸದ್ಗುರು ಬ್ರಹ್ಮಚೈತನ್ಯ ಮಹಾರಾಜ ಗೋಂದಾವಲೇಕರ ಇವರ ಪ್ರವಚನಗಳು'** ಎಂಬ ಶೀರ್ಷಿಕೆಯಿಂದ ಪ್ರಕಟವಾಯಿತು. ಮಹಾರಾಷ್ಟ್ರದ ಜಿಜ್ಞಾಸು ವಾಚಕರು ಅದನ್ನು ಎಷ್ಟು ಪ್ರೇಮ ಮತ್ತು ಆಸ್ಥೆಯಿಂದ ಸ್ವಾಗತಿಸಿದರೆಂದರೆ ಕೆಲವೇ ದಿನಗಳಲ್ಲಿ ಈ ಪ್ರವಚನ ಕೃತಿಯ ಐದು ಆವೃತ್ತಿಗಳು ಮೇಲಿಂದ ಮೇಲೆ ಪ್ರಕಟವಾದವು. ೪೫ ಸಾವಿರ ಪುಸ್ತಕಗಳು ಮಾರಾಟವಾದವು. ಶ್ರೀ ಮಹಾರಾಜರ ಪುಣ್ಯತಿಥಿಯ ಅಮೃತ ಮಹೋತ್ಸವ ೧೯೮೮ ರ ಸಮಯದಲ್ಲಿ ಈ ಗ್ರಂಥದ ಅತ್ಯಂತ ಸುಂದರ ಹಾಗೂ ಅಚ್ಚುಮೆಚ್ಚಾದ ಒಂಭತ್ತನೆಯ ಆವೃತ್ತಿ

ಪ್ರಕಟಗೊಂಡಿತು. ಇವತ್ತಿನವರೆಗೆ (೧೯೯೯) ಪ್ರವಚನಗಳು ಈ ಗ್ರಂಥದ ಮರಾಠಿಭಾಷೆಯಲ್ಲಿ ಹತ್ತೊಂಭತ್ತು ಆವೃತ್ತಿಗಳು ಪ್ರಸಿದ್ಧವಾಗಿವೆ. ಈ ಮಹಾರಾಜರ ಪ್ರವಚನಗಳು ಕರ್ನಾಟಕದ ಸಾವಿರಾರು ಮನೆಗಳಲ್ಲಿ ನಿತ್ಯಪಾಠವಾದಂತಾದವು.

ಭಾರತದಲ್ಲಿ ಆಗಿಹೋದ ಮಹಾನ್ ಆಧ್ಯಾತ್ಮಿಕ ಅನುಭಾವಿಗಳಲ್ಲಿ ಅನೇಕ ಸತ್ಪುರುಷರು, ಆಧ್ಯಾತ್ಮಿಕ ಅನುಭವವು ಮನುಷ್ಯನ ಜನ್ಮಸಿದ್ಧ ಹಕ್ಕು ಅದನ್ನು ಮನುಷ್ಯನು ಯಾವುದೇ ಪರಿಸ್ಥಿತಿಯಲ್ಲಿ, ಯಾವುದೇ ಅವಸ್ಥೆಯಲ್ಲಿ ಪಡೆದುಕೊಳ್ಳಲು ಬರುತ್ತದೆ, ಎಂಬ ವಿಚಾರವನ್ನು ಶಾಸ್ತ್ರಗಳ ಸಿದ್ಧಾಂತದೊಂದಿಗೆ ಸತ್ಪುರುಷರ ಪ್ರಮಾಣದೊಂದಿಗೆ, ತಮ್ಮ ಸ್ವಂತದ ಅನುಭವದೊಂದಿಗೆ ನಿತ್ಯಜೀವನದ ಉದಾಹರಣೆಗಳೊಂದಿಗೆ ದಿನನಿತ್ಯದ ಭಾಷೆಯಲ್ಲಿ ಹೇಳಿರುತ್ತಾರೆ.

ಬ್ರಹ್ಮಚೈತನ್ಯ ಮಹಾರಾಜರು ಹೇಳುತ್ತಿದ್ದರು. “ಅತ್ಯಂತ ಧನಾಢ್ಯರಿಗೆ ಪಾರಮಾರ್ಥ ಸಾಧಿಸುವುದಿಲ್ಲ. ಅದರಂತೆ ಅತ್ಯಂತ ದರಿದ್ರರಿಗೆ ಪರಮಾರ್ಥ ಹೇಳಬಾರದು, ಅವರ ಹಸಿದ ಹೊಟ್ಟೆಗೆ ಅನ್ನ ಕೊಡಬೇಕು. ಪರಮಾರ್ಥವು ಮಧ್ಯಮ ವರ್ಗದ ಜನರಿಗೆ ಸಾಧಿಸುತ್ತದೆ. ಮನುಷ್ಯನಲ್ಲಿ ನಿಜವಾದ ಆಧ್ಯಾತ್ಮಿಕ ಜಿಜ್ಞಾಸೆ ಇದ್ದದ್ದಾದರೆ ಅವನಿಗೆ ಅವನ ಪ್ರಪಂಚ, ಅವನ ವ್ಯವಹಾರವು ಅವನ ಸಾಧನೆಗೆ ಅಡ್ಡಬರಲಾರವು. ಶ್ರೀ ಮಹಾರಾಜರ ತತ್ತ್ವಜ್ಞಾನವು ನಾಲ್ಕು ಮುಖ್ಯ ಸಿದ್ಧಾಂತಗಳನ್ನು ಒಳಗೊಂಡಿದ್ದಾಗಿತ್ತು. ನಾಮಸ್ಮರಣೆ, ಸಗುಣೋಪಾಸನೆ, ಅನ್ನದಾನ, ಗೋರಕ್ಷಣೆ. ಯಾವುದೇ ಮಂದಿರವು ಅಧ್ಯಾತ್ಮಿಕ ಕೇಂದ್ರವಾಗಿರಬೇಕೆಂಬುದು ಮಹಾರಾಜರ ಅಭಿಪ್ರಾಯ. ಅಷ್ಟೇ ಅಲ್ಲ ಜಿಜ್ಞಾಸುಗಳ ವಿಶ್ವವಿದ್ಯಾಲಯವಾಗಿರಬೇಕು. ಸದ್ವಿಚಾರ, ಸದಾಚಾರ, ಅಧ್ಯಾತ್ಮಿಕ ಸಾಧನೆಗಳ ಪ್ರಸಾರವಾಗಿರಬೇಕು ಎಂದು ಹೇಳುತ್ತಿದ್ದರು.”೭೬ ಅತ್ಯಂತ ಚಿಕ್ಕ ಗ್ರಾಮವಾದ ಗೋಂದಾವಲೆಯನ್ನೇ ತಮ್ಮ ಲೋಕ ಸಂಗ್ರಹ ಕಾರ್ಯದ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡರು.

ತಮ್ಮ ವಿಚಾರಗಳನ್ನೆಲ್ಲ ಅಲ್ಲಿಯೇ ಸಾಕಾರಗೊಳಿಸಿಕೊಂಡರು. ‘ಪ್ರವಚನಕಾರ **ಪಾರಮಾರ್ಥಿಕ ಜಿಜ್ಞಾಸೆಯಿಂದ ತಮ್ಮ ಹತ್ತಿರ ಬರುವ ಜನರನ್ನು ಅವರ ಅಂತಸ್ತು, ವಿದ್ಯೆ, ಶ್ರೀಮಂತಿಕೆ, ಬಾಲಕ, ವೃದ್ಧ, ಸ್ತ್ರೀ ಪುರುಷ ಎಂಬ ಯಾವುದೇ ಉಪಾಧಿಗಳ ಭೇದವನೇಣಿಸದೇ**

---

೭೬ “ “ ‘ಪ್ರವಚನ’ ಮರಾಠಿಗ್ರಂಥದ ಅನುವಾದ-ದತ್ತಾವಧೂತ. ಪುಟಸಂಖ್ಯೆ-೧೨. (ಅನುವಾದಕ ನಿವೇದನೆಯಿಂದ) ಪ್ರ-ಶ್ರೀಕ್ಷೇತ್ರ ಗೋಂದಾವಲೆ ಸಂಸ್ಥೆ ಶ್ರೀಕ್ಷೇತ್ರ ಹೆಬ್ಬಳ್ಳಿ (೧೯೯೯)

**ಅವರನ್ನು ಅತ್ಯಂತ ನಿಷ್ಕಪಟ ಹಾಗೂ ನಿಸ್ವಾರ್ಥ ಪ್ರೇಮದಿಂದ ಹತ್ತಿರ ಕರೆದು ಜ್ಞಾನ ತೃಷೆಯನ್ನು ಶಾಂತಗೊಳಿಸಬೇಕು. ಅದಕ್ಕೆ ಶಾಂತರೊಡನಾಡಬೇಕು, ಪೀಡೆ, ದುಃಖ, ಅಪಮಾನ, ನಿಂದೆ, ಆರ್ಥಿಕವಾಗಿ, ಶಾರೀರಿಕವೇದನೆ ಬಂದರೂ ಅನುಭವಿಸಿ ಜನರನ್ನು ಸನ್ಮಾರ್ಗಕ್ಕೆ ತರಬೇಕು'.**

ಪ್ರವಚನದಲ್ಲಿ ಭಾಷೆಯ ಸಹಜತೆ, ವಿಚಾರಗಳ ಗಾಂಭೀರ್ಯ, ಉಪದೇಶಗಳಲ್ಲಿ ಕ್ಷೀಣವಾದಾಗ ದೈನಂದಿನ ಜೀವನದಲ್ಲಿ ಪರಮಾರ್ಥಭಾವವನ್ನು ಉತ್ಪನ್ನಮಾಡಿ ಅದನ್ನು ಉಳಿಸಿಕೊಳ್ಳುವುದಕ್ಕಾಗಿಯೇ ಪ್ರವಚನಗಳು ಬೆಳೆದು ಬಂದವು.

<u>ಪ್ರವಚನಕಾರರಲ್ಲಿ ೩ ವರ್ಗಗಳು</u>

೧) ಆತ್ಮಜ್ಞಾನಿ ಪುರುಷರು

೨) ಸಾಧನೆಗೆ ಉಪಯೋಗವಾಗುವ ಅಧ್ಯಾತ್ಮ ಶಾಸ್ತ್ರದ ಅಭ್ಯಾಸಮಾಡಿದ ಸಾಧಕರು.

೩) ವ್ಯವಸಾಯಿಕ ಪ್ರವಚನಕಾರರು.

ಉತ್ತಮ ಜೀವನ ಅಂದರೆ ಯಾರಿಗೆ ಆನಂದದಿಂದ ತುಂಬಿದ ಸಮಾಧಾನ ಪೂರ್ಣ ಜೀವನವನ್ನು ಬಾಳಬೇಕೆಂಬ ನಿಜವಾದ ಇಚ್ಛೆ ಇರುತ್ತದೆಯೋ ಅವರಿಗೆ ಉತ್ತಮ ಜೀವನವೆಂದರೇನು ಹಾಗೂ ಆ ಜೀವನವನ್ನು ಬಾಳುವ ಸುಲಭ ಮಾರ್ಗ ಯಾವುದು ಎಂಬುದನ್ನು ಹೇಳಲಾಗುತ್ತದೆ.

ಉತ್ತರ ಕರ್ನಾಟಕದಲ್ಲಿ ಪ್ರವಚನಕ್ಕೆ ಒಂದು ಪರಂಪರೆ ಇದೆ. ತಾತ್ವಿಕ ನಿಖರತೆ, ತರ್ಕಬದ್ಧ ವಿಚಾರ, ಅನುಭಾವದ ಸ್ಪಷ್ಟ ಚಿಂತನೆ, ಸುಂದರ ಶಾರೀರ, ಉಪಮೆ, ದೃಷ್ಟಾಂತ, ರಾಜಹಾಸ್ಯ, ಹೀಗೆ ಜೋಡಿಸಿ ಮನದುಂಬಿ ಭಾವದುಂಬಿ ಮಾತನಾಡಿದಾಗ ಒಂದು ಮನೋಹರ ಸಾಹಿತ್ಯ ರೂಪುಗೊಳ್ಳುತ್ತದೆ. ಪ್ರಭುತ್ವದ ವಾಗ್ಝರಿ ಸುರಿದು ಹರಿದಾಗ ರಚನೆಗೊಂಡ ಸಾಹಿತ್ಯವೇ ಪ್ರವಚನ ಸಾಹಿತ್ಯ. ಧನಾತ್ಮಕ ದೃಷ್ಟಿಯಿಂದ ಬದುಕನ್ನು ನೋಡಲು ಕಲಿಸುವುದು ಪ್ರವಚನ. ಸ್ವರೂಪ ಹುಡುಕುವ ಪ್ರಯತ್ನ. ಅಲ್ಲಿ ನಡೆವುದು ರಸಭಾವ ನಿರ್ಮಾಣ. ಎಲ್ಲ ಸಾಧನೆಗಳಿಗೆ ಬಲಿಷ್ಠ ಆಧಾರ ಒದಗಿಸುವದು ಪ್ರವಚನ.

ಪ್ರವಚನ ಸಾಹಿತ್ಯದ ಹರಿಕಾರರಾಗಿ ಕನ್ನಡದಲ್ಲಿ ಕೃಷಿ ಮಾಡಿದವರು ಅನೇಕ ಪೂಜ್ಯರು, ಸಾಧಕ, ಶರಣ-ಶರಣೆಯರು, ವಾಗ್ದೇವಿ ಕೆಲವರಿಗೆ ಕೈಬಾಯಿಗೆ ಚೈತನ್ಯ ನೀಡಿರುತ್ತಾಳೆ. ಕೆಲವರು

ಮಾತನಾಡುತ್ತಾರೆ ಬರೆಯುವದಿಲ್ಲ. ಬರೆದುದೆಲ್ಲವೂ ಪ್ರವಚನ ಸಾಹಿತ್ಯವಾಗದು. ಕೆಲವಾಗ್ಮಿಗಳು ವೇದಿಕೆಯ ಮೇಲೆ ಮಾತನಾಡಿದ ಹೃದಯ ಸ್ಪರ್ಶಿ ಪ್ರವಚನದ ಕೆಲವು ಅಮೂಲ್ಯ ಮಾತುಗಳನ್ನು ಗ್ರಂಥಗಳ ರೂಪದಲ್ಲಿ ಬರೆದಿಟ್ಟಿದ್ದಾರೆ.

ಒಂದೇ ಸ್ಥಳದಲ್ಲಿ ಹಲವಾರು ಜನರಿಗೆ ಒಬ್ಬ ಪ್ರವಚನಕಾರ ತಾವು ಹೇಳಬೇಕಾಗಿರುವುದನ್ನು ನಿರ್ಭಿಡೆಯಿಂದ ನಿರರ್ಗಳವಾಗಿ ಮಾನವೀಯತೆಯ ಸ್ಪರ್ಶವನ್ನು ನೇರವಾಗಿ ಜನಮನ ತಲುಪುವಂತೆ ನೀಡಬಲ್ಲ. ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ವೈಚಾರಿಕ ಹಿನ್ನಲೆಯಲ್ಲಿ ಇದರ ಅಧ್ಯಯನ ನಡೆಯಬೇಕಿದೆ. ಬೆಳಕಿಗಾಗಿ ಬಲ್ಲವರ ಮಾತುಗಳು. 'ಮಹಾತ್ಮರ ಸಂತರು, ಶಿವಯೋಗಿಗಳು, ಅನುಭಾವಿಗಳು, ಚಿಂತಕರು ಇದ್ದಾಗ ಕೇಳುವದು ಪ್ರವಚನ ಇಲ್ಲದಾಗ ನೆನಪಿಸಿಕೊಳ್ಳುವದು ಸ್ವಾಧ್ಯಾಯ' ಎಂಬುದು ಜ್ಞಾನಯೋಗಿ ಶ್ರೀ ಸಿದ್ದೇಶ್ವರ ಶ್ರೀಗಳವರ ಹಲವಾರು ಪುಸ್ತಕಗಳಿಂದ ತಿಳಿದು ಬರುತ್ತದೆ.

ಅನುಭಾವಿಗಳ ಮಾತುಗಳಿಗೆ ಮರುಜನ್ಮ ನೀಡಿ ಮರೆಯಲಾಗದ ಬದುಕನ್ನು ಕಟ್ಟಿ ಕೊಡುವ ಸುಂದರವೇದಿಕೆಯೇ ಪ್ರವಚನ. ಲೇಖಕನ ಅಂತರಂಗದ ಮಾತುಗಳನ್ನು ತನ್ನ ಅಂತರಂಗದಲ್ಲಿ ಭಟ್ಟೀ ಇಳಿಸಿ ಮಾನವೀಯತೆಯ ಸ್ಪರ್ಶನೀಡಿ ಶ್ರೋತೃಗಳ ಅಂತರಂಗ ಶುಚಿಗೊಳಿಸುವ ಕರ್ಮಯೋಗಿ ಈ ಪ್ರವಚನಕಾರ. ಪುಸ್ತಕಗಳ ಮೂಲಕ ಮಾತು ಮನಮುಟ್ಟುವ ಸಂದರ್ಭದಲ್ಲಿ ಪ್ರವಚನದ ಮೂಲಕ ಪ್ರವಚನಕಾರ ಮನದ ಕದ ತೆರೆದು ಅಲ್ಲಿ ಸ್ವಚ್ಛಂದ ನುಡಿ ಸುಮಗಳನ್ನು ಹರಡಬಲ್ಲ. ಹೀಗೆ ಸೋತಮನಗಳಿಗೆಲ್ಲ ಸ್ಫೂರ್ತಿಯ ಮಾತುಗಳು, ಸಾವಿರ ವರ್ಷಮುಗಿದರೂ ಸಾವಿರದ ನುಡಿಗಳು, ಪ್ರವಚನದ ಮಾತುಗಳು ಎನಿಸಿವೆ.

## ಪ್ರವಚನದಲ್ಲಿ ವಚನಗಳೇ ಪ್ರಧಾನ

ಇಂದು ವ್ಯಾಪಕವಾಗಿ ಜನಮನ ಆವರಿಸಿಕೊಂಡಿರುವ ಕನ್ನಡದ ಪ್ರವಚನಗಳಿಗೆಲ್ಲ ಶರಣರ ವಚನಗಳೇ ಮೂಲದ್ರವ್ಯಗಳಾಗಿವೆ. ಯಾವುದೇ ಒಂದು ಪ್ರವಚನವನ್ನು ಪ್ರಾಯೋಗಿಕ ವಿಶ್ಲೇಷಣೆಗೆ ಒಳಪಡಿಸಿದಲ್ಲಿ ವಚನ ಭಂಡಾರವನ್ನೇ ಕಾಣಬಹುದಾಗಿದೆ.

ಶ್ರೋತೃಗಳನ್ನು ಚಿಂತನೆಯ ಮಡುವಿಗಿಳಿಸುವ ಸೌಹಾರ್ದ ಯತ್ನ ಬಹುತೇಕ ಪ್ರವಚನಕಾರರದು. ವ್ಯಾಪಕ ಹಾಗೂ ಆಳವಾದ ಅಧ್ಯಯನದ ಜತೆಗೆ, ಪರೀಕ್ಷೆಗೆ ಹೊರಡುವ ವಿದ್ಯಾರ್ಥಿಯ ಹಾಗೆ ಸಾಕಷ್ಟು ಪೂರ್ವ ಸಿದ್ದತೆ ಮಾಡಿಕೊಂಡಾತನೇ ಯಶಸ್ವಿ

ಪ್ರವಚನಕಾರನಾಗಬಲ್ಲ, ಪರಿಸರದ ಜಿಜ್ಞಾಸೆ, ವರ್ತಮಾನದ ಅರಿವು, ಐತಿಹಾಸಿಕ ಸಂಗತಿಗಳು ಹಾಗೂ ಭವಿಷ್ಯದ ಕನಸುಗಳನ್ನು ಪ್ರವಚನಕಾರ ಬಿಂಬಿಸುತ್ತಾನೆ.

ಪುರಾಣ-ಕೀರ್ತನೆಗಳ ಪರಿಕಲ್ಪನೆಯಲ್ಲಿ ಜನ್ಮ ತಾಳಿರಬಹುದಾದ ಪ್ರವಚನ ಪ್ರಕಾರ ಪೂರ್ವದ ಇವೆರಡಕ್ಕಿಂತ ತೀರ ಭಿನ್ನವಾದುದು. ಭಾವುಕ ಲೋಕದ ಕಣ್ಣಿಗೆ ಕಾಣದ ಮತ್ತೊಂದು ಲೋಕ ಇಲ್ಲುಂಟು. ಪ್ರವಚನಕಾರನ ಸೃಜನಶೀಲ ಮನಸ್ಸಿಗೆ ನಿತ್ಯವೂ ಹೊಸ ಹೊಸದಾದ ಆವಿಷ್ಕಾರ.

ಹೇಳಿ ಕೇಳಿ ಇದು ವೈಚಾರಿಕ ಮತ್ತು ವೈಜ್ಞಾನಿಕ ಯುಗ. ವಿವೇಚನೆಯ ಒರೆಗಲ್ಲಿಗೊಡ್ಡದೆ ಯಾವುದೇ ವಿಚಾರವನ್ನು ವರ್ತಮಾನದ ಜನ ಒಪ್ಪಿಕೊಳ್ಳುವುದಿಲ್ಲ. ಪವಾಡಗಳು, ಅತಿಮಾನುಷ (Super natural) ದಂತಕತೆಗಳು ಪುರಾಣದ ಹೂರಣಗಳು. ಅವುಗಳ ಗ್ರಹಿಕೆಯಲ್ಲಿ ಕೆಲವೊಂದು ಒಳಸೂತ್ರಗಳನ್ನು ಪುರಾಣ-ಶ್ರೋತೃ ಸಿದ್ಧಮಾಡಿಕೊಂಡಿರುತ್ತಾನೆ ಯಾಕೆ? ಹೇಗೆ? ಅದೇ ಯಾಕೆ? ಇದು ಯಾಕಿಲ್ಲ? ಎಂಬ ವಿಚಾರಗಳ ತಾಕಲಾಟ ಈ ಶ್ರೋತೃವಿಗೆ ಇಲ್ಲವೇ ಇಲ್ಲ. ಗಗನದಿಂದ ಇಳಿಯುವ ವರ್ಷಧಾರೆಯನ್ನು, ಮೌನವಾಗಿ ಸ್ವೀಕರಿಸುವ ವಸುಂಧರೆಯಂತೆ ಈ ಪುರಾಣ ಶ್ರೋತೃ ಎಲ್ಲವನ್ನು ಒಪ್ಪಿಕೊಳ್ಳುತ್ತಾನೆ.

ಹೆಸರೇ ಸೂಚಿಸುವಂತೆ ಪುರಾಣವೆಂಬುದು ಪುರಾಣ ಜನಮಾನಸಕ್ಕೆ ಸೇರಿದ್ದು ಒಂದಾನೊಂದು ಕಾಲದಲ್ಲಿ ಆಗಿಹೋದ, ಅಥವಾ ಆಗಿ ಹೋಗಿರಬಹುದಾದ ದೇವತಾ-ಮನುಷ್ಯನೊಬ್ಬನನ್ನು "ದೇವ"ರನ್ನಾಗಿಸಲು ಹೆಣೆದ ಪವಾಡ ಕತೆಗಳೇ ಆಗಿವೆ. ಶೋತ್ರಗಳನ್ನು ಭಕ್ತಿಸಾಗರದಲ್ಲಿ ಮುಳುಗೇಳಿಸುವಲ್ಲಿ ಪುರಾಣಕಾರ ನಿರತನಾಗಿರುತ್ತಾನೆ.

ಮೇಲುನೋಟಕ್ಕೆ ಪುರಾಣ ಹಾಗೂ ಪ್ರವಚನಗಳು ಒಂದೇ ಎಂಬಂತೆ ಕಾಣುತ್ತವೆ. ಇವುಗಳಲ್ಲಿರುವ ಧ್ವನಿ, ಅಕ್ಷರ, ಪದ, ವಾಕ್ಯರಚನಾ ವಿಧಾನಗಳು, ಅವುಗಳ ಸವಿನಯ ಅಭಿವ್ಯಕ್ತಿ ಅವುಗಳಿಗೆ 'ಸಾಥ್' ನೀಡುವ ಸಂಗೀತ ಹಾಗೂ ಸಂಗೀತ ಪರಿಕರಗಳು ಅವುಗಳೊಂದಿಗೆ ಪುರಾಣಿಕ ಹಾಗೂ ಪ್ರವಚನಕಾರ ಹೊಂದಿರಬಹುದಾದ ಸಂಬಂಧದ ರೀತ್ಯಾ ಹೊರಹೊಮ್ಮುವ ವಾಕ್‌ಚಾತುರ್ಯ- ಅವರಿಗೆ ಬೆಂಬಲವಾಗಿ ನಿಲ್ಲುತ್ತವೆ.

ಈಗಾಗಲೇ ಹೇಳಿದಂತೆ, ಪವಾಡಗಳ ವೈಭವೀಕರಣದಲ್ಲೇ ಪುರಾಣಕಾರನ ಉದ್ದೇಶ ಮುಗಿಯುತ್ತದೆ. ಪುರಾಣ ಸಾಹಿತ್ಯದಲ್ಲಿ ವ್ಯಕ್ತಿ ಪೂಜೆ ಇದೆ, ವಸ್ತು-ವಿಶ್ಲೇಷಣೆ ಕಾಣದು ವೈಚಾರಿಕತೆಗಂತೂ ಅವಕಾಶವೇ ಇಲ್ಲ. ಉದಾತ್ತ ವ್ಯಕ್ತಿಗಳ ಜೀವನ ಚರಿತ್ರೆಗಳನ್ನು ವಸ್ತುವನ್ನಾಗಿ ಆಯ್ದುಕೊಳ್ಳುವ ಪುರಾಣ ಕರ್ತೃವಿಗೆ, ವಾಸ್ತವಿಕತೆಗಿಂತ ಧ್ವನಿತಾರ್ಥದ ಕಡೆಗೇ ಮೊದಲ ಪ್ರೀತಿ.

ಒಂದು ವಸ್ತುವನ್ನು ಕೇಂದ್ರೀಕೃತವನ್ನಾಗಿಸಿ ರಚಿಸಿದ ಪುರಾಣಗಳು ನವರಸಗಳಿಂದ ತುಂಬಿಕೊಂಡಿವೆ.

ಇದು ಪುರಾಣಗಳ ಕಾಲವಲ್ಲ. ತನ್ನ ಬದುಕು ಅದರ ಸಮಸ್ಯೆಗಳು ಹಾಗೂ ಅವುಗಳ ಪರಿಹಾರಕ್ಕಾಗಿ ತಾನು ನಡೆಸುವ ನಿತ್ಯ ಹಾಗೂ ನಿಲ್ಲದ ಹೋರಾಟಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸುವ ಪ್ರವಚನಗಳತ್ತ ವರ್ತಮಾನದ ನಾಗರಿಕನಿಗೆ ಒಲವು ಮೂಡಿದೆ. ಜನಸಾಮಾನ್ಯನ ಮೇಲೆ ಪ್ರವಚನಗಳು ಪ್ರಭಾವ ಬೀರುತ್ತಿವೆ.

ಇದಕ್ಕೆ ಕಾರಣಗಳುಂಟು. ಬಸವಾದಿ ಶರಣರು, ಆ ನಂತರದ ವಚನಕಾರರು ಹಾಗೂ ಇಂದಿನ ವಚನಕಾರರು-ಇವರಿಗೆಲ್ಲ ಶ್ರೀಸಾಮಾನ್ಯನೇ ಸರ್ವಮಾನ್ಯ. ಜನಸಾಮಾನ್ಯನಿಂದ, ಜನಸಾಮಾನ್ಯನಿಗಾಗಿ ರಚಿಸಲ್ಪಟ್ಟ ವಚನಗಳಿಗೆ ಜನಸಾಮಾನ್ಯನ ಬದುಕೇ ಮೂಲಾಧಾರಿ.

ವಚನಗಳು ಯಾವ ಕಾಲದಲ್ಲಿಯೇ ರಚಿಸಲ್ಪಟ್ಟಿದ್ದರೂ ಸಾರ್ವಕಾಲಿಕ (Universal) ಸತ್ಯವನ್ನೇ ಬೋಧಿಸುತ್ತವೆ. ವರ್ತಮಾನದ ತವಕ-ತಲ್ಲಣಗಳಿಗೆ, ಆತಂಕ-ಆಘಾತಳಿಗೆ ಈ ವಚನಗಳಲ್ಲಿ ಪರಿಹಾರ ಸೂಚಿಸುತ್ತವೆ. ಇಂತ ವಚನಗಳೇ ಪ್ರವಚನಗಳಿಗೆ 'ಆಹಾರ'ವಾಗಿರುವದರಿಂದ, ಪ್ರವಚನಗಳು ಯಾವ ಕಾಲಕ್ಕೂ ಪ್ರಸ್ತುತತೆ ಕಾಯ್ದುಕೊಂಡು ಹೋಗಬಲ್ಲವು.

ವರ್ಗರಹಿತ, ವರ್ಣರಹಿತ ಹಾಗೂ ಲಿಂಗತಾರತಮ್ಯ ಮಾಡದಂಥ ಸದೃಢ ಸಮಾಜ ನಿರ್ಮಾಣ ಬಸವಾದಿ ಶರಣರ ಆಶಯವಾಗಿತ್ತು. ಅವರ ಆ ಆಶಯವೇ ಇಂದಿನ ಪ್ರವಚನಗಳ ಆಶಯವೂ ಆಗಿದೆ. ದೇವರು-ದಿಂಡರುಗಳ ಹೆಸರಲ್ಲಿ ನಡೆದುಕೊಂಡು ಬಂದಿರುವ ಕಂದಾಚಾರ, ಮುಗ್ಧರ ಶೋಷಣೆಯನ್ನು ಖಂಡಿಸುವದಲ್ಲದೆ, ವೈಚಾರಿಕ ದೃಷ್ಟಿಕೋನ ಬೆಳೆಸುವತ್ತ ಪ್ರವಚನಕಾರರು ಪ್ರಯತ್ನಿಸುತ್ತಿರುವುದು ಸೂಕ್ತವೂ ಹಾಗೂ ವರ್ತಮಾನದ ಅಗತ್ಯವೂ ಆಗಿದೆ.

ಇಂದು ಪ್ರವಚನಗಳು ಪರಿಣಾಮಕಾರಿ ಸಮೂಹ ಮಾಧ್ಯಮವಾಗಿ ಬೆಳೆದು ಬಂದಿವೆ. ಸಾಮಾಜಿಕ ಪರಿವರ್ತನೆಯಲ್ಲಿ ಇಂತಹ ಪ್ರವಚನಗಳು ಯಾವ ರೀತಿ ಪಾತ್ರವಹಿಸಿಬಲ್ಲವೆಂಬುದಕ್ಕೆ, ಪ್ರವಚನಕಾರರು ನಡೆಸುವ ಪ್ರವಚನಗಳನ್ನು ಉದಾಹರಿಸ ಬಹುದಾಗಿದೆ.

ಶ್ರೀ ಸಿದ್ದೇಶ್ವರ ಸ್ವಾಮಿಗಳ ದಾರಿಯಲ್ಲಿ ಇಂದು ಹಲವಾರು ಯುವ ಪ್ರವಚನಕಾರರು ಮುನ್ನಡೆಯುತ್ತಿರುವುದು ನಿಜಕ್ಕೂ ಸಂತಸದ ಸಂಗತಿ. ಆದರೂ, ಪ್ರವಚನಗಳ ಮೇಲೆ ಪುರಾಣಿಕರ ಪ್ರಭಾವ ಇನ್ನೂ ಇದೆ. ವಿಷಯವನ್ನು ಅನಗತ್ಯವಾಗಿ ಬಿಂಬಿಸುವ ಸಂಬಂಧವಲ್ಲದ

ಅದ್ಭುಕತೆಗಳನ್ನು ದೃಷ್ಟಾಂತಗಳನ್ನು ಬಳಸುವದು ಕಡಿಮೆಯಾಗಬೇಕು. ಪ್ರವಚನಗಳ ಮೂಲ ವಿಷಯಕ್ಕೆ ಧಕ್ಕೆ ಬರದಂತೆ, ಪ್ರತಿಪಾದಿಸುವ ಕಲೆ ಕರಗತವಾಗಿಸಿಕೊಳ್ಳಬೇಕು-ಎಂದು ಅನಿಸುತ್ತದೆ.

ಈ ಪ್ರವಚನಗಳ ಭಾಷೆಯು ಸುಲಭವಿರುತ್ತದೆ. ಇದು ಮನೆಮಾರಿನ ಹಾಗೂ ನಮ್ಮ ನಿತ್ಯದ ಸಂಭಾಷಣೆಯ ಭಾಷೆಯಾಗಿರುತ್ತದೆ. ಅದರಲ್ಲಿಯ ಅಂಶಯವು ಅತ್ಯಂತ ಪ್ರಮಾಣಪೂರ್ಣ ಹಾಗೂ ವ್ಯವಹಾರ ಸಿದ್ಧವಾಗಿರುತ್ತದೆ. ಭಗವಂತನ ಸಾನಿಧ್ಯದ ಹೊರತಾಗಿ ಮನುಷ್ಯನಿಗೆ ಜೀವನದಲ್ಲಿ ಸಮಾಧಾನ ಸಿಗಲು ಶಕ್ಯವಿಲ್ಲ. ಭಗವಂತನ ಸಾನಿಧ್ಯವನ್ನು ಸಾಧಿಸುವದಕ್ಕಾಗಿ ಅವನ ಅನುಸಂಧಾನದಂತಹ ಬೇರೆ ಮಾರ್ಗವಿಲ್ಲ. ಅನುಸಂಧಾನವನ್ನಿಡುವ ಪರಮಾರ್ಥದಲ್ಲಿಯ ನಿಜವಾದ ಕಲೆಯಾಗಿರುತ್ತದೆ. ಭಗವಂತನ ನಾಮದಿಂದ ಭಗವಂತನ ಅನುಸಂಧಾನವು ಸಾಧಿಸುತ್ತದೆ. ಮನುಷ್ಯನು ಅಖಂಡ ನಾಮದಲ್ಲಿ ಇದ್ದದ್ದಾದರೆ ಪ್ರಪಂಚದ ವಿದ್ಯಮಾನ ಪರಿಸ್ಥಿತಿಯಲ್ಲಿ ಯಾವುದೇ ವ್ಯತ್ಯಾಸವನ್ನುಂಟುಮಾಡದೇ, ಅಲ್ಲದೇ ನಮ್ಮ ಬಾಹ್ಯರಂಗಗಳಲ್ಲಿ ಪರಿವರ್ತನೆಯುಂಟು ಮಾಡದೇ ಅವನಿಗೆ ಸ್ವರೂಪದ ಸಾಕ್ಷಾತ್ಕಾರವಾಗುತ್ತದೆ. ಇದೇ ಈ ಎಲ್ಲ ಪ್ರವಚನಗಳ ಮುಖ್ಯ ತಾತ್ಪರ್ಯವಾಗಿರುತ್ತದೆ.

ಲೋಕದಲ್ಲಿ ಬಹುಪಾಲು ಜನ ಶಬ್ದಜಾಲದಲ್ಲಿ ಸಿಲುಕಿದ್ದಾರೆ ಅವರಿಗೆ ಪರಮಸತ್ಯದ ಅರಿವಿಲ್ಲ, ಘನ ಅಸ್ತಿತ್ವದ ತಿಳುವಳಿಕೆ ಇಲ್ಲ, ಇಂಥವರ ಬದುಕು ವ್ಯರ್ಥ. ಶಾಸ್ತ್ರೀಯ ಶಬ್ದಗಳನ್ನು ಲೀಲಾಜಾಲವಾಗಿ ಬಳಸುವುದು ಒಂದು ಕಲೆ, ಲೋಕದವರು ಅದರಲ್ಲಿ ನಿಪುಣರು. ಬ್ರಹ್ಮ, ಆತ್ಮ, ಮಾಯೆ, ಸವಿಕಲ್ಪ, ನಿರ್ವಿಕಲ್ಪ, ಸಾಕ್ಷಾತ್ಕಾರ ಇಂಥ ಪಾರಮಾರ್ಥಿಕ ಶಬ್ದಗಳನ್ನು ಸಲೀಸಾಗಿ ಬಳಸಿ ಸುಂದರ ತಾತ್ವಿಕ ಸೌಧವನ್ನೇ ಕಟ್ಟಬಲ್ಲರು. ಆಡಂಬರದ ಸಿದ್ಧಾಂತಗಳನ್ನು ನುಡಿಸಬಲ್ಲರು. ಆ ಮೂಲಕ ನಿತ್ಯಮುಕ್ತರಾದೆವೆಂಬ ಭ್ರಮೆಯನ್ನೇ ಉಂಟುಮಾಡಬಲ್ಲರು. ಆದರೇನು? ಅದೆಲ್ಲ ಬರೀ ಶಬ್ದ ಸಂಭ್ರಮ. ಅಭ್ಯಸಿತ ಶಬ್ದಗಳ ಕಲಾತ್ಮಕ ಬಳಕೆ ಶಬ್ದರಸಿಕರಾದ ಅವರಿಗೆ ನಿರಾತ್ಮದ ಹೊಳಹಿಲ್ಲ. ವಿಶ್ವದ ಆದ್ಯಂತಗಳಲ್ಲಿ ನಿಶಾಂತವಾಗಿ ವ್ಯಾಪಿಸಿದ ಕಾಲಾತೀತ ಪರವಸ್ತುವಿನ ಅಪರೋಕ್ಷಾನುಭವವಿಲ್ಲ ಅವರು ಶಬ್ದದಲ್ಲಿ ಬುದ್ಧರು, ಆದರೆ ಭಾವದಲ್ಲಿ ಬದ್ಧರು. ಒಂದರ್ಥದಲ್ಲಿ ಜಾಗ್ರ, ಸ್ವಪ್ನ, ಸುಪ್ತಿಗಳೇ ಮೂರು ಲೋಕಗಳು. ಜಾಗ್ರದಲ್ಲಿ ಐಂದ್ರಿಕ ಸುಖಾನುಭವ, ಸ್ವಪ್ನದಲ್ಲಿ ವಾಸನಾ ಸುಖಾನುಭವ, ಸುಪ್ತಿಯಲ್ಲಿ ತಮಂಧದ ಸುಖಾನುಭವ ಬಹುಜನ ಈ ತ್ರಿವಿಧ ಸುಖಗಳಲ್ಲಿಯೇ ಆಸಕ್ತರು. ಅವರ ಮನಸ್ಸು ಆ ಸುಖಾನುಭವದಲ್ಲಿ, ಅವರು ಶಾಸ್ತ್ರಗಳನ್ನು ಅಭ್ಯಸಿಸಬಹುದು ತತ್ತ್ವ-ವಿತತ್ತ್ವಗಳ ಕುರಿತು ಬಹುಮಾರ್ಮಿಕವಾಗಿ ಮಂಡಿಸಬಹುದು, ವ್ಯಾಖ್ಯಾನಿಸಬಹುದು ಆದರೇನು? ಅವೆಲ್ಲ ಬರಿ ಶಾಬ್ದಿಕ.

ಅಪರೋಕ್ಷಾನುಭವವಿಲ್ಲವಾಗಿ ಅವರ ಬದುಕು ಬರಿ ಶಬ್ದ ಸಡಗರದಲ್ಲಿ ನಶಿಸಿ ಹೋಗುತ್ತದೆ. ವಾಗ್ವಿಲಾಸನಿಮಗ್ನರಾದ ಅವರಿಗೆ ಪರಮುಕ್ತಿಯ ಅನುಭವ ಅಳವಡದಾಗಿ ಸಾರ್ಥಕತೆ ಪರಮಶಾಂತಿ ಎಂಬುದೆಲ್ಲ ಬರೀ ಕನಸು. ಶಬ್ದಗಳಿರುವುದು ಬರಿ ಕಲಾತ್ಮಕ ಬಳಕೆಗಾಗಿ ಅಲ್ಲ. ಅವು ನಿರ್ದೇಶಿಸುವ ಅರ್ಥದ ಅನುಭವಕ್ಕಾಗಿ ಶಾಸ್ತ್ರಗಳು ಶಬ್ದಮಾಲೆಗಳು ಅವು ನಿರ್ದೇಶಿಸುವುದು ಪರಮವಸ್ತುವನ್ನು ಸಾಧಕನಾದವನು ಆ ಶಾಸ್ತ್ರಶಬ್ದವಿಡಿದು ನಿಶ್ಶಬ್ದ ಪರವಸ್ತುವಿನತ್ತ ಗಮನಹರಿಸಬೇಕು. ತನಗೂ ಆ ಪರವಸ್ತುವಿಗೂ ಇರುವ ಅಭಿನ್ನತೆಯನ್ನು ಅರಿಯಬೇಕು. ಮೌನವಾಗಬೇಕು. ಅದು ಆತ್ಮಾನುಭವ. ಅದು ಬ್ರಹ್ಮಾನುಭವ. ಅದು ಶಬ್ದ ಮುಗ್ಧವಾದ ನಿಶ್ಯಬ್ಧ ನಿರ್ವಯಲ ಸ್ಥಿತಿ. ಅದನ್ನು ಪಡೆದಾಗ ಬದುಕು ಸಾರ್ಥಕ.

ಪ್ರವಚನ ಪರಂಪರೆಯು ಸರ್ವಧರ್ಮದ ಸಮನ್ವಯ ಸಾಧನೆಗೆ ಕಾರಣವಾಗಿದೆ. ನೀತಿ, ಪ್ರೀತಿ, ಭಾವ, ಭಕ್ತಿ, ಜನಮಾಸದಲ್ಲಿ ತುಂಬುವ ಇಡೀ ಮಾನವ ಕುಲ ಒಂದೇ ಎಂಬ ಭಾವನೆಯನ್ನು ಸರ್ವರಲ್ಲಿ ತಂದುಕೊಡುವ, ಸಮಾಜದಲ್ಲಿ ಸಾಮರಸ್ಯ ತರುವ ಮಾಧ್ಯಮವಾಗಿದೆ. ಪ್ರವಚನಗಳ ಮೂಲಕ ವ್ಯಸನಮುಕ್ತ ಸಮಾಜ ನಿರ್ಮಿಸಲು ಸಾಧ್ಯ. ಜಮಖಂಡಿ ತಾಲೂಕಿನ ಕುಂಚನೂರು ಗ್ರಾಮದ ನಿವಾಸಿ ಮಲ್ಲಪ್ಪ ಸುನದಾಳ, ಒಂದು ದಿನ ನಮ್ಮ ಪ್ರವಚನ ಕೇಳಲು ಕಂಠ ಪೂರ್ತಿ ಕುಡಿದು ಬಂದಿದ್ದನು. ದಾರಿಯಲ್ಲಿ ನಮಗೆ ಅಡ್ಡಲಾಗಿ ನಿಂತು ಕೂಗುತ್ತಿದ್ದನು. ಅವನನ್ನು ಊರಿನವರ ಮೂಲಕ ವೇದಿಕೆಗೆ ಕರೆತಂದು ನಿನ್ನ ಹೆಂಡತಿ ನಮ್ಮ ತಂಗಿ, ನಿನ್ನ ಮಕ್ಕಳು ನನಗೆ ಅಳಿಯಂದಿರು, ಕುಡಿದು ಆಘಾತವಾದರೆ ಪ್ರಾಣ ಕಳಿದುಕೊಂಡರೆ ಮುಂದೆ ನಿನ್ನ ಹೆಂಡತಿ ಮಕ್ಕಳು ಬಿದಿ ಪಾಲಾಗುತ್ತಾರೆ. ಜೀವನವಿಡಿ ದುಃಖದ ಜೀವನವನ್ನು ನಡೆಸುವಂತಾಗುತ್ತದೆ. ಆದ್ದರಿಂದ ಇನ್ನೆದೆಂದು ನೀನು ಕುಡಿಯಬಾರದು ಎಂದು ಕುಡಿತದಿಂದಾಗುವ ದುಷ್ಪರಿಣಾಮಗಳನ್ನು ವಿವರಿಸಿದಾಗ ತುಂಬಾ ಕಣ್ಣೀರು ಹಾಕಿ ಪ್ರತಿಜ್ಞೆ ಮಾಡಿ ಅಂದಿನಿಂದ ಇಂದಿನವರೆಗೆ ಕುಡಿಯವದನ್ನು ಬಿಟ್ಟಿದ್ದಾನೆ. ಮಕ್ಕಳು ಪತ್ನಿಯ ಜೊತೆ ಸುಖವಾಗಿ ಜೀವನ ನಡೆಸುತ್ತಿದ್ದಾನೆ. ಮಂತ್ರ ತಂತ್ರಗಳಿಂದ ಜಪ ತಪಗಳಿಂದ ಸಾಧ್ಯವಾಗದ್ದು ಪ್ರವಚನದ ಒಂದು ಮಾತಿನಿಂದ ವ್ಯಸನ ಮುಕ್ತ ಸಮಾಜ ಕಟ್ಟಲು ಸಾಧ್ಯವಾಗಿದೆ. ಇಳಕಲ್‌ದ ಪರಮ ಪೂಜ್ಯ ಡಾ. ಮಹಾಂತಪ್ಪಗಳು ಸರಕಾರದಿಂದಲ್ಲೂ ಸಾಧ್ಯವಾಗದ ತಮ್ಮ ಮಹಾಂತ ಜೋಳಿಗೆಯ ಮೂಲಕ ಅಂದಾಜು ಲಕ್ಷಕ್ಕಿಂತ ಹೆಚ್ಚಿನ ಜನರನ್ನು ವ್ಯಸನ ಮುಕ್ತಗೊಳಿಸಿದ್ದಾರೆ. ಆ ಕುಟುಂಬ ಇಂದು ಆನಂದಮಯ ಜೀವನವನ್ನು ನಡೆಸುತ್ತಿದ್ದಾರೆ. ಜಾತಿಯ ಶೃಂಖಲೆಯನ್ನು ಹರಿದು ಅಂತರ್ಜಾತಿ ವಿವಾಹಕ್ಕೆ ನಾಂದಿ ಹಾಡಿದ್ದಾರೆ. ನೊಂದವರ, ಬೆಂದವರ, ದಲಿತರ, ನಿರಾಶ್ರಿತರ, ಕೇರಿ ಮನೆಗಳನ್ನು ಸುತ್ತಿ ಶರಣ ತತ್ತ್ವ ತಿಳಿಸಿ, ಲಿಂಗದೀಕ್ಷೆ ನೀಡಿ ಬಸವಣ್ಣನವರು ಕಂಡ

ಸಮಾನತಾ ಸಮಾಜವನ್ನು ಸ್ಥಾಪಿಸಿ ಅವರನ್ನು ಲಿಂಗವಂತರನ್ನಾಗಿಸಿ ಅವರ ಮನೆಯಲ್ಲಿಯೇ ಲಿಂಗಪೂಜೆಯನ್ನು ನೆರವೇರಿಸಿ ಅಲ್ಲಿಯೇ ಪ್ರಸಾದ ಸ್ವೀಕರಿದ ಸಾಹಸಿಗರು ಈ ಪೂಜ್ಯರು. ಆದ್ದರಿಂದಲೇ ಇಂದು ಅವರಿಗೆ ಮಧ್ಯಪಾನ ನಿಷೇಧ ಸ್ವಯಂ ಮಂಡಳಿಯವರು 'ಸಂಯಮ ಪ್ರಶಸ್ತಿ' ನೀಡಿದ್ದಲ್ಲದೆ ಕರ್ನಾಟಕ ಸರಕಾರ 'ಬಸವ' ಪುರಸ್ಕಾರ ಮತ್ತು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಗೌರವ ಡಾಕ್ಟರೇಟ್ ನೀಡಿದ್ದಾರೆ.

ಒಟ್ಟಾರೆ ಪ್ರವಚನಗಳು ಜನರ ಮೇಲೆ ತುಂಬಾ ಪ್ರಭಾವ ಬೀರುತ್ತವೆ. ಇಂದು ಒತ್ತಡದ ಬದುಕಿನಲ್ಲಿ ಸಮಾಧಾನ ಎಂಬುದು ಮರೀಚಿಕೆಯಾಗಿದೆ. ಇಂದಿನ ಸಂದರ್ಭದಲ್ಲಿ ಮನಸ್ಸು ಅರಳುವ ಮಾತುಗಳ ಅವಶ್ಯಕತೆ ಇದೆ. ಪ್ರವಚನಕಾರನ ಮೇಲೆ ಕೇಳುಗರು ಸಂಪೂರ್ಣ ವಿಶ್ವಾಸವಿಡುತ್ತಾರೆ. ಅವರಲ್ಲಿ ದಾಸೋಹ ಭಾವನೆ ಬೆಳೆದು ಬರುತ್ತದೆ. ಪ್ರವಚನಕಾರನು ಮಾಡುವ ಸಮಾಜೋದ್ಧಾರ್ಮಿಕ ಯಾವುದೇ ಕಾರ್ಯಗಳಿಗೆ ಶ್ರೋತೃಗಳು ಸಹಾಯ ಮಾಡುತ್ತಾರೆ. ಪ್ರವಚನ ಪಿತಾಮಹ ಪೂಜ್ಯ ಲಿಂಗಾನಂದ ಅಪ್ಪಗಳವರ ಪೂಜ್ಯ ಮಾತಾಜಿಯವರ ಪ್ರವಚನಗಳನ್ನು ಆಲಿಸಿದ ಪ್ರವಚನ ಅಭಿಮಾನಿಗಳು ಬಸವ ಧರ್ಮ ನಿಷ್ಠರು 'ವಿಶ್ವಕಲ್ಯಾಣ ಮಿಷಣ್ ಮತ್ತು ಬಸವಕಲ್ಯಾಣದಲ್ಲಿ ಬೃಹತ್ ಬಸವಮೂರ್ತಿಯ ಅನಾವರಣಕ್ಕೆ ಕಾರಣರಾಗಿದ್ದಾರೆ. ಕಂಠಸ್ಥವಾಗಿರುವ ಪ್ರವಚನ ಸಾಹಿತ್ಯವು ಗ್ರಂಥ ಮತ್ತು ಕ್ಯಾಸೆಟ್‌ಗಳ ಮೂಲಕ ನಾಡಿನ ಜನಮನ ತಲುಪುವಂತ್ತಾಗಿದೆ. ಸಾಧಕರಿಗೆ ಶಿಕ್ಷಣ, ಬಡಮಕ್ಕಳಿಗೆ ಸಂಸ್ಕಾರ, ಪ್ರಸಾದ ದಾಸೋಹ, ಧರ್ಮಪ್ರಸಾರ, ಶರಣ ಮೇಳದಂತಹ ಘನ ಕಾರ್ಯವು ಪ್ರವಚನಗಳಿಂದ ಸಾಧ್ಯವಾಗಿವೆ. ನಾವು ಕೂಡಾ ಕಳೆದ ೧೯ ವರ್ಷಗಳಿಂದ ನಾಡಿನೆಲ್ಲೆಡೆ ಶರಣ ತತ್ತ್ವದಡಿಯಲ್ಲಿ ಪ್ರವಚನ ನೀಡುತ್ತಿದ್ದೇವೆ. ಪ್ರವಚನವನ್ನು ಮೆಚ್ಚಿಕೊಂಡ ಅಭಿಮಾನಿಗಳು, ಜನಪ್ರತಿನಿಧಿಗಳು, ಸರಕಾರ ಸಂಘ-ಸಂಸ್ಥೆಗಳು ಮತ್ತು ಮಠಾಧೀಶರೆಲ್ಲರು ಸಹಕಾರದಿಂದ ಇಂದು ದೊಡ್ಡ ಪ್ರಮಾಣದಲ್ಲಿ ಹೆತ್ತವರಿಲ್ಲದ ಬಡಮಕ್ಕಳಿಗೆ ಅನ್ನ, ಆರೋಗ್ಯ, ಶಿಕ್ಷಣ, ಸಂಸ್ಕಾರ ನೀಡುವ 'ಬಸವಜ್ಞಾನ ಗುರುಕುಲ'ವೆಂಬ ಆಶ್ರಮವು ಸಿದ್ಧಗೊಂಡಿದೆ. ಇಂತಹ ಒಂದು ಆಶ್ರಮದ ನಿರ್ಮಾಣಕ್ಕೆ ಪ್ರವಚನವೇ ಒಂದು ತಾಯಿಬೇರು ಎಂದು ಹೇಳಬಹುದು. ಸಂಘ-ಸಂಸ್ಥೆಗಳ ಅಭಿವೃದ್ಧಿಗೆ, ಶಿವಾನುಭವ ಮಂಟಪದ ಸಾಧನೆಗೆ, ಶಿಕ್ಷಣ ಸಂಸ್ಥೆಗಳ ಉಗಮಕ್ಕೆ ಪ್ರವಚನಗಳೇ ಕಾರಣವಾಗಿವೆ.

ಅಲ್ಲದೆ ಪ್ರವಚನಗಳಿಂದ ದೇಶೀ ಚಿಂತನೆಗಳು ಹಸಿರಾಗಿ ಉಳಿಯುತ್ತವೆ. ಜಾನಪದ, ಗಾದೆ, ಬಲ್ಲವರ ನುಡಿಗಳು ಸರ್ವಜ್ಞನ ತ್ರಿಪದಿಗಳು, ಕವಿಸಾಹಿತಿಯ ಪ್ರಚಲಿತ ಮಾತುಗಳು (ಉದಾಹರಣೆಗೆ : ದೇವನ ಮನೆಯಿದು ಈ ಜಗವೆಲ್ಲ- ಬ.ಗಿ.ಯಲ್ಲಟ್ಟಿ) ಮುಂತಾದ ಚಿಂತನೆಗಳು ದೇಶಿ ಸೊಗಡು ಜೀವಂತವಾಗಿ ಉಳಿಯಲು ಪ್ರವಚನಗಳು ಸಹಕರಿಸುತ್ತವೆ.

ಪ್ರವಚನಗಳು ಶಾಲಾ–ಕಾಲೇಜು ಮಕ್ಕಳ ವ್ಯಕ್ತಿತ್ವ ವಿಕಾಸಕ್ಕೂ ಕಾರಣವಾಗಿವೆ. ಯುವಕರಲ್ಲಿ ದೇಶಭಕ್ತಿ, ಆರೋಗ್ಯದ ಪರಿಕಲ್ಪನೆ, ಯೌವ್ವನದ ನಿತ್ಯೋತ್ಸವ, ಸಮಯ ಪ್ರಜ್ಞೆ, ಆತ್ಮವಿಶ್ವಾಸ, ಸತತ ಪರಿಶ್ರಮ ಹೀಗೆ ಹತ್ತು ಹಲವು ವಿಷಯಗಳನ್ನು ಪ್ರವಚನಗಳ ಮೂಲಕ ತಿಳಿ ಹೇಳುವುದು, ಆದರ್ಶ ಪುರಷರ ಸಾಧನೆ, ಸಿದ್ಧಿ, ಬದುಕು, ಬರಹ ಉದಾಹರಿಸಿದಾಗ ಯುವಶಕ್ತಿ ಜಾಗೃತಿಗೊಂಡು ವಿದ್ಯಾರ್ಥಿಗಳು ನಾಡ ಕಟ್ಟುವ ನೇತಾರರಾಗುತ್ತಾರೆ. ರಾಮಕೃಷ್ಣ ಆಶ್ರಮದ ಸ್ವಾಮಿ ನಿರ್ಭಯಾನಂದ ಸ್ವಾಮೀಜಿ, ತುಮಕೂರಿನ ಡಾ. ಶಿವಾನಂದ ಶಿವಾಚಾರ್ಯ ಸ್ವಾಮೀಜಿ, ಡಾ. ಗುರುರಾಜ ಕರಜಗಿ ಚಿಂತಕರು, ಎಸ್. ಷಡಕ್ಷರಿ (ಕ್ಷಣಹೊತ್ತು ಆಣಿಮುತ್ತು ಅಂಕಣಕಾರರು) ಶರಣ ಅರವಿಂದ ಜತ್ತಿ ಅಧ್ಯಕ್ಷರು ಬಸವ ಸಮಿತಿ (ವಚನಗಳಲ್ಲಿ ವ್ಯಕ್ತಿತ್ವ ವಿಕಾಸ ಪ್ರವಚನಕಾರರು) ಬೆಂಗಳೂರು. ಮುಂತಾದವರ ಮಾತುಗಳಿಂದ ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಾಸಗೊಂಡಿದೆ. ಪ್ರವಚನಗಳು ವ್ಯಕ್ತಿತ್ವ ವಿಕಾಸಕ್ಕೆ ಕಾರಣವಾಗಿದೆ. ಕರ್ನಾಟಕದ ಏಕೀಕರಣದ ಸಮಯದಲ್ಲಿ ನಾಗನೂರು ರುದ್ರಾಕ್ಷಿ ಮಠದ ಪೂಜ್ಯ ಡಾ. ಶಿವಬಸವ ಮಹಾಸ್ವಾಮಿಗಳು ಬೆಳಗಾವಿ, ಡಾ. ಚನ್ನಬಸವ ಪಟ್ಟದ್ದೇವರು ಭಾಲ್ಕಿ, ನಾಡೋಜ ಡಾ. ಪಾಟೀಲ ಪುಟ್ಟಪ್ಪ ತಮ್ಮ ಪ್ರಭಾವಿ ಪ್ರವಚನ ಮಾತುಗಳಿಂದ ಗಡಿ, ನಾಡು, ಜಲ, ಭಾಷೆ, ಉಳಿಸಿ ಬೆಳೆಸುವಲ್ಲಿ ದುಡಿದಿದ್ದಾರೆ. ಪ್ರವಚನಗಳ ಮಾತುಗಳಿಂದ ಕನ್ನಡ ಕಟ್ಟುವ ಕೆಲಸವಾಗಿದೆ. ನಿಜಾಮನ ಆಡಳಿತ ವಿದ್ದ ಆ ಕಾಲದಲ್ಲಿ ಕನ್ನಡ ಶಾಲೆ ತೆರೆಯುವಂತಿರಲಿಲ್ಲ. ಕನ್ನಡವನ್ನು ಕಲಿಸುವಂತಿರಲಿಲ್ಲ. ಅಂತಹ ಸಂದರ್ಭದಲ್ಲಿ ಲಿಂಗೈಕ್ಯ ಡಾ. ಚನ್ನಬಸವ ಪಟ್ಟದ್ದೇವರು ಹೊರಗಡೆ ಉರ್ದು ನಾಮಫಲಕ ಹಾಕಿ ಕನ್ನಡ ಕಲಿಸಿದರು. ಆ ಭಾಗದ ಮಕ್ಕಳಿಗೆ ಕನ್ನಡ ಬಗ್ಗೆ ಅಭಿಮಾನ ಹುಟ್ಟಿಸಿದರು. ಅದರಂತೆ ಡಾ. ಪಾಟೀಲ ಪುಟ್ಟಪ್ಪನವರ ನೇರ ನಿಷ್ಠುರ ಹೋರಾಟದ ಮಾತುಗಳೂ ಸಹ ಪ್ರವಚನದ ಮಾತುಗಳೇ ಆಗಿವೆ.

ಪೂಜ್ಯ ಡಾ. ಬಸವಲಿಂಗ ಮಹಾಸ್ವಾಮಿಗಳು ಮಹಾಂತತೀರ್ಥ ಶಿರೂರು, ಪೂಜ್ಯ ಬಸವಾನಂದ ಮಹಾಸ್ವಾಮಿಗಳು ಮನಗುಂಡಿ, ಪೂಜ್ಯ ವಚನಾನಂದ ಸ್ವಾಮಿಜಿ, ಪೂಜ್ಯ ಸತ್ಯಮೇಧಾವಿಯವರಂತವರು ಇಂದು ತಮ್ಮ ಪ್ರವಚನಗಳ ಮೂಲಕ ಆರೋಗ್ಯ, ಯೋಗ, ಅಧ್ಯಾತ್ಮ ಹೇಳುತ್ತಿದ್ದಾರೆ. ಮುಂಜಾನೆ ಪ್ರಾತಃಕಾಲದಲ್ಲಿ ಯೋಗ ಮತ್ತು ಆರೋಗ್ಯ ಶಿಬಿರ ನಡೆಸಿ, ಮಿತ ಆಹಾರ ಮತ್ತು ಉಪವಾಸ ಹಾಗೂ ಆಸನಗಳ ಮಹತ್ವ ತಿಳಿಸಿ ನಾಡಿನುದ್ದಗಲಕ್ಕೂ ಎಲ್ಲ ಸಂಪತ್ತುಗಳಲ್ಲಿ ಆರೋಗ್ಯ ಸಂಪತ್ತು ಶ್ರೇಷ್ಠವೆಂದು ಸಾರುತ್ತಿದ್ದಾರೆ. ನೈಸರ್ಗಿಕ ಚಿಕಿತ್ಸೆಗಳ ಮೂಲಕ ವಾಸಿಯಾಗದ ರೋಗ ಗುಣ ಪಡಿಸುತ್ತಿದ್ದಾರೆ. ಒಟ್ಟಾರೆ ಪ್ರವಚನಗಳು ಮರ್ತ್ಯ ಮಾನವರ ಮನದ ಮೈಲಿಗೆ ಕಳಿಯುವ ಪಾವನ ಗಂಗೆಯಾಗಿದೆ. ಜಾತಿರಹಿತ ಸಮಾಜ ನಿರ್ಮಾಣಕ್ಕೆ ಸ್ವಾಸ್ತ್ಯ

ಮತ್ತು ಸುಂದರ ಜೀವನ ನಿರ್ಮಾಣಕ್ಕೆ ಕನ್ನಡ ಸಾಹಿತ್ಯಕ ಅಭಿವೃದ್ಧಿಗೆ ಗ್ರಂಥ ಪ್ರಕಟಣೆ ಪ್ರಚಾರಕ್ಕೆ ಧರ್ಮದಲ್ಲಿ ಶಾಂತಿ ಸಮಾಧಾನ ನೆಲೆಸಲು ಪ್ರವಚನಗಳು ಕಾರಣವಾಗಿವೆ.

ವಚನಗಳ ಸಮಗ್ರ ಅಧ್ಯಯನ ಮಾಡುವಾಗ ಎಲ್ಲ ವಚನಗಳೂ ಮೇಲೆ ಕಾಣುವಷ್ಟು ಸರಳವಲ್ಲ. ಗಂಭೀರವಾಗಿ ಅಧ್ಯಯನ ಮಾಡಿದಷ್ಟು ಅದರ ಹರವು ವಿಸ್ತಾರಗಳ ಅಧ್ಯಯನ, ಚರ್ಚೆ, ಚಿಂತನೆ, ಶಿವಾನುಭವಗಳ ವಚನಗಳ ಅರ್ಥದ ಆಳಕ್ಕಿಳಿದು ವಿಚಾರ ರತ್ನಗಳನ್ನು ತೆಗೆಯಬಹುದು. ಈ ದೃಷ್ಟಿಯಿಂದ ವ್ಯಾಖ್ಯಾನ, ಭಾಷ್ಯ, ಟೀಕೆ, ಟಿಪ್ಪಣೆಗಳು ಅಗತ್ಯವಾಗುತ್ತವೆ. ಹದಿನೈದನೆಯ ಶತಮಾನದಿಂದಲೂ ಶರಣರ ವಚನಗಳ ಸಂಕಲನ, ಪರಿಷ್ಕರಣ, ವ್ಯಾಖ್ಯಾನಗಳ ಕಾರ್ಯ ನಡೆಯಿತು. ಅರ್ಥವಿವರಣೆ, ವ್ಯಾಖ್ಯಾನ ವಚನಕ್ಕೆ ಸುಸಂಗತ ಧರ್ಮದ ಚೌಕಟ್ಟು ಮತ್ತು ಇಂದಿನ ವೈಚಾರಿಕ ದೃಷ್ಟಿ ಎರಡನ್ನು ಹಿನ್ನೆಲೆಯಾಗಿಟ್ಟುಕೊಂಡು ವಚನ ವಿವರಿಸುವುದು ನಿರ್ವಚನ.

ಹನ್ನೆರಡನೇ ಶತಮಾನದ ಸಾಹಿತ್ಯದ ಸುಗ್ಗಿ ಹದಿನೈದನೆಯ ಶತಮಾನದಲ್ಲಿ ಮರುಕಳಿಸಿತು. ಹಿಂದಿನ ವಚನಗಳ ಸಂಗ್ರಹಣ, ಪರಿಷ್ಕರಣ, ವಚನಗಳ ಕ್ರಮ ಜೋಡಣೆ, ವ್ಯಾಖ್ಯಾನ, ಟೀಕೆಗಳು ರಚನೆಯಾದವು, ವಿಜಯನಗರ ಸ್ಥಾಪನೆಯು ನಾಡಿನ ಪುಣ್ಯೋದಯವೆನಿಸಿತು. ಅದು ಧರ್ಮದ ಮತ್ತು ಸಾಹಿತ್ಯದ ಆಸ್ತಿಗೆ ರಕ್ಷಣೆ ಒದಗಿಸಿತು. ಕಲ್ಲು ಮಠದ ಪ್ರಭುದೇವ, ಮಹಾಲಿಂಗದೇವ, ಜಕ್ಕಣಾರ್ಯ, ಲಕ್ಕಣದಂಡೇಶ, ಮಗ್ಗೆಯಮಾಯಿದೇವ, ಗುರುಬಸವ ಮೊದಲಾದ ನೂರೊಂದು ವಿರಕ್ತರು ವಚನ ಸಂಸ್ಕರಣ ಕಾರ್ಯದಲ್ಲಿ ಎಷ್ಟರ ಮಟ್ಟಿಗೆ ತೊಡಗಿಕೊಂಡರೆಂದರೆ ಸೃಜನಶೀಲ ಸಾಹಿತ್ಯ ಸೃಷ್ಟಿಗೆ ಅವರಿಗೆ ಬಿಡುವೇ ಆಗಲಿಲ್ಲ.

ಆದಿಕಾಲದ ಚರಿತ್ರೆಗಳನ್ನು ಪೌರಾಣಿಕ ಅಂಶಗಳನ್ನು ಕಥಾನಕ ರೂಪದಲ್ಲಿ ತಿಳಿಸುವುದು ಜನರಲ್ಲಿ ದೇವರು ಧರ್ಮದ ಬಗ್ಗೆ ಅರಿವು ಮೂಡಿಸುವುದೇ ಆಗಿದೆ.

ವ್ಯಕ್ತಿಗಳ, ಜ್ಞಾನಗಳ, ಮಹಾಂತರ ಸಂತರ ಲೀಲೆಗಳನ್ನು ವಿಚಾರದರ್ಶನಗಳನ್ನು ಒಟ್ಟಾಗಿ ಸೇರಿಸಿ ವೈಭವೀಕರಿಸಿ ಒಮ್ಮೊಮ್ಮೆ ನಂಬಲು ಅಸಾಧ್ಯವಾಗದ ರೀತಿಯಲ್ಲಿ ಪ್ರಸ್ತುತಪಡಿಸುವುದೇ ಆಗಿದೆ.

ಒಬ್ಬ ವಾಚಕ–ಒಬ್ಬ ಪ್ರವಾಚಕ ಈರ್ವರೂ ರಾಮಾಯಣ, ಮಹಾಭಾರತದಂತಹ ಹಿರಿದಾದ ಕಾವ್ಯಗಳನ್ನು ಜನಸಾಮಾನ್ಯರಿಗೆ ತಿಳಿಸುವ ವಿಧಾನವೇ ಕಥನವಿಧಾನ. ಕಥಾನಕಗಳನ್ನು ಗಮಕ ಸಂಗೀತದಲ್ಲಿ ವಾಚಕ ಸಾದರ ಪಡಿಸುತ್ತಾನೆ. ಅದರ ಸಂಪೂರ್ಣ ಅರ್ಥವನ್ನು ಪ್ರವಾಚಕ ನಿರೂಪಿಸುತ್ತಾನೆ.

ಜನರಲ್ಲಿ ಭಕ್ತಿಯನ್ನು, ದೇವರು ಧರ್ಮದಲ್ಲಿ ನಂಬಿಕೆಯನ್ನು ಪಾಪ-ಪುಣ್ಯದ ಕಥೆಗಳನ್ನು ಭಯಬಿಂಬಿಸಿ ಹೇಳುವುದಾಗಿದೆ.

'ಪುರಾಣ್ ವಿಷಯಾನ್ ನಯತೇತಿ ಪುರಾಣಮ್' ಪುರಾಣ ಪದದ ಅರ್ಥ ತುಂಬಾ ಹಳೆಯದು. ಪೂರ್ವ ಸಂಪ್ರದಾಯಗಳಾದ ಧರ್ಮಾದಿ ವಿಷಯಗಳನ್ನು ಪ್ರತಿಪಾದಿಸುವುದು ಪುರಾಣ ಎನಿಸುತ್ತದೆ. ಒಟ್ಟಾರೆ ಪುರಾಣಗಳು ಭಾರತೀಯ ಸಂಸ್ಕೃತಿಯನ್ನು ತಿಳಿಸಿಕೊಡುತ್ತವೆ. ವೇದದ ಸಾರವೇ ಪುರಾಣ. ಸುಮಾರು ನಾಲ್ಕನೇ ಶತಮಾನದಿಂದಲೂ ಪುರಾಣಗಳ ಕಲ್ಪನೆಯಿದೆ.

ಪುರಾಣಗಳಲ್ಲಿ ಎರಡು ವಿಧಗಳಿವೆ. ೧) ಲಿಖಿತ ಪುರಾಣ. ೨) ಜನಪದ ಪುರಾಣ. ಪುರಾಣಗಳೇ ಕಾಲಾನುಕ್ರಮದಲ್ಲಿ ಪ್ರವಚನಗಳಾಗಿ ಮಾರ್ಪಟ್ಟವು.

ಒಬ್ಬ ಲೇಖಕ ಬರೆದು ಅವನ ಹೆಸರಿನಲ್ಲಿ ಪ್ರಚಲಿತವಿದ್ದ ಪುರಾಣ ಲಿಖಿತ ಪುರಾಣ. ಉದಾ: ಭೀಮಕವಿಯ ಬಸವ ಪುರಾಣ. ಇಡೀ ಸಮುದಾಯವೇ ಮತ್ತೆ-ಮತ್ತೆ ಬರೆಯುತ್ತ ಮೌಖಿಕವಾಗಿಯೂ ಪ್ರಸರಣ ಹೊಂದುವ ಪುರಾಣ ಜನಪದ ಪುರಾಣ.

ಕೀರ್ತನೆ: ಭಗವನ್ನಾಮಸ್ಮರಣೆಯನ್ನು ಭಗವಂತನ ಪವಾಡ ಸದೃಶ್ಯಲೀಲೆಗಳನ್ನು, ಸಂಗೀತ ಸಾಹಿತ್ಯದೊಂದಿಗೆ ಸಮೀಕರಿಸಿ, ಹಾವಭಾವದ ಜೊತೆಗೆ, ಪಾತ್ರವೇ ತಾವಾಗಿ ಪ್ರತಿಪಾದನೆ ಮಾಡುವುದೇ ಕೀರ್ತನೆ. ಈ ಪರಂಪರೆ ದಾಸಸಾಹಿತ್ಯದಿಂದ ಹುಟ್ಟಿಕೊಂಡಿದೆ. ಭಕ್ತಿಯ ಅಭಿವೃದ್ಧಿಗೆ ಇದು ಪ್ರೇರಕ.

ಹಾಡಿನ ಧಾಟಿಯಲ್ಲಿ ಸಂಗೀತ ಸಲಕರಣೆಗಳ ಜೊತೆ ವಿಷಯ ನಿರೂಪಿಸುವ ಕಲೆಯೇ ಕೀರ್ತನ. ಐತಿಹಾಸಿಕ ಧಾರ್ಮಿಕ ವ್ಯಕ್ತಿಗಳ ವ್ಯಕ್ತಿಚಿತ್ರಣ ಇಲ್ಲಿ ಮುಖ್ಯ. ಒಂದೆರೆಡು ಗಂಟೆಯಲ್ಲಿ ಒಬ್ಬ ಮಹಾಪುರುಷನ ಸಮಗ್ರ ಜೀವನ ವೃತ್ತಾಂತ ನಾಟಕೀಯ ಶೈಲಿಯಲ್ಲಿ ನವರಸಗಳಿಂದ ಪ್ರತಿಪಾದಿಸುವುದೇ ಆಗಿದೆ.

ನಲವಡಿ ಶ್ರೀಕಂಠಶಾಸ್ತ್ರಿಗಳು, ಬಿ. ಶಿವಮೂರ್ತಿಶಾಸ್ತ್ರಿಗಳು, ತೆಲ್ಲೂರ ಸಿದ್ಧಯ್ಯಶಾಸ್ತ್ರಿಗಳು. ಗದುಗಿನ ವೀರೇಶ್ವರಪುಣ್ಯಾಶ್ರಮದಲ್ಲಿ ಅನೇಕ ಕೀರ್ತನಕಾರರನ್ನು ಕಾಣಬಹುದು.

ಉಪನ್ಯಾಸ: ಒಂದು ವಿಷಯದ ಮೇಲೆ ಸ್ವಂತ ಅಧ್ಯಯನದ ಮೂಲಕ ವಿಮರ್ಶೆಗಳಿಂದ, ಚಿಂತನೆಗಳಿಂದ, ವಿಶೇಷಿಸಿ, ವಿಷಯ ವ್ಯಾಪ್ತಿಯನ್ನು ಸರಳವಾಗಿ ಮನದಟ್ಟು ಮಾಡುವುದೇ ಉಪನ್ಯಾಸ. ಅಧಿಕೃತವಾದ ವಿಷಯವನ್ನು ವಿವರವಾಗಿ ಹೇಳುವುದು. ಉಪದೇಶ-ಬೋಧನೆ ಕಥೆ ದೃಷ್ಟಾಂತಗಳಿರದ ಪಾಠಪ್ರವಚನ.

ತತ್ತ್ವಜ್ಞಾನಿ: ತತ್ತ್ವಗಳನ್ನು ವಿಭಜಿಸಿ ಮಾತನಾಡುವವ ಜಡ-ಚೇತನ ಬೇರೆ-ಬೇರೆ ಮಾಡಿ ಮೂಲವಸ್ತುಗಳು ಏನೇನಿವೆಯಂತೆ ಗೊತ್ತು ಮಾಡಿಕೊಂಡರೆ ತತ್ತ್ವಜ್ಞಾನಿ ಎನ್ನುತ್ತೇವೆ. ಉದಾ:- ಹೂವಿನಲ್ಲಿಯ ದಳಗಳು ಎಷ್ಟು ಪುಂಕೇಶರ, ಸ್ತ್ರೀಕೇಶರ ಹೇಗೆ ಇವೆ ? ಬಣ್ಣ ಎಂಥದ್ದು ? ಯಾವ ತಳಿ ? ಬೆಲೆ ಎಷ್ಟು ? ಎಂದು ತತ್ತ್ವಗಳನ್ನು ವಿಭಜಿಸಿದವ ತತ್ತ್ವಜ್ಞಾನಿ.

ದಾರ್ಶನಿಕ: ತತ್ತ್ವಗಳಲ್ಲಿ ಬೆರೆತು ಹೋದವರು, ವಿಶಾಲಹೃದಯಿಗಳು, ವಿಶ್ವವೇ ನನ್ನದೆಂಬ ಸಮತಾವಾದಿಗಳು. ತತ್ತ್ವವನ್ನು ಅನುಭವಿಸಿದವರು. ಹೂವಿನಲ್ಲಿ ಒಂದಾಗಿ ಹೂವೇ ತಾವಾಗಿ ಮೈಮನ ಮರೆಯುವವರು, ಕಣ್ಣು-ಮನದಲ್ಲೆಲ್ಲ ಹೂ ತುಂಬಿಕೊಂಡು ತಾನೊಂದು ಹೂ ಆದವರೇ ದಾರ್ಶನಿಕರು.

ಪ್ರವಚನಕಾರ: ಮಾನವೀಯ ಮೌಲ್ಯಗಳನ್ನು ಬಿತ್ತರಿಸಿ ಸತ್ಸಂಗ ಸಮ್ಮೇಳನಗಳ ಮೂಲಕ ಸ್ವಾನುಭವ ದರ್ಶನ ಮಾಡಿಸಿ ಭಕ್ತಿಪಥದಲ್ಲಿ ಧಾರ್ಮಿಕ ರಂಗದ ಪರಿಚಯ ಮಾಡಿಸಿ ಸರ್ವರೂ ಪರಮಾನಂದ ಹೊಂದಿ ನಿತ್ಯ ಸುಖಿಗಳಾಗುವಂತೆ ಉಪದೇಶಿಸುವವ ಪ್ರವಚನಕಾರ.

ಕೀರ್ತನಕಾರ: ಹೇಳುವ ಎಲ್ಲ ಕಥೆಗಳ ಪಾತ್ರಗಳೇ ತಾನಾಗಿ ಅವುಗಳಿಗೆ ವ್ಯಕ್ತಿಯ-ವ್ಯಕ್ತಿತ್ವ ತುಂಬಿ ಪದಗಳೇ ಪಾತ್ರಗಳಾಗಿ ಆ ಪಾತ್ರಗಳೆಲ್ಲ ಮಾತನಾಡುವಂತೆ ಮಾಡಿ, ಸಂಗೀತದ ಕಳೆತುಂಬಿ ನಾಟಕೀಯವಾಗಿ ಸಂಭಾಷಣೆಯ ಮಾದರಿಯಲ್ಲಿ ಪೌರಾಣಿಕ ಕಥೆ ತಿಳಿಸುವವನು.

ಪುರಾಣಿಕ: ಒಬ್ಬ ವ್ಯಕ್ತಿಯ ಜೀವನ ಅವನು ಮಾಡಿದ ಅಸಾಮಾನ್ಯ ಕಾರ್ಯಗಳು, ದೃಷ್ಟಾಂತ, ಉಪಮೆ- ಕಥೆಗೊಂದು ಕಥೆ ಎಲ್ಲವನ್ನು ದೀರ್ಘವಾಗಿ ಸಂಗೀತವಾದ್ಯಗಳ ಜೊತೆ ಪುರಾಣ ಕಾವ್ಯಗಳನ್ನು ಓದಿ ವಿಷಯಗಳನ್ನು ವಿವರವಾಗಿ ತಿಳಿಯಪಡಿಸುವವ ಪುರಾಣಿಕ. ಪ್ರವಚನವು ಬದುಕಿನ ಸ್ವಾಸ್ಥ್ಯವನ್ನೇ ಕೇಂದ್ರ ಉದ್ದೇಶದಲ್ಲಿರಿಸಿಕೊಂಡಿರುವುದರಿಂದ ಅದರ ಫಲಶೃತಿಯನ್ನು ಅಲ್ಲಿಯೇ ಅರಸಬೇಕಾಗುತ್ತದೆ. ಪ್ರವಚನದಂಥ ಶ್ರೇಷ್ಠ ಮಾಧ್ಯಮವು ಸಮಷ್ಟಿಯಲ್ಲಿ ಫಲ ನೀಡುತ್ತಿರುವುದರಿಂದ ಅಥವಾ ಫಲ ನೀಡಬೇಕಾಗಿರುವುದರಿಂದ ಮತ್ತು ಆ ಮೂಲಕ ಸಮುದಾಯಿಕವಾದ ಇತ್ಯಾತ್ಮಕ ಉದ್ದೇಶವನ್ನು ಒಳಗೊಂಡಿರುವುದರಿಂದ ಅದು 'ಸಾಮಾಜಿಕ ಮೌಲ್ಯ'ವಾಗಿಯೂ ನಮಗೆ ಕಂಡು ಬರುತ್ತದೆ. ಇದಕ್ಕೆ ವರ್ತಮಾನಕಾಲದ ಬಹುತೇಕ ಪ್ರವಚನಕಾರರು ಆಧುನಿಕ-ಅತ್ಯಾಧುನಿಕ ವಿದ್ಯನ್ಮಾನಯುಗದಲ್ಲಿಯೂ ಪಾರಂಪರಿಕ ಪ್ರಜ್ಞೆಯನ್ನು ಜಾಗೃತಗೊಳಿಸುತ್ತಿರುವುದೇ ನಿದರ್ಶನವಾಗಿದೆ. ಇನ್ನುಳಿದಂತೆ ಪ್ರವಚನ ಎಂಥ ಶಕ್ತಿಯನ್ನು ಸಾಮುದಾಯಿಕ ನೆಲೆಯಲ್ಲಿ ಪಡೆದಿತ್ತು ಎಂಬುದಕ್ಕೆ ಚರಿತ್ರೆಯೇ ಸಾಕ್ಷಿಯಾಗಿದೆ. ಅದೆಲ್ಲವೂ ಚರಿತ್ರೆಯ ಸಾಕ್ಷ್ಯದಲ್ಲಿ ನಡೆದಿದೆ.

ಪ್ರವಚನ ಸಾಹಿತ್ಯ ಅನುಭವದ ಅಮೃತ ದೀಪವೇ ಆಗಿದೆ. ಇಂದು ಈ ಸಾಹಿತ್ಯದ ಪ್ರಚಾರಕ್ಕೆ ಎಲ್ಲ ಬಗೆಯ ನೆರವು ಪ್ರೋತ್ಸಾಹ ಗೌರವದ ಅವಶ್ಯಕತೆ ಇದೆ. ಒಂದು ಸಲ ಪ್ರವಚನ ಕೇಳಿದರವರು ಅವರ ಸಾಹಿತ್ಯವನ್ನು ಮತ್ತೆ-ಮತ್ತೆ ಓದುತ್ತಾರೆ.

ಸಾಹಿತ್ಯ ಮತ್ತು ಸಂಸ್ಕೃತಿಯ ಬೆಳಕು ಇದಾಗಿದೆ. ಸಂತ ಶರಣರ ದಾಸವರೇಣ್ಯರ ಜ್ಞಾನಿ-ವಿಜ್ಞಾನಿಗಳ ಒಂದೊಂದು ಶಬ್ದವು ಒಂದೊಂದು ಹಣತೆ. ಇಡೀ ಜಗವನ್ನೇ ಬೆಳಗುವ ಮಾತುಗಳು ಇಲ್ಲಿರುತ್ತವೆ. ಇದು ಸನ್ಮಾರ್ಗ ಪಥದ ಸಾಹಿತ್ಯ. ಇದರ ಭಾಷೆ ಸರಳ ಸುಂದರ ನಿರೂಪಣೆಯಿಂದ ಕೂಡಿರುವುದರಿಂದ ಎಲ್ಲರನ್ನು ಓದಿಸಿಕೊಂಡು ಹೋಗುತ್ತದೆ. ಅಲ್ಲಲ್ಲಿ ಮಹಾತ್ಮರ ಕವಿ ಸಾಹಿತಿಗಳ ಮಹತ್ವದ ನುಡಿಗಳ ಉಲ್ಲೇಖ ಇರುವುದರಿಂದ ಓದುಗರಿಗೆ ಬೇಸರವೆನಿಸದು. ಸಮಾಜ ಸುಧಾರಣೆ, ವ್ಯಕ್ತಿತ್ವ ವಿಕಾಸ, ಜಗವನಪ್ಪಿಕೊಳ್ಳುವ ಬಗೆ, ಒಲವು, ನೀತಿ, ಪ್ರೀತಿ, ಎಲ್ಲವನ್ನು ಒಳಗೊಂಡಿರುತ್ತದೆ. ಜನಪದರ ಹಾಡು, ನುಡಿ, ಗಾದೆ, ಪ್ರವಚನಕ್ಕೆ ವಿಶಾಲತೆ ಮತ್ತು ಜನಪ್ರೀಯತೆಯನ್ನು ದೊರಕಿಸುತ್ತದೆ. ಇದೊಂದು ಮತ, ಕೋಮು, ಪಂಥಕೆ ಸೀಮಿತವಾದ ಸಾಹಿತ್ಯವಲ್ಲ. ಇದೊಂದು ಮಾನುಷೋನ್ನತಿಯ ಸಾಹಿತ್ಯ. ಇದೊಂದು ಸರ್ವಜನ ಪ್ರೀಯ ಸರ್ವಧರ್ಮಪ್ರೀಯ ಮಾನವೀತೆಯ ನೀತಿ ಬೋಧಕ ಸಾಹಿತ್ಯ.

# ಅಧ್ಯಾಯ–೭:
# ಪ್ರವಚನ ಸಾಹಿತ್ಯ ಮತ್ತು ಶ್ರೀ ಸಿದ್ಧೇಶ್ವರ ಸ್ವಾಮಿಗಳು

೭.೧. ಗ್ರಂಥಸ್ಥ ಸಾಹಿತ್ಯ

೭.೨. ಕಂಠಸ್ಥ ಸಾಹಿತ್ಯ

೭.೩. ಪ್ರವಚನ ಪ್ರಭಾವ; ಒಂದು ಅನುಭವ

೭.೪. ಪ್ರವಚನ ಕೃತಿಗಳ ವಿಶ್ಲೇಷಣೆ

೭.೫. ಶ್ರೀಗಳ ಭಾವಸಂಪದ ಭಾಗ–೫ ರ ಪ್ರವಚನ

# ಅಧ್ಯಾಯ-೭

## ಪ್ರವಚನ ಸಾಹಿತ್ಯ ಮತ್ತು ಶ್ರೀ ಸಿದ್ಧೇಶ್ವರ ಸ್ವಾಮಿಗಳು

ಶ್ರೀ ಸಿದ್ಧೇಶ್ವರರು ಆಧುನಿಕ ಪ್ರವಚನಕಾರರಿಗೆ ಪರಾಮರ್ಶನ ಗ್ರಂಥವಿದ್ದಂತೆ. ಅಷ್ಟೇ ಅಲ್ಲಾ ಇತ್ತೀಚಿನ ಯುವ ಪ್ರವಚನಕಾರರೆಲ್ಲ ಇವರ ಶೈಲಿಯನ್ನೇ ಅನುಸರಿಸಿದ್ದಾರೆ. ಶ್ರೀಗಳ ಪ್ರವಚನಗಳು ಅವರು ಶೈಲಿಯಲ್ಲಿಯೇ ದಾಖಲಾಗಿದ್ದರೆ ಕನ್ನಡದ ಸೋಗಡನ್ನು ಅವರ ವಿಶೀಷ್ಟ ಭಾಷಿಕ ಪ್ರಯೋಗಗಳನ್ನು ಕಾಣಲು ಸಾಧ್ಯವಾಗುತ್ತಿತ್ತು.

ಸಿದ್ಧೇಶ್ವರ ಸ್ವಾಮಿಗಳ ಪ್ರವಚನ ಎಲ್ಲಾ ಮತಧರ್ಮದವರಿಗೂ ಅನ್ವಯವಾಗುತ್ತದೆ. ಪ್ರವಚನದ ನಿಜವಾದ ಉದ್ದೇಶ ಈಡೇರುವುದು ಶ್ರೀ ಸಿದ್ಧೇಶ್ವರ ಸ್ವಾಮಿಗಳಂಥವರ ಪ್ರವಚನಗಳಿಂದಲೇ. ಸ್ವಾಮಿಗಳ ಪ್ರವಚನದ ಬಗ್ಗೆ ಒಂದು ಸಾಮಾನ್ಯ ಮತ್ತು ಸಹಜವಾದ ಪ್ರತಿಕ್ರಿಯೆ ಹೀಗಿದೆ. "ನಾನು ಉಪನಿಷತ್ತಿನ ಬಗೆಗೆ ಭಾಷಣ ಕೇಳಿದ್ದು ಇದೇ ಮೊದಲು.! ಅಧ್ಯಾತ್ಮ ಎಂಬುದು ಉಕ್ಕಿನ ಕಡಲೆ-ಎಂದು ಹೇಳುವುದುಂಟು.! ಆದರೆ ಇವರ ಪ್ರವಚನ ಕೇಳಿದ ಮೇಲೆ ಅದು ಸರಳವಾಗಿ, ಸುಲಭವಾಗಿ ಅರ್ಥವಾಗುತ್ತದೆ" ಎಂದು, ಇದು ಬಹುತೇಕರು ಹೇಳುವ ಅಭಿಪ್ರಾಯ  ಹೇಳುವವರ ಮೇಲಿದೆ.

ಪೌರ್ವಾತ್ಯ, ಪಾಶ್ಚಾತ್ಯ, ಭಾರತದ ತತ್ತ್ವಶಾಸ್ತ್ರದಲ್ಲಿ ಪ್ರಾವೀಣ್ಯವಿರುವುದು ಅವರ ಉಪನ್ಯಾಸಗಳಲ್ಲಿ ವ್ಯಕ್ತವಾಗುತ್ತದೆ. ಅವರು ಯಾವ ಮಾಧ್ಯಮಕ್ಕೂ ಸಂದರ್ಶನ ನೀಡಿದವರಲ್ಲ. ಅವರು ಪ್ರಚಾರಪ್ರಿಯರಲ್ಲ. ಅವರ ವಿದ್ವತ್ತಿನಿಂದ ಅದೇ ಪ್ರಚಾರವಾಗುತ್ತಿದೆ. ವಚನಕಾರರ ಬಗ್ಗೆ ಆಳವಾದ ಅಭ್ಯಾಸ ಮಾಡಿದ್ದಾರೆ. ಒಂದೊಂದು ಊರಲ್ಲಿ ಒಂದೊಂದು ತಿಂಗಳು ಜನರಿಗೆ ಅರಿವು ನೀಡುತ್ತಾರೆ. ಪ್ರಕೃತಿಯ ನಡುವೆ ಇರುವುದೆಂದರೆ ಅವರಿಗೆ ಬಹಳ ಪ್ರಿಯ.

ಸಿದ್ಧೇಶ್ವರ ಸ್ವಾಮಿಗಳು ಉದಾರ ಜ್ಞಾನದಾಸೋಹಿಗಳು. ಅಪಾರ ಪಾಂಡಿತ್ಯ, ಪ್ರತಿಭೆ, ಸೃಜನಶೀಲತೆ, ವೈಚಾರಿಕತೆ ಅವರ ಪ್ರವಚನದ ವೈಶಿಷ್ಟ್ಯ. ಸರಳ, ಸಜ್ಜನಿಕೆಯ ವ್ಯಕ್ತಿತ್ವ ಪ್ರಕೃತಿಯ ನಡುವೆ ಆನಂದ ಅನುಭವಿಸುವ ಶ್ರೇಷ್ಠ ಅನುಭಾವಿಗಳು, ದಾರ್ಶನಿಕರು, ತತ್ತ್ವಜ್ಞಾನಿಗಳು. ಪೂಜ್ಯರು ತಮ್ಮ ಎಳೆಯ ವಯಸ್ಸಿನಲ್ಲೇ ಅಧ್ಯಾತ್ಮಕ್ಷೇತ್ರಕ್ಕೆ ಇಳಿದವರು. ಅವರ ನೆಲೆ ಬಿಜಾಪುರದ ಶ್ರೀ ಜ್ಞಾನಾನಂದ ಯೋಗಾಶ್ರಮ. ಗುರುಗಳಾದ 'ವೇದಾಂತ ಕೇಸರಿ' ಶ್ರೀ ಮಲ್ಲಕಾರ್ಜುನ ಮಹಾಶಿವಯೋಗಿಗಳವರ ಮಾರ್ಗದರ್ಶನದಲ್ಲಿ ಪೂರ್ವ ಧರ್ಮ-ದರ್ಶನಗಳ ಸಾರವನ್ನೆಲ್ಲಾ ಹೀರಿ ಬೆಳೆದವರು. ಸಿದ್ಧೇಶ್ವರ ಸ್ವಾಮಿಗಳು ಗುರುಗಳಷ್ಟೇ ಪರಿಣತರು, ಅಧ್ಯಾತ್ಮ ಭಾಷಣದಲ್ಲಿ,

ಪಂಚತಂತ್ರ, ಉಪನಿಷತ್ತು, ಭಗವದ್ಗೀತೆ, ಯೋಗಸೂತ್ರ, ವಚನ ಶಾಸ್ತ್ರಗಳ ಬಗ್ಗೆ ಸರಳವಾಗಿ, ಸುಲಭವಾಗಿ, ಎಲ್ಲರಿಗೂ ಮನದಲ್ಲಿ ಅಚ್ಚಳಿಯದೆ ಉಳಿಯುವಂತೆ ಮಾಡುತ್ತಾರೆ. ತತ್ತ್ವಶಾಸ್ತ್ರದಲ್ಲಿ ಸ್ನಾತಕೋತ್ತರ ಪದವೀಧರರು. ಇವರದು ಮೃದು ಸ್ವಭಾವ. ವಿನಯ, ನಡೆ–ನುಡಿಗಳು ಎಂಥವರನ್ನೂ ಆಕರ್ಷಿಸುತ್ತದೆ. ಕನ್ನಡ, ಇಂಗ್ಲಿಷ್, ಸಂಸ್ಕೃತ, ಮರಾಠಿ, ಹಿಂದಿ ಭಾಷೆಗಳಲ್ಲಿ ಅಗಾಧ ಪಾಂಡಿತ್ಯವನ್ನು ಗಳಿಸಿಕೊಂಡಿದ್ದಾರೆ. ಕನ್ನಡ, ಇಂಗ್ಲೀಷನಲ್ಲಿ ಅಮೂಲ್ಯ ಗ್ರಂಥಗಳನ್ನು ರಚಿಸಿದ್ದಾರೆ. ಆಶೀರ್ವಾದ ಮಾಡುವ ಕೈ, ಕೈ ಮುಗಿಯುತ್ತದೆ. ಎಷ್ಟೊಂದು ವಿನಯ? ಬಸವಣ್ಣನವರು "ಎನಗಿಂತ ಕಿರಿಯರಿಲ್ಲ" ಎಂಬ ಮಾತು ಇವರಿಗೆ ಅನ್ವಯವಾಗುತ್ತದೆ.

ಸಿದ್ಧೇಶ್ವರ ಸ್ವಾಮಿಗಳು ಚಿಕ್ಕಂದಿನಲ್ಲೇ ಸನ್ಯಾಸತ್ವ ಸ್ವೀಕರಿಸಿದರು. ಸರಳ, ನಿರಾಡಂಬರ, ಮೇಲುಮಾತು, ಹೂನಗೆ, ಅಂತಃಕರಣ ಹೊರಸೂಸುವ ಮುಖಮುದ್ರೆ, ವಿದ್ವತ್ತಿನಿಂದ ತುಂಬಿ ತುಳುಕುತ್ತಾ ಸಾಧನೆಯಿಂದ ಬಹುಎತ್ತರಕ್ಕೆ ಏರಿದ್ದಾರೆ. ಪ್ರವಚನ ಕಾಯಕ ಕೈಕೊಂಡರು. ವಿಜಾಪುರದ ಜ್ಞಾನಯೋಗಾಶ್ರಮದ ಶ್ರೀಗಳು ಲೋಕಕಲ್ಯಾಣಕ್ಕೆ ಸದಾಸಂಚಾರಿಗಳು, ಜಂಗಮಮೂರ್ತಿಗಳು. ಒಂದು ರೀತಿಯಲ್ಲಿ ಅಲ್ಲಮಸಂಪ್ರದಾಯದ ಜ್ಞಾನದಾಸೋಹವನ್ನು ಕೈಕೊಂಡಿದ್ದಾರೆ.

ಇವರ ಪ್ರವಚನದಲ್ಲಿ ವಚನ, ಸಂಭಾಷಣೆ, ಪ್ರಶ್ನೋತ್ತರ, ವಿವೇಚನೆ, ವಿವರಣೆ, ದೃಷ್ಟಾಂತಗಳು ಕೂಡಿರುತ್ತವೆ. ಶಿಸ್ತು, ಸಮಯಪ್ರಜ್ಞೆಗೆ ಇವರು ಹೆಸರುಮಾಡಿದ್ದಾರೆ. ಗುರುಗಳಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಉತ್ತರ ಕರ್ನಾಟಕ, ಮಹಾರಾಷ್ಟ್ರಗಳಲ್ಲಿ ಮಾಡುತ್ತಿದ್ದ ಪ್ರವಚನಗಳು ವಚನಕಾರರ ವಚನಗಳು, ನಿಜಗುಣ ಶಿವಯೋಗಿಗಳ, ಭಗವದ್ಗೀತೆ, ಬೇರೆ ಬೇರೆ ಉಪನಿಷತ್ತುಗಳು, ಸಿದ್ಧಾಂತ ಶಿಖಾಮಣಿ ಕುರಿತು ಹೇಳುತ್ತಿದ್ದರು. 'Songs of Silence' ಇವರ ಇಂಗ್ಲೀಷ್ ಕವನಗಳು. ಪೌರ್ವಾತ್ಯ, ಪಾಶ್ಚಾತ್ಯ ತತ್ತ್ವಶಾಸ್ತ್ರಗಳಲ್ಲಿ ಸಮಾನ ಪ್ರಭುತ್ವವುಳ್ಳವರು. ಇವರ ಅಭಿವ್ಯಕ್ತ ವೇದ, ಸರಳ ಭಾಷಣದ ವಾಕ್ಯಗಳು ಸಂದರ್ಭಕ್ಕೊಂದು ದೃಷಾಂತ ಕಥೆ ಹೇಳುತ್ತಾ ಹೋಗುತ್ತಾರೆ. ಪಾಂಡಿತ್ಯ ಪ್ರದರ್ಶನವಿಲ್ಲ. ಆದರೆ ಶುಚಿರುಚಿ ಇದೆ. ಆದೇಶವಿಲ್ಲ ಗಂಭೀರವಾದುದು. ಯಾರ ಬಗ್ಗೆ ಟೀಕೆಯಿಲ್ಲ, ವ್ಯಂಗ್ಯವಿಲ್ಲ. ಇವರದ್ದು ವಿಶ್ವಧರ್ಮ ಪ್ರವಚನ. ಫ್ರಾನ್ಸ್, ಇಂಗ್ಲೆಂಡ್, ಇಟಲಿ, ಅಮೆರಿಕಾಗಳಲ್ಲಿಯೂ ಪ್ರವಚನ ನೀಡಿದ್ದಾರೆ ಪೂಜ್ಯರು.

ಸಿದ್ಧೇಶ್ವರ ಸ್ವಾಮಿಗಳ ಕೃತಿಗಳೆಂದರೆ ಪಾತಂಜಲ ಯೋಗದರ್ಶನ, ಶ್ರೀಮದ್ಭಗವದ್‌ಗೀತೆ, ಕಠೋಪನಿಷತ್ತು, ಕೇನೋಪನಿಷತ್ತು, ಮುಂಡಕೋಪನಿಷತ್ತು, ಶಾಂತಿಪಥ, ಸಿದ್ಧರಾಮೇಶ್ವರ ಪ್ರವಚನ, ಸಮಾಜ ಸಂಪದ ಹಾಗೂ ಇತರ ಪ್ರಬಂಧಗಳು, ಹಠಯೋಗ, ವಿಶ್ವದ ವಿವಿಧ

ಧರ್ಮದ ಸೂಕ್ತಿಗಳು, ಈಶಾವ್ಯಾಸೋಪನಿಷತ್ತು, ಭಗವಚ್ಚಿಂತನ, ಮೌನಲೋಕದ ಹಾಡುಗಳು, ಸಾಧನಪಥ, ಭಕ್ತಯೋಗ, ನಾನಾರು?, ಆನಂದಯೋಗ, ಗುಣಸಂಪದ, ಶ್ವೇತಾಶ್ವತರೋಪನಿಷತ್, ವಿಶ್ವಧರ್ಮದ ವಿವಿಧ ಸೂತ್ರಗಳು, ಸಾಧನಾ ಪಥ, ಇಂಗ್ಲೀಷಿನಲ್ಲಿ ಬರೆದ ಕೃತಿಗಳು Basava's Thirst for Devine Grace, Songs of Silence, Reflection Devine, Selected Vachanas of Siddesware, Nijagunas Exposition of Spiritual Wisdom, Saying of Basaveshware, God, World & Soul.

ಸ್ವಾಮಿಗಳು ಎಪ್ಪತ್ತು ವರ್ಷಗಳನ್ನು ದಾಟಿದರೂ ಪ್ರವಚನ ದಾಸೋಹ ಎಡೆಬಿಡದೆ ಏಡೆಮಾಡುತ್ತಿದ್ದಾರೆ. ಇವರಲ್ಲಿಯ ವಾಕ್‌ಶಕ್ತಿ, ದಾರ್ಶನಿಕ ಮನಸ್ಸು ಕವಿ ಹೃದಯ, ತತ್ತ್ವಜ್ಞಾನದ ಬೆಳಕು, ಓತಪ್ರೋತವಾಗಿ ಹಾಗೇ ಹರಿಯುತ್ತಿವೆ. ಇವರ ದಿನಚರಿ ಎಂದರೆ ಪ್ರತಿದಿನ ಬೆಳಗ್ಗೆ ನಾಲ್ಕು ಘಂಟೆಗೆ ಏಳುವುದು, ವಾಯುವಿಹಾರ ಮಾಡುವುದು, ಪೂಜೆ, ಹತ್ತು ಘಂಟೆಗೆ ಪ್ರಸಾದ ಮತ್ತು ರಾತ್ರಿ ಪ್ರಸಾದ. ಎರಡೇ ಹೊತ್ತು ಆಹಾರ ಸೇವನೆ. ಬೆಳಗ್ಗೆ ಜನರಿಗೆ ಸಂದರ್ಶನ. ಮಧ್ಯಾಹ್ನ ಸ್ವಲ್ಪ ವಿಶ್ರಾಂತಿ. ಓದುವುದು, ಬರೆಯುವುದು, ರಾತ್ರಿ ಒಂಭತ್ತಕ್ಕೆ ಮಲಗುವರು.

ಚಾರಿತ್ರ್ಯ, ನೀತಿ, ಸಮಯವನ್ನು ಗೌರವಿಸುವ, ಆರಾಧಿಸುವ ಸಂತರು. ಜ್ಞಾನಯೋಗಿಗಳ, ಅನನ್ಯ ಪ್ರೇಮದ ಸಂದೇಶವನ್ನು ಜಗತ್ತಿನಲ್ಲಿ ಸಾರಿದವರು. ಸಾಹಿತಿಗಳು, ಸಾಹಿತ್ಯಾರಾಧಕರು, ಮಾತೃಹೃದಯಿಗಳು. ಹತ್ತಾರು ಪುಸ್ತಕಗಳನ್ನು ಬರೆದು, ಸಾವಿರಾರು ಪುಸ್ತಕ ಬರೆವವರಿಗೆ ಪ್ರೇರಣೆಯಾದವರು. ದೇಶವಿದೇಶಗಳಲ್ಲಿ ಭಾರತೀಯ ಸಂಸ್ಕೃತಿ, ಪರಂಪರೆ, ವಚನ, ಉಪನಿಷತ್ತು, ಗೀತೆಗಳ ಸಂದೇಶವನ್ನು ಸಾರಿದವರು. ಸೃಷ್ಟಿಯ ಪರಮ ಪೂಜಕರು. ಅಂತೆಯೇ ಸಮಷ್ಟಿಗೆಲ್ಲ ಪೂಜ್ಯರು.

"ಜನಸಾಮಾನ್ಯರಿಗೆ ರುಚಿ ಶುಚಿಯಾಗಿ, ತಿಳಿತಿಳಿಯಾಗಿ, ಹೃದಯಂಗಮವಾಗಿ ಅರುಹಬಲ್ಲ ಸದ್ಗುರುಗಳು, ನಿರಾಭಾರಿ ನಿರಂಜನರು, ಸರಳ ಸೌಜನ್ಯ ಮೂರ್ತಿಗಳು, ತತ್ತ್ವವೇತ್ತರು. ಉಪನಿಷತ್ಕಾಲದ ಋಷಿ ಸದೃಶರು. ನಡೆಯಿಂದ ಬೋಧಿಸುವ ಮಹಾದೇವರು, ಭವರೋಗ ವೈದ್ಯರು, ಶರಣ ಸಂಭಾವಿತ ಯತಿಶ್ರೇಷ್ಠರು, ಮೃದು ವಾಗ್ಮಿಗಳು, ನಿರುಪಮ ಸಂತರು" ಎಂದಿದ್ದಾರೆ, ಶ್ರೀ ಕುಮಾರ ನಿಜಗುಣ ಸ್ವಾಮಿಗಳು.

ಸತತವಾಗಿ ಅಧ್ಯಾತ್ಮ ಜ್ಞಾನದಾಸೋಹ, ಧಾರ್ಮಿಕ ಪ್ರವಚನಗಳನ್ನು ನಾಡಿನಲ್ಲೆಲ್ಲಾ ಎಡಬಿಡದೆ ನೀಡುತ್ತಾ ಬಂದಿದ್ದಾರೆ. ಇದೇ ಅವರ ನಿತ್ಯಕಾಯಕ.

ಪ್ರವಚನವೆಂಬುದು ಉಪಯುಕ್ತ ಮತ್ತು ಉತ್ತಮವಾದ ಮಾತುಗಳಿಗೆ ಸಂಬಂಧಿಸಿದ ಸಂದರ್ಭ ಮಾತು ಮನುಷ್ಯನಿಗೆ ನಿಸರ್ಗ ದಯಪಾಲಿಸಿದ ವಿಶಿಷ್ಟ ಶಕ್ತಿ. ಮಾತಿನ ಕಲೆಯಿಂದಾಗಿಯೆ ಮನುಷ್ಯನು ಇತರ ಪ್ರಾಣಿಗಳಿಗಿಂತ ಭಿನ್ನವಾಗಿ ನಿಲ್ಲುತ್ತಾನೆ. ಈ ಶಕ್ತಿಯನ್ನು ಎಲ್ಲರೂ ಪಡೆದುಕೊಂಡಿದ್ದರೂ ಮಾತನ್ನೇ ಮಾಣಿಕ್ಯ ಮಾಡಿ ಧರಿಸಿಕೊಳ್ಳುವದು ಎಲ್ಲರಿಂದಲೂ ಸಾಧ್ಯವಾಗಿಲ್ಲ. ಜನರ ಸುಂದರ ಜೀವನಕ್ಕೆ ಬೇಕಾದ ಸೊಗಸಾದ ಮಾತುಗಳು ದಿಕ್ಸೂಚಿಯಾಗಿವೆ. ವರ್ಣ, ಜಾತಿ, ಲಿಂಗ ಪಂಥಗಳನ್ನು ಇಲ್ಲವಾಗಿಸುವ ಶಕ್ತಿ ಪ್ರವಚನಗಳಲ್ಲಿದೆ. ಅದರ ಪರಿಣಾಮವಾಗಿ ಕೌಟುಂಬಿಕ ಕಲಹಗಳು ಮರೆತುಹೋಗುತ್ತವೆ, ಊರಿನಲ್ಲಿಯ ಬಣಗಳು ಒಂದುಗೂಡುತ್ತವೆ, ಧಾರ್ಮಿಕ ಸಾಮರಸ್ಯ ಚಿಗುರೊಡೆದು ಬೆಳೆಯುತ್ತದೆ. ಸಾಮ್ರಾಟರಿಂದಲೂ ಸಾಧ್ಯವಾಗದ ಶಕ್ತಿ ಆ ಮಾತುಗಳಲ್ಲಿದೆ. ಆದ್ದರಿಂದಲೇ ಇವುಗಳಿಗೆ ವಜ್ರಪುಷ್ಪಗಳೆನ್ನಬಹುದು. ಇಂಥ ಪ್ರವಚನಗಳಿಂದಲೇ ಅನೇಕ ದಾರ್ಶನಿಕರು ಹೆಸರುವಾಸಿಯಾಗಿದ್ದಾರೆ. ಇಂದಿನವರು ಕಂಡ ಪ್ರವಚನಕಾರರಲ್ಲಿ ಶ್ರೀ ಸಿದ್ಧೇಶ್ವರ ಸ್ವಾಮಿಗಳವರು ಪ್ರಮುಖರು.

ಶ್ರೀ ಸಿದ್ಧೇಶ್ವರ ಸ್ವಾಮಿಗಳವರು ಅವರ ಗುರುಗಳಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳವರ ಪರಂಪರೆಯಲ್ಲಿ ನಡೆದವರು. ಶ್ರೀ ಮಲ್ಲಿಕಾರ್ಜುನ ಶ್ರೀಗಳವರು ಊರಿಂದ ಊರಿಗೆ ಪ್ರವಚನ ಮಾಡುತ್ತ ಸಾಗುತ್ತಿದ್ದರು. ಪ್ರವಚನದ ಸಮಯದಲ್ಲಿ ಊರಿನಲ್ಲಿ ಸಂಗ್ರಹವಾದ ಹಣವನ್ನು ಆ ಊರಿನಲ್ಲಿ ಶಿಕ್ಷಣ ಸಂಸ್ಥೆಗಳನ್ನು ಕಟ್ಟಲು ಕೊಡುತ್ತಿದ್ದರು. ಇಂಥ ಹಣದಿಂದಲೇ ಸುಮಾರು ನಲವತ್ತೈದು ವರ್ಷಗಳ ರಾಮದುರ್ಗ ಪಟ್ಟಣದಲ್ಲಿ "ವಿದ್ಯಾಚೇತನ" ಎಂಬ ಶಾಲಾ ಕಟ್ಟಡ ತಲೆ ಎತ್ತಿತು. ಈಗ ಅದು ಬೃಹತ್ ಕಟ್ಟಡದ ಶಿಕ್ಷಣ ತಾಣವಾಗಿದೆ. ಆದರೆ ಸಿದ್ಧೇಶ್ವರ ಶ್ರೀಗಳು ಇಂಥ ಉದ್ದೇಶ ಹೊಂದಿರುವುದಿಲ್ಲ. ಜನರ ಮನೋಭಾವನೆಯನ್ನು ಬದಲಾಯಿಸಿ ಪರಮ ಸತ್ಯದ ದರ್ಶನ ಮಾಡಿಸುವದು ಮತ್ತು ದಾಸೋಹ ಕಲ್ಪನೆಯನ್ನು ಬೆಳೆಸುವ ಉನ್ನತ ಉದ್ದೇಶ ಅವರದು. ಇಂದಿನವರೆಗೂ ವಿವಿಧ ಊರುಗಳಲ್ಲಿ ಸುಮಾರು ಒಂದು ತಿಂಗಳವರೆಗೆ ಪ್ರವಚನ ನಡೆಸಿ ಊರಿನ ಸರ್ವಸಮುದಾಯದವರಿಗೂ ಸಲ್ಲುವ ಸವಿಯಾದ ಮೃದು ವಚನಗಳನ್ನು ಬಿತ್ತಿ ಅವರ ಮನದ ಮಧ್ಯ ಎದ್ದಿರುವ ಗೋಡೆಗಳನ್ನೆಲ್ಲ ಕೆಡವಿ ಮಾನವೀಯತೆಯನ್ನು ನಿರ್ಮಿಸುವ ಉದಾತ್ತ ಉದ್ದೇಶ ಅವರದು.

ಸುಮಾರು ಮೂವತ್ತೈದು ವರ್ಷಗಳ ಹಿಂದೆ ಧಾರವಾಡದಲ್ಲಿ ಪೂಜ್ಯ ಶ್ರೀ ಕುಮಾರಸ್ವಾಮಿಗಳವರ ಆಶ್ರಮದಲ್ಲಿ ಒಂದು ಧಾರ್ಮಿಕ ಸಮ್ಮೇಳನ ನಡೆದಿತ್ತು. ಅಲ್ಲಿ ಶ್ರೀ ಸಿದ್ಧೇಶ್ವರ ಸ್ವಾಮೀಜಿಯವರ ಮತ್ತು ಅವರ ಗುರುಗಳಾದ ಪೂಜ್ಯ ಶ್ರೀ ಮಲ್ಲಿಕಾರ್ಜುನ ಶ್ರೀಗಳವರು ಉಪಸ್ಥಿತರಿದ್ದರು. 'ಶ್ರೀ ಸಿದ್ಧೇಶ್ವರರು ಮಾತನಾಡಿದ ನಂತರ ನಾವು

ಮಾತನಾಡುವುದೇನೂ ಉಳಿದಿರುವುದಿಲ್ಲ' ಎಂದು ಅನೇಕ ಪೂಜ್ಯರು ಹೇಳಿದರಂತೆ. ಅಷ್ಟು ಚಿಕ್ಕ ವಯಸ್ಸಿನಲ್ಲಿಯೆ ಅವರಿಗಿರುವ ಮಾತಿನ ವ್ಯಾಪ್ತಿಯನ್ನು ಅವರ ಗುರುಗಳು ಅರಿತಿದ್ದರು.

ಒಮ್ಮೆ ಪ್ರವಚನ ಸಂದರ್ಭದಲ್ಲಿ ಅವರು ಹೇಳಿದ ಕತೆ ಮಾನವೀಯವಾಗಿತ್ತು. 'ಒಬ್ಬ ಸಂತ ಪ್ರವಾಸ ಹೊರಟಿದ್ದ. ಪ್ರವಾಸ ಮಾಡುತ್ತ ಒಂದೂರಿಗೆ ಬಂದ. ಹೊಟ್ಟೆ ಹಸಿಯುತ್ತಿತ್ತು. ಅವನು ಊರಿನಿಂದ ತಂದ ಬುತ್ತಿ ಖಾಲಿಯಾಗಿ ಕೇವಲ ಅರ್ಧ ರೊಟ್ಟಿ ಮಾತ್ರ ಅದರಲ್ಲಿ ಉಳಿದಿತ್ತು. ಊರ ಹೊರಗೆ ಹರಿಯುತ್ತಿರುವ ಹಳ್ಳದ ದಂಡೆಗೆ ಕುಳಿತು ಉಳಿದರ್ಧ ರೊಟ್ಟಿ ತಿಂದು ಹೆಚ್ಚು ನೀರು ಕುಡಿದು ಹೊಟ್ಟೆ ತುಂಬಿಸಿಕೊಂಡರಾಯಿತೆಂದು ವಿಚಾರ ಮಾಡಿ ಹಳ್ಳದ ದಂಡೆಗೆ ಬಂದು ರೊಟ್ಟಿಗಂಟು ಬಿಚ್ಚಿ ಅದರಲ್ಲಿರುವ ಅರ್ಧ ರೊಟ್ಟಿಯ ತುಣುಕನ್ನು ಕೈಯಲ್ಲಿ ಹಿಡಿದ. ಆಗ ಅಲ್ಲಿಗೆ ನಾಯಿಯೊಂದು ಬಂತು. ಅದು ಬಹಳ ಹಸಿದಿತ್ತು. ರೊಟ್ಟಿಯ ಕಡೆಗೇ ಆಶೆಗಣ್ಣುಗಳಿಂದ ನೋಡಹತ್ತಿತು. ಆ ನಾಯಿಯ ಕಣ್ಣಗಳನ್ನು ನೋಡುತ್ತ ಈ ಸಂತನ ಮನ ಮಿಡಿಯಿತು. ಅದೂ ಒಂದು ಜೀವ. ಅನ್ನಕ್ಕಾಗಿ ಪರಿತಪಿಸುತ್ತಿದೆ. ಇಂಥದರಲ್ಲಿ ಅದನ್ನು ನೋಡುತ್ತ ನಾನು ಈ ರೊಟ್ಟಿಯನ್ನು ತಿಂದರೆ ಅದರಿಂದ ಯಾವ ತೃಪ್ತಿ ದೊರೆಯಬಲ್ಲದೆ? ಹೀಗೆಂದುಕೊಂಡ. ಆದರೆ ತನ್ನ ಹೊಟ್ಟೆ ಹಸಿವೆಯಿಂದ ಚುರುಗುಟ್ಟುತ್ತಿತ್ತು. ಆ ರೊಟ್ಟಿಯನ್ನು ತಾನು ತಿನ್ನಬೇಕೆ ಅಥವಾ ಆ ನಾಯಿಗೆ ಕೊಡಬೇಕೆ? ಕೆಲಕ್ಷಣ ವಿಚಾರಿಸಿ, ಅರ್ಧರೊಟ್ಟಿಯಲ್ಲಿ ಅರ್ಧವನ್ನು ನಾಯಿಗೆ ಕೊಟ್ಟು ಉಳಿದುದನ್ನು ತಾನು ತಿನ್ನಲು ನಿರ್ಧರಿಸಿದ. ಆ ರೊಟ್ಟಿಯ ತುಣುಕು ತಿಂದ ನಾಯಿ ತೃಪ್ತಿಯಿಂದ ಕೃತಜ್ಞತೆಯ ಸಂಕೇತವಾಗಿ ಸಂತನನ್ನು ನೋಡುತ್ತ ಬಾಲಾಡಿಸಹತ್ತಿತು. ಆ ನಾಯಿಯ ಸಂತೃಪ್ತಿ ಮುಖ ಕಂಡು ಸಂತನ ಹೊಟ್ಟೆ ತುಂಬಿ ಹೋಗಿತ್ತು. ಹಂಚಿಕೊಂಡು ತಿನ್ನುವುದರ ಸುಖವಿದು.' ಸ್ವಾಮಿಗಳು ಹೇಳಿದ ಈ ಕತೆಯಲ್ಲಿ ಸಮಾಜವಾದದ ಸಾರವಿದೆ ಮತ್ತು ದಾಸೋಹದ ದಾರಿಯಿದೆ. ಆ ಪ್ರವಚನ ಎಷ್ಟು ಪ್ರಭಾವ ಬೀರಿದೆಯೆಂದರೆ, ಎಲ್ಲಿಯೆ ಶ್ರೀಗಳು ಬಂದರು ಅಲ್ಲಿಗೆ ಹೋಗಿ ಪ್ರವಚನ ಆಲಿಸುವುದು ಉತ್ತರ ಕರ್ನಾಟಕ ಜನರ ಸಂಪ್ರದಾಯವಾಯಿತು.

೧೯೫೬ ರ ಡಿಸೆಂಬರನಲ್ಲಿ ಸಿದ್ದೇಶ್ವರ ಶ್ರೀಗಳವರ ಪ್ರವಚನ ರಬಕವಿಯಲ್ಲಿ ನಡೆದಿತ್ತು. 'ಪರಮ ಸತ್ಯವೇ ದೇವರು, ಪರಮ ಪ್ರೀತಿಯೇ ಅವನನ್ನು ಕಾಣುವ ಮಾರ್ಗ'ವೆಂಬುದನ್ನು ಪ್ರತಿದಿನ ಪುಟ್ಟ ಕತೆಗಳೊಂದಿಗೆ ಹೇಳುತ್ತಿದ್ದರು. ಮಹಾದೇವ ದೇವಸ್ಥಾನದಲ್ಲಿ ನಡೆಯುತ್ತಿದ್ದ ಈ ಪ್ರವಚನಕ್ಕೆ ಸಮೀಪದ ಊರುಗಳಿಂದ ಎಲ್ಲಾ ಮತಧರ್ಮದ ಜನರೂ ಬರುತ್ತಿದ್ದರು. ಸಾವಿರ ಸಾವಿರ ಜನರು ಅವರ ಮಾತುಗಳನ್ನು ತದೇಕಚಿತ್ತದಿಂದ ಆಲಿಸುತ್ತಿದ್ದರು. ಒಂದು ತಾಸಿನವರೆಗೆ ತಪಸ್ಸು ಮಾಡಿದ ಅನುಭವ. ಜಾತಿ, ಮತ, ಧರ್ಮ ಮುಂತಾದವುಗಳು ಮಾನವನಿರ್ಮಿತ.

ಅವುಗಳನ್ನು ಮೀರಿ ನಿಲ್ಲಬೇಕೆಂಬ ವಿಷಯವನ್ನು ಎಲ್ಲರಿಗೂ ತಿಳಿಯುವಂತೆ ಹೇಳಿದರು. ಅದು ಎಲ್ಲ ಧರ್ಮೀಯರ ಹೃದಯಕ್ಕೆ ತಟ್ಟಿತು. ಅದರ ಪರಿಣಾಮವಾಗಿಯೇ ಆ ಡಿಸೆಂಬರ ಆರರಂದು ಇಡೀ ದೇಶದಲ್ಲಿ ಗಲಭೆಗಳಾದರೂ ರಬಕವಿಯ ಸುತ್ತಮುತ್ತಲ ಪ್ರದೇಶದಲ್ಲಿ ಶಾಂತಿ ನೆಲೆಸಿತ್ತು. ಆ ಸಮಯದಲ್ಲಿ ಅಯೋಧ್ಯೆಯ ಬಾಬ್ರಿ ಮಸೀದೆ ಕೆಡವಿದಾಗ ಅಲ್ಲಲ್ಲಿ ಹಿಂದೂ-ಮುಸ್ಲಿಮ ಗಲಭೆಗಳು ನಡೆದು ಹಿಂಸಾಚಾರ ವ್ಯಾಪಕವಾಗಿತ್ತು. ಆದರೆ ಶ್ರೀಗಳವರ ಪ್ರವಚನದ ಪ್ರಭಾವ ಎಷ್ಟಿತ್ತೆಂದರೆ, ಈ ಭಾಗದಲ್ಲಿ ಅದರ ವಾಸನೆಯೂ ಇರಲಿಲ್ಲ. ಪ್ರವಚನಗಳು ಏನನ್ನು ಮಾಡಬಲ್ಲವೆಂಬುದಕ್ಕೆ ಇದೊಂದು ನಿದರ್ಶನ.

ಅವರ ಮಾತಿನ ವೈಶಿಷ್ಟ್ಯವೆಂದರೆ, ಪ್ರವಚನದುದ್ದಕ್ಕೂ ಯಾವುದೇ ವ್ಯಕ್ತಿ, ಧರ್ಮ, ಜಾತಿ, ಪಕ್ಷಗಳ ಹೆಸರನ್ನೆತ್ತುವುದಿಲ್ಲ. ತೆಗಳುವಿಕೆಗೆ ಅಲ್ಲಿ ಸ್ಥಾನವಿಲ್ಲ. ಅವರಲ್ಲಿ ಕಂಡುಬರುವ ಅನುಕರಣೆಗೆ ಆದರ್ಶವೆಂದರೆ ಸಮಯ ಪಾಲನೆ. ಕೊಟ್ಟ ಸಮಯಕ್ಕೆ ತಪ್ಪುವವರಲ್ಲ. ಹೂವು ಮತ್ತು ಪುಸ್ತಕಗಳನ್ನು ಬಿಟ್ಟರೆ ಬೇರೇನನ್ನೂ ಸ್ವೀಕರಿಸುವುದಿಲ್ಲ. ನಡೆ ಮತ್ತು ನುಡಿಯನ್ನು ಒಂದು ಮಾಡಿದ ಮಹಾನುಭಾವರು. ನಾವು ಬಸವ, ಬುದ್ಧ, ಗಾಂಧಿಯಂಥ ಚಿಂತಕರನ್ನು ನೋಡಿಲ್ಲ. ಆದರೆ ಶ್ರೀಗಳವರ ಪ್ರವಚನ ಕೇಳಿದರೆ, ಅಂಥ ಮಹಾನ್ ಚಿಂತಕರನ್ನೆಲ್ಲ ಒಟ್ಟಿಗೆ ನೋಡಿದ ಅನುಭವವಾಗುತ್ತದೆ.

ಪ್ರವಚನದ ಪರಿಣಾಮ ಪ್ರವಚನಕಾರನ ಚಾರಿತ್ರ್ಯದ ಹಿನ್ನಲೆ ಮೇಲೆ ಅವಲಂಬನವಾಗಿರುತ್ತದೆ. ಶ್ರೀ ಸಿದ್ಧೇಶ್ವರ ಸ್ವಾಮಿಗಳವರು ಜನ ಸಾಮಾನ್ಯರ ಭಾಷೆಯಲ್ಲಿ ಹೇಳಿದರೂ ಅದರ ಪ್ರಭಾವ ಅವರ ನಡೆ-ನುಡಿ ಆಚಾರ-ವಿಚಾರದಲ್ಲಿದೆ. ಪ್ರವಚನವು ಒಂದು ವರ್ಗಕ್ಕೆ ಸೀಮಿತವಲ್ಲ. ಓದುವ-ಪಾರಾಯಣ ಪರಿಣಾಮಕ್ಕಿಂತ ಕೇಳುವ ಪರಿಣಾಮ ಜಾಸ್ತಿ. ಆದ್ದರಿಂದ ಪ್ರತ್ಯಕ್ಷ ಪರಿಣಾಮ ಪ್ರವಚನ. ಹಾವಭಾವ, ಧ್ವನಿಯ ಏರಿಳಿತ, ವಿಷಯಗಾಂಭಿರ್ಯ, ಭಾಷೆಯ ಮೇಲಿನ ಹಿಡಿತ, ಪರಿಸರ ಎಲ್ಲವೂ ಪರಿಣಾಮವಾಗಬಲ್ಲದು. ಪ್ರವಚನ ಸಾಹಿತ್ಯ ಇನ್ನೊಂದರ ಜನನಕ್ಕೆ ಕಾರಣವಾಗುತ್ತದೆ.

ಒಬ್ಬ ಪ್ರಜ್ಞಾವಂತ ಪ್ರವಚನಕಾರನಲ್ಲಿ ಸಮಯಪ್ರಜ್ಞೆ, ತಾತ್ವಿಕ ಕಥೆಗಳು ವಿಷಯ ವಿನ್ಯಾಸ ಸರಳತೆ ಇರುತ್ತವೆ. ಹೀನೋಪಮೆಯಗಳನ್ನು ಕೊಡುವವ, ಕೀಳುಪದ ಬಳಸುವವ ಶ್ರೇಷ್ಠ ಪ್ರವಚನಕಾರನಾಗಲಾರ.

ಸಿದ್ಧೇಶ್ವರ ಶ್ರೀಗಳಂತೆ 'ಮಾತಿನಲ್ಲಿ ಒಂದು ಚುಂಬಕ ಶಕ್ತಿಬೇಕು. ಬರೀ ವಾಚಾಳಿತನದ ಮಾತಿಗೆ ಮುಗ್ಧತೆ ಬರುವುದಿಲ್ಲ. ಕೇಳುಗರು ಮೈಯಲ್ಲ ಕಿವಿ ಮಾಡಿ ಕೇಳುವಂತಿರಬೇಕು.

ಮಾತಿಗೊಂದು ಸೊಗಸುತನ, ಆಕರ್ಷಣೆಬೇಕು'. ಒಂದಿಷ್ಟು ಮೊನಚು, ಹಾಸ್ಯ, ಚಾಟೂಕ್ತಿ, ಸುಭಾಷಿತ ಇರಲೇಬೇಕು.

ನಮ್ಮ ಕಾಲದ ಪ್ರಭಾವಿ ಪ್ರವಚನಕಾರರಾದ ಸಿದ್ಧೇಶ್ವರ ಶ್ರೀಗಳ ಪ್ರವಚನಗಳು ಮುದ್ರಣಮಾಧ್ಯಮದಲ್ಲಿ ಲಭ್ಯವಾಗಿ ಅವು ಪುನರಾವರ್ತಿತ ಪ್ರಕಟನೆಗಳಲ್ಲಿ ಮುದ್ರಣಗೊಳ್ಳುತ್ತಿರುವುದು ವಿಶೇಷವಾಗಿದೆ. ಅವರ ಪ್ರಕಟಿತ ಪ್ರವಚನ ಸಾಹಿತ್ಯ ಹೀಗಿದೆ.

ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳವರ ಗ್ರಂಥಗಳು, ಧ್ವನಿಸುರುಳಿಗಳು ಹಾಗೂ ಸಿ. ಡಿ., ವಿ. ಸಿ. ಡಿ.

## ೭.೧.ಗ್ರಂಥಸ್ಥ ಸಾಹಿತ್ಯ :

ಭಗವದ್ಗೀತಾ, ಸಿದ್ಧಾಂತ ಶಿಖಾಮಣಿ, ಪತಂಜಲಯೋಗ ಸೂತ್ರ, ಪರಮಾರ್ಥ ಗೀತೆ, ಪರಮಾನುಭವ ಬೋಧೆ, ಕಠೋಪನಿಷತ್ತು, ಮುಂಡಕೋಪನಿಷತ್ತು, ಕೇನೋಪನಿಷತ್ತು, ಈಶೋಪನಿಷತ್ತು, ಮಾಂಡಕ್ಯೋಪನಿಷತ್ತು, ಸಮಾಜ ಸಂಪದ ಮತ್ತು ಇತರ ಪ್ರಬಂಧಗಳು, ಹಠಯೋಗ, ವಿಶ್ವದ ವಿವಿಧ ಧರ್ಮದ ಸೂಕ್ತಿಗಳು, ಶಾಂತಿ ಪಥ, ಸಿದ್ಧರಾಮೇಶ್ವರ ವಚನ–ಪ್ರವಚನ, ಭಗವಚ್ಚಿಂತನ, ಅಲ್ಲಮದೇವರ ವಚನ–ನಿರ್ವಚನ, ಬಸವೇಶ್ವರರ ವಚನ ದೀಪಿಕೆ, ನಾನಾರು, ಭಕ್ತಿಯೋಗ, ಗುಣಸಂಪದ, ಆನಂದಯೋಗ, ಜೀವನಯೋಗ, ಸಾಧನಾ ಪಥ, ಬದುಕು, ನುಡಿಮುತ್ತು, ಶಾಂತಿಯೋಗ, ಚಿಂತನೆಗಾಗಿ ಕಥೆಗಳು, ಪ್ರವಚನದಿಂದ ಆಯ್ದ ಕಥೆಗಳು, ಭಾವಸಂಪದ, ಶಿವಪಥ, ಸಾಂಧರ್ಭಿಕ ಪ್ರವಚನಗಳು, ಕಾಲ್ಯಾಣ ರಾಜ್ಯ, ಗುರುಪೂರ್ಣಿಮಾ, ಶ್ರೀ ಶಿವಾನಂದ ಚರಿತ್ರೆ, ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳವರ ಪುರಾಣ, ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳವರ ಚರಿತ್ರೆ, ಭಕ್ತಿಗೀತಾಮೃತ, ಅಕ್ಕಮಹಾದೇವಿಯ ವಚನಗಳು, ಚೆನ್ನಬಸವಣ್ಣನವರ ವಚನಗಳು, ಶರಣರ ವಚನಾಮೃತ, ಆಧುನಿಕ ಕಾಲದಲ್ಲಿ ಆಧ್ಯಾತ್ಮಿಕ ಜೀವನ, ಜ್ಞಾನಬಿಂದು.

ಇಂಗ್ಲಿಷ್ ಗ್ರಂಥಗಳು : God World & Soul, Songs Of Silnce, Devotionl Songs of Basaveshware, Selected Vachanas of Siddharameswar, Nijguna's of Wisdom, Mysticism, Reflections on the Divine, Yoga Philosophy, Anandayoga.

ಹಿಂದಿ ಗ್ರಂಥ : ಜೀನೇಕಿ ಕಲಾ.

**ಮರಾಠಿ ಗ್ರಂಥಗಳು** : ಸಿದ್ಧಾಂತ ಶಿಖಾಮಣಿ, ಪರಮಾನುಭವ ಬೋಧೆ, ಕರ್ಮಯೋಗಿ ಜೀವನ, ಅಮೃತಾನುಭವ, ಭಕ್ತಿ-ಮುಕ್ತಿ, ಸಿದ್ಧರಾಮೇಶ್ವರ ವಚನ, ಅಂತರದೃಷ್ಟಿ, ಭಗವಚ್ಚಿಂತನ, ಆನಂದಯೋಗ, ಭಕ್ತಿಯೋಗ, ಜೀವನ, ಶಿವಪೂಜಾವಿಧಿ.

## ೭.೨.ಕಂಠಸ್ಥ ಸಾಹಿತ್ಯ :

ಅಲ್ಲಮಪ್ರಭುದೇವರ ಪ್ರವಚನ, ಶಾಂತಿಯೋಗ, ಭಾವಸಂಪದ, ಪೂರ್ಣಯೋಗ, ಭಗವದ್ಗೀತಾ(ಅ-೫), ಭಗವದ್ಗೀತಾ(ಅ-೨), ಬದುಕುವುದು ಹೇಗೆ?, ಒಕ್ಕಲುತನ ಮತ್ತು ಅಧ್ಯಾತ್ಮ, ಪತಂಜಲಯೋಗ ಸೂತ್ರ.

ಸರಕಾರಿ ನೌಕರರು, ಸಹಕಾರ, ಶಿಕ್ಷಣ, ಮಹಾತ್ಮ, ತೃಪ್ತಿ, ಮುಕ್ತಜೀವನ, ತೃಪ್ತ, ಜೀವನ, ಭಕ್ತಿರಸಾಯನ, ಭಾವಭಕ್ತಿ, ಕ್ರಿಯಾಭಕ್ತಿ, ಸುವರ್ಣ ಮಾಧ್ಯಮ ಮಾರ್ಗ, ಅನುಸಂಧಾನ, ಅನುಭೂತಿ, ಜ್ಞಾನಭಕ್ತಿ, ಪ್ರಾಣಾಯಾಮ, ಸುಖಾಸನ. (ಬಿಡಿ ಧ್ವನಿ ಸುರುಳಿಗಳು) ಪತಂಜಲಯೋಗ ಸೂತ್ರ, ಪತಂಜಲಯೋಗ ಸೂತ್ರ, ಒಕ್ಕಲುತನ ಮತ್ತು ಅಧ್ಯಾತ್ಮ, ಜ್ಞಾನದಾಸೋಹ. (ವ್ಹಿಸಿಡಿ ಗಳು) ಸಂತೋಷದಿಂದ ಇರುವುದು ಹೇಗೆ? ಸತ್ಯ ಶುದ್ಧ ಕಾಯಕ, ಸುವರ್ಣ ಮಾಧ್ಯಮ ಮಾರ್ಗ, ಕೃತಜ್ಞತಾ, ಬುದ್ಧ-ಮಹಾವೀರರ ವೈರಾಗ್ಯ, ಪ್ರಾಣಾಯಾಮ, ಸುಖಾಸನ, ಪರಿವರ್ತನೆ (ಬಿಡಿ ವ್ಹಿ. ಸಿ. ಡಿ. ಗಳು) ಬದುಕುವುದು ಹೇಗೆ, ಭಗವದ್ಗೀತಾ (ಅ-೨). (ಸಿಡಿಗಳು)

**ಸಿ. ಡಿ. ಮತ್ತು ವ್ಹಿ. ಸಿ. ಡಿ. ಗಳು** : Patanjalayoga Sutra, Spiritual Freepom & Love, The Life of Devotion, Yogasaropanishat, Ishavasopanishat, Peace and Common Man, Life.

ಜ್ಞಾನಯೋಗ ಫೌಂಡೇಶನ್ ಬಿಜಾಪುರ ಪ್ರಕಾಶನದಡಿಯಲ್ಲಿಯೇ ಜ್ಞಾನಯೋಗಿ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರ ಹೆಚ್ಚಿನ ಪ್ರವಚನದ ಕೃತಿಗಳು ಬಿಡುಗಡೆಗೊಂಡಿವೆ. ಆಧ್ಯಾತ್ಮಿಕ ಸಾಹಿತ್ಯವನ್ನು ಮುಕ್ಷುಗಳಿಗೆ ಸುಲಭವಾಗಿ ಮುಟ್ಟಿಸುವ ಮಣಿಹವನ್ನು ಈ ಫೌಂಡೇಶನ್ ಹೊತ್ತಿದೆ. ಪೂಜ್ಯರು ಅಲ್ಲಲ್ಲಿ ಮಾಡಿದ ಪ್ರವಚನಗಳ ಸಾರಸಂಗ್ರಹ ಮಾಡಿದವರು ಪೂಜ್ಯ ಶ್ರೀ ಶ್ರದ್ಧಾನಂದ ಮಹಾಸ್ವಾಮಿಗಳು ಕಾಗವಾಡ. ಎಲ್ಲ ಕೃತಿಗಳಿಗೆ ಮರುಜೀವಕೊಟ್ಟವರು. ಓತ-ಪ್ರೋತವಾಗಿ ಹರಿದುಬಂದ ಆ ನುಡಿಗಡಣಗಳನ್ನು ಅನೂಸಾರವಾಗಿ ಸಂಗ್ರಹಿಸಿ ಕೃತಿರೂಪಕೊಟ್ಟವರು. ಗುರುದೇವರೇ ಬರೆಯಿಸಿದ್ದಾರೆ ನನ್ನದೇನೂ ಇಲ್ಲ ಎನ್ನುವ ವಿನೀತಭಾವ ಅವರದು. ಶ್ರೀ ಶ್ರದ್ಧಾನಂದರದು ಪವಿತ್ರ ಕಾಯಕ ಕಂಠಸ್ಥ ಸಾಹಿತ್ಯವನ್ನು ಗ್ರಂಥರೂಪಕ್ಕೆ ತರುವದು

ಬಲುಕಷ್ಟದ ಕೆಲಸ. ಅವರ ಜೊತೆಯಲ್ಲಿಯೇ ಶ್ರೀ ತೇಜೋಮಯಾನಂದರು, ಶ್ರೀ ಸಂಗಮೇಶ ಬಿರಾದಾರ, ಶ್ರೀ ಸಿದ್ಧರಾಜ ಪೂಜಾರಿ, ಶ್ರೀ ಮಹಾಂತೇಶ ಬಿರಾದಾರ, ಶ್ರೀ ಶಿವರಂಜನ್ ಸತ್ಯಂಪೇಟೆ, ಅಲ್ಲದೇ ನಾಡಿನ ಅನೇಕ ಸಾಹಿತಿಗಳು ಮತ್ತು ಪತ್ರಿಕಾ ವರದಿಗಾರರು. ಇವರೆಲ್ಲರ ಸೇವೆಯೂ ಅನುಪಮ.

ಹೀಗಾಗಿ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರ ಪ್ರವಚನಗಳು ಇಂದು ಪ್ರತಿಮನೆಯನ್ನು ತಲುಪಿವೆ.

ಪೂಜ್ಯರದು ಹೃದಯಭಾಷೆ. ಬಾಳಪಥಕ್ಕೆ ದಾರಿದೀಪ. ಅವರ ಅಂತರಂಗದಿಂದ ಹೊರ ಹೊಮ್ಮಿದ ಬೆಳಕಿನ ಕಿಡಿಗಳೇ ಎಲ್ಲ ಕೃತಿ ರೂಪದಲ್ಲಿ ಹರವಿಕೊಂಡಿವೆ. ತರ್ಕ ಮತ್ತು ಪಾಂಡಿತ್ಯಕ್ಕೂ ಮೀರಿದ ಅತೀತವಾದ ಒಂದು ಮಹತ್ತರ ದರ್ಶನ ಬಿಂಬಿತವಾಗಿರುತ್ತದೆ. ಮಹಾತ್ಮರು ನಡೆದು ತೋರಿದ ದಾರಿ ಪ್ರವಚನಗಳಾಗಿವೆ. ಅವರ 'ಭಕ್ತಿಪಥ' ಪುಸ್ತಕದಲ್ಲಿ ಶ್ರೀ ತೇಜೋಮಯಾನಂದರು ಇಂಗ್ಲೀಷ್ ಭಾಷೆಯಲ್ಲಿ ಬರೆದುದನ್ನು ಕನ್ನಡಕ್ಕೆ ತಂದವರು ಶ್ರೀ ಸಿದ್ಧರಾಜ ಪೂಜಾರಿಯವರು. ಅವರು ಹೇಳುತ್ತಾರೆ, ಸತ್ಸಂಗದ ನೆರಳಿದೆ ಪರಮ ಪ್ರೇಮದ ಅನುಭೂತಿಯಿದೆ. ಅಮೃತತ್ವದ ಸವಿಯಿದೆ. ಸ್ವರೂಪದ ನಿರೂಪಣೆಯಿಂದ ಮೋಕ್ಷದ ಗುರಿಯಿದೆ ಹಾಗೂ ಎಲ್ಲದರ ಋತುದರ್ಶನವಿದೆ ಎಂದು. ನನಗೆ ನನ್ನನ್ನು ತೋರಿಸಿದ ಆಧ್ಯಾತ್ಮಿಕ ಗುರುಗಳು ಪರಮಪೂಜ್ಯರೆಂದು ಭಕ್ತಿಪಥ ಪೂರ್ಣಗೊಳಿಸಿದ್ದಾರೆ.

ಪ್ರವಚನದ ಸಾರಸಂಗ್ರಹವೇ ನೀತಿಯೋಗ. ಈ ನೀತಿಯೋಗ ಎಲ್ಲ ಯೋಗಗಳ ಅಡಿಪಾಯ. ಜಗತ್ತಿನ ಎಲ್ಲ ಯೋಗಿಗಳು ಯಮನಿಯಮಾದಿಗಳನ್ನು ಗೌರವಿಸಿದ್ದಾರೆ. ಧರ್ಮದ ಇನ್ನೊಂದು ಹೆಸರು ನೀಡಿ ಪೂಜ್ಯರ ಅಮೂಲ್ಯ ಮಾತುಗಳನ್ನು ಕೃತಿಗೆ ತಂದವರು ಶ್ರೀ ಶ್ರದ್ಧಾನಂದರು. ಸರ್ವಸಮ್ಮತವಾದ ಪ್ರಮುಖ ನೀತಿಗಳು ಯಾವವು? ಅವುಗಳಿಂದ ಅಂತರಂಗ ಬಹಿರಂಗ ಹೇಗೆ ಶುದ್ಧಿಯಾಗುತ್ತದೆ. ಅದರಿಂದ ದೇವನೊಲುಮೆಯ ದಾರಿ ಹೇಗೆ ತೆರೆದುಕೊಳ್ಳುತ್ತದೆ? ಆ ದಾರಿಯಲ್ಲಿ ನಡೆದ ಮಹಾತ್ಮರ ಅನುಭವಗಳೇನು" ಇದೆ ಮೊದಲಾದ ಪ್ರಶ್ನೆಗಳಿಗೆ ಪರಿಹಾರವನ್ನು ನೀತಿಯೋಗದಲ್ಲಿ ಕಾಣಬಹುದೆಂದು ಪ್ರಸ್ತಾವಣೆಯಲ್ಲಿ ತಿಳಿಸಿದ್ದಾರೆ.

ಮೊದಲು ಸಮಾಧಾನ ಎಂಬ ತಲೆಬರಹದಲ್ಲಿ ನೀತಿಯೋಗ ಆರಂಭವಾಗುತ್ತದೆ. ವಿಶ್ವದ ಮೇಲು ಪರಮಸತ್ಯವನ್ನು ಅರಿತವರು ಸಂತರು, ಶರಣರು. ಅವರು ಸದಾ ಶಾಂತರು– ಪ್ರಶಾಂತರು, ಸಮಾಧಾನಿಗಳು, ನಿತ್ಯತೃಪ್ತರು ಎಂದು ಹೇಳುತ್ತಾರೆ. ಭಗವಾನ್ ಬುದ್ಧ ಪರಮಸತ್ಯ ಅರಿಯುವುದಕ್ಕಾಗಿ ಸತಿಸುತಾದಿಗಳನ್ನು ಕೀರ್ತಿ ವಾರ್ತೆ ಸಿರಿಸಂಪದ ತೊರೆದು ಪ್ರಶಾಂತ

ಪರಿಸರದಲ್ಲಿ ಧ್ಯಾನಸ್ಥನಾದ. ಕೊನೆಗೆ ಸತ್ಯವನ್ನು ಅರಿತ. ಸಮಾಧಾನ ಪಡೆದ. ಹೂ ಕಾಣುತ್ತದೆ. ಸುಗಂಧ ಮತ್ತು ಅದರ ಪ್ರಾಣ ಕಾಣಿಸದು. ಆತ್ಮಜ್ಞಾನಿಗಳಿಗೆ ಅಸತ್ಯ ಗೋಚರಿಸುತ್ತದೆ. ಶಾಂತಿ ಸಮಾಧಾನಗಳೇ ಇಲ್ಲದೇ ಅಧಿಕಾರ ಅಂತಸ್ತುಗಳಿಗೆ ಏನೂ ಅರ್ಥವಿಲ್ಲ. ವಿಶ್ವದ ಮೂಲಾಧಾರವಾಗಿರುವ ಆ ಪರಮಸತ್ಯವನ್ನು ಅರಿಯುವುದೇ ಪರಮಾನಂದದ ರಹಸ್ಯ.

ಪತಂಜಲಿ ಯೋಗಮಾರ್ಗವನ್ನು ಮಹಾವೀರ ಅಹಿಂಸಾಮಾರ್ಗ, ಬುದ್ಧನು ತ್ಯಾಗಮಾರ್ಗ, ಬಸವಣ್ಣನವರು ಭಕ್ತಿಮಾರ್ಗ, ಹೀಗೆ ಅನೇಕರು ಅನೇಕ ಮುಕ್ತಿಮಾರ್ಗ ತೋರಿದ್ದಾರೆ. ನಮಗೆ ಯೋಗ್ಯವಾದ ಮಾರ್ಗ ನಾವು ಆಯ್ದುಕೊಳ್ಳಬೇಕು. ಗುರುಮಾರ್ಗ ದರ್ಶನದಲ್ಲಿ ಮುನ್ನಡೆದು ಮುಕ್ತಿಮಂದಿರ ತಲುಪಬೇಕು.

ಪ್ರಾಪಂಚಿಕ ಆಸೆ ಆಮಿಷ್ಯಗಳನ್ನು ಮೀರಿ ಮುನ್ನಡೆದಾಗ ಶರಣರ ಅನುಭಾವಿಗಳ ಸಾನಿಧ್ಯ ದೊರೆಯುತ್ತದೆ. ಅದುವೇ ಸತ್ಸಂಗ. ಅದರಿಂದಲೇ ಹೃದಯ ಶುದ್ಧಿ. ಪರಮ ಸತ್ಯದ ಬೆಳಕು. ಆಗ ಜೀವನದಲ್ಲಿ ಶಾಂತಿ ಸಮಾಧಾನ. ಹೀಗೆ ಪೂಜ್ಯರು ಹತ್ತುಹಲವು ಉದಾಹರಣೆಗಳೊಂದಿಗೆ ಉಪದೇಶಿಸಿದ್ದಾರೆ.

ನೀತಿಯ ಹೃದಯವನ್ನು ಅರಳಿಸುತ್ತದೆ. ವ್ಯಕ್ತಿ-ವ್ಯಕ್ತಿಗಳನ್ನು ಕೂಡಿಸುತ್ತದೆ. ನೀತಿಗೆ ಪ್ರಪಂಚ ಮತ್ತು ಪರಮಾರ್ಥ ಎರಡರಲ್ಲಿಯೂ ಬೆಲೆ ಇದೆ. ನೀತಿಯಿಂದ ಶಾಂತಿಸಮಾಧಾನ, ಧರ್ಮಸಾಧನ, ನೀತಿಯನ್ನು ಯೋಗ ಸದನದ ಆಧಾರವೆಂದು ಪತಂಜಲಿ ಮಹರ್ಷಿಗಳು ಸ್ವೀಕರಿಸಿರುವರು. ಹೂವಿನಲ್ಲಿ ಮುಳ್ಳೂ ಇದೆ. ಸುಗಂಧವೂ ಇದೆ. ಆದರೆ ಹೂವು ಸುಗಂಧವನ್ನು ಸುತ್ತೆಲ್ಲ ಹರಡುತ್ತದೆ. ಮುಳ್ಳನ್ನಲ್ಲ. ಮನುಷ್ಯನಾದರೂ ಸಹ ತನ್ನಲ್ಲಿರುವ ಸದ್ವಿಚಾರ, ಸದ್ಭಾವನೆಗಳನ್ನು ನಾಲ್ಕು ಜನರಿಗೆ ಮುಟ್ಟಿಸಬೇಕು. ದುರ್ಗಣದ ಮುಳ್ಳು ಹರಡಿ ಇತರರಿಗೆ ನೋವನ್ನುಂಟುಮಾಡಬಾರದು. ಸದ್ಭಾವದಿಂದ ಸದ್ವಸ್ತಗಳನ್ನು ನೀಡುವುದು ಔದಾರ್ಯ. ಒಂದು ಬೀಜಬಿತ್ತಿ ಗೊಬ್ಬರ ಹಾಕಿ, ನೀರು ಉಣಿಸಿ ರಕ್ಷಿಸಿದಾಗ ಮರ ಹೆಮ್ಮರವಾಗಿ ಬೆಳೆದು ನೀನು ನನ್ನನ್ನು ರಕ್ಷಿಸಿರುವೆ ನಾನು ನಿನ್ನನ್ನು, ನಿನ್ನವರನ್ನು ರಕ್ಷಿಸುವೆ ಎಂದು ಹಣ್ಣುಹಂಪಲ ನೀಡುತ್ತದೆ.

'ಭಕ್ತಿ' ಎಂಬುದು ದೇವನ ಮೇಲಿರಿಸುವ ಪರಮ ಪ್ರೇಮದ ಸ್ವರೂಪ. ಮಲ್ಲಿಗೆ ಹೂ ಅರಳಿಸುತ್ತೆಲ್ಲ ಪರಿಮಳ ಬೀರಿ ಪರಿಸರವನ್ನು ಅಲಂಕರಿಸುತ್ತದೆ. ಯಾರಿಂದಲೂ ಏನನ್ನು ಬಯಸುವದಿಲ್ಲ. ಬಿಸಿಲ್ಗುದುರೆಯ ಪ್ರಯಾಣ ಅಪಾಯ. ಆಸೆ ಆಮಿಷಗಳಿಂದ ಮಾಡುವ ಪೂಜೆ ನಿರರ್ಥಕ. ನಮಗೆ ಅಂಟಿರುವ ಬಯಕೆ ಕಾಮನೆಯ ಹೊಲಸನ್ನು ಕಳೆದುಕೊಳ್ಳಲು ಭಕ್ತಿಸಾಗರದಲ್ಲಿ ಜಿಗಿದುಬಿಡಬೇಕು. ಕ್ಷಣಾರ್ಧದಲ್ಲಿಯೇ ನಾವು ಶುಚಿರ್ಭೂತರಾಗುತ್ತೇವೆ.

ವಿಗ್ರಹಸ್ನಾನ, ಪ್ರಾಣಿಗಳ ಬಲಿ, ದೇಹದಂಡನೆ ಇವು ಯಾವವೂ ಭಕ್ತಿ ಅಲ್ಲ. ಏನೇನೋ ಆಸೆ ಇಟ್ಟುಕೊಂಡು ಮಾಡುವ ಭಕ್ತಿ ವ್ಯರ್ಥ. ಭಕ್ತಿಯ ಜೀವನವು ಸತ್ಸಂಗವನ್ನು ಬಯಸುತ್ತದೆ. ವಿಶಾಲ ಹೃದಯದಿಂದ ಶರಣರ ಸಂಗದಲ್ಲಿ ಬೆರೆತು ಬಿಡಬೇಕು. ನಮ್ಮ ಭಾವನೆಗಳ ಬಳ್ಳಿಯಲ್ಲಿ ಭಕ್ತಿ ಕಮಲ ಅರಳಲು ಮನಸ್ಸು ಪರಿಶುದ್ಧವಾಗಿರಬೇಕು. ಬದಲಾವಣೆಯು ವಿಶ್ವದ ನಿಯಮ. ಪ್ರತಿಕ್ಷಣ ಎಣ್ಣೆಯ ಒಂದೊಂದು ಹನಿ ಸತತವಾಗಿ ಬತ್ತಿಯ ತುದಿಯನ್ನು ತೋಯಿಸುತ್ತಿರುತ್ತದೆ. ಅಂದೊಂದು ಜ್ವಾಲೆಗಳ ಸೃಷ್ಟಿ ಹಾಗೂ ವಿನಾಶದ ಸರಮಾಲೆಯಾಗಿದ್ದರೂ ಅದು ಏಕೈಕ ಜ್ವಾಲೆಯಾಗಿತೋರುತ್ತದೆ. ಒಂದು ಮಗು ಹಂತ-ಹಂತ ಬೆಳೆಯುತ್ತದೆ. ಹುಟ್ಟುತ್ತಲೇ ಸಾಯುತ್ತಿರುತ್ತದೆ. ದ್ವೇಷ ಸತ್ಯವನ್ನು ಮರೆಮಾಚಿಸುತ್ತದೆ. ದ್ವೇಷದ ಬಿರುಗಾಲಿಯಲ್ಲಿ ಪ್ರೀತಿ ಮೊಗ್ಗೆ ಭಕ್ತಿಯಾಗಿ ಅರಳಲಾರದು. ಆಕಾಶಗಂಗೆಯಿಂದ ಅಣುವಿನವರೆಗೆ ಯಾವುದೂ ಸ್ಥಿರವಾಗಿರುವುದಿಲ್ಲ. ನಮ್ಮ ಜೀವನವನ್ನು ಅಹ್ಲಾದಕರ ಸಂವೇದನೆಗಳು ಮತ್ತು ಆಹ್ಲಾದಕರ ಅನುಭವಗಳ ಮೆಲುಕ ಸಿರಿವಂತಗೊಳಿಸಬೇಕು.

ಹೀಗೆ ಪೂಜ್ಯರ ಭಕ್ತಿಪಥ ಕೃತಿಯು ೮ ಪಾಠಗಳಲ್ಲಿ ಮೂಡಿಬಂದಿದೆ. ಭಕ್ತಿಪಥ, ಅಮರತ್ವ, ಅಮೃತತ್ವ, ಋತದರ್ಶನ, ಮೋಕ್ಷ, ಸ್ವರೂಪ ದರ್ಶನ, ಸತ್ಸಂಗ, ತಾತ್ವಿಕ ಮತ್ತು ಸಾತ್ವಿಕ ಭಕ್ತಿ ಇಲ್ಲಿ ಮೈದಾಳಿದೆ. ನೀತಿಯೇ ಸಂತಸದ ಬಾಳಿನ ದಾರಿ. ನೀತಿ ಪಥದಲ್ಲಿ ಸಾಗುವಾಗ ಅನೇಕ ವಿಘ್ನಗಳು ಪೂಜ್ಯರು ನಿಸರ್ಗದ ಋಷಿಮುನಿಗಳ ಪಾಶ್ಚಿಮಾತ್ಯ ಕಥೆಗಳ ಶರಣ-ಸಂತರ ಜೀವನ ಸಂದೇಶಗಳನ್ನು ತಮ್ಮದೇ ಶೈಲಿಯಲ್ಲಿ ದೃಷ್ಟಾಂತ ನೀಡುತ್ತ ಪ್ರವಚನ ನೀಡಿದ್ದಾರೆ. ವಚನ, ಉಪನಿಷತ್, ಅಭಂಗ ಮುಂತಾದವುಗಳ ಮೇಲೆ ಕನ್ನಡ, ಹಿಂದಿ, ಇಂಗ್ಲೀಷ್, ಮರಾಠಿ, ಸಂಸ್ಕೃತ ಭಾಷೆಯಲ್ಲಿ ನಿಪುಣರು. ಉಪನಿಷತ್‌ಗಳು ಭಾರತೀಯರ ಪವಿತ್ರಗ್ರಂಥಗಳು. ಸಾವಿರಾರು ವರ್ಷಗಳ ಹಿಂದೆಯೇ ಅವು ನಿರ್ಮಾಣಗೊಂಡಿವೆ. ನಮ್ಮ ದೇಶವನ್ನು ಆಧ್ಯಾತ್ಮಿಕವಾಗಿ ಸಿರಿವಂತಗೊಳಿಸಿವೆ. ಅವುಗಳಲ್ಲಿ ತತ್ವಚಿಂತನವಿದೆ. ಸತ್ಯದರ್ಶನವಿದೆ. ಮನುಷ್ಯಜೀವನಕ್ಕೆ ಬೇಕಾದ ಎಲ್ಲವೂ ಇದೆ. ಹೆಚ್ಚೇನು? ವಿಶ್ವ ಶಾಂತಿಯ ಸೂತ್ರವೇ ಈ ಗ್ರಂಥಗಳಲ್ಲಿ ಅಡಕವಾಗಿದೆ ಎಂದು ಉಪನಿಷತ್‌ಗಳ ಬಗ್ಗೆ ಮಾತನಾಡಿದ್ದಾರೆ.

ಶ್ರೀ ಸಿದ್ಧೇಶ್ವರ ಸ್ವಾಮಿಜಿಯವರ ನಾಡಿಗಷ್ಟೇ ಅಲ್ಲ ದೇಶಕ್ಕಷ್ಟೇ ಅಲ್ಲ ಜಗತ್ತಿನ ಮಟ್ಟಕ್ಕೆ ನಿಲ್ಲುವ ಒಬ್ಬ ಶ್ರೇಷ್ಠ ಸಂತರು. ನಡೆದಾಡುವ ದೈವ ಸ್ವರೂಪಿಗಳು. ಪ್ರತ್ಯಕ್ಷ ಶರಣ ಸ್ವರೂಪಿಯೆಂದೂ, ಸಾಕ್ಷಾತ್ ಸಂತರ ಸಾರವೆಂದು ಕರೆದರೂ ಉತ್ಪ್ರೇಕ್ಷಿತ ಅಂಶಗಳಲ್ಲ. ಏಕೆಂದರೆ ಅವರು ಎಲ್ಲವೂ ಹೌದು ಆದರೂ ಏನೂ ಅಲ್ಲ ಅಷ್ಟೇ! ಬಸವಣ್ಣನವರ ವಿಚಾರ ಆಚಾರ, ನಿಜಗುಣ ಶಿವಯೋಗಿಗಳ ತತ್ವ, ಸಾಕ್ರೇಟಿಸನ ತಾಳ್ಮೆ, ಅಲ್ಲಮ ಪ್ರಭುವಿನ ಶೂನ್ಯತ್ವ

ಅಕ್ಕಮಹಾದೇವಿಯ ವೈರಾಗ್ಯ, ಬುದ್ಧನ ಮಂದಹಾಸ, ಮಹಾವೀರನ ಅಹಿಂಸೆ, ಗಾಂಧೀಜಿಯವರಲ್ಲಿದ್ದ ದೇಶಪೇಮ, ಇವೆಲ್ಲವುಗಳನ್ನೂ ಒಬ್ಬರಲ್ಲಿ ಕಾಣಬೇಕಾದರೆ ಸಿದ್ಧೇಶ್ವರ ಸ್ವಾಮಿಗಳನ್ನು ಕಂಡರೆ ಸಾಕು. ಅವೆಲ್ಲವೂ ಅವರಲ್ಲಿ ಅವಿರ್ಭಾವಗೊಂಡಿವೆ ಗಟ್ಟಿಗೊಂಡಿವೆ. ಅವರ ಮಾತಿನಲ್ಲಿ ಮಧುರತ್ವವಿದೆ ಮಹಾದೇವನನ್ನು ಕಾಣುವ ಶಕ್ತಿಯಿದೆ. ಅವರ ನುಡಿ ಮುತ್ತಿನಹಾರ ಸ್ಫಟಿಕದ ಹರಳು. ಅವರ ಒಬ್ಬ ನಿರಾಭಾರಿ ಸದ್ಗುರು. ಆಶೆ ಆಮಿಷಗಳಿಗೆ ಒಳಗಾಗದ ವ್ಯಕ್ತಿತ್ವ ಅವರದ್ದು.

ಪೂಜ್ಯರ ಉಪದೇಶವೆಂದರೆ ತತ್ವಜ್ಞಾನದ ಸಮುದ್ರದಲ್ಲಿ ಈಜಾಡಿದಂತೆ. ಅವರು ಎಷ್ಟೇ ಮಾತಾಡಲಿ, ಏನೇ ಮಾತನಾಡಲಿ, ಎಲ್ಲೇ ಮಾತನಾಡಲಿ ಸಾವಿರಾರು ಲಕ್ಷಾಂತರ ಜನರು ಶಾಂತ ರೀತಿಯಿಂದ ಆಲಿಸುತ್ತಾರೆ. ಕಾರಣ ಅವರ ನುಡಿಗಳಲ್ಲಿ ಅನುಭವವಿದೆ, ಅಮೃತವಿದೆ, ಅಮರತ್ವವಿದೆ, ಆತ್ಮಜ್ಞಾನದ ಸುಳುಹುಯಿದೆ, ನಮ್ಮ ಜೀವನಕ್ಕೆ ಅವಶ್ಯವಿರುವ ಮೌಲ್ಯಗಳಿವೆ ಆದ್ದರಿಂದಲೇ ಅವರೊಬ್ಬರು ಬಹುದೊಡ್ಡ ಸಮಾಜ ಸುಧಾರಕರೆಂದು ಕರೆದರೆ ತಪ್ಪಾಗಲಾರದು. ಅವರೊಬ್ಬರು ನಮ್ಮ ಭಾರತ ದೇಶದ ಅಮೂಲ್ಯ ಆಸ್ತಿ ಇದ್ದಂತೆ. ತತ್ವಜ್ಞಾನವನ್ನು ಸುಲಭ ರೀತಿಯಲ್ಲಿ ಬೋಧಿಸುವಲ್ಲಿ ಸಮರ್ಥರಾಗಿದ್ದಾರೆ. ಕನ್ನಡ, ಇಂಗ್ಲೀಷ್, ಹಿಂದಿ, ಮರಾಠಿ ಮುಂತಾದ ಭಾಷೆಗಳಲ್ಲಿ ಪ್ರಭುತ್ವ ಹೊಂದಿರುವ ಪೂಜ್ಯರು ದೇಶದ, ಹೋರ ದೇಶಗಳಲ್ಲೂ ಆಧ್ಯಾತ್ಮಿಕ ವಿಚಾರಗಳನ್ನು ಬೋಧಿಸುತಿದ್ದಾರೆ. ಇವರ ಉಪನ್ಯಾಸಗಳಲ್ಲಿ ವಿಶೇಷತೆ ಏನೆಂದರೆ ಸಂಸಾರದಲ್ಲಿಯ ಹಲವಾರು ಘಟನೆಗಳನ್ನು ಉದಾಹರಿಸಿ ಆಧ್ಯಾತ್ಮದ ಉನ್ನತ ವಿಚಾರಗಳಿಗೆ ಜನರ ಮನಸನ್ನು ಸೆಳೆಯುತ್ತಾರೆ. ಶಾಸ್ತ್ರಗಳಲ್ಲಿ ವೇದಾಂತ ಉಪನಿಷತ್ತು ಭಗವದ್ಗೀತೆಯಲ್ಲಿಯ ಶಬ್ದಗಳನ್ನು ಬಳಸದೇ ಅವುಗಳಿಗೆ ಪರ್ಯಾಯವಾಗಿರುವ ರೂಢಿಯಲ್ಲಿರುವ ಶಬ್ದಗಳನ್ನು ಬಳಸಿ ತತ್ವ ವಿಚಾರಗಳನ್ನು ಹೇಳುವದರಿಂದ ಜನರಿಗೆ ಆಧ್ಯಾತ್ಮದತ್ತ ಒಲವು ಮೂಡುತ್ತದೆ.

ಸಿದ್ಧೇಶ್ವರ ಸ್ವಾಮಿಗಳು ಪ್ರವಚನಕ್ಕೆ ಶಿವಶರಣರ ವಚನಗಳನ್ನು ನಿಜಗುಣ ಶಿವಯೋಗಿಗಳು ಕೈವಲ್ಯ ಪದ್ದತಿಯಲ್ಲಿಯ ಪದ್ಯಗಳನ್ನು ಆಧಾರವಾಗಿಟ್ಟುಕೊಂಡಿರುತ್ತಾರೆ. ಆದರೆ ಅವುಗಳನ್ನು ಆಧಾರವಾಗಿಟ್ಟು ಕೊಂಡಿದ್ದಾರೆಂಬುದು ಕೇಳುಗರಿಗೆ ಗೊತ್ತಾಗುವದೇ ಇಲ್ಲ. ಪ್ರವಚನ ಹೇಳುತ್ತಿರುವಾಗ ಅವುಗಳಲ್ಲಿಯ ಶಬ್ದಗಳನ್ನು, ವಾಕ್ಯಗಳನ್ನು ಉದಾಹರಿಸುವಾಗಲೇ ಕೇಳುಗರಿಗೆ ಅದರ ಅನುಭವವಾಗುತ್ತದೆ. ಪ್ರವಚನದ ಕಾಲಕ್ಕೆ ಜಗತ್ತಿನ ನಮ್ಮ ದೇಶದ ಶ್ರೇಷ್ಠ ತತ್ವಜ್ಞಾನಿಗಳಾದ ಸಾಕ್ರೇಟಿಸ್, ಪ್ಲೇಟೋ, ಅರಿಸ್ಟಾಟಲ್, ಕನ್ಫುಷಿಯಸ್, ಮಹ್ಮದ ಪೈಗಂಬರ, ಏಸುಕ್ರೈಸ್ತ, ಗುರುನಾನಕ್, ತುಳಸಿದಾಸ, ಮೀರಾಬಾಯಿ, ಜ್ಞಾನದೇವ, ತುಕಾರಾಮ, ಸಿದ್ಧಾರೂಢ, ಶಿಶುನಾಳ ಶರೀಫ, ಶಿವಯೋಗಿ ಹೀಗೆ ಹಲವಾರು ಮಹಾತ್ಮರ ಉದಾಹರಣೆಗಳನ್ನು

ಕೊಡುವದರಿಂದ ಜನರ ಮೇಲೆ ತುಂಬಾ ಪರಿಣಾಮ ಬೀರುತ್ತಾರೆ. ಜಗತ್ತಿನ ಶ್ರೇಷ್ಠ ಸಂತರ ಹೆಸರುಗಳನ್ನು ಬಹುಜನರು ಕೇಳಿರುವದಿಲ್ಲ. ಅಂತಹವರ ಹೆಸರುಗಳನ್ನು ಅವರ ವಿಚಾರಗಳನ್ನು ಪೂಜ್ಯರ ಉಪದೇಶಗಳಿಂದ ಕೇಳಿದಾಗ ತುಂಬಾ ಸಂತೋಷವೆನಿಸುವದು. ಎಲ್ಲ ಧರ್ಮಗಳಲ್ಲಿಯ ದಾರ್ಶನಿಕರ ವಿಚಾರಗಳನ್ನು ವಿಷಯಗಳನ್ನು ಪ್ರತಿಪಾದಿಸುತ್ತಿರುವದರಿಂದ, ಎಲ್ಲ ಧರ್ಮದವರೂ ಪೂಜ್ಯರನ್ನು ಗೌರವದಿಂದ ಕಾಣುತ್ತಾರೆ. ಇಂತಹ ಧರ್ಮವೊಂದೇ ಶ್ರೇಷ್ಠವಾದುದೆಂದು, ಎಲ್ಲರೂ ಅದನ್ನೇ ಅನುಸರಿಸಬೇಕೆಂದು ಹೇಳುವದಿಲ್ಲ. ನಿಮ್ಮ ನಿಮ್ಮ ಧರ್ಮದ ತಿರುಳನ್ನು ಅರಿತುಕೊಂಡು ಆಚರಿಸುತ್ತಾ ಹೋದರೆ ಜಗತ್ತು ಸುಂದರವಾಗಬಲ್ಲದು, ಸುಖೀ ಸಾಮ್ರಾಜ್ಯ ನಿರ್ಮಾಣವಾಗಬಹುದೆಂದು ಮಾರ್ಮಿಕವಾಗಿ ಹೇಳುವರು.

ಪೂಜ್ಯರ ಪ್ರವಚನಗಳಲ್ಲಿ ಟೀಕೆಗೆ ಆಸ್ಪದವಿಲ್ಲ, ಯಾವುದೇ ರಾಜಕೀಯ ಪಕ್ಷದ ಬಗೆಗಳಾಗಲಿ, ರಾಜಕೀಯ ಮುಖಂಡರ ಬಗ್ಗೆಯಾಗಲಿ ವರ್ಣಿಸುವದಿಲ್ಲ, ಒಂದುವೇಳೆ ಕಾರ್ಯಕ್ರಮಗಳಲ್ಲಿ ರಾಜಕೀಯ ಮುಖಂಡರಿದ್ದರೆ "ನೋಡ್ರಿಪಾ ನೀವು ಜನರಿಗೆ ಒಳ್ಳೆಯದನ್ನು ಮಾಡ್ರಿ, ಅವರನ್ನು ಸುಖಿಗಳನ್ನಾಗಿ ಮಾಡ್ರಿ, ಕಾಯಕವೇ ಕೈಲಾಸ ಎಂಬ ಅಣ್ಣನವರ ಮಾತನ್ನು ಗಟ್ಟಿಗೊಳಿಸಿ, ಭಾರತ ದೇಶ ಋಷಿ-ಮುನಿಗಳ ನಾಡು, ಸತ್ಯವನ್ನು ಸಂಶೋಧನೆ ಮಾಡಿದ್ದಾರೆ, ಇಂಥ ನಮ್ಮ ದೇಶವನ್ನು ಸುಂದರಗೊಳಿಸೋಣ ಸಂಪದ್ಭರಿತವನ್ನಾಗಿ ಮಾಡೋಣ" ಎಂದು ಹೇಳಿ ಸುಮ್ಮನಾಗುವರು. ಹೀಗಾಗಿ ರಾಜಕೀಯ ಎಲ್ಲ ಪಕ್ಷದವರು, ಧುರೀಣರೂ ಇವರನ್ನು ಆದರದಿಂದ ಕಾಣುವದು.

ಪೂಜ್ಯರ ಇರುವಿಕೆಯೂ ಅವರ ವ್ಯಕ್ತಿತ್ವವನ್ನು ಎತ್ತರ ಮಟ್ಟಕ್ಕೆ ಒಯ್ಯಲು ಕಾರಣವಾಗಿವೆ. ಉಡುಗೆ-ತೊಡುಗೆಗಳಾಗಲಿ, ಊಟ-ಉಪಚಾರಗಳಾಗಲಿ ತುಂಬಾ ಸರಳ-ಸಹಜ, ನಡೆ-ನುಡಿ ಒಂದಾಗಿಯಿರುವಂತೆ, ಅರಿವು ಇರವು ಎರಡೂ ಒಂದಾಗಿಟ್ಟುಕೊಂಡವರು. ಅವರ ತೊಡುಗೆಗಳನ್ನು ನೋಡಿದರೆ ಹೊಸಬರಿಗೆ ಆಶ್ಚರ್ಯವೆನಿಸಬಹುದು. ಒಂದು ಅಂಗಿ-ಒಂದು ಲುಂಗಿ, ಅಂಗಿಗೆ 'ಕಿಶೆ' ಇಲ್ಲದ್ದರಿಂದ ಹಣದ ಮೇಲಾಗಲಿ, ವಸ್ತ್ರ-ವಡವೆಗಳ ಮೇಲಾಗಲಿ ಮೋಹ ಇಲ್ಲದಿರುವುದು ಕಂಡುಬರುತ್ತದೆ. ಅವು ಕೇವಲ ಎರಡೇ ಜೋಡು ಮಾತ್ರ ತಮ್ಮ ತೊಡುಗೆಗಳನ್ನು ತಾವು ಸ್ವಚ್ಛ ಮಾಡಿಕೊಳ್ಳುವರು. ಮಹಾತ್ಮ ಗಾಂಧೀಜಿಯವರ ತರುವಾಯ ಅತ್ಯಂತ ಕಡಿಮೆ ಬಟ್ಟೆ ಧರಿಸುವವರೆಂದು ಶ್ರೀ ಸಿದ್ಧೇಶ್ವರ ಸ್ವಾಮಿಗಳೆಂದೇ ನಮ್ಮ ಭಾವನೆ. ಗಾಂಧೀಜಿಯವರಲ್ಲಿ ಒಂದು ಕೈ ಗಡಿಯಾರವಿತ್ತು ಆದರೆ ಪೂಜ್ಯರಲ್ಲಿ ಅದೂ ಸಹ ಇಲ್ಲವೆಂದು ಹೇಳಿದರೆ ಅಶ್ಚರ್ಯವೆನಿಸುವದು, ಅವರನ್ನು ಮೊದಲಿಗೆ ನೋಡಿದವರಿಗೆ ಅಥವಾ

ನೋಡುವವರಿಗೆ "ಸ್ವಾಮಿ" ಗಳೆಂದು ಅನಿಸುವದೇ ಇಲ್ಲ. ಕಾರಣ ಅವರು "ಕಾವಿ" ಬಟ್ಟೆಯನ್ನೂ ಧರಿಸುವದೇ ಇಲ್ಲ ಆಮೇಲೆ ಗೊತ್ತಾಗುವದು ಇವರು ಸ್ವಾಮಿಗಳ ಸ್ವಾಮಿಗಳೆಂದು.

ಅವರ ದಿನದ ಕಾರ್ಯಕ್ರಮ ಪ್ರಾರಂಭವಾಗುವದೇ ಸೃಷ್ಟಿಯೊಂದಿಗೆ, ವಾಯು ವಿಹಾರಕ್ಕೆ ಬೆಳಗಿನ ನಾಲ್ಕು ಘಂಟೆಗೆ ಹೊರಟು ಸೃಷ್ಟಿಯ ಸೊಬಗನ್ನು ಕಾಣುತ್ತಲೇ ಮರಳಿ ಬರುವರು. ಅವರ ಪ್ರವಚನದಲ್ಲಿ ಗಿಡ, ಮರ, ಬಳ್ಳಿ, ಹೂವು, ಎಲೆ, ಹಣ್ಣು ಮುಂತಾದವುಗಳ ಉದಾಹರಣೆಗಳು ಸಾಕಷ್ಟು ಪ್ರಮಾಣದಲ್ಲಿ ಬರುತ್ತವೆ. ಸೃಷ್ಟಿಯ ಸೌಂದರ್ಯದಲ್ಲಿ ಶಿವ ಸ್ವರೂಪವನ್ನೂ ಕಂಡವರು, ಪರಿಸರವನ್ನು ನಾಶ ಮಾಡಬಾರದೆಂದು ಮೇಲಿಂದ ಮೇಲೆ ಹೇಳುವರು ಏಕೆಂದರೆ ಪರಿಸರ ನಾಶವಾದರೆ ಮಾನವ ಜೀವಿಗೆ ಉಳಿಗಾಲವಿಲ್ಲ ಎಂಬುದು ಅವರ ದೃಢವಾದ ನಂಬುಗೆ.

ಶ್ರೀ ಸಿದ್ಧೇಶ್ವರರು ಯಾವುದೇ ಮಠಕ್ಕೆ ಹೊಂದಿಕೊಂಡವರಲ್ಲ ಹಾಗೂ ಅಭಿಮಾನಪಟ್ಟವರಲ್ಲ. ಅವರು ಸ್ಥಿರ 'ಜಂಗಮರಲ್ಲ-ಚರಜಂಗಮರವರು. ಇಂತಹ ಮಹಾತ್ಮರು ಬರಹಕ್ಕೆ ಸಿಗುವವರಲ್ಲ, ಮಾತಿಗೆ ಸಿಲುಕುವವರಲ್ಲ, ಮಾತು ಮನಂಗಳಿಗೆ ಅತ್ತತ್ತ ಮೀರಿದವರು. ಇಂತಹ ಮಹಾತ್ಮರು ಬದುಕಿದ್ದಾಗ ನಾವು ಜೀವಿಸುತ್ತಿದ್ದೇವೆ ಎನ್ನುದಕ್ಕಿಂತ ನಮ್ಮ ಜೀವಿತದಲ್ಲಿ ಇಂಥ ಮಹಾತ್ಮರು ಬದುಕಿದ್ದಾರೆ ಎಂಬುದೇ ಹೆಮ್ಮೆಯ ಸಂಗತಿ. ಅಂತಹ ಮಹಾತ್ಮರ ದರ್ಶನವೇ ನಮ್ಮ ಜನ್ಮದ ಪಾವನಕ್ಕೆ ನಾಂದಿ ಎಂದು ಹೇಳಿದರೆ ತಪ್ಪಾಗಲಾರದು.

## ೭.೩. ಪ್ರವಚನ ಪ್ರಭಾವ : ಒಂದು ಅನುಭವ

ಬಿಜಾಪೂರದ ಜ್ಞಾನಯೋಗಾಶ್ರಮದ 'ವೇದಾಂತ ಕೇಸರಿ' ಶ್ರೀ.ಮಲ್ಲಿಕಾರ್ಜುನ ಮಹಾಸ್ವಾಮೀಜಿಯವರು ಮಹಾವಿದ್ಯಾಲಯಗಳಿಗೆ ಮಾರ್ಗದರ್ಶನ ನೀಡುತ್ತಿದ್ದ ದೇವರಂತಿದ್ದರು. ಅವರ ಕರಸಂಜಾತ ಶಿಷ್ಯರಾಗಿದ್ದ ಶ್ರೀ. ಸಿದ್ಧೇಶ್ವರ ಸ್ವಾಮೀಜಿಯವರು ಅನೇಕ ಮಹಾವಿದ್ಯಾಯಲಗಳಲ್ಲಿ ಶಿಕ್ಷಣ ಮತ್ತು ಯುವಕರನ್ನು ಬಗ್ಗೆ ಉಪನ್ಯಾಸ ಪ್ರವಚನ ನೀಡಿದ್ದಾರೆ.

ಅದರಲ್ಲಿಯೂ, ಪ್ರತಿ ವರ್ಷ ಗುರುಪೌರ್ಣಿಮೆಯ ನಿಮಿತ್ತವಾಗಿ ಆಯೋಜನಗೊಳ್ಳುತ್ತಿದ್ದ ವಿಶ್ವಶಾಂತಿಗಾಗಿ ಕೋಟಿ ಜಪಯಜ್ಞದ ನಂತರ ಪೂಜ್ಯರು ಪ್ರಭಾವಭರಿತ ಪ್ರವಚನ ನೀಡಿ, ನೆರೆದ ಸಾವಿರಾರು ಭಕ್ತರಿಗೆ ಜೀವನಾಮೃತ ಅನುಭವದ ಸಂದೇಶ ನೀಡುತ್ತಿದ್ದರು. ಅಪಾರ ಜನಸ್ತೋಮ ಸೇರಿದ್ದರೂ ಸಹ ಪೂಜ್ಯರ ನುಡಿ ಹೊರಡುವಷ್ಟರಲ್ಲಿ ಇಡೀ ಪ್ರದೇಶದಲ್ಲಿ ನಿಶಬ್ಧವಾಗಿ ತದೇಕಚಿತ್ತದಿಂದ ಜನರ ಗಮನವೆಲ್ಲ ನುಡಿಮುತ್ತುಗಳನ್ನಾಲಿಸುವದೆಡೆಗೆ ನೆಟ್ಟಿರುತ್ತಿತ್ತು.

ದಿನಾಂಕ ೧ನೇ ಜನೇವರಿ, ೨೦೦೫ರಂದು ಅಥಣಿ ತಾಲೂಕಿನ ಜುಗೂಳ ಗ್ರಾಮದಲ್ಲಿ ಶ್ರೀ.ಮಲ್ಲಿಕಾರ್ಜುನ ಮಹಾಸ್ವಾಮಿಯವರ ಜನ್ಮ ಶತಮಾನೋತ್ಸವದ ಅಂಗವಾಗಿ ನಡೆದ ಜಪಯಜ್ಞದ ಸಂದರ್ಭದಲ್ಲಿ ಪೂಜ್ಯರು ನೀಡಿದ ಸಂದೇಶ ಜೀವನದ ಸತ್ಯವನ್ನು ದರ್ಶನ ಮಾಡಿಸುವಂತದ್ದು. ಅಂದು 'ನಾನು' ಎಂಬುದನ್ನು ಬಿಟ್ಟರೆ ಉಳಿದದೆಲ್ಲ 'ಸುಂದರ'ವಾಗಿದೆಯೆಂದು ಹೇಳುತ್ತಾ, ಈ ದೇಹವು ಕಾಲಕ್ಕೊಳಗಾದರೆ, ನಾನು ಎಂಬುದು ಗರ್ವಕ್ಕೊಳಗಾಗುತ್ತದೆಯೆಂದು ತಿಳಿಸಿದರು. ಆತ್ಮದ ಸ್ವರೂಪವು ಅರಿವಿನ ಸ್ವರೂಪವಾಗಿದೆ. ದೇಹದ ಭಿನ್ನತೆ ಕೇವಲ ಭೇದಗಳನ್ನು ಲೆಕ್ಕಿಸಿ ಬದುಕಿದರೆ ತೊಂದರೆಗಳು ತುಂಬಿರುತ್ತವೆ. ಗಳಿಸಿದರೂ, ಗಳಿಸದಿದ್ದರೂ ತೊಂದರೆಗಳಿರುತ್ತವೆ. ಚಿಂತೆಗಳು ತುಂಬಿ-ತುಳುಕುತ್ತವೆ.ಅವುಗಳಿಲ್ಲದೆ ಇರಲಾಗದು.ಯಾವ ದೇವಾಲಯಕ್ಕೆ ಹೋದರೇನು(?) ದೇವಾಲಯ ಇರುವುದೇತಕೆಂದು ಮೂಲ ವಿಚಾರ ತಿಳಿಯಬೇಕು. ಅದನ್ನು ತಿಳಿದುಕೊಂಡರೆ ಜಗಳವಿರಲಾರದು. ಬರೀ ಬಾಹ್ಯದ ರೂಪ ನೋಡಿ ಬಡಿದಾಡಿದರೆ ಅಶಾಂತಿಗೆ ಕಾರಣವಾಗುತ್ತದೆ.

ಜೀವನದಲ್ಲಿ ಶಾಂತಿ-ಸಮಾಧಾನ-ಸುಖಗಳಿಗೆ ಮೂರು ಮಂತ್ರಗಳನ್ನು ನೆನಪಿನಲ್ಲಿಡಲು ಸೂಚಿಸಿದರು. ಅವು (೧) ಸವಿಷ್ಠಾಯನಮಃ (೨) ಮಹಾಬಲಾಯನಮಃ (೩) ಶಿವಾಯನಮ:

__ಸವಿಷ್ಠಾಯನಮ:__ ನಾವು ಮಾತನಾಡಿದನ್ನು ಮತ್ತು ನೋಡಿದನ್ನು 'ಶಬ್ದ'ವು ಮನಸ್ಸಿನ ಮೇಲೆ ಅರ್ಥದ ಚಿತ್ರವನ್ನು ಮೂಡಿಸುತ್ತದೆ. ಶಬ್ದ ಬರೆಯುತ್ತದೆ. ಸವಿಷ್ಠ ಮಂತ್ರ ಅಂದರೆ ಮನಸ್ಸಿನಲ್ಲಿ ಅನುಭವ ಆಗುವಿಕೆ. ಈ ಜಗತ್ತು ಅದ್ಭುತ, ವಿಸ್ತಾರವಾದದ್ದು. ಇರುವುದೆಲ್ಲವೂ ಜಗತ್ತಿನಿಂದ ಕೂಡಿದಕ್ಕೆ 'ಸವಿಷ್ಠ'ವೆಂದು ಕರೆದರು. ಈ ಮಂತ್ರ ಪಠಿಸಿದರೆ, ಮನೆ-ರಾಜ್ಯ-ದೇಶ-ಜಗತ್ ಇವುಗಳನೆಲ್ಲಾ ಮರೆಯುತ್ತಾ ಹೋಗುತ್ತೇವೆ. ಆಗ 'ನಮಃ' ಅಂದರೆ 'ಅಹಂ' ಭಾವವು ಮರೆಯಾಗುತ್ತದೆ. ಸತ್ಯವೇನೆಂಬುದನ್ನು ಅರಿಯದೇ ಏನೆಲ್ಲಾ ಅವಾಂತರಗಳಾಗುತ್ತವೆ. ಮನಸ್ಸು ಕ್ಷಿತಿಜವನ್ನು ದಾಟಿ ಹೋದಾಗ, ದೇಶಗಳು ಬೇರೆ ಎನ್ನುವ ಭಾವನೆ ಬರುವುದಿಲ್ಲ. ಅಗ್ನಿ-ಸೂರ್ಯ-ಕಿರಣಗಳೆಡೆಗೆ ದೃಷ್ಟಿಯಿಡಿರಿ. ಆಗ 'ನಾನು' ಎಂಬುದು ಮಾಯವಾಗುತ್ತದೆ.

__ಮಹಾಬಲಾಯನಮ:__ ಜಗತ್ತಿನಲ್ಲಿ ಮತ್ತು ಶರೀರದಲ್ಲಿ 'ಶಕ್ತಿ' ತುಂಬಿದೆ. ಎಂತಹ ಅದ್ಭುತ ಶಕ್ತಿ ! ಎದೆಯಲ್ಲಿ, ಕೈಯಲ್ಲಿ, ಶರೀರದ ಹೊರಗೆ ಒಳಗೂ ಶಕ್ತಿ ತುಂಬಿದೆ. ನಿಸರ್ಗವು ಅತ್ಯದ್ಭುತ ಶಕ್ತಿ ಹೊಂದಿದೆ. ಶಕ್ತಿಯ ಸಾಮರ್ಥ್ಯ ಆಗಾಗ ಪ್ರಕಟಣೆಗೊಳ್ಳುವುದು. ನಿಸರ್ಗದಲ್ಲಿಯ ಸಂಪೂರ್ಣ ಶಕ್ತಿ ಎಷ್ಟೆಂಬುದು ಕಾಣಲಾರದು. ಇದೊಂದು 'ಮಹಾಬಲ'. ಅದು ಅಡಗಿದೆ. ನಿಸರ್ಗದೊಳಗೆ ಕಾಣಲಾರದ್ದೆಂದು 'ಇಲ್ಲವೇ ಇಲ್ಲವೆಂದು' ತಿಳಿದುಕೊಳ್ಳಬಾರದು. ಅಂಥದ್ದೊಂದು ಶಕ್ತಿಯಿದೆಯೆಂದು ಭಾವಿಸಿ ಜೀವಿಸಬೇಕು.

**<u>ಶಿವಾಯನಮ:</u>** ಅಂದರೆ ಎಲ್ಲವೂ ಮುಗಿದು ಹೋಗುವುದೆಂದು ಅರ್ಥ. ಈ ಭೂಮಿ-ನಕ್ಷತ್ರ ಎಲ್ಲವನ್ನು ಮರೆತ ನಂತರ ಉಳಿಯುವುದು 'ಶಿವ' ಮಾತ್ರ. ಎಲ್ಲವೂ ಸ್ತಬ್ಧವಾಗುತ್ತದೆ. ವಿಶ್ವದಷ್ಟು ದೊಡ್ಡವರಾಗಬೇಕು. ವಿಶ್ವ ಶಕ್ತಿಯ ಕಲ್ಪನೆ ಮೂಡಬೇಕು ಮನಸ್ಸಿಗೆ. ಕೊನೆಗೆ ಏನಿಲ್ಲವೆಂಬ ಭಾವನೆ ಮೂಡುತ್ತದೆ. ಅದೇ ಶಿವ! ಮನಸ್ಸಿನಲ್ಲಿ ಎಲ್ಲವೂ ಬರಿದಾಗಿರುವದು. ಖಾಲಿಯಾಗಿರುವದು ಶಿವಾಯನಮಃ ಎಂದರ್ಥ, ಶಾಂತವಾಗುವದು. ಎಂಥೆಂತಹ ರಂಗೋಲಿ ಹಾಕುತ್ತೇವೆ. ಬಹಳ ಸುಂದರವಾಗಿ ಕಾಣುವದು. ಮನಸ್ಸು ಸಂತೋಷಗೊಳ್ಳುತ್ತದೆ. ಅದು 'ಖಾಯಂ' ಆಗಿರುವುದಿಲ್ಲ. ಮರುದಿನ ನೋಡಿದರೆ ಅದು ಇರಲಾರದು. 'ಶಿವಾಯನಮಃ' ಮಂತ್ರ ಜಪಿಸಿದರೆ ಮನಸ್ಸು ಶಾಂತಗೊಳ್ಳುವದು. ಜಗಳವಿಲ್ಲ, ಬಡತನ ಇಲ್ಲವೆಂದಾದರೆ ಶಾಂತಿ ನೆಲೆಗೊಳ್ಳುವದು. ಜಗತ್ತು ವಿಶಾಲವಾಗಿದೆ. ಬಹಳ ಶಕ್ತಿಯುತವಾಗಿದೆ ಮತ್ತು ಏನಿದ್ದರೂ ಎಲ್ಲವು ಕೊನೆಗೆ ಹೋಗುವುದೆಂದು ತಿಳಿದವರಿಗೆ 'ಶೂನ್ಯ ಸಂಪಾದನೆ'ಯ ಅರಿವಾದಂತೆಯೇ ಸರಿ!

ಈ ಮೂರು ಮಂತ್ರಗಳ ಪ್ರಯೋಗ ಮಾಡಿದಾಗಲೇ ಜೀವನದ ಸತ್ಯದ ದರ್ಶನವಾಗುತ್ತದೆಯೆಂಬುದು ಅಳವಡಿಸಿಕೊಳ್ಳಬೇಕಾದ ಸರ್ವಕಾಲಿಕ ಸತ್ಯ ಸಂದೇಶ!

ನಮ್ಮ ದೇಶದ ಋಷಿವರ್ಯರು ಸನಾತನ ಧರ್ಮ ಸಾರಿದರು. ನಿಸರ್ಗವೇ ದೇವರೆಂದು ತಿಳಿಹೇಳಿದರು. ಸೂರ್ಯ-ಭೂಮಿ-ವಾಯು-ಜಲ-ಅಗ್ನಿ-ಆಕಾಶ ಇವೆಲ್ಲವೂ ದೇವರೇ! ಏಕೆಂದರೆ ಅವುಗಳಲ್ಲಿ ಅದ್ಭುತ ಶಕ್ತಿ ಅಡಗಿದೆ. ಎಂಥಾ ದರ್ಶನ ಮಾಡಿಸಿದ್ದಾರೆ! ಖಾಲಿ ಇದ್ದುದು ತುಂಬುವುದು; ತುಂಬಿದ್ದು ಖಾಲಿಯಾಗುವದೂ ಅಷ್ಟೇ ಸತ್ಯವೆಂಬುದನ್ನು ಅರಿತು, ನಗುತ್ತಾ-ನಗುತ್ತಾ ಬಾಳಬೇಕು. ಅದೇ ಸ್ವರ್ಗ. ನಾವು ಹೊಂದಿರುವ ಸ್ಥಾನವೇ ಜಗತ್ತಲ್ಲ, ಜಗತ್ತೇ ನಮ್ಮ ಸ್ಥಾನವೆಂದು ತಿಳಿಯಬೇಕು. ಒಂದು ದೃಷ್ಟಾಂತ ಬಹಳ ಅರ್ಥಗರ್ಭಿತವಾಗಿದೆ.

'ಒಂದು ಕಾಗೆಯಿತ್ತು. ಯಾವ ಕೆಲಸಕ್ಕೂ ಬಾರದ ಕಾಗೆ. ಒಂದು ದಿನ ಅದಕ್ಕೆ ರೊಟ್ಟಿಯ ತುಂಡು ಸಿಕ್ಕಿತು. ಅದು ಬೆಣ್ಣೆ ಸವರಿದ, ಬಾಯಲ್ಲಿ ನೀರೂರುವ ರೊಟ್ಟಿಯ ತುಂಡು. ಅದನ್ನು ಬಾಯಲ್ಲಿಟ್ಟುಕೊಂಡು ಎಲ್ಲಾದರೂ ದೂರ ಹೋಗಿ ತಿನ್ನಬೇಕೆಂದು ಹಾರತೊಡಗಿತು. ಅದನ್ನು ನೋಡಿದ ಇತರ ಕಾಗೆಗಳೆಲ್ಲ ರೊಟ್ಟಿ ಕಸಿದುಕೊಳ್ಳಲು ಬೆನ್ನಟ್ಟಿದವು. ತಿನ್ನಬೇಕೆಂಬ ಆಸೆಯಾಗುತ್ತಿದ್ದರೂ, ಕಾಡುತ್ತಾ ಬೆನ್ನಟ್ಟಿದ ಇತರ ಕಾಗೆಗಳ ತೊಂದರೆಯಿಂದ ತಿನ್ನಲಾಗುತ್ತಿಲ್ಲ. ಕಷ್ಟ-ತೊಂದರೆಗಳೆಲ್ಲ ಬೆನ್ನಟ್ಟಿದವು. ಹಾರಿ-ಹಾರಿ ಸಾಕಾಯಿತು. ಈ ರೊಟ್ಟಿಯ ತುಂಡು ಬಾಯಲ್ಲಿರುವತನಕ ತಾಪ-ತೊಂದರೆಗಳು ತಪ್ಪಿದ್ದಲ್ಲವೆಂದು ತಿಳಿದು, ಬಾಯಿಂದ ರೊಟ್ಟಿಯ ತುಂಡನ್ನು ಬಿಟ್ಟಿತು. ಆಗ ಅದನ್ನು ಮತ್ತೊಂದು ಕಾಗೆ ಬಾಯಲ್ಲಿಟ್ಟುಕೊಂಡು ಹಾರತೊಡಗಿತು. ಎಲ್ಲ ಕಾಗೆಗಳು ಮೊದಲಿನ ಕಾಗೆಯ ಗೊಡವೆಗೆ ಹೋಗದೆ, ಎರಡನೆಯ ಕಾಗೆಯ

ಬೆನ್ನಟ್ಟಿದವು. ಮೊದಲಿನ ಕಾಗೆಯು ಈಗ ನಿಶ್ಚಿಂತೆಯಿಂದ, ಸುಖದಿಂದ ತೊಂದರೆಗಳಿಲ್ಲದೆ ನೆಮ್ಮದಿಯಿಂದ ಕುಳಿತಿತು. ಅದಕ್ಕೆ ತಿಳಿದಿತ್ತು – ಯಾವುದನ್ನು ತಿನ್ನಬೇಕೆಂದು ಬಾಯಲ್ಲಿಟ್ಟುಕೊಂಡಿತ್ತೋ ಅದರಿಂದ ಸುಖ ಸಿಗಲಿಲ್ಲ. ಸಿಕ್ಕರೆ ಸುಖವಿಲ್ಲ; ಅದನ್ನು ತೊರೆದಾಗ ಸಮಾಧಾನ ದೊರೆಯಿತು. ಇದನ್ನು ಕಂಡ, ಮರದ ಕೆಳಗೆ ನಿಂತಿದ್ದ ಜಾಣನಂತಿದ್ದ ಒಬ್ಬ ಮನುಷ್ಯ ಕಾಗೆಯನ್ನು ಪ್ರಶ್ನಿಸಿ, ಬಾಯಲ್ಲಿದ್ದ ರೊಟ್ಟಿಯನ್ನು ಕಸಿದುಕೊಂಡು ಏನು ಸುಖ ಪಡೆವೆಯೆಂದು ಕೇಳಿದನು.

ಆಗ ಕಾಗೆಯು 'ಕಿಂ ಕಿಂ ಹಸಸಿ' ... ಎಂದು, ಎಲೈ ಮನುಷ್ಯನೇ 'ಏಕೆ ನಗುತ್ತಿರುವೆ?'ಯೆಂದು ಕೇಳಿತು. ಯಾರು ಏನನ್ನು ಹೊಂದಿರುವರೋ ಅದನ್ನು ಕಳೆದುಕೊಳ್ಳುತ್ತಾರೆ. ನನ್ನ ನೋಡಿ ನಗಬೇಡ. ನೀನೆಷ್ಟು ಮೂಢನೆಂದು ಅರಿತುಕೊಳ್ಳು. ಕಿಸೆ ತುಂಬೋದು, ಖಾಲಿಯಾಗೋದು ಇರುವುದೇ! ತುಂಬುವದಕ್ಕಿಂತ ಮುಂಚೆ ಅದು ಖಾಲಿಯೇ ಆಗಿತ್ತೆಂದು ತಿಳಿದುಕೊಳ್ಳು. ಈ ಸತ್ಯವನ್ನು ತಿಳಿದಾಕ್ಷಣವೇ ತನ್ನ ಬಾಯಿಂದ ಬೆಣ್ಣೆಯ ರೊಟ್ಟಿಯನ್ನು ಬಿಟ್ಟೆನೆಂದು ಕಾಗೆ ಹೇಳಿತು. ಆಗ 'ನೀನು' ನನಗೆ ಗುರುವಾಗಿರುವೆಂದು ಮನುಷ್ಯ ಹೇಳುತ್ತಾ, ಖಾಲಿಯಿದ್ದದ್ದು ತುಂಬುವದು ಮತ್ತು ತುಂಬಿದ್ದು ಖಾಲಿಯಾಗುವುದೆಂಬ ಸತ್ಯ ಅರಿತನು. ಯಾವುದನ್ನಾದರು ಪಡೆಯಲಿಕ್ಕೆ ಪ್ರಯತ್ನಿಸುವದು, ಸಿಕ್ಕರೆ ಸಂತಸ ಪಡಬೇಕು; ಕಷ್ಟಗಳು ಬಂದರೆ ಅದನ್ನು ಬಿಟ್ಟುಬಿಡುವದು. ಹೀಗೆ ತಿಳಿದು ಬಾಳುವುದೇ ಆಧ್ಯಾತ್ಮ. ಕಷ್ಟವಾಗುತ್ತಿದ್ದರೆ, ತೊಂದರೆಗಳು ಬರುತ್ತಿದ್ದರೆ, ನೆಮ್ಮದಿ ಹಾಳಾಗುತ್ತಿದ್ದರೆ ಅದನ್ನು ಬಿಟ್ಟು ನಿಶ್ಚಿಂತರಾಗಬೇಕು. ಅಂಥದನ್ನು ಬಿಟ್ಟುಬಿಡಬೇಕು.

ಹೀಗೆ ಸಹಜ-ಸರಳ ನೇರ ಮಾತುಗಳಿಂದ ಜನತೆಯ ಮನಸ್ಸಿನ ಮೇಲೆ ಅಚ್ಚೊತ್ತುವಂತೆ ನಿರೂಪಿಸುವದು ಪೂಜ್ಯರಲ್ಲಿಯ ಆದರಣೀಯ ಆದರ್ಶ!. ಇನ್ನೊಂದು ಸಂದರ್ಭದಲ್ಲಿ, ದಿ.೧೧.೭.೨೦೦೬ರ ಜಪಯಜ್ಞದ ನಂತರ ಭಕ್ತನನ್ನು ಉದ್ದೇಶಿಸಿ ನೀಡಿದ ಪ್ರವಚನದಲ್ಲಿ ಜೀವನದ ಇನ್ನು ಕೆಲವು ಆದರ್ಶಗಳನ್ನು ಮುಂದಿಟ್ಟಿದ್ದಾರೆ ಪೂಜ್ಯರು!

ಬರೀ ಬದುಕುವದು ಮಹತ್ವದಲ್ಲ, ಚೆನ್ನಾಗಿ ಬದುಕಬೇಕು. ಬದುಕು ಮತ್ತೊಬ್ಬರಿಗೆ ಮಾದರಿಯಾಗುವಂತಿರಬೇಕು. ಎಷ್ಟೇ ಕೀರ್ತಿ ಬಂದರೂ, ಜಗವೆಲ್ಲ ಹೊಗಳಿದರೂ, ಎಂತೆಂಥಹ ಸಾಧನೆಗಳನ್ನು ಮಾಡಿದರೂ ಯಾವ ಗೀಳು ಹಚ್ಚಿಕೊಳ್ಳದೆಯೇ ಬದುಕಿದ ವಿಶ್ವಮಾನ್ಯರಾದ ಮೇಡಂ ಕ್ಯೂರಿಯ ಜೀವನ ಆದರ್ಶ ಅಳವಡಿಸಿಕೊಳ್ಳಬೇಕು. ಅವರು ಯುರೋಪ ದೇಶದ ಅಪ್ರತಿಮ ವಿಜ್ಞಾನಿ – ತಮ್ಮ ಸಂಶೋಧನೆಗಾಗಿ ನೋಬೆಲ್ ಪಾರಿತೋಷಕ ಪಡೆದರು. ಅದರಿಂದ

ಸಾಧನೆಯ ಹಂತ ಮುಗಿಯಿತೆಂದು ಬೀಗಲಿಲ್ಲ; ಗರ್ವ ತುಂಬಿಕೊಳ್ಳಲಿಲ್ಲ. ಪ್ರಚಾರದ ಗೀಳಿಗೆ ಹೊಗಲಿಲ್ಲ. ಜಗತ್ತಿಗೆ ಮತ್ತೆ ಏನನ್ನಾದರೂ ಹೊಸದನ್ನು ನೀಡಬೇಕೆಂದು ಸಂಶೋಧನೆ ಕೈಕೊಂಡರು. ಅದರ ಮತ್ತೊಂದು ಆವಿಷ್ಕಾರಕ್ಕೆ ಮತ್ತೆ ನೋಬೆಲ್ ಪ್ರಶಸ್ತಿಯ ಗರಿ. ಅಷ್ಟೇ ಅಲ್ಲ, ಅವರ ಗಂಡನಿಗೆ, ಮಗಳಿಗೆ ಮತ್ತು ಅಳಿಯನಿಗೆ – ಅಬ್ಬಾ! ಒಂದೇ ಕುಟುಂಬದ ಐವರಿಗೆ ಪ್ರಶಸ್ತಿ! ಎಂಥಾ ಸಾಧನೆಯಲ್ಲವೆ? ಸಾದಾ ಜೀವನ ಸಾಗಿಸಿದ ಅವರ ಬದುಕು ಎಷ್ಟು ಸುಂದರ! ಅವರನ್ನು ಜಗವೇ ಹೊಗಳಿತು. ಅವರು ಮಾತ್ರ ತಲೆ ಕೆಡಿಸಿಕೊಳ್ಳಲಿಲ್ಲ. ಅವರ ದೇಶದ ಫ್ರಾನ್ಸ್ ಸರ್ಕಾರ ಯಾವುದೇ ಸಹಾಯ ಬೇಕಾದರೂ ಕೇಳಲು ಪ್ರಸ್ತಾಪಿಸಿತು. ಅದಕ್ಕೆ ಕೈ ಚಾಚದ ಮೇಡಂ ಕ್ಯೂರಿ 'I am young enough to work and support my family' ಯೆಂದು ಹೇಳಿ, ಸರ್ಕಾರದ ದುಡ್ಡಿಗೆ ಆಸೆ ಪಡಲಿಲ್ಲ. ಎಂಥಾ ಸದ್ಗುಣ! ದೇವರು ತನಗೆ ಸಾಕಷ್ಟು ದುಡಿಯುವ ಶಕ್ತಿಯನ್ನು ನೀಡಿದ್ದಾನೆ; ತಾನಿನ್ನೂ ದುಡಿಯಬಲ್ಲೆ. ದುಡಿಯದೇ ಸರ್ಕಾರ ನೀಡುವ ದುಡ್ಡು ತನಗೆ ಬೇಡವೆಂದು ನಯವಾಗಿ ತಿರಸ್ಕರಿಸಿದರು. ಜನ ಹೇಗೆ ಬದುಕಬೇಕೆಂಬುದಕ್ಕೆ ಇನ್ನೆಂಥಹ ಉದಾಹರಣೆ ಬೇಕು? ಎಂಥಾ ದೊಡ್ಡ ಮನಸ್ಸು!

ಇದೇ ಸಂದರ್ಭದಲ್ಲಿ, ಸತ್ಯ ಯಾವಾಗಲೂ ಸುಮ್ಮನಿರುವದು, ಸುಳ್ಳು ಬಹಳಷ್ಟು ಗದ್ದಲ ಮಾಡುವದೆಂದು ತಿಳಿ ಹೇಳಿದರು. ಸತ್ಯ ಹೇಗಿದೆಯೆಂದರೆ, ಅದು ಯಾವುದಕ್ಕೂ ಪ್ರತಿಕ್ರಿಯಿಸದು. ಯಾವುದಕ್ಕೂ ಜಗಳವಾಡುವದಿಲ್ಲ. ಏನೂ ಮಾಡದೆ ಸುಮ್ಮನೆ ಇರುತ್ತದೆ. ನಾವು ಒಂದು ಗಿಡವನ್ನು ನೋಡಿ, ನೀನು ಎನೇನೂ ಅಂದವಿಲ್ಲವೆಂದು ಹೇಳಿದಾಗ, ಅದು ಆಗಲಿ! ಅಂದುಕೊಳ್ಳಿರಿ; ನನಗೇನೂ ನಷ್ಟವಿಲ್ಲವೆಂದು ಸುಮ್ಮನೆ ಇರುತ್ತದೆ. ಇನ್ನೊಬ್ಬರು ಅದಕ್ಕೆ ನೀನೆಷ್ಟು ಸುಂದರವಾಗಿರುವೆಯೆಂದು ಹೇಳಿದಾಗಲೂ ಸುಮ್ಮನೆ ಇರುತ್ತದೆ. ಹೀಗೆ ಯಾವುದಕ್ಕೂ ಹಿಗ್ಗದೆ, ಕುಗ್ಗದೆ–ಸುಮ್ಮನೆ ತಣ್ಣಗೆ ಇರುವದೇ ದೇವರು, ಅದುವೇ ಸತ್ಯ! ಅದು ಶಬ್ಧ ಮಾಡುವದಿಲ್ಲ. ಇದು ಹೃದಯದಲ್ಲೇ ಇರುತ್ತದೆ. ಅದನ್ನು ಶಾಂತ ಸ್ಥಿತಿಯಲ್ಲಿಡುವುದೇ ಶಾಂತಿಮಂತ್ರ; ಅದುವೇ ದೇವರ ದರ್ಶನದ ಸ್ಥಿತಿ!

ಶ್ರೀ ಸಿದ್ಧೇಶ್ವರ ಸ್ವಾಮಿಗಳ ಪ್ರವಚನ ಮತ್ತು ಆ ಮೂಲಕ ಅವರ ಸಂಪಾದಿಸಿದ ವ್ಯಕ್ತಿತ್ವ ಹಾಗೂ ಅವರ ಪ್ರವಚನದಲ್ಲಿ ವ್ಯಕ್ತಿನೀತಿಯನ್ನು ಸಾರುವ ಅಂಶಗಳನ್ನು ಇಲ್ಲಿ ಗಮನಿಸಬಹುದು.

ವಿಶ್ವದ ಮೂಲ ಪರಮ ಸತ್ಯವನ್ನು ಅರಿತವರು ಸಂತರು–ಶರಣರು. ಅವರು ಸದಾ ಶಾಂತರು–ಪ್ರಶಾಂತರು, ಸಮಾಧಾನಿಗಳು–ನಿತ್ಯತೃಪ್ತರು. ಕಾಣುವ ವಿಶ್ವವನ್ನು ಅರಿಯುವುದು ಸುಲಭ. ಈ ವಿಶ್ವದ ಮೂಲಾಧಾರವಾಗಿರುವ ಆ ಪರಮ ಸತ್ಯವನ್ನು ಅರಿಯುವುದೇ

ಪರಮಾನಂದದ ರಹಸ್ಯವಾಗಿದೆ. ಆ ಪರಮ ಸತ್ಯವನ್ನು ಅರಿಯುವ ದಾರಿ ಯಾವುದು ? ಎಂದು ಪ್ರಶ್ನಿಸುತ್ತ

**"ಮಡಕೆಯ ಮಾಡುವಡೆ ಮಣ್ಣೇ ಮೊದಲು**

**ತೊಡಿಗೆಯ ಮಾಡುವಡೆ ಹೊನ್ನೇ ಮೊದಲು**

**ಶಿವಪಥವನರಿವೊಡೆ ಗುರುಪಥವೇ ಮೊದಲು**

**ಕೂಡಲ ಸಂಗಮದೇವನ ಅರಿವೊಡೆ ಶರಣಸಂಗವೇ ಮೊದಲು**

ಬಸವಣ್ಣನವರ ವಚನವನ್ನು ಶ್ರೀ ಸಾಮಾನ್ಯನಿಗೂ ತಿಳಿಯುವಂತೆ ಹೀಗೆ ವಿವರಿಸುತ್ತಾರೆ. ಗಡಿಗೆ ಮಾಡಲು ಮಣ್ಣು ಬೇಕು, ತೊಡಿಗೆ ಮಾಡಲು ಚಿನ್ನಬೇಕು ಹಾಗೆಯೇ ಶಿವನನ್ನು ಅರಿಯಲು ಗುರುಬೇಕು. ಗುರುಗಳು ಶಾಂತಿಪಥ ದರ್ಶಕರು. ಈ ಅರ್ಥದಲ್ಲಿ ಶ್ರೀ ಗುರುವು ಶಾಂತಿ ಸಾಮ್ರಾಜ್ಯದ ದೊರೆ ಅಥವಾ ಶಾಂತರಸರು! ಆನಂದನಿಲಯದ ಮಾರ್ಗದರ್ಶಕರಾದ ಗುರುಗಳು ಜಗನ್ಮಾನ್ಯರು. ಇದು ಪೂಜ್ಯರ ವಚನ ವಿಶ್ಲೇಷಣೆಯ ರೀತಿ.

ಪ್ರಾಪಂಚಿಕ ಆಸೆ ಆಮಿಷಗಳನ್ನು ಮೀರಿ ಮುನ್ನಡೆದಾಗ ನಮಗೆ ಸಂತರ ಶರಣರ ಸಾನಿಧ್ಯ ದೊರೆಯುತ್ತದೆ. ಅದೇ ಸತ್ಸಂಗ. ಅದರಿಂದ ನಮಗೆ ಅರಿಯದಂತೆ ನಮ್ಮ ಹೃದಯ ಶುದ್ಧವಾಗಿರುತ್ತದೆ. ಆ ಪರಿಶುದ್ಧಾಂತಃಕರಣದಲ್ಲಿ ಪರಮಸತ್ಯದ ಬೆಳಕು ಮೂಡಿರುತ್ತದೆ. ಆಗ ನಮ್ಮ ಜೀವನದಲ್ಲಿ ಪರಮಶಾಂತಿ ಸಮಾಧಾನ ನೆಲೆಸಿರುತ್ತದೆ. ಸತ್ಸಂಗ ಎಂಥದ್ದು ಎಂಬುದನ್ನು ಪ್ರವಚನ ಮೂಲಕ ವಿವರಿಸುವ ಅವರ ಶೈಲಿ ವಿನೂತನವಾದದ್ದು. ಅದೇ ವಚನ ಬೇರೊಂದು ಪ್ರವಚನದಲ್ಲಿ ಮತ್ತೊಂದು ರೂಪತಾಳಿರುತ್ತದೆ. ಪೂಜ್ಯರು ಜ್ಞಾನ, ವಿಜ್ಞಾನ, ತತ್ವಜ್ಞಾನ ಮತ್ತು ವರ್ತಮಾನವನ್ನು ಸಂಗ್ರಹಿಸಿ ಪ್ರವಚನ ಮಾಡುವುದರಿಂದ ಅವರೊಬ್ಬ ಶ್ರೇಷ್ಠ ಪ್ರವಚನಕಾರರು ಅಲ್ಲದೆ, ನಮ್ಮ ಮುಂದಿನ ಅದ್ಭುತ. ದಿನ ನಿತ್ಯದ ಪ್ರಾಣಿ-ಪಕ್ಷಿ, ಗಿಡಮರ, ಆಕಾಶ, ನೀರು, ಬೆಟ್ಟ-ಗುಡ್ಡ ಮುಂತಾದ ಇಡೀ ಪಕೃತಿಯನ್ನು ಬಳಸಿ ಉದಾಹರಿಸುವದು ಅವರ ವೈಶಿಷ್ಠ್ಯ.

ಈ ಜಗತ್ತಿನಲ್ಲಿ ಮೂರು ಅಮೌಲ್ಯವಾದ ರತ್ನಗಳಿವೆ :- ೧) ನೀರು, ೨) ಅನ್ನ ಮತ್ತು ೩) ಒಳ್ಳೆಯ ಮಾತು. ನಮ್ಮ ಬದುಕಿನ ವೈಭವ ನಿಂತಿರುವುದೇ ಈ ಮೂರರ ಮೇಲೆ. ಅವುಗಳಿಂದ ನಮ್ಮ ಜೀವನವು ಸುಖಮಯವೂ, ಸೌಂದರ್ಯಪೂರ್ಣವೂ ಆಗುತ್ತದೆ. ಜ್ಞಾನಿಗಳಾದವರು ಅನ್ನ, ನೀರು, ಒಳ್ಳೆಯ ಮಾತು ಈ ಮೂರೇ ನಿಜವಾದ ರತ್ನಗಳು ಎಂದರು. ಅಜ್ಞಾನಿಗಳಾದವರು ಮಾತ್ರ ಕಲ್ಲಿನ ತುಣುಕುಗಳಿಗೆ 'ರತ್ನ' ಎಂದು ಕರೆದರು. ಅವುಗಳ

ಸಂಗ್ರಹಕ್ಕಾಗಿ ಜೀವನವಿಡೀ ಹೋರಾಡಿದರು, ಮಡಿದರು. ಯಾವುದಕ್ಕೆ ಬೆಲೆ ಕೊಡಬೇಕು ಎಂಬುದನ್ನು ಅರಿಯದೆ ದುಃಖಿಗಳಾದರು.

ನೀರು, ಅನ್ನ, ಒಳ್ಳೆಯ ಮಾತು ಈ ಮೂರು ಇಲ್ಲದೆ ಜೀವಜಗತ್ತು ಬದುಕುವುದಿಲ್ಲ. ಆದ್ದರಿಂದ ಈ ಮೂರು ಮಹತ್ವ ಅರಿಯುವುದೇ ಧರ್ಮ' ಮರೆಯುವುದೇ ಅಧರ್ಮ ! ಕೋಳಿಯು ಒಂದು ದಿನ ಸಿರಿವಂತರ ಮನೆಯ ತಿಪ್ಪಿಯನ್ನು ಕೆದರುತ್ತಿತ್ತು. ಅಲ್ಲೇ ಇದ್ದ ಸಂತನು ಕೋಳಿಗೆ ಕೇಳಿದ "ತಿಪ್ಪಿಯನ್ನು ಏಕೆ ಕೆದರುತ್ತಿರುವಿ, ನಿನಗೆ ಅದರಲ್ಲೇನು ಸಿಗುವುದಿದೆ ?" ಕೋಳಿ ಹೇಳಿತು– "ನೋಡುತ್ತಿರು". ಸ್ವಲ್ಪೇ ಸಮಯದಲ್ಲಿ ಕೋಳಿಗೆ ಒಂದು ರತ್ನದ ಹರಳ ದೊರೆಯಿತು. "ನೀನು ಅತ್ಯಂತ ನಿರುಪಯುಕ್ತ" ಎಂದು ಕೋಳಿಯು ಆ ರತ್ನದ ಹರಳನ್ನು ದೂರ ಎಸೆಯಿತು. ಸ್ವಲ್ಪ ಸಮಯದ ನಂತರ ಕೋಳಿಗೆ ಒಂದು ಜೋಳದ ಕಾಳು ದೊರೆಯಿತು. "ನೀನು ಅತ್ಯಂತ ಉಪಯುಕ್ತ." ಎಂದು ಕೋಳಿಯು ಆ ಜೋಳದ ಕಾಳನ್ನು ಎತ್ತಿಕೊಡಿತು. ಸಂತ ಕೇಳಿದ– "ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಆ ರತ್ನವನ್ನು ಎಸೆದು, ಸಾಮಾನ್ಯವಾದ ಜೋಳದ ಕಾಳನ್ನೇಕೆ ಎತ್ತಕೊಂಡೆ ?" ಕೋಳಿ ಹೇಳಿತು– "ರಾಜ ಮಹಾರಾಜರನ್ನೇ ಹೋರಾಡಲು ಹಚ್ಚಿ ಅಸಂಖ್ಯ ಜನರ ಪ್ರಾಣಹರಣ ಮಾಡಿದ ಆ ಕಲ್ಲಿನ ತುಣುಕು ನಿಮಗೆ ರತ್ನವಾಗಿರಬಹುದು. ನನಗೆ ಮಾತ್ರ ಎಲ್ಲರ ಜೀವನವನ್ನು ಕಾಪಾಡುವ ಈ ಜೋಳದ ಕಾಳೇ ರತ್ನ". ಇದನ್ನು ಕೇಳಿದ ಸಂತನು "ಈ ಕೋಳಿಯ ಬುದ್ಧಿ ಮನುಷ್ಯನಿಗೆ ಬರುವುದು ಯಾವಾಗ?" ಎನ್ನುತ್ತ ಮುನ್ನಡೆದ.

ಮಹಾತ್ಮರ ಮಾತಿನಲ್ಲಿ ಸತ್ಯವಿರುವುದರಿಂದ ಅದು ಸತ್ವಪೂರ್ಣವಾಗಿದೆ. ಪ್ರೇಮವಿರುವುದರಿಂದ ಅದು ಸುಮಧುರವಾಗಿದೆ. ಮಂತ್ರಸದೃಶವಾದ ಅಂಥ ಸಾವಿರಾರು ಮಾತುಗಳನ್ನು ಸಂತರು–ಶರಣರು ನಮಗೆ ನೀಡಿದರು. ಉಪನಿಷತ್ ಮಾತುಗಳನ್ನ ಸಹ ಸರಳೀಕರಿಸಿ ಜನಮಾನಸಕ್ಕೆ ಮುಟ್ಟಿಸುತ್ತಾರೆ.

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ ।**

**ಏವಂ ತ್ವಯಿ ನಾನ್ಯಥೆತೋಽಸ್ತಿನ ಕರ್ಮಲಿಪ್ಯತೆ ನರೇಃ ॥**

ಸತ್ಕಾರ್ಯಗಳನ್ನು ಮಾಡುತ್ತ ಮನುಷ್ಯನು ನೂರುಕಾಲ ಬಾಳಬೇಕು. ಬದುಕಿರುವವರೆಗೂ ಏನಾದರೂ ಒಳ್ಳೆಯದನ್ನು ಮಾಡುತ್ತಿರಬೇಕು. ನಿವೃತ್ತಿಯ ಕನಸನ್ನೇ ಕಾಣಬಾರದು. ಮರವು ನೆಲಕ್ಕೆ ಉರಳುವವರೆಗೆ ಹಣ್ಣು–ಕಾಯಿ, ನೆರಳು–ನೆರವು ಕೊಡುವುದಿಲ್ಲವೆ ? ಜೇನ್ನೊಣವು ಎಂಥ ಸುಮಧುರವಾದ ಜೇನನ್ನು ತಯಾರಿಸುತ್ತದೆ. ಮನುಷ್ಯನ ಆ ಜೇನನ್ನು

ಮಾರಿದನೇ ವಿನಾ ಜೇನಿನಂಥ ಸವಿಯಾದ ಕಾರ್ಯಗಳನ್ನು ಮಾಡಲಿಲ್ಲ. ಪುಟ್ಟ ಪ್ರಾಣಿಗಳೇ ಇಷ್ಟು ಉತ್ಸಾಹದಿಂದ ಬದುಕಿರುವಾಗ ಮನುಷ್ಯನೇಕೆ ಹಾಗೆ ಬದುಕಬಾರದು!

ಜ್ಞಾನದ ಬೆಳಕನ್ನು ಕೊಡುವ, ಜೀವನೋತ್ಸಾಹವನ್ನು ತುಂಬುವ, ಶಾಂತಿ ಸಮಾಧಾನವನ್ನು ತರುವ ಸಂತರ ಶರಣರ ಇಂಥ ಮಾತುಗಳೇ ಮಂತ್ರ.

**'ಪಾತಾಳದಗ್ಘಣಿಯ ನೇಣಿಲ್ಲದೆ ತೆಗೆಯಬಹುದೆ,**

**ಸೋಪಾನದ ಬಲದಿಂದಲ್ಲದೆ ?**

**ಶಬ್ದ ಸೋಪಾನವ ಕಟ್ಟಿ ನಡೆಯಿಸಿದರು ಪುರಾತರು**

**ದೇವಲೋಕಕ್ಕೆ ಬಟ್ಟೆ ಕಾಣಿರೋ**

**ಗೀತ ಮಾತೆಂಬ ಜ್ಯೋತಿಯ ಬೆಳಗಿಸಿಟ್ಟರು**

**ಕೂಡಲಚನ್ನಸಂಗಾ ನಮ್ಮ ಶರಣರು'**

ಎಂದು ಚನ್ನಬಸವಣ್ಣನವರು ಹೇಳಿದರು. ಅಂತೆಯೇ ಶರಣರ ವಚನಗಳು ದೇವಲೋಕಕ್ಕೆ ದಾರಿಯಾದವು.

ಇಂಥ ಅಮೌಲ್ಯವಾದ ಮಂತ್ರಗಳಿಂದ ಕೂಡಿದ ಗೀತೆ, ಉಪನಿಷತ್ತು ಶರಣರ ವಚನಗಳು ದಾಸರ ಪದಗಳು. ಸಂತರ ಅಭಂಗ ಮೊದಲಾದವುಗಳು ಈ ದೇಶದ ಸಂಪತ್ತು. ಒಂದು ವೇಳೆ ಈ ಆಧ್ಯಾತ್ಮಿಕ ಸಂಪತ್ತು ಇಲ್ಲವಾದರೆ ಭಾರತ ದೇಶವು ಅತ್ಯಂತ ಬಡವಾಗಿ ಬಿಡುತ್ತದೆ.

ತಾಯಿಯ ಜೋಗುಳವನ್ನು ಕೇಳಿದರೆ ಅಳುವ ಮಗು ನಿದ್ರಾನಂದದಲ್ಲಿ ಪ್ರವೇಶಿಸುತ್ತದೆ. ಮಗುವಿಗೆ ತಾಯಿಯ ಹೃದಯದಿಂದ ಹೊರಹೊಮ್ಮಿದ ಜೋಗುಳ ಬೇಕೆ ವಿನಹ ಆಡಂಬರದ ಸಂಗೀತವಲ್ಲ. ಹಾಗೇ ಪ್ರಪಂಚದ ತಾಪದಿಂದ ಬೆಂದ ಮನಕೆ ಸಂತರ-ಶರಣರ ಅಮೃತವಚನಗಳು ಬೇಕೇ ವಿನಹ ಪ್ರಾಪಂಚಿಕ ಮೋಹದ ಮಾತುಗಳಲ್ಲ !

ಮನುಕುಲಕ್ಕೆ ಅರಿವನ್ನು ನೀಡುವ ಮಹಾವ್ಯಕ್ತಿಯೇ ಗುರು. ಈ ಗುರುವಿನಲ್ಲಿ ಎರಡು ಪ್ರಕಾರ : ೧) ಅನುಭಾವಿ, ೨) ಆಚಾರ್ಯ. ವಿಶ್ವದ ಮೂಲ ಸತ್ಯವನ್ನು ವಿಜ್ಞಾನಿಯಂತೆ ಸಂಶೋಧಿಸಿ ಕೊಡುವವನು ಅನುಭಾವಿ. ಹಾಗೆ ಸಂಶೋಧನೆಯಿಂದ ಕಂಡು ಹಿಡಿದ ಸತ್ಯವನ್ನು ಸಂರಕ್ಷಿಸಿ, ಪೋಷಿಸಿ, ಜಗತ್ತಿನಲ್ಲಿ ಪ್ರಸಾರ ಮಾಡುವವನು ಆಚಾರ್ಯ.

ಅರಿವಿನ ಕಣ್ಣನ್ನು ಕೊಡುವ ಆ ಗುರುವನ್ನು ಬಸವಣ್ಣನವರು ಹೀಗೆ ವರ್ಣಿಸುತ್ತಾರೆ,

**ಕಲ್ಲೊಳಗೆ ಹೊನ್ನುಂಟು, ಮರದೊಳಗೆ ಅಗ್ನಿಯಂಟು**

**ಹಾಲೊಳಗೆ ತುಪ್ಪವುಂಟು ಇದೇನು ಕತ್ತಲೆ ಕಾಣಬಾರದು**

**ಅಂತರಾಮಿಯಲ್ಲಿ ಶಿವನಿಹನು ತೋರಬಲ್ಲ ಗುರುವು ಸುಳಿಯ ಕೂಡಲ ಸಂಗಮದೇವ !**

ಕಲ್ಲೊಳಗೆ ಕನಕವಿದೆ, ಹಾಲಲ್ಲಿ ತುಪ್ಪವಿದೆ, ಕಟ್ಟಿಗೆಯಲ್ಲಿ ಅಗ್ನಿಯಿದೆ, ಜೀವನೊಳಗೆ ದೇವನಿರುವನು. ಆದರೆ ಅಜ್ಞಾನದಿಂದಾಗಿ ಅದು ಕಾಣದಾಗಿದೆ ಅರಿವಿನ ಕಣ್ಣ ತೆರೆಯುವ ಗುರು ಬರುತ್ತಲೇ ದೇವನ ದಿವ್ಯದರ್ಶನ ಸಮನಿಸುತ್ತದೆ. ಅಂತೆಯೇ ಗುಡಿಯೊಳಗಿನ ದೇವರು, ಒಂದು ಕ್ಷಣ ಇರದಿದ್ದರೆ ನಡೆದೀತು. ಆದರೆ ಹೃದಯದ ಗುಡಿಯೊಳಗಿನ ಗುರು ಇರದಿದ್ದರೆ ನಡೆಯುವುದಿಲ್ಲ !

ಭಾರತೀಯರು ಕಥಾಪ್ರಿಯರು, ರಾಮಾಯಣ, ಮಹಾಭಾರತ, ಭಾಗವತ, ಅಷ್ಟಾದಶಪುರಾಣ ಮೊದಲಾದ ಮಹಾಗ್ರಂಥಗಳನ್ನು ನಿರ್ಮಿಸಿದರು. ಆ ಕಥೆಗಳಲ್ಲಿ ತತ್ತ್ವ, ನೀತಿ ಅನುಭವ, ಅನುಭಾವ ಎಲ್ಲವೂ ಅಡಕವಾಗಿದೆ. ಬಳಸುವ ಒಂದು ಕಥೆ ಇನ್ನೊಂದು ಪ್ರವಚನದಲ್ಲಿ ಕಥೆಯ ಭಾವ ಅದೇ ಇದ್ದರೂ ವಿಷಯ ಬೇರೆಯಾಗಿರುತ್ತದೆ.

ಒಂದು ಹಳ್ಳಿಯಲ್ಲಿ ಒಬ್ಬ ಭಿಕ್ಷುಕನಿದ್ದ. ಹಲವಾರು ವರುಷಗಳಿಂದ ಅವನು ಆ ಹಳ್ಳಿಯಲ್ಲಿ ಭಿಕ್ಷೆಯನ್ನು ಬೇಡುತ್ತಿದ್ದ. ಅದರಿಂದ ಅವನು ಹಳ್ಳಿಗೆಲ್ಲ ಪರಿಚಿತನಾಗಿದ್ದ. ಒಂದು ದಿನ ಭಿಕ್ಷುಕನು ಬಾರದಿದ್ದರೆ ಮರುದಿನ ಅವರೆಲ್ಲ ಅವನು ಬರುವ ದಾರಿಯನ್ನೇ ಕಾಯುತ್ತಿದ್ದರು. ಅವನಿಗೆ ಇರುವುದು ಬೇಡಿ ಕೊಳ್ಳುವುದಕ್ಕೆ ಒಂದು ಹಳೆಯದಾದ ಭಿಕ್ಷಾಪಾತ್ರೆ, ಕಾಲು ಚಾಚುವುದಕ್ಕೆ ಒಂದು ಮುರುಕು ಗುಡಿಸಲು. ಇದಿಷ್ಟೇ ಆ ಭಿಕ್ಷುಕನ ಆಸ್ತಿ. ಅವನು ಅದೇ ಭಿಕ್ಷಾಪಾತ್ರೆಯನ್ನು ಕೈಯಲ್ಲಿ ಹಿಡಿದು ೭೫ ವರ್ಷ ಭಿಕ್ಷೆ ಬೇಡಿ ಆ ಮುರುಕ ಗುಡಿಸಲಿನಲ್ಲಿ ಕಾಲಕಳೆದಿದ್ದ. ಒಂದು ದಿನ ಅವನು ಯಾವುದೋ ಕಾಯಿಲೆಯಿಂದ ಅಸುನೀಗಿದ. ಊರವರೆಲ್ಲರೂ ಸೇರಿ ಅವನ ಅಂತ್ಯಸಂಸ್ಕಾರ ಮಾಡಲು ಬಂದರು. ಈ ಭಿಕ್ಷುಕನು ದಶಕಗಳಿಂದ ನಮ್ಮೂರಿನಲ್ಲಿದ್ದು ನಮ್ಮವನೇ ಆಗಿದ್ದಾನೆ. ಈ ಗುಡಿಸಲಿನ ಜಾಗದಲ್ಲೇ ಇವನಿಗೆ ಅಂತ್ಯಸಂಸ್ಕಾರ ಮಾಡುವುದೆಂದು ತೀರ್ಮಾನಿಸಿದರು. ಗುಡಸಲಿನಿಂದ ದೇಹವನ್ನು ಹೊರತೆಗೆದು ಅವನಿದ್ದಲ್ಲಿ ನೆಲವನ್ನು ಅಗಿಯತೊಡಗಿದರು. ಎರಡು-ಮೂರು ಅಡಿ ಅಗಿದಿರಬಹುದು ಅಷ್ಟರಲ್ಲೇ ಅವರಿಗೊಂದು ಪೆಟ್ಟಿಗೆ ಗೋಚರಿಸಿತು. ಅದನ್ನು ಹೊರಗೆ ತೆಗೆದು ನೋಡುತ್ತಾರೆ. ಅದು ಮುತ್ತು ರತ್ನಗಳಿಂದ ತುಂಬಿ ಹೋಗಿತ್ತು. "ತನ್ನ ಕಾಲಕೆಳಗೆ ಅಪಾರ ಸಂಪತ್ತಿದ್ದರೂ ಇವನು ೭೫ ವರ್ಷ ಭಿಕ್ಷುಕನಾಗಿ

ಬದುಕಿದ್ದನಲ್ಲ!" ಎಂದು ಜನರು ಮರುಗಿದರು. ಅಲ್ಲೇ ಇದ್ದ ಹಿರಿಯ ಹೇಳಿದ– "ನಮ್ಮೂರಲ್ಲೇ ಇದ್ದ ಈ ನಿಧಿಯು ನಮಗಾದರೂ ಇಲ್ಲಿಯವರೆಗೆ ಎಲ್ಲಿ ಗೊತ್ತಿತ್ತು ? ಈ ನಿಧಿಯು ೭೫ ವರ್ಷ ಅವನಿಗೇ ಭಿಕ್ಷೆ ಬೇಡುವಂತೆ ಮಾಡಿದೆ. ನೀವೇನಾದರೂ ಆ ನಿಧಿಯನ್ನು ಹಿಡಿದು ಭಿಕ್ಷುಕರಾದೀರಿ, ಎಚ್ಚರ !" ಹಿರಿಯನ ಮಾತಿನಂತೆ ಅವರು ಯಾರೂ ಆ ನಿಧಿಯನ್ನು ಮುಟ್ಟಲಿಲ್ಲ. ಊರಲ್ಲಿದ್ದ ಅನ್ನಛತ್ರಕ್ಕೆ ಕೊಟ್ಟು ಪುಣ್ಯ ಕಟ್ಟಿಕೊಂಡರು. ನಾವಾದರೂ ನಮ್ಮ ಅಂತರಂಗದಲ್ಲೇ ಹುದುಗಿರುವ ಅಪಾರ ಜ್ಞಾನ ಸಿರಿಯನ್ನು ಅರಿಯದೇ ದುಃಖಿಗಳು ದರಿದ್ರರೂ ಆಗಿದ್ದೇವೆ. ಹತ್ತೂ ಬೆರಳಿಗೆ ಹತ್ತು ರತ್ನಖಚಿತ ಬಂಗಾರದ ಉಂಗುರು ಧರಿಸಿ ಕೈಯಲ್ಲಿ ಬಂಗಾರದ ಭಿಕ್ಷಾಪಾತ್ರೆ ಹಿಡಿದು ಭಿಕ್ಷೆ ಬೇಡುವವನ ಪರಿಸ್ಥಿತಿ ನಮ್ಮದಾಗಿದೆ. ಎಷ್ಟೋ ಜನ ದೊಡ್ಡ ದೊಡ್ಡ ವಿದ್ಯಾವಂತರೂ, ಉದ್ಯೋಗವಂತರು, ತಮ್ಮ ಭಾವಿಜೀವನದ ಬಾಳಸಂಗಾತಿಯಿಂದ ವರದಕ್ಷಿಣೆ ಬೇಡುವುದಿಲ್ಲವೆ; ಇವರನ್ನು ಬುದ್ಧಿವಂತರೆಂದು ಹೇಗೆ ಕರೆಯುವುದು ? ಯಾರೂ ವರದಕ್ಷಿಣೆ ತೆಗೆದುಕೊಳ್ಳಬಾರದು ಅದೊಂದು ರೀತಿ ಭಿಕ್ಷೆಬೇಡಿದಂತೆ ಎಂದು ಸಮಾಜ ಪರಿವರ್ತನೆ ಗುರಿಯಾಗಿಸಿ ಉದಾಹರಿಸುತ್ತಾರೆ.

ಆದ್ದರಿಂದಲೇ ಏನನ್ನೆ ಹೇಳಿದರೂ ಬುದ್ಧ, ಬಸವ, ಮಹಾವೀರ, ಜ್ಞಾನೇಶ್ವರ ತುಕಾರಾಮ ಮೊದಲಾದ ಮಾಹಾಗುರುಗಳೇ ನಮ್ಮ ಪಾಲಿನ ದೇವರೆಂದು ತಿಳಿಸುವರು. ಸಾಮರಸ್ಯ ಸಮಾನತೆ ಸಮಭಾವ ಅವರ ಪ್ರವಚನದ ಉದ್ದೇಶ.

ಜೀವನದ ಒಳ–ಹೊರಗನ್ನು ಆಳವಾಗಿ ನೋಡಿದವರ ಮಾತೇ ಮಂತ್ರ, ಅಮೌಲ್ಯವಾದ ಅಂಥ ಮಾತುಗಳು ನಮ್ಮ ಬದುಕಿಗೆ ಆಸರೆ. ಅವರ ಅನುಭಾವದ ನುಡಿಗಳ ಮೇಲೆ ನಾವು ನಮ್ಮ ಜೀವನದ ಸೌಧವನ್ನು ಸುಭದ್ರವಾಗಿ ಕಟ್ಟಿಕೊಳ್ಳಬಹುದು. ಅಂತೆಯೇ ಆ ಮಹಾತ್ಮರ ಮಾತುಗಳು ಸಾವಿರಾರು ವರುಷಗಳಿಂದ ಈ ಪ್ರಪಂಚವನ್ನು ಬೆಳಗುತ್ತಿವೆ.

ಶ್ರೀ ಸಿದ್ಧೇಶ್ವರ ಸ್ವಾಮಿಗಳು–ತಮ್ಮ ಪ್ರವಚನದಲ್ಲಿ ಜಾಗತಿಕ ಮಟ್ಟದ ಚಿಂತಕರ ತತ್ತ್ವಜ್ಞಾನಿಗಳ ವಿಚಾರಗಳನ್ನು ಸಮಯೋಚಿತವಾಗಿ, ಸಂದರ್ಭೋಚಿತವಾಗಿ ಮತ್ತು ಸರಳವಾದ ಸಂವಹನದ ತಂತ್ರಗಾರಿಕೆಯಲ್ಲಿ ಉಪಯೋಗಿಸಿಕೊಳ್ಳುತ್ತಾರೆ. ನಾವು ಕೇಳರಿಯದ, ಕಂಡರಿಯದ, ಓದಿಯರಿಯದ, ಗಮನಿಸದ ವಿಚಾರಧಾರೆಯನ್ನು ಸಾಮಾನ್ಯರ ಬದುಕಿಗೆ ತತ್ತ್ವಪ್ರಣಾಳಿಕೆಯಾಗಿ ಬಳಸುವುದು ಅವರ ಪ್ರವಚನದ ಬಹುದೊಡ್ಡ ವೈಶಿಷ್ಟ್ಯವಾಗಿದೆ.

ಹನ್ನೆರಡನೇ ಶತಮಾನದ ಶರಣರು ವಚನಗಳನ್ನೇನೋ ಬರೆದರು. ಅವು ಮೂರು ರೀತಿಯಲ್ಲಿವೆ. ಒಂದು ಸಾಮಾನ್ಯ ವಚನಗಳು; ಎರಡು ಬೆಡಗಿನ ವಚನಗಳು; ಮೂರು,

ಸ್ವರವಚನಗಳು. ಸಾಮಾನ್ಯವಚನಗಳನ್ನು ಧಾರ್ಮಿಕ, ತಾತ್ವಿಕ, ಸಾಮಾಜಿಕ, ಆಧ್ಯಾತ್ಮಿಕ, ರಾಜಕೀಯ ವಚನಗಳೆಂದೂ ವಿಂಗಡಿಸಬಹುದು. ಈ ವಚನಗಳಲ್ಲಿ ಸಮಕಾಲೀನ ಮೌಲ್ಯಗಳನ್ನು ಎತ್ತಿಹೇಳಿದರೂ ಸಾರ್ವಕಾಲಿಕ ಸತ್ಯಗಳನ್ನು ಹೇಳುತ್ತಿರುವುದರಿಂದ ಎಲ್ಲ ವರ್ಗ, ವರ್ಣದ ಜನತೆಗೆ ನೇರವಾಗಿ ಇವು ಸ್ಪಂದಿಸುತ್ತವೆ. ಶ್ರೀ ಸಿದ್ಧೇಶ್ವರ ಸ್ವಾಮಿಗಳು-ಇಂಥ ವಚನಗಳನ್ನು ಸತ್ಯ-ಸಹಜವಾಗಿ ಉಲ್ಲೇಖಮಾಡುತ್ತ ಪ್ರವಚನಕ್ಕೆ ಪೂರ್ಣಪ್ರಮಾಣದ ಸಂವಹನಶೀಲ ಗುಣವನ್ನು ತುಂಬುತ್ತಾರೆ.

ಶ್ರೀ ಸಿದ್ಧೇಶ್ವರ ಸ್ವಾಮಿಗಳ ಪ್ರವಚನಕ್ಕೆ ಇರುವ ಮುಖ್ಯವಾದ ಮಹತ್ವವೆಂದರೆ, ಅವರ ಪ್ರವಚನಗಳು ವೇದಿಕೆಯಿಂದ ನೇರವಾಗಿ ದಾಖಲಾಗಿ, ಸಂಗ್ರಹವಾಗಿ ಪುಸ್ತಕರೂಪದಲ್ಲಿ ಪ್ರಕಟವಾಗಿರುವುದು. ಪ್ರವಚನದ ಸಾರವನ್ನೊಳಗೊಂಡ ಪ್ರಮುಖ ಕೃತಿಗಳು ಹೀಗಿವೆ. ಶಿವಪಥ, ಗುಣಸಂಪದ, ದಿವ್ಯಾನುಭವ, ಸಾಧನಾಪಥ, ಬದುಕು ಒಂದು ಯೋಗ, ಜ್ಞಾನ-ವಿಜ್ಞಾನಯೋಗ, ಯುವಕರು ಹಾಗೂ ದೇಶಸೇವೆ, ಶಾಂತಿಯೋಗ, ಭಕ್ತಿಪಥ ಮೊದಲಾದವುಗಳು.

ಅವರು ತಮ್ಮ ಪ್ರವಚನಗಳಲ್ಲಿ ಉಲ್ಲೇಖಿಸುವ ಜಾಗತಿಕ ಚಿಂತಕರ ಚಿಂತನೆಯ ಕೆಲವು ಮುಖ್ಯ ವಿಚಾರಗಳನ್ನು ಇಲ್ಲಿ ಗಮನಿಸಬಹುದು.

## ೭.೪.ಪ್ರವಚನ ಕೃತಿಗಳ ವಿಶ್ಲೇಷಣೆ :

**೧. ಶಿವಪಥ** : (ಔರಾದದಲ್ಲಿ ಅಕ್ಟೋಬರ ೨೦೦೫ ರಲ್ಲಿ ನಡೆದ ಪ್ರವಚನದ ಸಾರಸಂಗ್ರಹ ಕೃತಿ)

ಆಧ್ಯಾತ್ಮಿಕ ವಿಜ್ಞಾನಿಗಳು, ಅನರ್ಘ್ಯರತ್ನ, ಹೃದಯವಂತಿಕೆ, ಸುಜ್ಞಾನಸೂರ್ಯ, ವಿಷಯವಿರಕ್ತಿ, ಭಾವಸೌಂದರ್ಯ, ಶಬ್ದಸೋಪಾನ, ಪರಿವರ್ತನೆ, ಹೂನುಡಿ, ಮಹತ್ಸಂಗ, ಬಯಲ ಬಯಕೆ, ಅರಿವು-ಅನುಭಾವ, ದುಸ್ಸಂಗ, ನಟನೆ, ಸಮೃದ್ಧಬದುಕು, ಮಾಯೆ-ಮೋಹ, ಮರೆವು, ವಸುಂಧರೆ, ಮಹಾನುಭಾವಿಗಳು, ದೇವ ಶಿಲ್ಪಿ, ದ್ವಂದ್ವ ಜಗ, ಸಾಕಾರ-ನಿರಾಕಾರ, ಸುಗಂಧಿತ ಬಾಳು, ಅಭಿಮಾನ, ಡಂಭ, ಧರ್ಮಾಧಾರ.

## ೧.೧ ಆಧ್ಯಾತ್ಮಿಕ ವಿಜ್ಞಾನಿಗಳು :

ಮೇಡಂ ಕ್ಯೂರಿ ಜಗತ್ ಪ್ರಸಿದ್ಧ ವಿಜ್ಞಾನಿ. ಅವಳನ್ನು ಸೇರಿದಂತೆ ಅವಳ ಕುಟುಂಬಕ್ಕೆ ಐದು ನೋಬೆಲ್ ಪ್ರಶಸ್ತಿ ಸಂದಿವೆ. ಈ ಮಹತ್ ಸಾಧನೆಯ ವಿವರವನ್ನು ತಿಳಿಯಬೇಕು; ಮೇಡಂ ಕ್ಯೂರಿಯಿಂದ ಒಂದು ಸಂದೇಶವನ್ನು ಪಡೆಯಬೇಕು; ಎಂದುಕೊಂಡು ಪತ್ರಿಕಾ ವರದಿಗಾರರು ಅವಳ ಮನೆಗೆ ಹೋದರು. ಒಂದು ಪುಟ್ಟ ಮನೆಯ ಎದುರು "ಮೇಡಂ ಕ್ಯೂರಿ ಎಲ್ಲಿರುವಳ" ಎಂದು ವರದಿಗಾರರು ಅವಳನ್ನೇ ಕೇಳಿದರು. "ಈಗ ಬರುತ್ತಾಳೆ ಕುಳಿತಿರಿ" ಎಂದಳು ಕ್ಯೂರಿ.

ಸ್ವಲ್ಪ ಸಮಯದ ನಂತರ "ಕ್ಯೂರಿ ಬರಲಿಲ್ಲವಲ್ಲ!" ಎಂದು ವರದಿಗಾರರು ಮತ್ತೆ ಕೇಳಿದರು. "ಈಗ ಅವಳು ತಮ್ಮ ಎದುರಿನಲ್ಲೆ ಇರುವಳಲ್ಲ!" ಎಂದಳು ಕ್ಯೂರಿ. ಆಗ ತಮ್ಮ ತಪ್ಪಿನ ಅರಿವಾಗಿ ವರದಿಗಾರರು ಕ್ಷಮಿಸಬೇಕು ಎಂದರು.

ಕ್ಯೂರಿ– "ಅದಿರಲಿ, ತಾವು ಬಂದ ಕಾರಣವೇನು?"

ವರದಿಗಾರರು– "ಶ್ರೇಷ್ಠ ವಿಜ್ಞಾನಿಗಳಾದ ತಮ್ಮಿಂದ ಸಂದೇಶ ಬೇಕಾಗಿತ್ತು!"

ಕ್ಯೂರಿ– "ವಿಜ್ಞಾನಿಗಿಂತ ವಿಜ್ಞಾನಿಯ ಸಂಶೋಧನೆ ದೊಡ್ಡದು. ವಿಜ್ಞಾನಿಯ ಸಂಶೋಧನೆಗೆ ಪ್ರೇರಣೆ ನೀಡಿದ ಈ ವಿಶ್ವ ಇಲ್ಲಕ್ಕಿಂತ ದೊಡ್ಡದು!"

ಈ ಮಾತನ್ನು ಕೇಳಿದಾಗ ವರದಿಗಾರರಿಗೆ ಅಪಾರ ಸಂತೋಷವಾಯಿತು. ಮೇಡಂ ಕ್ಯೂರಿಯ ಈ ಹಿತ ನುಡಿಗಳೇ ಜಾಗತಿಕ ಸಂದೇಶವೆಂದು ಆ ವರದಿಗಾರರು ಸಂತಸದಿಂದ ತೆರಳಿದರು.

## ೧.೨ ಭಾವಸೌಂದರ್ಯ :

ದೇವರು ಸುಕರಾತನಿಗೆ ಭಾವಸೌಂದರ್ಯ ಕೊಟ್ಟಿದ್ದ. ಬಾಹ್ಯ ಸೌಂದರ್ಯ ಕೊಟ್ಟಿರಲಿಲ್ಲ. ಸುಕರಾತನು ಕುರೂಪಿ. ಅವನ ಹೆಂಡತಿ ಝಾಂತಿಪಿ ಅತ್ಯಂತ ಸುರೂಪಿ !! ಒಂದುದಿನ ಝಾಂತಿಪಿಗೆ ಅವಳ ಗೆಳತಿ ಕೇಳಿದಳು– "ಇಂಥ ಕುರೂಪಿ ಗಂಡನನ್ನು ನೀನೇಕೆ ಮದುವೆ ಆದೆ?" ಝಾಂತಿಪಿ ಹೇಳಿದಳು, "ನಾನು ನನ್ನ ಗಂಡನ ಮುಖವನ್ನು ನೋಡಲಿಲ್ಲ ಹೃದಯವನ್ನ ನೋಡಿದೆ. ಮುಖದ ಸೌಂದರ್ಯ ಒಂದು ದಿನ ಮಾಸುತ್ತದೆ. ಹೃದಯದ ಸೌಂದರ್ಯ ಎಂದೂ ಮಾಸುವುದಿಲ್ಲ!"

ಝಾಂತಿಪಿ ಸುರೂಪಿಯಾದಷ್ಟೇ ಮುಂಗೋಪಿಯೂ ಆಗಿದ್ದಳು. ಸುಕರಾತನಿಗೆ ನಿತ್ಯವೂ ಬೈಗುಳದ ಹೊಳೆಯಲ್ಲಿ ಝಳಕ ಮಾಡಿಸುತ್ತಿದ್ದಳು. ಸುಕರಾತನಿಗೆ ಅವನ ಗೆಳೆಯ ಕೇಳಿದ, "ಇಂಥ ಮುಂಗೋಪಿ ಹೆಂಡತಿಯ ಜೊತೆಗೆ ನೀನು ಹೇಗೆ ಬಾಳುವೆ ಮಾಡುವೆ?" ಸುಕರಾತ ಹೇಳಿದ "ಅವಳಿಂದಾಗಿಯೇ ನನ್ನ ದೇಹಾಭಿಮಾನವೆಲ್ಲ ಅಳಿದು ನಾನು ದೈವಭಕ್ತನಾದೆ!! ನನ್ನನ್ನು ತತ್ವಜ್ಞಾನಿಯನ್ನಾಗಿ ಮಾಡಿದವಳು ಬೇರೆಯಾರೂ ಅಲ್ಲ ನನ್ನ ಸತಿ!!" ಇಂಥ ಹೃದಯ ಸೌಂದರ್ಯ ನಮ್ಮದಾಗಬೇಕಾದರೆ ನಾವು ಕೇವಲ ವಿಷಯತ್ಯಾಗ ಮಾಡಿದರೆ ಸಾಲದು. ವಿಷಯರಸ ಅಥವಾ ವಿಷಯದಾಶೆಯನ್ನೂ ಅಳಿಯಬೇಕು.

<u>೧.೩ ಶಬ್ದಸೋಪಾನ</u> :

ಗ್ರೀಸ್ ದೇಶದ ಮೆಸೊಡೋನಿಯಾ ಪಟ್ಟಣದಲ್ಲಿ ಅಲೆಗ್ಝಾಂಡರ್‌ನೆಂಬ ರಾಜನಿದ್ದ. ಶೂರ–ಧೀರ, ಪರಾಕ್ರಮಿ! ಜಗತ್ತನ್ನೇ ಗೆಲ್ಲುವ ಸುಂದರ ಕನಸು ಕಂಡಿದ್ದ. ಹಲವಾರು ದೇಶಗಳನ್ನು ಗೆದ್ದು ಸ್ವದೇಶಕ್ಕೆ ಮರಳಿದ್ದ. ಸಂಭ್ರಮದ ಸ್ವಾಗತ. ಭವ್ಯ ಮೆರವಣಿಗೆ. ರಾಜ ಮಾರ್ಗದಲ್ಲಿ ರಾಜಠೀವಿಯಿಂದ ನಡೆಯುತ್ತಿದ್ದಾನೆ. ಮಾರ್ಗಮಧ್ಯದಲ್ಲಿ ಓರ್ವ ಮುದುಕ. ಮೈಯಲ್ಲಿ ಸರಿಯಾದ ಬಟ್ಟೆಯಿಲ್ಲ. ತಲೆಕೆದರಿದೆ. ಕಣ್ಣುಗಳು ಮಾತ್ರ ಹೊಳೆಯುತ್ತಿವೆ. ಆ ಮುದುಕನನ್ನು ಕಂಡಕೂಡಲೆ ರಾಜನು ತನ್ನ ತಲೆಯ ಮೇಲಿನ ಕಿರೀಟ ತೆಗೆದು ಮಂಡೆಯೂರಿ ನಮಸ್ಕರಿಸಿದ. ಮುದುಕ ಮುಗುಳ್ನಕ್ಕು ಮುನ್ನಡೆದ. ಆಶ್ಚರ್ಯಚಕಿತನಾದ ಮಂತ್ರಿ ಕೇಳಿದ– "ನೀನು ತಂದೆಗಿಂತಲೂ ಹೆಚ್ಚಿನ ಗೌರವ ಈ ಮುದುಕನಿಗೆ ಏಕೆ?" ರಾಜ ಹೇಳಿದ– "ನನ್ನ ತಂದೆ ನನಗೆ ನಶ್ವರ ಸಿರಿಯನ್ನಿತ್ತ. ಈ ಮುದುಕ ನನ್ನ ಗುರು, ಈತ ನನಗೆ ಎಂದೂ ನಾಶವಾಗದ ಅಮರ ಜ್ಞಾನ ಸಿರಿಯನ್ನಿತ್ತ!! ನನ್ನ ತಂದೆ ನನಗೆ ಜನ್ಮಕೊಟ್ಟು ಮರ್ತ್ಯಲೋಕಕ್ಕೆ ಕರೆತಂದ. ಗುರುವು ಈ ಮರ್ತ್ಯಲೋಕದಿಂದ ಅಮರ್ತ್ಯಲೋಕಕ್ಕೆ ಹೋಗುವ ಸನ್ಮಾರ್ಗ ತೋರಿದ." ಈಗ ನೀನೇ ಹೇಳು "ನಾನು ಯಾರನ್ನು ಹೆಚ್ಚು ಗೌರವಿಸಲಿ!!" ಈ ಮಾತನ್ನು ಕೇಳುತ್ತಲೇ ಮಂತ್ರಿಯ ಕಣ್ಣು ತೆರೆದಿತ್ತು! ಗುರುವಿಗಿಂತ ದೊಡ್ಡವಸ್ತು ಇನ್ನೊಂದಿಲ್ಲ ಎಂಬ ಅರಿವಾಗಿತ್ತು.

೧.೪ ಅರಿವು-ಅನುಭಾವ :

ಜೇಮ್ಸಜೀನ್ಸ್ ಖಗೋಲ ಶಾಸ್ತ್ರಜ್ಞ, ಅವನು ತನ್ನ ಆಯುಷ್ಯವನ್ನೇ ನಕ್ಷತ್ರಗಳ ಅಧ್ಯಯನಕ್ಕೆ ಮೀಸಲಿಟ್ಟಿದ್ದ. ದಶಕಗಳವರೆಗೆ ನಕ್ಷತ್ರಗಳನ್ನು ಎಣಿಸಿ-ಗುಣಿಸಿ ಅವುಗಳ ವಿಸ್ತಾರ ವೈಭವ ಕಂಡು ಉಂಡವ. ಕತ್ತಲೆ ಕವಿದ ಆಗಸದಲ್ಲೇ ಅಲೌಕಿಕ ಬೆಳಕಿನ ಸವಿಯನ್ನು ಅನುಭವಿಸಿದವ. ಯಾರೋ ಕೇಳಿದರು- "ತಾವು ತಮ್ಮ ಆಯುಷ್ಯವನ್ನೆಲ್ಲ ಆಕಾಶದ ವೀಕ್ಷಣೆಯಲ್ಲಿ ಕಳೆದವರು, ಅಲ್ಲಿ ಎಲ್ಲಾದರೂ ತಮಗೆ ದೇವನ ಸುಳುಹು ಕಂಡಿತೆ?" ಜೇಮ್ಸ್ಜೀನ್ಸ್ ಹೇಳಿದ, "ಆಗಸದ ಅಧ್ಯಯನದಲ್ಲಿ ಅನುಕ್ಷಣವೂ ನನಗೆ ದೇವನ ಬೆಳಕು ಬಿಟ್ಟರೆ ಏನೂ ಕಾಣಲಿಲ್ಲ!!" ಇದು ದಿವ್ಯಾನುಭವ.

೧.೫ ಸಮೃದ್ಧ ಬದುಕು :

ಓರ್ವ ಝೆನ್ ಗುರು. ಅಲ್ಲಿಗೆ ಒಬ್ಬ ಸಿರಿವಂತ ಶಿಷ್ಯ ಬಂದ. ಶಿಷ್ಯ ಗುರುಗಳಿಗೆ ಹೇಳಿದ "ನನಗೆ ಸತ್ಯದ ಅನುಭವ ಮಾಡಿಸಿಕೊಡಿರಿ ಪೂಜ್ಯರೇ". ಗುರುಗಳು ಒಂದು ಮಣ್ಣಿನ ಕೊಡವನ್ನು ಕೊಟ್ಟು ನೀರು ತರಲು ಹೇಳಿದರು. ಅದು ಬೆಳದಿಂಗಳ ರಾತ್ರಿ. ಶಿಷ್ಯ ಬಾವಿಯಿಂದ ಕೊಡದಲ್ಲಿ ನೀರು ತರುತ್ತಿದ್ದ. ತುಂಬಿದ ಕೊಡದಲ್ಲಿ ಚಂದಿರನ ಸುಂದರ ಬಿಂಬ ಮೂಡಿತ್ತು. ಆಕಸ್ಮಿಕವಾಗಿ ಕೊಡ ಅಲ್ಲಿದ್ದ ಮರದ ಟೊಂಗೆಗೆ ತಗಲಿ ಬಿದ್ದು ಒಡೆಯಿತು. ಗುರು ಕೇಳಿದ "ಇದರೊಳಗೆ ಚಂದಿರನ ಬಿಂಬ ಮೂಡಿತ್ತೆ?" ಶಿಷ್ಯ "ಹೌದು, ಮೂಡಿತ್ತು" ಗುರು- "ಆಚಂದಿರಿನ ಬಿಂಬ ಈಗ ಏನಾಯಿತು?" ಕ್ಷಣ ಕಾಲ ಶಿಷ್ಯ ಮೌನ ತಳೆದಿದ್ದ. ಅಷ್ಟರಲ್ಲಿ ಆತನಿಗೆ ಸತ್ಯ ಹೊಳೆದಿತ್ತು. ದೇಹವೆಂಬ ಗಡಿಗೆ ಒಡೆದರೂ ಆತ್ಮನೆಂಬ ಚಂದಿರನು ಒಡೆಯುವುದಿಲ್ಲ. ಕ್ಷಣಕಾಲ ಮರೆಯಾಗುತ್ತಾನೆ ಮತ್ತೆ ಬೇರೆ ಗಡಿಗೆಯ ನೀರಲ್ಲಿ ಮೂಡುತ್ತಾನೆ. ಹಾಗೆ ದೇಹಗಳು ಬಿದ್ದು ಹೋದರೂ ಒಳಗಿರುವ ಆತ್ಮ ಅಮರನಾಗಿದ್ದಾನೆ; ಈ ಅರಿವನ್ನು ಪಡೆದುಕೊಂಡು ಶಿಷ್ಯನು ಗುರುಗಳಿಗೆ ವಂದಿಸಿ ಸಂತಸದ ಬಾಳಿನತ್ತ ಹೆಜ್ಜೆ ಹಾಕಿದ.

೧.೬ ಮಹಾನುಭಾವಿಗಳು :

ಅಂಥ ಅನುಭಾವಿಗಳ ಸಂಗವನ್ನು ಬಯಸಿ ಗ್ರೀಸ್ ದೇಶದ ಮಹಾವಿಜ್ಞಾನಿ ಪೈಥಾಗೋರಸ್‌ನು ಭಾರತ ದೇಶಕ್ಕೆ ಆಗಮಿಸಿದನು. ಶ್ರೇಷ್ಠ ಗಣಿತ ವಿಜ್ಞಾನಿಯಾದ ಅವನು ಇಲ್ಲಿಯ ಅಧ್ಯಾತ್ಮ ವಿದ್ಯೆಯನ್ನು ಅನುಭಾವಿಗಳ ಹತ್ತಿರವಿದ್ದು ಶ್ರದ್ಧೆಯಿಂದ ಅಧ್ಯಯನ

ಮಾಡಿದನು. ಜೀವನದಲ್ಲಿರುವ ಬುದ್ಧಿಯ ದೀಪ ಆರಿಹೊಗುತ್ತದೆ. ಮನದ ಹೂವು ಬಾಡುತ್ತದೆ. ತನುವೆಂಬ ಮನೆಯೂ ಒಂದು ದಿನ ನೆಲಸಮವಾಗುತ್ತದೆ. ಆದರೆ ನಮ್ಮಲ್ಲಿರುವ ಆತ್ಮಜ್ಯೋತಿ ಮಾತ್ರ ನಿರಂತರ ಬೆಳಗುತ್ತಿರುತ್ತದೆ! ಎಂದರೆ ಜಗತ್ತು ಅನಿತ್ಯ-ಅಶಾಶ್ವತ; ಆತ್ಮ-ಪರಮಾತ್ಮನು ನಿತ್ಯ ನೂತನ!! ಅಮರ-ಅವಿನಾಶಿ!! ಪೈಥಾಗೋರಸ್‌ನು ತನ್ನ ದೇಶಕ್ಕೆ ಹೋಗಿ ಈ ವೇದಾಂತಜ್ಞಾನವನ್ನು ಛಲದಿಂದ ಪ್ರಸಾರ ಮಾಡಿದನು. ಇಂದಿಗೂ ಅದನ್ನು ಗ್ರೀಸ್ ದೇಶದಲ್ಲಿ ಪೈಥಾಗೋರಸ್ ಪಂಥವೆಂದು ಕರೆಯುತ್ತಾರೆ.

ವಿದೇಶದಲ್ಲಿ ಆಂಟೋನಿ ಎಂಬ ಸಂತನಿದ್ದ. ಅವನು ಒಂದು ಊರಿನಲ್ಲಿ ಜನರಿಲ್ಲ, ಉಪದೇಶ, ಉಪಚಾರ, ಸಹಾಯ-ಸಹಕಾರ, ದಶಕಗಳವರೆಗೆ ಮಾಡಿದ. ಅವನ ಸೇವಾಬಲದಿಂದ ಊರು ಕೈಲಾಸ ಸದೃಶವಾಗಿತ್ತು. ಜನರೆಲ್ಲ ಆ ಸಂತನನ್ನು ಗೌರವದಿಂದ ಕಾಣುತ್ತಿದ್ದರು. ಒಂದು ದಿನ ಆ ಸಂತನು ಇದ್ದಕ್ಕಿದ್ದಂತೆ ಆ ಊರನ್ನು ತೊರೆದು ಅಡವಿಗೆ ಹೊರಟು ಹೋದ. ಜನರು ಹುಡುಕಿ ಹುಡುಕಿ ಸುಮ್ಮನಾದರು. ಒಂದು ದಿನ ಆ ಊರಿನ ಓರ್ವ ಹಿರಿಯನಿಗೆ ಆ ಸಂತನು ಅರಣ್ಯದಲ್ಲಿ ದೊರಕಿದನು. ಸಂತಸದಿಂದ ಹಿರಿಯನು ಸಂತನ ದರ್ಶನಾಶೀರ್ವಾದ ಪಡೆದು ಧನ್ಯತೆಯನ್ನು ಅನುಭವಿಸಿದ. ಸ್ವಲ್ಪ ಸಮಯದ ನಂತರ ಹಿರಿಯನು ಸಂತನಿಗೆ ಕೇಳಿದ- "ಊರೆಲ್ಲವೂ ನಿಮ್ಮ ಆಗಮನದ ದಾರಿಯನ್ನೇ ಕಾಯುತ್ತಿದೆ" ಸಂತ- "ನಾನಿಲ್ಲಿ ದೇವನ ಆಗಮನದ ದಾರಿ ಕಾಯುತ್ತಿದ್ದೇನೆ!" ಹಿರಿಯ- "ಅದನ್ನು ತಾವು ಊರಲ್ಲಿದ್ದೇ ಮಾಡಬಹುದಲ್ಲ!" ಸಂತ- "ಅದು ಅಷ್ಟು ಸುಲಭವಾಗಿದ್ದರೆ ನಾನೇಕೆ ಇಲ್ಲಿಗೆ ಬರುತ್ತಿದ್ದೆ!" ಮಾಡಿ ಮರೆಯುವವರು ಸಂತರು, ಶರಣರು. ಸೃಷ್ಟಿಯ-ಸೃಷ್ಟಿಕರ್ತನ ಸಾನ್ನಿಧ್ಯದಲ್ಲಿ, ಸ್ಮರಣೆಯಲ್ಲಿ ಇದ್ದರೆ ನಾವು ಈ ವ್ಯಾಮೋಹದ ಬಂಧನವನ್ನು ಸುಲಭವಾಗಿ ಕಳೆದುಕೊಳ್ಳಬಹುದು. ಅದು ಮಹಾನುಭಾವರ ಸಂಗದ ಮಹಿಮೆ!!

೧.೭ ಸಾಕಾರ – ನಿರಾಕಾರ :

ಸಾಕ್ರೇಟಿಸ್‌ನು ಗ್ರೀಸ್ ದೇಶದ ಮಹಾನ್ ಸಂತ. ಅಥೆನ್ಸ್ ಪಟ್ಟಣದಲ್ಲಿ ಅವನ ವಾಸ. ದೇಶವೇ ಅವನನ್ನು ಮಹಾತ್ಮನೆಂದು ಗೌರವಿಸಿತ್ತು. ಅಥೇನ್ಸ ನಗರದ ಜನರ-ಜೀವನದ ಎಲ್ಲ ಸಮಸ್ಯೆಗಳಿಗೆ ಸಾಕ್ರಟಿಸ್‌ನಲ್ಲಿ ಪರಿಹಾರವಿತ್ತು. ಅಂಥ ಮಹಾನುಭಾವಿ. ಆದರೆ ಅವನು ಕುರೂಪಿ. ಅವನ ಹೆಂಡತಿ ಸುರೂಪಿ. ಕಲಹಪ್ರಿಯಳು. ಹೆಜ್ಜೆ-ಹೆಜ್ಜೆಗೂ ಸಾಕ್ರೆಟಿಸನೊಂದಿಗೆ ಜಗಳ

ತೆಗೆದು ಅವನನ್ನು ನಿಂದಿಸುತ್ತಿದ್ದಳು. ಸಾಕ್ರೇಟಿಸ್‌ನು ನಗು ನಗುತ್ತಲೇ ಅದನ್ನು ಕೇಳಿ ಮರೆಯುತ್ತಿದ್ದ.

ಸಾಕ್ರೇಟಿಸ್‌ನ ಉಪದೇಶ ಕೇಳುವುದಕ್ಕೆ ಜನರು ತಂಡೋಪ ತಂಡವಾಗಿ ಬರುತ್ತಿದ್ದರು. ಅಥೇನ್ಸ ಪಟ್ಟಣದ ತರುಣರು, ಮಧ್ಯಮ ವಯಸ್ಕರು ಹಿರಿಯರು ಎಲ್ಲರೂ ಅವನ ಅನುಯಾಯಿಗಳೇ. ಇದು ಕೆಲವು ಸಂಪ್ರದಾಯವಾದಿಗಳಿಗೆ ಸೇರಲಿಲ್ಲ. ಏಕೆಂದರೆ ಅವರ ಮಾತನ್ನು ಕೇಳಲು ಯಾರೂ ಇರಲಿಲ್ಲ. ಸಾಕ್ರೇಟಿಸ್‌ನು ದೇಶದ ಯುವಕರನ್ನು ದಾರಿತಪ್ಪಿಸುತ್ತಿದ್ದಾನೆ ಎಂದು ಆರೋಪಿಸಿ ಅವನನ್ನು ಜೇಲಿಗೆ ಹಾಕಿದರು. ಮರಣದಂಡನೆಯನ್ನು ವಿಧಿಸಿದರು. ಅದು ವಿಷಪ್ರಾಶನದ ಮೂಲಕ ನಡೆಯುವುದಿತ್ತು. ಸಾಕ್ರೇಟಿಸ್‌ನು ಕೈಯಲ್ಲಿ ವಿಷದ ಬಟ್ಟಲು ಹಿಡಿದೇ ಉಪದೇಶ ಮಾಡುತ್ತಿದ್ದ. ಈತನ ಉಪದೇಶ ಕೇಳಿದ ಜೇಲಿನ ಕಾವಲುಗಾರರೂ ಪರಿವರ್ತನರಾಗಿದ್ದರು. ಆದರೆ ಸಂಪ್ರದಾಯವಾದಿಗಳು ಕಲ್ಲಿನಂತೆ ಹಾಗೇ ಉಳಿದಿದ್ದರು. ನಗುನಗುತ್ತಲೇ ಸಾಕ್ರೇಟಿಸ್‌ನು ವಿಷಪ್ರಾಶನ ಮಾಡಿದ. ಅಲ್ಲೇ ಇದ್ದ ಅವನ ಶಿಷ್ಯರು ಕೇಳಿದರು. “ನಿಮಗೆ ಭಯವಾಗುವುದಿಲ್ಲವೆ?” ಸಾಕ್ರೇಟಿಸ್ ಕೇಳಿದ–“ಯಾವುದರ ಭಯ?” ಶಿಷ್ಯರು–“ಮರಣದ ಭಯ” ಸಾಕ್ರೇಟಿಸ್–“ಮರಣ ಯಾರಿಗೆ”? ಶಿಷ್ಯ– “ಈ ದೇಹ ನಿಮ್ಮದಲ್ಲವೆ?” ಸಾಕ್ರೇಟಿಸ್ “ದೇಹ ನನ್ನದೇ! ಆದರೆ ನಾನು ದೇಹವಲ್ಲ. ಆದ್ದರಿಂದ ನಾನೇಕೆ ಭಯಪಡಬೇಕು! ನಾನೀಗ ಸತ್ಯದ ಸಾಮ್ರಾಜ್ಯ ಪ್ರವೇಶಿಸುತ್ತಿದ್ದೇನೆ!!” ಹೀಗೆಂದು ಹೇಳಿದ ಸಾಕ್ರೇಟಿಸ್ ನಗುನಗುತ್ತಲೇ ದೇಹತ್ಯಾಗ ಮಾಡಿದ.

ಮಹಾವಿಜ್ಞಾನಿ ಐನ್‌ಸ್ಟೀನ್ ಹೇಳುತ್ತಾನೆ “ಈ ಸಮಸ್ತ ಸೃಷ್ಟಿಯ ದೇವನ ಸಂಪದ; ರವಿ–ಶಶಿ, ನದಿ–ಸಾಗರ, ಬೆಟ್ಟ–ಗುಡ್ಡ, ಸಚರಾಚರ ಸೃಷ್ಟಿಯಲ್ಲವೂ ಆ ಮಹಾದೇವನದೇ. ದೇವನ ಅಭಿವ್ಯಕ್ತ ರೂಪ! ಆದರೂ ನಮಗೆ ದೇವರು ಕಾಣುತ್ತಿಲ್ಲ. ಏಕೆಂದರೆ ನಾವಿನ್ನೂ ಕಣ್ಣು ತೆರದೇ ಇಲ್ಲ; ಹೊರಗಣ್ಣಲ್ಲ ಒಳಗಣ್ಣು. ಈ ಹೊರಗಣ್ಣಿಗೆ ಮಿಥ್ಯವೇ ವಿನಃ ಸತ್ಯವು ಕಾಣಲಾರದು.

<u>೧.೮ ಡಂಭ</u> :

ಗ್ರೀಸ್ ದೇಶದ ಅಥೆನ್ಸ್ ಪಟ್ಟಣದಲ್ಲಿ ಸುಕರಾತ ಎಂಬ ಸಂತನಿದ್ದ. ದೇಶವೆಲ್ಲವೂ ಅವನನ್ನು ಮಹಾಜ್ಞಾನಿ ಎಂದು ಗೌರವಿಸುತ್ತಿತ್ತು. ನಾಲ್ವರು ಪಂಡಿತರು ಮಾತ್ರ ಇದನ್ನು ನಂಬಲಿಲ್ಲ. ಆ ಪಟ್ಟಣದ ಜಾಗ್ರತ ದೇವತೆ ಡೆಲ್ಪಿ ಹತ್ತಿರ ಹೋಗಿ ಕೇಳಿದರು– “ಈ ದೇಶದಲ್ಲಿ ಶ್ರೇಷ್ಠ ತತ್ವಜ್ಞಾನಿ ಯಾರು?” ಡೆಲ್ಪಿ ಹೇಳಿತು– “ಸುಕರಾತನೇ ಶ್ರೇಷ್ಠಜ್ಞಾನಿ ಎನ್ನುತ್ತಾಳೆ ಡೆಲ್ಪಿ,

ನಿಜವೇ?" ಸುಕರಾತ "ಇಲ್ಲ ನಾನು ಶ್ರೇಷ್ಠಜ್ಞಾನಿ ಅಲ್ಲ. ಏಕೆಂದರೆ ನನಗೆ ಎಷ್ಟೋ ಸಂಗತಿಗಳು ಗೊತ್ತಿಲ್ಲ!" ಇದನ್ನು ಕೇಳಿದ ಪಂಡಿತರು ಅತ್ಯಂತ ಸಂತೋಷದಿಂದ ಡೆಲ್ಫಿ ದೇವತೆಯ ಹತ್ತಿರ ಹೋಗಿ ಕೇಳಿದರು- "ಸುಕರಾತನಿಗೆ ಎಷ್ಟೋ ವಿಷಯಗಳು ಗೊತ್ತಿಲ್ಲವೆಂದು ಸ್ವತಃ ಹೇಳುತ್ತಾನೆ-" ಡೆಲ್ಫಿ- "ಹೇಳಿದರೆ ಏನಾಯಿತು?" ಪಂಡಿತರು- "ಅವನೇ ಶ್ರೇಷ್ಠಜ್ಞಾನಿ ಎಂದು ನಿನ್ನೆ ನೀನು ಹೇಳಿದೆಯಲ್ಲ" ಡೆಲ್ಫಿ- "ಈಗಲೂ ಅವನೇ ಶ್ರೇಷ್ಠಜ್ಞಾನಿ ಎಂದು ಹೇಳುತ್ತೇನೆ." ಪಂಡಿತರು- "ಅದು ಹೇಗೆ ಹೇಳುತ್ತಿ?" ಡೆಲ್ಫಿ- "ಅವನು ತನಗೆ ತಿಳಿಯಲಾರದ್ದನ್ನು ತಿಳಿದಿಲ್ಲವೆಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾನೆ. ಆದ್ದರಿಂದ ಅವನೇ ಶ್ರೇಷ್ಠಜ್ಞಾನಿ!" ಡೆಲ್ಫಿ ದೇವತೆಯ ಈ ಮಾತನ್ನು ಕೇಳುತ್ತಲೇ ಪಂಡಿತರ ತಲೆ ಕೆಳಗಾಗಿತ್ತು!" ಏಕೆಂದರೆ ಅವರೆಲ್ಲರೂ ತಿಳಿಯದಿದ್ದರೂ ತಿಳಿದಂತೆ ನಟಿಸುವವರೇ ಆಗಿದ್ದರು! ಇದು ಡಾಂಭಿಕತೆ.

**೨. ಸಾಧನಾ ಪಥ:** (ಕಾಗವಾಡದಲ್ಲಿ ಶ್ರೀ ಗುರುದೇವಾಶ್ರಮದಲ್ಲಿ ನಡೆದ ಪ್ರವಚನದ ಸಾರಸಂಗ್ರಹ ಕೃತಿ)

ಸಾಧನಾ ಪಥ, ಸಫಲತೆಯ ಸಾಧನೆ, ಶರಣರು, ಗುರುಕಾರುಣ್ಯ, ದೇವಾಲಯಗಳು, ಹೃದಯಮಂದಿರ, ಹೃದಯ ಪರಿವರ್ತನೆ, ಸತ್ಯದರ್ಶನ, ಭಕ್ತಿಗೀತೆ, ಆತ್ಮಾನಂದ, ಆನಂದಮಯ ಜೀವನ, ಲೌಕಿಕ ವ್ರತಗಳು, ಜ್ಞಾನದಾಸೋಹ, ಸುರಾಜ್ಯ, ಸೇವಾಧರ್ಮ, ಹೃದಯ ವಿಕಾಸ, ಶಾಂತಿಸಾಧನ, ಪ್ರಪಂಚ ಎತ್ತ ಸಾಗಿದೆ?

**೨.೧ ಸತ್ಯದರ್ಶನ :**

ಚೀನಾ ದೇಶದಲ್ಲಿ ಓರ್ವ ದಾರ್ಶನಿಕ ಗುರುವಿದ್ದ. ಸತ್ಯ ಸಾಕ್ಷಾತ್ಕಾರ ಮಾಡಿಕೊಂಡು ಗುರುವೆಂದು ದೇಶದ ತುಂಬೆಲ್ಲ ಆತನ ಹೆಸರು. ಜಪಾನದ ಉತ್ತರ ಭಾಗದಿಂದ ಓರ್ವ ಮನುಷ್ಯ ಆ ಝೆನ್ ಗುರುವಿನ ಬಳಿಗೆ ಬಂದ. ಆತನ ವಯಸ್ಸು ನಲವತ್ತು. ಸಿರಿ ಸಂಪತ್ತಿಗೇನೂ ಕೊರತೆ ಇರಲಿಲ್ಲ. "ಬುದ್ಧಂ ಶರಣಂ ಗಚ್ಛಾಮಿ" ಎಂದು ಗುರುಗಳಿಗೆ ನಮಿಸಿ ಕುಳಿತ. "ಏನು ವಿಶೇಷ?" ಎಂದು ಗುರುಗಳು ಕೇಳಿದರು.

"ನನಗೆ ಧನ–ಕನಕ, ಸತಿ–ಸುತರು, ಕೀರ್ತಿವಾರ್ತೆ ಯಾವುದಕ್ಕೂ ಕೊರತೆ ಇಲ್ಲ. ಆದರೆ ಒಂದೇ ಒಂದಾಶೆ – ನಿರ್ವಾಣ ಹೊಂದಬೇಕು. ಸತ್ಯದರ್ಶನ ಮಾಡಿಕೊಳ್ಳಬೇಕು. ಆಯುಷ್ಯ ಇರುವುದರಲ್ಲಿ ಅದೊಂದಾದರೆ ನನ್ನ ಜೀವನ ಸಾರ್ಥಕ. ಏನು ಮಾಡಲಿ ಹೇಳಿ ಗುರುಗಳೇ" ಎಂದ ಶಿಷ್ಯ.

"ಬಹಳ ಸುಲಭ. ಮನೆ, ಮಡದಿ, ಮಕ್ಕಳನ್ನು ರಕ್ಷಿಸಿದಷ್ಟು ಕಷ್ಟವಲ್ಲ. ನಿರ್ವಾಣ" ಎಂದರು ಗುರುಗಳು. ಇದನ್ನು ಕೇಳಿ ಸಿರಿವಂತನಿಗೆ ಎಲ್ಲಿಲ್ಲದ ಸಂತಸ. "ಅದು ಹೇಗೆ ಹೇಳಿ ಗುರುಗಳೇ, ನಾನು ಬೇಗ ನಿರ್ವಾಣ ಹೊಂದಬೇಕು" ಎಂದ ಶಿಷ್ಯ.

"ಏನಿಲ್ಲ ಇದೊಂದು ಬಡಿಗೆ ಹಿಡಿ. ನಿನಗೆ ನಿರ್ವಾಣವಾಗುತ್ತದೆ" ಎಂದು ಹೇಳಿ ಐದಡಿ ಮನುಷ್ಯನಿಗೆ ಆರಡಿ ಬಡಿಗೆ ಕೊಟ್ಟರು ಗುರು. ಜಪತಪ ಯೋಗ ಧ್ಯಾನಾದಿಗಳು ಮಾಡಬೇಕಿಲ್ಲ. ಸುಮ್ಮನೆ ಬಡಿಗೆ ಹಿಡಿದರೆ ಮುಕ್ತನಾಗುವುದೆಂದರೆ ಎಂಥ ಆನಂದ! ಆದರೆ ನಿರ್ವಾಣ ಹೇಗಾಗುತ್ತದೆ ಎಂದಾಗುತ್ತದೆ ಎಂದು ಶಿಷ್ಯನೂ ಕೇಳಲಿಲ್ಲ. ಗುರುಗಳೂ ಹೇಳಲಿಲ್ಲ.

ಅಂದಿನಿಂದ ಸಿರಿವಂತ ಕೂತರೆ ನಿಂತರೆ ಬಡಿಗೆ ಹಿಡಿದು ತಿರುಗಾಡಿದ. ಮಕ್ಕಳಾದವು, ಮೊಮ್ಮಕ್ಕಳಾದವು. ಬಡಿಗೆ ಹಿಡಿದೇ ಇದ್ದ. ಸತ್ಯವೇನೋ ಕಾಣಲಿಲ್ಲ. ಇಪ್ಪತ್ತು ವರ್ಷವಾದರೂ ನಿರ್ವಾಣವೇನೂ ದೊರೆಯಲಿಲ್ಲ. ಮೋಸವಾಯಿತೆಂದು ಮುದುಕ ಕ್ರೋಧತಪ್ತನಾದ. ಕುದಿಯುತ್ತಲೇ ಗುರುವಿನ ಬಳಿಗೆ ಬಂದು ಬಡಿಗೆ ಒಗೆದ! ಗುರುಗಳು ಸುಮ್ಮನೇ ನಕ್ಕರು!

"ಇಂದೆಂಥಾ ಮೋಸ ಗುರುಗಳೇ? ಸತ್ಯ ಕಾಣಲಿಲ್ಲ. ನನ್ನ ಜೀವನ ಹಾಳಾಯಿತು" ಎಂದ "ಅವಸರವೇಕೆ? ಕಾಣುತ್ತದೆ ಹಾಗೇ ಹಿಡಿದರು ಬಡಿಗೆ" ಎಂದರು ಗುರುಗಳು. "ಇಪ್ಪತ್ತು ವರ್ಷಗಳಾದವು ಕಂಡಿಲ್ಲವಲ್ಲ." "ಹೀಗೆ ಹಿಡಿದರೆ ಇಪ್ಪತ್ತು ಜನ್ಮವಾದರೂ ನಿನಗೆ ಕಾಣಲ್ಲ ಮೋಕ್ಷವಾಗುವುದಿಲ್ಲ" ಎಂದರು ಗುರುಗಳು.

"ಈ ಬಡಿಗೆಗೆ ಸತ್ಯಕ್ಕೆ ಏನು ಸಂಬಂಧವೆಂದು ನೀನು ಒಂದು ದಿನವೂ ವಿಚಾರಿಸಲಿಲ್ಲ. ಆ ವಿಚಾರ ನಿನಗೆ ಬರಲೆಂದೇ ಈ ಬಡಿಗೆ ನಿನಗೆ ಕೊಟ್ಟೆ, ಈ ಜಿಜ್ಞಾಸೆಗೆ ನೀನು ಬರುವಿ ಎಂದು ದಾರಿ ಕಾಯ್ದೆ. ಶಿಷ್ಯನೇ ಇಪ್ಪತ್ತು ವರ್ಷ ನೀನು ಕತ್ತಲೆಯಲ್ಲಿ ಕಳೆದೆ" ಎಂದರು ಗುರುಗಳು. ಆಗ ಶಿಷ್ಯನ ತಲೆಯಲ್ಲಿ ಅರಿವಿನ ಜ್ಯೋತಿ ಬೆಳಗಿತು!

## ೨.೨ ಲೌಕಿಕ ವ್ರತಗಳು :

ಇಹ-ಪರ ಸಾಧನೆಗಳಲ್ಲಿ ವ್ರತಕ್ಕೆ ಅಗ್ರಗಣ್ಯ ಸ್ಥಾನ. ನಮ್ಮ ಜೀವನದ ಉದ್ದೇಶ ಈಡೇರಲು ನಾವು ಕೈಕೊಳ್ಳುವ ಆವರಣೆಯೇ ವ್ರತ.

ನಮ್ಮ ಲೌಕಿಕ ಜೀವನವು ಸುಖಮಯವಾಗಬೇಕಾದರೆ ನಾವು ಮೂರು ಬಗೆಯ ಸಂಪತ್ತನ್ನು ಪಡೆದಿರಬೇಕಾಗುತ್ತದೆ.

೧) ಶರೀರ (ಆರೋಗ್ಯ) ಸಂಪತ್ತು.

೨) ಆರ್ಥಿಕ ಸಂಪತ್ತು.

೩) ಸದ್‌ಭಾವ ಸಂಪತ್ತು.

**(ಅ.) ಶರೀರ ಸಂಪತ್ತು :** ಜೀವನದಲ್ಲಿ ಏನನ್ನೇ ಸಾಧಿಸಬೇಕಾದರೂ ನಮಗೆ ಶರೀರ ಸಂಪತ್ತು ಅವಶ್ಯವಾಗಿರಬೇಕು. ಅದಕ್ಕಾಗಿಯೇ 'ಶರೀರಮಾಧ್ಯಂ ಖಲು ಧರ್ಮಸಾಧನಂ' ಎಂದಿರುವರು. ಆರೋಗ್ಯವೇ ನಿಜವಾದ ಭಾಗ್ಯ ಮತ್ತು ಸಂಪತ್ತು.

ಇಂಥ ಆರೋಗ್ಯ ಸಂಪತ್ತನ್ನು ಗಳಿಸಲು ನಾವು ತೋಡಬೇಕಾದ ವ್ರತಗಳೆಂದರೆ ೧) ನಾನು ಒಳ್ಳೆಯ ಆಹಾರವನ್ನೇ ಸೇವಿಸುತ್ತೇನೆ. ೨) ಪ್ರತಿ ನಿತ್ಯ ತಪ್ಪದೆ ಯೋಗಾಸನಾದಿ ಯಾವುದೇ ವ್ಯಾಯಾಮವನ್ನು ಮಾಡುತ್ತೇನೆ. ೩) ದುಶ್ಚಟ, ದುರಾಭ್ಯಾಸಗಳಿಂದ ದೂರಿರುತ್ತೇನೆ.

ಈ ರೀತಿಯಾದ ಸಾತ್ವಿಕ ಆಹಾರ-ವಿಹಾರದಿಂದ ನಮ್ಮ ಜೀವನವು ನಿಜವಾಗಿಯೂ ಸುಖಮಯವಾಗುತ್ತದೆ.

**(ಆ.) ಆರ್ಥಿಕ ಸಂಪತ್ತು :**

ನಮ್ಮ ಜೀವನದಲ್ಲಿ ಅನ್ನ, ನೀರು, ಅರಿವೆ, ಅರುವು, ಔಷಧಿ, ಆಶ್ರಯ ಯಾವುದಕ್ಕೂ ಕೊರತೆ ಇರಬಾರದು. ಇದಕ್ಕಾಗಿ ನಾವು ಚನ್ನಾಗಿ ದುಡಿದು ಗಳಿಸಬೇಕು. ಗಳಿಸಿದ್ದನ್ನು ಯೋಗ್ಯವಾಗಿ ಬಳಸಬೇಕು.

ಜೀವನದ ಮೂಲಭೂತ ಆಧಾರವಾದ ಇಂಥ ಆರ್ಥಿಕ ಸಂಪತ್ತನ್ನು ಗಳಿಸಬೇಕಾದರೆ ನಾವು ತೊಡಬೇಕಾದ ವ್ರತಗಳು- ೧) ನನ್ನ ಉಪಜೀವನಕ್ಕೆ ಬೇಕಾಗುವಷ್ಟು ಸಂಪತ್ತು

ಸಂಗ್ರಹವಾಗುವವರೆಗೂ ನಾನು ಕಷ್ಟಪಟ್ಟು ಬೆವರು ಹರಿಸಿ ದುಡಿಯುವದನ್ನು ಬಿಡುವದಿಲ್ಲ. ೨) ನನ್ನ ಮಕ್ಕಳ ಮದುವೆಯಾಗುವವರೆಗೆ, ಶಿಕ್ಷಣ ಮುಗಿಯುವವರೆಗೆ, ಹಿರಿಯರು ಅಥವಾ ನಾನು ಮಾಡಿದ ಸಾಲ ತೀರುವವರೆಗೆ, ನನ್ನ ಬಂಧು-ಮಿತ್ರರೆಲ್ಲರೂ ಸುಖಿಗಳಾಗುವವರೆಗೆ, ನಾನು ಬದುಕಿರುವವರೆಗೆ ಕುಡಿಯುದಿಲ್ಲ, ಲೆತ್ತ ಆಡುವುದಿಲ್ಲ, ಸೇದುವುದಿಲ್ಲ ಎಂಬ ಸರಳ ವ್ರತಗಳನ್ನು ತೊಡಬೇಕು.

**(ಇ.) ಸದ್‌ಭಾವನಾ ಸಂಪತ್ತು :**

ನಮ್ಮ ದೈಹಿಕ, ಆರ್ಥಿಕ ಸಂಪತ್ತನ್ನು ಸುಖಮಯ ಜೀವನವನ್ನು ಜನ ಮೆಚ್ಚಿಕೊಳ್ಳಬೇಕು; ನಮ್ಮನ್ನು ಪ್ರೀತಿಸಬೇಕು, ಜನ ಪ್ರಶಂಸಿಸಬೇಕು ಎಂಬುದೇ ನಾವು ಗಳಿಸಬೇಕಾದ ಮೂರನೆಯ ಹಾಗೂ ಮಹತ್ವದ ಭಾವನಾ ಸಂಪತ್ತು.

ನಾವು ಮೊದಲು ನಮ್ಮ ನೆರೆಹೊರೆಯವರನ್ನು, ಬಂಧು-ಮಿತ್ರರನ್ನು ಗೌರವಾದರಗಳಿಂದ ಕಾಣಬೇಕು! ಇಂಥ ಸದ್‌ಭಾವನಾ ಸಂಪತ್ತನ್ನು ಗಳಿಸಲು ನಾವು ಕೈಕೊಳ್ಳಬೇಕಾದ ಕೆಲವು ವ್ರತಗಳೆಂದರೆ- ೧) ಕುಟುಂಬದವರೊಂದಿಗೆ, ಬಂಧು-ಮಿತ್ರರೊಂದಿಗೆ ನಾನೆಂದೂ ಕೋಪಿಸಿಕೊಳ್ಳುವುದಿಲ್ಲ. ೨) ಯಾರನ್ನೂ ನಿಂದಿಸುವುದಿಲ್ಲ. ೩) ಯಾರ ನಿಂದೆಯನ್ನೂ ಕೇಳುವುದಿಲ್ಲ. ೪) ಯಾರನ್ನೂ ದ್ವೇಷಿಸುವುದಿಲ್ಲ. ಯಾಕೆಂದರೆ ಸಮಾಜ ಜೀವಿಯಾದ ನಾನು ಎಲ್ಲರೊಂದಿಗೆ ಕೂಡಿ ಬಾಳುವುದರಲ್ಲಿ ನನ್ನ ಸೌಖ್ಯ ಅಡಗಿದೆ. ೫) ಕೊನೆಯದಾಗಿ ಎಲ್ಲರೂ ನನ್ನವರು ನಾನು ಎಲ್ಲರವನು ಎಂದು ಹದುಳತೆಯಿಂದ ಬದುಕುವುದೇ ಭಾವನಾ ಸಂಪದಭಿವೃದ್ಧಿಯ ಸುವರ್ಣ ಸೂತ್ರವಾಗಿದೆ. ಇದರಿಂದ ನಮ್ಮ ಜೀವನ ಸುಖಮಯವಾಗದೆ ಇರದು!

**೨.೩ ಹೃದಯ ವಿಕಾಸ :**

ಸುಕರಾತ ಅಥೆನ್ಸ್ ದೇಶದ ಮಹಾನ್ ಸಂತ. ಆತನ ವಾಣಿ ಕೇಳಿದರೆ ದೇಶವೇ ತಲೆಬಾಗುತ್ತಿತ್ತು. ಅಂಥ ಜ್ಞಾನಿ. ಆದರೇನು, ಆತನಿಗೆ ಇರಲಿಕ್ಕೊಂದು ಒಳ್ಳೆಯ ಮನೆ ಇರಲಿಲ್ಲ. ಅಂದು ಹಬ್ಬ. ಊರೆಲ್ಲ ಶೃಂಗಾರಗೊಂಡಿದೆ. ಸುಕರಾತನ ಮನೆಗೆ ಮಾತ್ರ ಕಟ್ಟಿದಾಗಿನಿಂದ ಸುಣ್ಣವಿಲ್ಲ ಬಣ್ಣವಿಲ್ಲ. ಹಬ್ಬದ ಶೃಂಗಾರ ನೋಡಲು ಸಂತ ಹೊರಬಂದ. ಒಂದಕ್ಕಿಂತ ಒಂದು ಸುಂದರವಾದ ಮನೆಗಳು. ನೋಡಿ ಸಂತಸಪಡುತ್ತ ನಡೆದಿದ್ದ. ಊರೆಲ್ಲ ಸುಕರಾತನ ಶಿಷ್ಯರು!

ಆತ ನಮ್ಮ ಮನೆಯೊಳಗೆ ಬರಲೆಂದು ಎಲ್ಲರೂ ಬಯಸುವವರೇ! ಆದರೆ ಸಂತ ಎಲ್ಲೂ ನಿಲ್ಲದೆ ಸುಮ್ಮನೆ ಹೊರಟಿದ್ದ. ಅಲ್ಲೊಬ್ಬ ಆಗರ್ಭ ಸಿರಿವಂತ. ಸುಕರಾತನ ಮೇಲೆ ಘನಪ್ರೇಮ. ಮನೆಯೊಳಗೆ ಬರಲೇಬೇಕು ಹಠ ಹಿಡಿದ. ಸುಕರಾತ ಒಳನಡೆದ. ಆತ ಸದ್ಗುರುಗಳನ್ನು ಸತ್ಕರಿಸಿ ನುಡಿದ, "ಗುರುಗಳೇ, ನಿಮ್ಮ ಕರುಣೆಯಿಂದ ನನಗೇನು ಕೊರತೆಯಿಲ್ಲ, ಅಲ್ಪ ಕಾಣಿಕೆಯೆಂದು ತಾವೀ ಮನೆಯನ್ನು ಸ್ವೀಕರಿಸಬೇಕು" ಎಂದು ಪ್ರಾರ್ಥಿಸಿದ. ಆಗ ಸುಕರಾತ ನುಡಿದ "ನಾನು ನಿಮ್ಮ ಮನೆ ನೋಡಿ, ಸಂತಸಪಡಲು ಬಂದವನೇ ವಿನಃ ತೆಗೆದುಕೊಂಡು ಹೋಗಲಲ್ಲ!"

ಶಿಷ್ಯನಿಗೆ ಪರಮಾಶ್ಚರ್ಯ! "ಗುರುಗಳೇ ನಿಮಗೆ ಇಂಥ ನಿರಾಶೆ, ನಿರ್ಮೋಹ ಪ್ರಾಪ್ತವಾದುದು ಹೇಗೆ? ಎಂದು ಕೇಳಿದ. ಸುಕರಾತ ಉತ್ತರಿಸಿದ, "ನಮ್ಮ ಹೃದಯ ವಿಕಾಸವಾಗಬೇಕು. ಎಂದರೆ ನಾವು ಒಳಗೆ ಸಿರಿವಂತರಾಗಬೇಕು. ಆಗ ನಾವು ಹೊರಗೆ ಎಷ್ಟೇ ಬಡವರಾಗಿದ್ದರೂ ಏನೊಂದು ಬೇಕೆನಿಸುದಿಲ್ಲ. ನಿತ್ಯ ತೃಪ್ತರಾಗಿರುತ್ತೇವೆ!" ಇಂಥ ಹೃದಯ ವೈಶಾಲ್ಯ ಸುಲಭ ಸಾಧ್ಯವಲ್ಲ.

## ೩. ಬದುಕು ಒಂದು ಯೋಗ :

ಪ್ರಾರ್ಥನೆ, ಸಂತೃಪ್ತಿಯ ಕಿರೀಟ, ಜ್ಞಾನದ ಕಲಶಗಳು, ಜೀವಜ್ಯೋತಿ, ಸಂಗ–ನಿಸ್ಸಂಗ ಮನಸ್ಸು, ಬದುಕುವ ಕಲೆ, ಬದುಕೊಂದು ಖೋ–ಖೋ ಆಟ, ಬದುಕಿನ ಸಾರ್ಥಕತೆ, ನಿಜವಾದ ಧೀರ, ಜೀವನಯೋಗ, ವಿವೇಕದ ಸಾರಥ್ಯ, ಮೋಹದ ಪರದೆ, ಸಾಧನೆಯ ಸೂತ್ರ, ಹಾವಸೆ ಶಾಶ್ವತ ಸಂಪತ್ತು, ಪರವಸ್ತು, ದೇವರ ಹುಡುಕಾಟ, ನಿತ್ಯ–ಸತ್ಯ, ದೇವರ ಮನೆ, ಜೀವನದ ಮಹತ್ವ, ಚೇತನ, ಒಂದು ಹಿಡಿ ಮಣ್ಣು, ಶ್ರೇಷ್ಠತೆ, ವಿಪರ್ಯಯ ಜ್ಞಾನ, ಶಕ್ತಿಯ ಸದ್ಬಳಕೆ, ಒರತೆಯ ಸಂದೇಶ, ಸತ್ಯಧರ್ಮ, ಮನೋಬಲ, ತಿಳುವಳಿಕೆಯ ಕೊರತೆ, ಸ್ವಾಂತಿಕೆಯ ಬದುಕು, ಆಕರ್ಷಣೆ, ಎತ್ತಸಾಗಿದೆ ನಮ್ಮ ಪ್ರಗತಿ?, ಅಂತರ್ವಾಣಿ, ಶ್ರೀಮಂತ ಭಿಕ್ಷುಕರು, ಕೀಳರಿಮೆ ಕಿತ್ತೆಸೆ, ಜಗತ್ತು ತ್ರಿಗುಣಾತ್ಮಕ, ಹಗಲು ಕಂಡ ಕಮರಿಯ ಇರುಳು ಬೀಳುವರೆ?, ತಾಳ್ಮೆ, ಅಪಕಾರ ಎಸಗದಿರು, ಜಗತ್ತೊಂದು ಪಾಠಶಾಲೆ.

**೩.೧ ಪ್ರಾರ್ಥನೆ :**

ಓ ದೇವರೇ...... ನಮ್ಮ ಕಿವಿಗಳು ಸ್ವಸ್ಥವಾಗಿರಲಿ. ಶುಭವಾದುದನ್ನೇ ಕೇಳುವಂತಾಗಲಿ. ಯಾವುದನ್ನು ಕೇಳಿದರೆ ಮತಿ-ಮನಗಳಲ್ಲಿ ಬೆಳಕು ಮೂಡುವುದೋ ಅಂತಹ ಮಂತ್ರದಂತಹ ಮಾತುಗಳನ್ನು, ಹಿತವಾದ ದನಿಗಳನ್ನು ಆಲಿಸುವಂತಾಗಲಿ.

ಭಗವಂತನೇ ನೀನು ಕ್ರಿಯಾರೂಪದಿ ವ್ಯಾಪಕ. ನಿನ್ನ ಲೀಲೆ ಅದ್ಭುತ. ಕ್ಷಣ-ಕ್ಷಣಕ್ಕೂ ವಿಶ್ವದಲ್ಲಿ ವೈವಿಧ್ಯತೆಯನ್ನು ಪಸರಿಸುತ್ತ, ಬಗೆಬಗೆಯ ರೂಪ ಕೊಡುತ್ತ, ಬಯಲಲ್ಲಿ ಮೋಡಗಳಿಗೆ ಬಣ್ಣ ಬಳಿಯುತ್ತಿರುವಿ, ನಮ್ಮ ಕಣ್ಣುಗಳು ನಿನ್ನ ಈ ಸೌಂದರ್ಯವನ್ನೆ ಕಾಣುವಂತಾಗಲಿ.

ನೀನು ಕರುಣಿಸಿರುವ ಈ ದೇಹ-ಅವಯವ-ಇಂದ್ರಿಯಗಳು ನೂರು ವರುಷ ಸ್ವಸ್ಥವಾಗಿರಲಿ. ಶ್ರೇಯಸ್ಕರವಾದುದನ್ನೇ ಗ್ರಹಿಸಲಿ. ನಮ್ಮ ಇಚ್ಚಾಶಕ್ತಿ, ಕ್ರಿಯಾಶಕ್ತಿ, ಭಾವಶಕ್ತಿ ಮತ್ತು ಜ್ಞಾನ ಶಕ್ತಿಗಳು ವೃದ್ಧಿಸಲಿ. ನಮ್ಮೆಲ್ಲರ ಬಾಳು ಅರಳಲಿ, ದಿವ್ಯವಾಗಲಿ. ಇದೇ ನಮ್ಮ ಪ್ರಾರ್ಥನೆ.

**೪. ಜ್ಞಾನ-ವಿಜ್ಞಾನಯೋಗ** : (ಜಮಖಂಡಿ ಮಹಾನಗರದಲ್ಲಿ ೨೦೧೧ ರ ಆಗಸ್ಟ್ ೧೬ ರಿಂದ ಒಂದು ತಿಂಗಳವರೆಗೆ ನಡೆದ ಪ್ರವಚನದ ಸಾರಸಂಗ್ರಹ ಕೃತಿ)

ಜೀವನದಿ, ಜ್ಞಾನಾಸಕ್ತಿ, ಅಂತರಂಗದ ಹೋರಾಟ, ಸಾಧನಾತ್ರಯ, ಜ್ಞಾನ-ವಿಜ್ಞಾನ, ಜೀವ ಜಗಮೂಲ, ಸೃಷ್ಟಿ-ಸೃಷ್ಟಿಕರ್ತ, ಪ್ರಸಾದ ದೃಷ್ಟಿ, ಜೀವದೇವ, ತ್ಯಾಗ ತಪಸ್ಸು, ಸನಾತನ ಸತ್ಯ, ಪಂಚಬಲ, ಹೃದಯ ಧರ್ಮ, ತ್ರಿಗುಣಾತೀತ, ನಿಜರೂಪ, ಮೋಹಮಯ ಜಗತ್ತು, ಮಾಯಾಪುತ್ರರು.

**೪.೧ ಯೋಗಿಯ ಮೂರು ಲಕ್ಷಣಗಳೆಂದರೆ:**

೧) ಆಸಕ್ತಿ ೨) ತನ್ಮಯತೆ ೩) ದೃಢನಿಶ್ಚಯ

**(ಅ.) ಆಸಕ್ತಿ** : ಆಸಕ್ತಿಗೆ ಅಕ್ಕಮಹಾದೇವಿಯವರ ಜೀವನವೇ ದಿವ್ಯ ಸಾಕ್ಷಿ. ದೇವನಲ್ಲಿ ಅದೆಂಥ ಅಗಾಧವಾದ ಪ್ರೇಮ.

ಗಿರಿಯಲಲ್ಲದೆ ಹುಲ್ಲು ಮೊರಡೆಯಲ್ಲಾಡುವುದೇ ನವಿಲು?

ಕೊಳನಲ್ಲದೆ ಕಿರುವಳ್ಳುಕ್ಕೆಳಸುವುದೆ ಹಂಸೆ?

ಮಾಮರ ತಳಿತಲ್ಲದೆ ಸ್ವರಗೈಯುವುದೆ ಕೋಗಿಲೆ

ಪರಿಮಳವಿಲ್ಲದೆ ಪುಷ್ಪಕ್ಕೆಳಿಸುವುದೆ ಭ್ರಮರ

ಎನ್ನದೇವ ಚನ್ನಮಲ್ಲಿಕಾರ್ಜುನಗಲ್ಲದೆ ಅನ್ಯಕ್ಕೆಳಸುವುದೇ

ಎನ್ನ ಮನ? ಪೇಳಿರೇ ಕೆಳದಿಯರಿರಾ?

ನವಿಲು ಗಿರಿಯಲ್ಲಲ್ಲದೆ ಹುಲ್ಲ ಮೊರಡಿಯಲ್ಲಿ ಎಂದೂ ಆಡುವುದಿಲ್ಲ. ಕೋಗಿಲೆ ಮಾಮರವಿಲ್ಲದೆ ಹಾಡುವುದಿಲ್ಲ. ಹಂಸವು ಸರೋವರವಲ್ಲದೆ ಕಿರುಹಳ್ಳಕ್ಕೇ ಹೋಗುವುದಿಲ್ಲ. ಹಾಗೇ ಅಕ್ಕಮಹಾದೇವಿ ತನ್ನ ಮನಸ್ಸು ಮಹಾದೇವನಲ್ಲದೆ ಅನ್ಯ ವಿಷಯಕ್ಕೆ ಎಳೆಸುವುದಿಲ್ಲ ಎನ್ನುತ್ತಾರೆ. ಜೇನು ಹುಳವಾದರೂ ಎದ್ದರೂ ಕೂತರೂ ಮಕರಂದವನ್ನೇ ಧ್ಯಾನಿಸುತ್ತದೆ. ಇದೇ ನಿಜವಾದ ಆಸಕ್ತಿ!

<u>(ಆ.) ತನ್ಮಯತೆ</u> : ತನ್ಮಯತೆಗೆ ಮಕ್ಕಳ ಜೀವನವೇ ಸಾಕ್ಷಿ. ಮನೆಯಲ್ಲಿ ನೂರು ಆಟಿಗೆಗಳಿದ್ದರೂ ತಮಗಿಷ್ಟವಾದ ಒಂದರಲ್ಲಿಯೇ ಅವರು ತನ್ಮಯವಾದರೆ ಪ್ರಪಂಚವನ್ನೇ ಮರೆಯುತ್ತಾರೆ.

<u>(ಇ.) ದೃಢ ನಿಶ್ಚಯ</u> : ಅದೇ ರೀತಿ ಮೂರನೆಯದಾದ ಯೋಗದ ಲಕ್ಷಣವೆಂದರೆ ದೃಢನಿಶ್ಚಯ! ತಿಲಮಾತ್ರವೂ ಸಂಶಯವಿಲ್ಲದೆ ಸಾಧಕನು ತನ್ನ ಮಾರ್ಗದಲ್ಲಿ ಮುನ್ನಡೆದರೆ ಅವನು ನಿಶ್ಚಿತವಾಗಿಯೂ ತನ್ನ ಗುರಿಯನ್ನು ತಲುಪುತ್ತಾನೆ. ಪರಮಶಾಂತಿಯನ್ನು ಪಡೆಯುತ್ತಾನೆ.! ಅದೇ ಜೀವನ್ಮುಕ್ತಿ. ಇಂಥ ಪರಮೊನ್ನತ ಪದವಿಯನ್ನು ಕರುಣಿಸುವ ಆಸಕ್ತಿ, ತನ್ಮಯತೆ, ದೃಢನಿಶ್ಚಯ ಇವುಗಳಿಗೆ ಸಾಧನಾತ್ರಯ ಎನ್ನುತ್ತಾರೆ.

<u>೪.೨ ಜೀವ ಜಗಮೂಲ</u> : ಡೈಯೋಜಿನಸ್ ಗ್ರೀಸ್‌ದೇಶದ ಮಹಾನ್ ಸಂತ ನಮ್ಮ ದೇಶದ ಸರ್ವಜ್ಞನಂತೆ ಪರಮಾನುಭವಿ! ಒಂದು ದಿನ ತನ್ನ ಎದುರಿಗೆ ಬೂದಿಯ ಮೂರು ಗುಂಪು ಇಟ್ಟುಕೊಂಡು ಕುಳಿತ್ತಿದ್ದ. ಯಾರೋ ಕೇಳಿದರು. "ಇದೇನಿದು?" ಡೈಯೋಜಿನಸ್ ಹೇಳಿದರು" ಸಿರಿವಂತ, ಪಂಡಿತ ಹಾಗೂ ಕಾರ್ಮಿಕ ಈ ಮೂರು ಜನರ ದೇಹದ ಬೂದಿ ಈ ಮೂರು ಗುಂಪಿನಲ್ಲದೆ. ಬದುಕಿರುವವರೆಗೆ ಇವರಾರೂ ಒಬ್ಬರನ್ನು ಒಬ್ಬರು ಸೇರಲಿಲ್ಲ. ಈಗ ನೋಡಿದರೆ ಎಷ್ಟು ಒಂದಾಗಿದ್ದಾರೆ. ಇದೇ ಏಕತೆ ಬದುಕಿರುವಾಗ ಬಂದರೆ ಅದೆ ಆಧ್ಯಾತ್ಮಿಕ ಬದುಕು!"

ನಿಜವಾಗಿಯೂ ಜ್ಞಾನಿಗಳಾದವರು ಬದುಕಿರುವಾಗಲೇ ಜೀವನದಲ್ಲಿ ಸಮತೆ ಶಾಂತಿ ದಯೇ ಧರ್ಮವನ್ನು ಸಾಧಿಸಿರುತ್ತಾರೆ.

**೪.೩ ಸೃಷ್ಟಿ–ಸೃಷ್ಟಿಕರ್ತ** : ವಿದೇಶದ ಓರ್ವ ಜಗತ್‌ಪ್ರಸಿದ್ಧ ಚಿತ್ರ ಕಲಾವಿದ ಹೇಳುತ್ತಾನೆ– "ದೇವನೇ ನಿಜವಾದ ಕಲಾಗುರು! ನಾವೆಲ್ಲರು ಅವನ ವೈಶ್ವಿಕ ಕಲೆಯ ಅನುಕರಣೆ ಮಾಡುತ್ತೇವೆ. ಸೂರ್ಯೋದಯ, ಸೂರ್ಯಾಸ್ತದ ಅಮೃತಗಳಿಗೆಯಲ್ಲಿ ಸೂರ್ಯನು ತನ್ನ ಕಿರಣ ಕುಂಚವನ್ನು ಹಿಡಿದು ಅನಂತ ಆಗಸದ ಪಟದಲ್ಲಿ ಕ್ಷಣ ಕ್ಷಣವೂ ಬರೆಯುವ ರಂಗುರಂಗಿನ ಚಿತ್ರಗಳು ನಿತ್ಯನೂತನ !!" ಹೌದು, ಸಮಸ್ತ ಸೃಷ್ಟಿಯೇ ಸೌಂದರ್ಯದ ಸಾಗರ!

**೪.೪ ಪಂಚಬಲ** : ಸ್ಟೆಫನ್ ಹಾಫಕಿನ್‌ರು ಈ ಯುಗದ ಅತಿದೊಡ್ಡ ವಿಜ್ಞಾನಿ. ಈ ಜಗತ್ತಿನ ಉತ್ಪತ್ತಿಯ ಮೂಲವನ್ನು ಸಂಶೋಧಿಸುತ್ತಿರುವ ಶ್ರೇಷ್ಠ ವಿಜ್ಞಾನಿ. ಆದರೆ ಅವರ ದೇಹ ಅತ್ಯಂತ ದುರ್ಬಲ. ಕಳೆದ ಮೂವತ್ತು ವರ್ಷಗಳಿಂದ ಅವರು ಸರಿಯಾಗಿ ನಡೆದಿಲ್ಲ, ನುಡಿದಿಲ್ಲ. ಹಿಡಿದಿಲ್ಲ. ಅವರು ಹೇಳುವುದನ್ನು ಗ್ರಹಿಸಿ, ಸಂಗ್ರಹಿಸುತ್ತವೆ. ಅವರು ವಿಜ್ಞಾನದ ವಿಷಯದಲ್ಲಿ ಬರೆದಿರುವ ಸಂಶೋಧನಾತ್ಮಕ ಗ್ರಂಥಗಳು. ಬಿಸಿ–ಬಿಸಿ ದೋಸೆಯಂತೆ ರುಚಿ ರುಚಿಯಾದ ಬ್ರೆಡ್ಡಿನಂತೆ ಬಿಸ್ಕಿಟಿನಂತೆ ಮಾರಾಟವಾಗುತ್ತವೆ. ಜಗತ್ತಿನ ವೈಜ್ಞಾನಿಕ ಕ್ಷೇತ್ರವನ್ನು ಸಿರಿವಂತಗೊಳಿದ ಸ್ಟಿಫನ್‌ಸನ್ ಹಾಫರನ್‌ರ ಮನೋಬಲವು ನಮಗೆಲ್ಲರಿಗೂ ಆದರ್ಶ.

**೪.೫ ಹೃದಯ ಧರ್ಮ**: ಜಗತ್‌ಪ್ರಸಿದ್ಧ ವಿಜ್ಞಾನಿ ಐನ್‌ಸ್ಟೀನ್‌ರು ಹೇಳುವಂತೆ ಅನಂತವಾದ ಪರಮಸತ್ಯದ ಪ್ರಾಮಾಣಿಕ ಪ್ರಶಂಶೆಯೇ ಧರ್ಮವೆನಿಸುತ್ತದೆ. ಆ ಪರಮಸತ್ಯದ ಅಭಿವ್ಯಕ್ತಿಯೇ ಈ ಜಗತ್ತಾಗಿರುವುದರಿಂದ ಸತ್ಯದ ಅರಿವು ಜಗತ್ತಿನ ಜ್ಞಾನದ ಹಿನ್ನೆಲೆಯಲ್ಲಿ ಬದುಕನ್ನು ಕಟ್ಟಿಕೊಳ್ಳುವುದೇ ಜ್ಞಾನವಿಜ್ಞಾನಯೋಗವಾಗುತ್ತದೆ.

**೪.೬ ತ್ರಿಗುಣಾತೀತ** : ಈ ಜಗತ್ತಿನ ಜನರನ್ನು ಸತ್ವ, ರಜ, ತಮೋ ಗುಣಗಳಿಗೆ ಅನುಸರಿಸಿ ಮೂರು ಗುಂಪುಗಳಲ್ಲಿ ವಿಂಗಡಿಸಬಹುದು. ೧) ಸಾತ್ವಿಕರು, ೨) ರಾಜಸಿಕರು, ೩) ತಾಮಸಿಕರು. ಅಹಿಂಸಾದಿ ಸದ್ಗುಣಗಳಲ್ಲಿ ಆಸಕ್ತಿ ಉಳ್ಳವರು ಸಾತ್ವಿಕರು. ಕಾಮ ಕ್ರೋಧಾದಿ ಗುಣಗಳಲ್ಲಿ ಆಸಕ್ತಿವುಳ್ಳವರು ರಾಜಸಿಕರು. ವ್ಯಾಮೋಹ ಉನ್ಮಾದಾದಿ ತಾಮಸಿಕ ಗುಣಗಳಲ್ಲಿ ಆಸಕ್ತಿ ಉಳ್ಳವರು ತಾಮಸಿಕರು.

ಸಾತ್ವಿಕರು ಸಮಾಧಾನಿಗಳು, ರಾಜಸಿಕರು ಕ್ರಿಯಾಶೀಲರು ತಾಮಸಿಕರು ಮಂದ ಪ್ರವೃತ್ತಿಯವರು. ಕವಿ ಕಲಾವಿದರಾಗಿ, ಸಾಹಿತಿ ತತ್ತ್ವಜ್ಞಾನಿಯಾಗಿ ಜೀವನದಲ್ಲಿ ಏನಾದರೊಂದು ಅಲೌಕಿಕ ಆಧ್ಯಾತ್ಮಿಕ ಸಾಧನೆ ಮಾಡಬೇಕೆಂಬ ಅದಮ್ಯ ಹಂಬಲವುಳ್ಳವರು ಸಾತ್ವಿಕರು.

ಭೌತಿಕವಾದ ಸಿರಿ–ಸಂಪತ್ತನ್ನು ಗಳಿಸಿ, ಐಷಾರಾಮದ ಜೀವನವನ್ನು ಸಾಗಿಸುತ್ತ ರಾಜ ಮಹಾರಾಜರಂತೆ ಇರಬೇಕೆನ್ನುವರು ರಾಜಸಿಕರು, ಜೀವನದಲ್ಲಿ ಏನು ಗಳಿಸಿ ಏನು ಮಾಡುವುದಿದೆ, ಉಂಡು, ತಿಂದು, ಆರಾಮಾಗಿರೋಣ ಎನ್ನುವರು ತಾಮಸಿಕರು.

ಬರ್ಟಂಡ್‌ರಸ್ಸೆಲ್ ಎಂಬ ವಿದೇಶದ ತತ್ತ್ವಜ್ಞಾನಿ. "ಆಲಸ್ಯತನದ ಪ್ರಶಂಸೆಯಲ್ಲಿ" ಎಂಬ ತಮ್ಮ ಗ್ರಂಥದಲ್ಲಿ ತಾಮಸಿಕ ಪ್ರವೃತ್ತಿಯವರನ್ನು ತುಂಬಾ ಕೊಂಡಾಡಿದ್ದಾರೆ. ನಾವು ಈ ಲೋಕಕ್ಕೆ ಬಂದದ್ದು ಬರೀ ಗಳಿಸಲು ಉಳಿಸಲು ಅಲ್ಲ. ಒಂದಿಷ್ಟು ಅನುಭವಿಸಿ ಆನಂದಿಸಲು ಎಂದು ಅವರ ಗ್ರಂಥದ ಸಾರಾಂಶವಾಗಿದೆ.

ಪ್ರತಿಯೊಬ್ಬರಲ್ಲಿಯೂ ಸತ್ವ, ರಜ, ತಮ ಈ ಮೂರು ಗುಣಗಳು ಇರುತ್ತವೆ. ಅದರಲ್ಲಿ ಯಾವುದಾದರೂ ಒಂದು ಗುಣಪ್ರಧಾನವಾಗಿರುತ್ತದೆ. ಬೆಳಿಗ್ಗೆ ಎದ್ದ ಕೂಡಲೆ ಎಲ್ಲರೂ ಶಾಂತರಾಗೇ ಇರುತ್ತಾರೆ. ಅದೇ ಸಾತ್ವಿಕ ಗಣ. ಮಧ್ಯಾಹ್ನ ತುಂಬಾ ಕ್ರೀಯಾಶೀಲರಾಗಿರುತ್ತಾರೆ. ಅದೇ ರಾಜಸಿಕ ಗುಣ. ರಾತ್ರಿ ದಣಿದು ನೆಲ ಹಿಡಿದುಬಿಡುತ್ತಾರೆ. ಅದೇ ತಾಮಸಿಕತೆ.

**೪.೭ ನಿಜರೂಪ** : ಈ ಜಗತ್ತು ತ್ರೀಗುಣಾತ್ಮಕವಾಗಿದೆ. ಸತ್ವ, ರಜ, ತಮ ಈ ಮೂರು ಗುಣಗಳೇ ಈ ಜಗತ್ತಿಗೆ ಮೂಲಾಧಾರ. ಈ ಜಗತ್ತಿನ ಚರಾಚರ ವಸ್ತುಗಳೆಲ್ಲವೂ ಈ ಮೂರು ಗುಣ ವರ್ಣದಿಂದಲೇ ಆಗಿವೆ.

ಸತ್ವರಜತಮಗಳಲ್ಲಿ ಕ್ರಮವಾಗಿ ಬೆಳಕು, ಕ್ರಿಯೆ, ಜಡತ್ವ ಇದೆ. ತ್ರಿಗುಣಾತ್ಮಕವಾದ ಈ ಪ್ರಪಂಚದ ಎಲ್ಲ ವಸ್ತುಗಳಲ್ಲಿರುವ ಪರಮಸತ್ಯ ಒಂದೇ ಆಗಿದೆ.

**೪.೮ ಮೋಹಮಯ ಜಗತ್ತು** : ಸತ್ವ, ರಜ, ತಮ ಈ ಮೂರು ಗುಣಗಳ ಸಂಘಾತ ಅಥವಾ ಸಮ್ಮಿಶ್ರಣದಿಂದ ಈ ಜಗತ್ತು ಆಗಿದೆ. ಈ ಗುಣತ್ರಯಗಳ ಶಕ್ತಿಯ ಮೇಲೆ ಈ ಜಗತ್ತು ನಿಂತಿದೆ.

ಪ್ರತಿಯೊಬ್ಬರಲ್ಲಿಯೂ ಈ ಮೂರುಗುಣಗಳು ಇದ್ದೇ ಇರುತ್ತವೆ. ಅದರಲ್ಲಿ ಯಾವುದಾದರೂ ಒಂದು ಗುಣ ಅಧಿಕವಾಗಿದ್ದು ಉಳಿದೆರಡು ಗುಣಗಳು ಗೌಣವಾಗಿರುತ್ತವೆ. ಅಧಿಕವಾಗಿರುವ ಗುಣಕ್ಕೆ ಅನುಸರಿಸಿ ಅವರು ಆ ಪ್ರಕೃತಿಯವರೆಂದು ಗುರುತಿಸಲ್ಪಡುತ್ತಾರೆ.

ತ್ರಿಗುಣಾತ್ಮಕವಾಗಿರುವ ಈ ಮಾಯಾಮೋಹದ ಬಲೆಯಿಂದ ಪಾರಾಗುವುದು ಅಷ್ಟು ಸುಲಭವಲ್ಲ. ಆದರೆ ಯಾರು ಪರಮಸತ್ಯ ಪರಮಾತ್ಮನಿಗೆ ಶರಣು ಹೊಗುವರೋ ಅವರನ್ನು ಮಾತ್ರ ಪರಮಾತ್ಮನು ಎತ್ತಿಕೊಂಡು ಕಾಪಾಡುತ್ತಾನೆಂದು ಭಗವಂತನು ನೇರವಾಗಿ ಹೇಳುತ್ತಾನೆ.

ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ।

ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ॥

ಗೀತಾ ೧೪ (೭)

**೪.೯ ಮಾಯಾಪುತ್ರರು** : ನಮ್ಮ ಬದುಕು, ನಮ್ಮ ಭಾವನೆ, ವಿಚಾರ, ಕ್ರಿಯೆಗಳಿಂದ ರೂಪುಗೊಳ್ಳುತ್ತದೆ. ಈ ಮೂರನ್ನು ಬೇರ್ಪಡಿಸಲಾಗದು. ಇವು ಮೂರೂ ಸುಂದರವಾದರೆ ನಮ್ಮ ಬದುಕು ಸುಂದರವಾಗುತ್ತದೆ. ನಮ್ಮ ಬದುಕನ್ನು ಸಮೃದ್ಧಗೊಳಿಸುವಂಥ ಕ್ರಿಯೆಗಳು, ಮಧುರಗೊಳಿಸುವಂಥ ಭಾವನೆಗಳು, ಸಿರಿವಂತಗೊಳಿಸುವಂಥ ವಿಚಾರಗಳು, ನಮ್ಮಲ್ಲಿರಬೇಕು. ಭಾವ, ಬುದ್ಧಿ, ಕ್ರಿಯೆಗಳಿಂದ ಕೂಡಿರುವ 'ನಾನು ಯಾರು?' ಎಂದು ತಿಳಿಯುವುದು ಜ್ಞಾನ. ನನ್ನ ಭಾವ, ಬುದ್ಧಿ, ಕ್ರಿಯೆಗಳಿಗೆ ಆಶ್ರಯವಾಗಿರುವ 'ಈ ದೇಹ, ಈ ಜಗತ್ತು ಏನು? ಎಂದು ಅರಿಯುವುದು ವಿಜ್ಞಾನ. ಈ ಜ್ಞಾನ ಹಾಗೂ ವಿಜ್ಞಾನದ ಹಿನ್ನೆಲೆಯಲ್ಲಿ ಸದ್ಭಾವ, ಸದವಿಚಾರ, ಸತ್ಕ್ರಿಯಗಳ ಮೂಲಕ ದಿವ್ಯವಾದ ಭವ್ಯವಾದ ಬದುಕನ್ನು ಕಟ್ಟಿಕೊಳ್ಳುವುದೇ ಜ್ಞಾನ-ವಿಜ್ಞಾನಯೋಗ!

**೫. ಯುವಕರು ಹಾಗೂ ದೇಶಸೇವೆ** : (ಬೀದರದಲ್ಲಿ ನಡೆದ ಪ್ರವಚನಗಳ ಸಾರಸಂಗ್ರಹ ಕೃತಿ)

ಯುವಕರು ಹಾಗೂ ದೇಶಸೇವೆ ಎಂಬ ಅಮೂಲ್ಯಕೃತಿ ನಮ್ಮ ಯುವಜನಾಂಗದ ಬಗ್ಗೆ ದೇಶ ಭಕ್ತಿಯ ಬಗ್ಗೆ ಬಿಂಬಿಸುತ್ತದೆ.ಈ ದೇಶಕ್ಕೆ ಸಾವಿರಾರು ವರುಷಗಳ ಇತಿಹಾಸವಿದೆ.

ಇಲ್ಲಿಯ ಸಾಹಿತ್ಯ, ಸಂಸ್ಕೃತಿ, ಕಲೆ, ಆಧ್ಯಾತ್ಮಿಕತೆ ವಿಶ್ವಮಾನ್ಯವಾಗಿದೆ. ಭಾರತೀಯರೆಲ್ಲರು ಅನಾದಿ ಕಾಲದಿಂದಲೂ ಈ ದೇಶದಲ್ಲಿ ಅಖಂಡತೆ ಅನುಭವಿಸಿದ್ದಾರೆ.!! ನನ್ನ ದೇಶ ಮಹಾನ್!! ಎನ್ನುವುದು ಭಾರತೀಯರ ಸದ್ಭಾವನೆ, ಸದಭಿಮಾನ!!

ಭಾರತ ಎಂದಾಕ್ಷಣ ನಮ್ಮೆಲ್ಲರ ಕಣ್ಣೆದುರಿಗೆ ಬರುವುದು ಹಿಮಾಲಯದ ಉನ್ನತ ಶಿಖರಗಳು, ಖನಿಜಸಂಪದ್ಭರಿತ ಪರ್ವತ ಶ್ರೇಣಿಗಳು, ತುಂಬಿ ಹರಿಯುವ ಗಂಗೆ-ತುಂಗೆ, ಕೃಷ್ಣೆ-ಕಾವೇರಿ, ಭೋರ್ಗರೆವ ಜಲಪಾತಗಳು, ವಿಶಾಲವಾದ ಸಾಗರಗಳು, ಹಸಿರು ವನಸಿರಿ ಹಾಡುವ ಕೋಗಿಲೆ, ಸವಿನುಡಿವ ಗಿಳಿ, ಕುಣಿಯುವ ನವಿಲು, ಘೀಳಿಡುವ ಆನೆಗಳು, ವಿವಿಧ ಭಾಷೆ-ಭಾವನೆಗಳ ಜನ-ಮನ, ಕಲೆ-ಶಿಲ್ಪ, ಸಂಗೀತ-ಸಾಹಿತ್ಯ ಮೊದಲಾದವು. ಈ ವೈಭವಗಳಿಂದ ಕೂಡಿದ ನಮ್ಮ ದೇಶ ನಿಜಕ್ಕೂ ಮಹಾನ್.

ಇಂಥ ದೇಶದ ನಿರ್ಮಾಣಕ್ಕಾಗಿ ಋಷಿ–ಮುನಿಗಳು, ಯೋಗಿಗಳು–ತ್ಯಾಗಿಗಳು, ಶೂರರು–ಧೀರರು ಎಲ್ಲರೂ ದುಡಿದಿರುವರು. ಈ ದೇಶವು ಹಳ್ಳಿಗಳ ನಾಡು. ಇಂದು ಈ ದೇಶದಲ್ಲಿ ಪಟ್ಟಣಗಳು ವೈಜ್ಞಾನಿಕವಾಗಿ ಸಾಕಷ್ಟು ಬೆಳೆದಿರಬಹುದು. ಆದರೆ ಭಾರತ ದೇಶದ ನಿಜವಾದ ಸಂಸ್ಕೃತಿಯನ್ನು ನೋಡಬೇಕಾದರೆ ನಾವು ಹಳ್ಳಿಗಳಿಗೇ ಹೋಗಬೇಕು, ಎಂಬುದು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಅಂತೆಯೇ ಹಳ್ಳಿಗಳ ಅಭಿವೃದ್ಧಿಯೇ ಭಾರತದ ಅಭಿವೃದ್ಧಿ ಎಂದು ಅವರು ನಂಬಿದ್ದರು. ಈ ದೇಶದ ಹಳ್ಳಿಯಲ್ಲಿರುವ ಜನರ ಹೊಟ್ಟೆ–ಬಟ್ಟೆ ನೆರಳು–ನೀರಿಗೆ ಕೊರತೆ ಇಲ್ಲದಂತಾದರೆ ಅಂದೇ ಭಾರತ ದೇಶವು ಅಭಿವೃದ್ಧಿ ಸಾಧಿಸಿದಂತೆ ಎಂಬುದು ಅವರ ಸಿದ್ಧಾಂತವಾಗಿತ್ತು! ನಿಜವಾಗಿಯೂ ಹಳ್ಳಿಗಳೇ ಈ ದೇಶದ ಜೀವನಾಡಿಗಳು! ಸಂಸ್ಕೃತಿಯ ಕೇಂದ್ರಗಳು!

ಭಾರತವು ಎಂಥ ಹೃದಯವಂತ ದೇಶ ಎನ್ನುವದನ್ನು ಹೇಳುವಾಗ. ಸ್ವಾತಂತ್ರ್ಯಾನಂತರದ ಕಾಲದಲ್ಲಿ ನಡೆದ ಒಂದು ಘಟನೆ. ಭಾರತ ದೇಶವನ್ನು ನೋಡಲು ವಿದೇಶಿ ವ್ಯಕ್ತಿ ಬಂದಿದ್ದ. ಒಂದು ಹಳ್ಳಿಗೆ ಹೋಗಿ ಬೆಳಗಿನಿಂದ ಮಧ್ಯಾಹ್ನದವರೆಗೆ ಅಲ್ಲಿಯ ಮುಗ್ಧ ಜನರ ಜೀವನವನ್ನು ಅವಲೋಕನ ಮಾಡಿದ. ಈಗಾಗಲೇ ಅವನಿಗೆ ಹಸಿವೆ ಆಗಿತ್ತು. ಈ ಹಳ್ಳಿಯಲ್ಲಿ ಏನು ಸಿಗಲು ಸಾಧ್ಯವೆಂದು ಪಟ್ಟಣದತ್ತ ಹೆಜ್ಜೆಹಾಕುತ್ತಿದ್ದ. ಅಷ್ಟರಲ್ಲಿ ಓರ್ವ ಅಜ್ಜಿ ಇವನನ್ನು ಕರೆದಳು. ಬಿಸಿರೊಟ್ಟಿ ಮತ್ತು ಬೆಣ್ಣೆಯನ್ನು ಕೊಟ್ಟು ಕಳುಹಿಸಿದಳು.!! ನೀನು ಯಾರು? ಎಲ್ಲಿಯವನು? ಏನೊಂದೂ ಕೇಳದೆ ಹಸಿದ ಹೊಟ್ಟೆಗೆ ಅನ್ನವನಿತ್ತ ಅಜ್ಜಿಯ ಉಪಚಾರವನ್ನು ಕಂಡು ಆ ವಿದೇಶಿಗನಿಗೆ ಆದ ಸಂತಸ ಅವರ್ಣನೀಯ! ತನ್ನ ಪ್ರವಾಸಿ ಪುಸ್ತಕದಲ್ಲಿ ಆ ವಿದೇಶಿ ವ್ಯಕ್ತಿ ಹೀಗೆ ಬರೆಯುತ್ತಾನೆ!! ನನ್ನ ತಾಯಿಯಲ್ಲಿಯೂ ಇಂಥ ಪ್ರೀತಿಯನ್ನು ನಾನು ಕಾಣಲಿಲ್ಲ!! ಇದು ನಮ್ಮ ದೇಶದ ಹಳ್ಳಿಯ ಜನರ ಹೃದಯಸಿರಿ. ಈ ಜಗತ್ತಿನಲ್ಲಿ ಸಿರಿವಂತ ದೇಶಗಳು ಸಾಕಷ್ಟು ಇರಬಹುದು. ಆದರೆ ಭಾರತವು ಹೃದಯವಂತ ದೇಶ!!

ಭಾರತೀಯ ನಾರಿಯರು ಇಂದಿಗೂ ಮನೆಯಲ್ಲಿ ಅಡುಗೆ ಮಾಡುವಾಗ–ಇದು ಮಾವನಿಗೆ, ಅತ್ತೆಗಾಗಿ, ಪತಿಗಾಗಿ, ಮಕ್ಕಳಿಗಾಗಿ, ಮೈದುನನಿಗಾಗಿ ಎಂದು ಮಾಡುತ್ತಾರೆ. ಆದರೆ ಸ್ವಂತಕ್ಕಾಗಿ ಎಂದು ಏನನ್ನೂ ಮಾಡುವುದಿಲ್ಲ! ಹೊಸ ಮನೆ–ಮಠ, ಉಡುಗೆ–ತೊಡುಗೆ, ಅಡಿಗೆ–ಅನ್ನ ಯಾವುದೇ ಇರಲಿ ಭಾರತೀಯರು ಅದನ್ನು ಗುರು–ಹಿರಿಯರಿಗೆ, ದೇವರಿಗೆ ಅರ್ಪಿಸದೆ ಬಳಸುವುದಿಲ್ಲ. ಇದು ಭಾರತೀಯ ಸಂಸ್ಕೃತಿ.

ದಶಕಗಳ ಹಿಂದೆ ಫ್ರಾನ್ಸ್‌ದೇಶದಲ್ಲಿ ನಡೆದ ಒಂದು ಘಟನೆ– ನಿರುದ್ಯೋಗಿ ಯುವಕನೊಬ್ಬ ಒಂದು ದಿನ ಯಾವುದೋ ಬ್ಯಾಂಕಿನ ಬಾಗಿಲು ಬಡಿದ. ಬಾಗಿಲು ತೆಗೆದ ವ್ಯಕ್ತಿ"ಏನಾಗಬೇಕಿತ್ತು?" ಎಂದು ಕೇಳಿದ. "ನಿಮ್ಮಲ್ಲಿ ಏನಾದರೂ ಒಂದು ಉದ್ಯೋಗ ಕೊಡಿ" ಎಂದು ಯುವಕ ಕೇಳಿದ. ಆ ಯುವಕನ ಮಾಸಿದ ಬಟ್ಟೆ, ಬಡಕಲು ಶರೀರ ನೋಡಿ "ನಮ್ಮಲ್ಲಿ ನಿನಗೆ ಉದ್ಯೋಗವಿಲ್ಲ" ಎಂದು ಮ್ಯಾನೇಜರ ಹೇಳಿದ. "ಧನ್ಯವಾದ" ಎಂದು ಹೇಳಿ ಯುವಕನು ಹೊರಗೆ ಬಂದ. ನೆಲದ ಮೇಲೆ ಏನೋ ಬಿದ್ದಿರುವುದು ಕಂಡಿತು. ಯುವಕನು ಬಾಗಿ ಅದನ್ನು ಎತ್ತಿಕೊಂಡ. ಮ್ಯಾನೇಜರ ಇದನ್ನು ನೋಡಿದ. ಯುವಕನನ್ನು ಒಳಗೆ ಕರೆದು– "ಏನನ್ನು ಎತ್ತಿಕೊಂಡೆ?" ಎಂದ ಯುವಕ ಹೇಳಿದ. ಸೂಜಿ ಬಿದ್ದಿತು "ಅದು ಯಾರ ಕಾಲಿಗೂ ಚುಚ್ಚಿ ನೋವಾಗದಿರಲಿ!" ಎಂದು ಎತ್ತಿಕೊಂಡೆ ಎಂದು ಯುವಕ ಹೇಳಿದ. ತಕ್ಷಣ "ನಿನಗೆ ಈ ಬ್ಯಾಂಕಿನಲ್ಲಿ ಕೆಲಸ ಕೊಡಲಾಗಿದೆ, ನಾಳೆಯಿಂದ ಕೆಲಸಕ್ಕೆ ಸೇರಿಕೋ" ಎಂದು ಮ್ಯಾನೇಜರ ಹೇಳಿದರು. ಅದೇ ಯುವಕನು ಮುಂದೆ ಬೆಳೆದು ಆ ಬ್ಯಾಂಕಿನ (ಲಾ ಪಿಟ್ಟೆ ಪೆರಿಗೋ) ಭಾಗಿದಾರನಾಗಿ ಅದನ್ನು ರಾಷ್ಟ್ರದಲ್ಲಿಯೇ ಬಹು ದೊಡ್ಡದಾದ ಬ್ಯಾಂಕನ್ನಾಗಿ ಬೆಳೆಸಿದನು.

ಈ ದೇಶದ ಸ್ವಾತಂತ್ರ್ಯಕ್ಕಾಗಿ ಅಂದಿನ ಯುವಕರು ಮಾಡಿದ ತ್ಯಾಗ–ಬಲಿದಾನಗಳನ್ನು ನಾವು ಎಂದಿಗೂ ಮರೆಯಬಾರದು. ಈ ದೇಶವನ್ನು ಸ್ವಂತಕ್ಕಾಗಿ ಬಳಸುವುದನ್ನು ಬಿಟ್ಟು ದೇಶಕ್ಕಾಗಿ ಬದುಕುವುದನ್ನು ನಮ್ಮ ಯುವಕರು ಕಲಿಯಬೇಕು. ಅದು ದೇಶಪ್ರೇಮ, ದೇಶಭಕ್ತಿ!!

ಇಂದು ನಮ್ಮ ದೇಶದ ಯುವಕರು ವಿದೇಶದಲ್ಲಿ ಹಗಲು–ರಾತ್ರಿ ದುಡಿಯುತ್ತಿದ್ದಾರೆ. ಅವರೆಲ್ಲರೂ ಭಾರತ ದೇಶಕ್ಕಾಗಿ ದುಡಿಯುವಂತಾಗಬೇಕು; ದುಡಿಯುತ್ತಾರೆ ಕೂಡಾ! ರಜೆಯನ್ನು ಮಜೆಗಾಗಿ ಬಳಸದೆ ಈ ದೇಶದ ಬಡಜನತೆಯ, ಮುಗ್ಧಜನರ ಸೇವೆಗಾಗಿ ಬಳಸಬೇಕು. ಆಗ ನಮ್ಮ ದೇಶದ ಹಳ್ಳಿಗಳೆಲ್ಲವೂ ಸ್ವಚ್ಛ–ಸುಂದರ.

<u>ಆತ್ಮವಿಶ್ವಾಸ</u> ೫.೧

ದೇಹ, ಮನ, ಬುದ್ಧಿ ಇವುಗಳ ವಿಕಾಸವೇ ಪರಿಪೂರ್ಣವಾದ ವ್ಯಕ್ತಿತ್ವ ವಿಕಾಸ!

**<u>(ಅ) ದೈಹಿಕ ವಿಕಾಸ</u>** : ಸುಕರ್ಮಗಳಿಂದ ನಮ್ಮ ದೇಹವು ಸದೃಢವೂ ಸುಂದರವೂ ಆಗುತ್ತದೆ ಸುಕರ್ಮಗಳೆಂದರೆ ಒಳ್ಳೆಯ ಕಾರ್ಯಗಳು. ನಮ್ಮ ಕೈ ಒಳ್ಳೆಯದನ್ನೇ ಮಾಡಬೇಕು, ಕಣ್ಣು ಒಳ್ಳೆಯದನ್ನೇ ನೋಡಬೇಕು, ಕಿವಿ ಒಳ್ಳೆಯದನ್ನೇ ಕೇಳಬೇಕು. ಹೀಗೆ ನಮ್ಮ ಅಂಗ ಪ್ರತ್ಯಂಗಗಳು ಸದಾ ಒಳ್ಳೆಯ ಕಾರ್ಯಗಳಲ್ಲಿ ತೊಡಗಿರಬೇಕು, ಅದು ಸತ್ಕರ್ಮ!!

ಯೋಗ-ಧ್ಯಾನ, ಆಟ-ಓಟಗಳಿಂದ ನಮ್ಮ ದೇಹವು ಆರೋಗ್ಯ ಪೂರ್ಣವೂ ಆನಂದದಾಯಕವೂ ಆಗಿರುತ್ತದೆ. ಯೋಗವು ನಮಗೆ ಸರಿಯಾಗಿ ಕೂಡುವುದನ್ನು, ನಡೆಯುವುದನ್ನು, ನೋಡುವುದನ್ನು, ನುಡಿಯುವುದನ್ನು ಕಲಿಸುತ್ತದೆ. ಜೊತೆಗೆ ಯೋಗಸಾಧಕನು ಕೆಲವೊಂದು ಆರೋಗ್ಯ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಬೇಕು. ಒಳ್ಳೆಯದನ್ನೇ ತಿನ್ನಬೇಕು, ಕುಡಿಯಬೇಕು, ಸಾತ್ವಿಕವಾದ ಹಾಲು ಹಣ್ಣು ಕಾಯಿಪಲ್ಲೆ, ತೊಪ್ಪಲಪಲ್ಲೆ ಸೇವಿಸಬೇಕು, ಒಳ್ಳೆಯದನ್ನೇ ನುಡಿಯಬೇಕು, ನೋಡಬೇಕು, ಕೇಳಬೇಕು. ಅದರಿಂದ ದೈಹಿಕ ಆರೋಗ್ಯವು ವರ್ಧಿಸುತ್ತದೆ. ವ್ಯಕ್ತಿತ್ವ ವಿಕಾಸಕ್ಕೆ ನಮ್ಮ ದೈಹಿಕ ಆರೋಗ್ಯವೇ ಅಡಿಪಾಯ.

<u>(ಆ) ಬುದ್ಧಿಯ ವಿಕಾಸ:</u> ಬುದ್ಧಿ ಅಥವಾ ವಿವೇಕವು ದೇವನ ದಿವ್ಯ ಕಾಣಿಕೆ. ಬುದ್ಧಿಶಕ್ತಿಯಿಂದಾಗಿಯೇ ಮಾನವನು ಸಕಲ ಜೀವರಾಶಿಯಲ್ಲಿಯೇ ಶ್ರೇಷ್ಠನೆನಸಿದ್ದಾನೆ. ಈ ಸೃಷ್ಟಿಯ ಉಗಮ-ರಚನೆ-ವಿಕಾಸ ಹೇಗಾಯಿತು? ಈ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವ ಶಕ್ತಿ ಯಾವುದು? ಈ ಸೃಷ್ಟಿಯ ಆದಿಯಲ್ಲಿ, ಅಂತ್ಯದಲ್ಲಿ ಏನಿದೆ? ಕೆಲವು ಕಾಲ ತೋರಿ ಮರೆಯಾಗುವ ಈ ಮಾನವ ಜೀವನದ ಧ್ಯೇಯೋದ್ದೇಶವೇನು? ಇವೇ ಮೊದಲಾದ ಮೂಲಭೂತ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಸಾಮರ್ಥ್ಯ ನಮ್ಮ ಬುದ್ಧಿಗೆ ಇದೆ. ಈ ಬುದ್ಧಿ ಶಕ್ತಿಯ ವಿಕಾಸಕ್ಕಾಗಿ ಆಳವಾದ ಅಧ್ಯಯನ-ಅಧ್ಯಾಪನ, ಶ್ರವಣ-ಮನನ ನಿಧಿಧ್ಯಾಸಗಳ ಅವಶ್ಯಕತೆ ಇದೆ. ಅದರಿಂಧ ಮಾನವನ ಬುದ್ಧಿಶಕ್ತಿಯ ವಿಕಾಸಗೊಂಡು ಒಬ್ಬ ವಿಜ್ಞಾನಿ, ಸಂತ-ಮಹಾಂತ ಹೊರಹೊಮ್ಮುತ್ತಾನೆ. ಅದು ಬೌದ್ಧಿಕ ವಿಕಾಸ!!

<u>(ಇ) ಮನೋವಿಕಾಸ:</u> ಮನಸ್ಸು ಅಥವಾ ಹೃದಯವು ಒಂದು ಸೂಕ್ಷ್ಮ ಸುಂದರ ಅವಯವ. ಅದು ಹಸನಾದಷ್ಟು ನಮ್ಮ ಬದುಕು ಭವ್ಯ-ದಿವ್ಯ. ಇದನ್ನೇ ಅಂತರಂಗ ಶುದ್ಧಿ ಎನ್ನುತ್ತಾರೆ. ಅದರಿಂದ ಮನುಷ್ಯನ ಹೃದಯವು ಪವಿತ್ರ ಪ್ರೇಮದಿಂದ ತುಂಬಿಕೊಳ್ಳುತ್ತದೆ. ಆಗ ಅವರಿವರೆನ್ನದೆ ಎಲ್ಲರನ್ನೂ ಮನುಷ್ಯನು ಒಂದೇ ರೀತಿಯಾಗಿ ಪ್ರೀತಿಸುತ್ತಾನೆ ಅವನೇ ಸಂತ-ಮಹಾಂತ. ಇದು ಹೃದಯ ವಿಕಾಸ ಮನೋವಿಕಾಸ.

ಬೀದರ ಜಿಲ್ಲೆಯ ಔರಾದ ನಗರದ ರಾಷ್ಟ್ರೀಯ ಸೇವಾ ಯೋಜನೆಯ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳವರು ನೀಡಿದ ಆಶೀರ್ವಚನ.

ರಸ್ತೆಯ ದೀಪದಡಿ ಓದಿದ ಯುವಕರೂ ಈ ದೇಶದ ಅತ್ಯುನ್ನತ ಪದವಿಯನ್ನು ಅಲಂಕರಿಸಿದ್ದಾರೆ. ಬಡಕಲು ಶರೀರದ ಗಾಂಧೀಜಿ ಬ್ರಿಟೀಷರನ್ನೇ ನಡುಗಿಸಿದ್ದು ಆತ್ಮಬಲದಿಂದಲ್ಲದೆ ಬೇರಿನ್ನಾವುದರಿಂದಲೂ ಅಲ್ಲ! ಮಹಿಳೆಯರು-ಮುದುಕರು, ಯುವಕರು-

ಬಾಲಕರು ಎಲ್ಲರೂ ಈ ದೇಶದ ಸ್ವಾತಂತ್ರ್ಯಕ್ಕೆ ದುಡಿದದ್ದು ಆತ್ಮವಿಶ್ವಾಸದ ಬಲದಿಂದಲೇ! ಹುಟ್ಟುತ್ತಲೇ ಯಾರೂ ವೀರರಲ್ಲ-ಶೂರರಲ್ಲ; ಸಾಧನೆಯಿಂದ ನಾವು ಏನೆಲ್ಲ ಆಗಬಹುದು, ಎಂದರಿತಿರುವುದೇ ಆತ್ಮವಿಶ್ವಾಸ ಅದು ನಮ್ಮ ಯುವಕರ ಯಶೋಮಂತ್ರ!!

ಹೀಗೆ ತಮ್ಮ ಕಾರ್ಯಶಕ್ತಿಯಲ್ಲಿ ಆತ್ಮವಿಶ್ವಾಸವುಳ್ಳ ಯುವಕರು, ವಿದ್ಯಾರ್ಥಿಗಳು ಪ್ರಸಿದ್ಧ ಕಲಾವಿದರಾಗಿ, ನಾಯಕರಾಗಿ, ಗಾಯಕರಾಗಿ ಹೊರಹೊಮ್ಮುತ್ತಾರೆ. ತಮ್ಮ ಬುದ್ಧಿ ಸಾಮರ್ಥ್ಯದಲ್ಲಿ ಶ್ರದ್ಧೆಯುಳ್ಳ ಯುವಕರು ವಿಜ್ಞಾನಿಯಾಗಿ ತತ್ವಜ್ಞಾನಿಯಾಗಿ ಬೆಳಗುತ್ತಾರೆ. ತಮ್ಮ ಭಾವ ಸಾಮರ್ಥ್ಯದಲ್ಲಿ ಅಚಲ ನಂಬಿಗೆಯುಳ್ಳ ಯುವಕರು ಯೋಗಿಯಾಗಿ, ತ್ಯಾಗಿಯಾಗಿ, ಲೋಕಪೂಜ್ಯರೆನಿಸುತ್ತಾರೆ. ದೈಹಿಕ, ಮಾನಸಿಕ, ಬೌದ್ಧಿಕ ಸಕಲ ಸಾಮರ್ಥ್ಯಗಳಲ್ಲಿ ಆತ್ಮವಿಶ್ವಾಸ, ಅಚಲ ಶ್ರದ್ಧೆ ಉಳ್ಳವನು ಜಗದಗಲ ಮುಗಿಲಗಲ ಬೆಳೆಯುತ್ತಾನೆ. ದೇವರಿಗೆ ದೇವರಾಗುತ್ತಾರೆ, ಮಹಾದೇವರಾಗುತ್ತಾರೆ. ಅದು ಪರಿಪೂರ್ಣ ವಿಕಾಸ! ಅದಮ್ಯ ಆತ್ಮವಿಶ್ವಾಸ! ಅದರಿಂದ ದೇಶಸೇವೆ ಈಶಸೇವೆ ಸುಗಮ ಸಾಧ್ಯ!!

<u>**೬. ಶಾಂತಿಯೋಗ**</u> : (ಬೀದರ ನಗರದಲ್ಲಿ ನಡೆದ ಪ್ರವಚನದ ಸಾರಸಂಗ್ರಹ ಕೃತಿ)

ಇದ್ದಂತೆ ಇರುವುದಿಲ್ಲ, ಕಾಯವೇ ಕೈಲಾಸ, ಜ್ಞಾನ ಸೂತ್ರ, ಅದ್ವೇಷ್ಟಾ, ಹೋಲಿಸಬೇಡ, ಆತ್ಮ ನಿರೀಕ್ಷಣೆ, ಹಂಬಲದ ಹೃದಯ, ರಸದೃಷ್ಟಿ, ಆಶಾಪಾಶ, ಅರಿವು, ಪರಿಪೂರ್ಣ ಪ್ರೇಮ, ಪರಿಜ್ಞಾನ, ಸಂಸಿದ್ಧರು, ಸ್ವಾತ್ಮಾರಾಮ, ದೇವೋನ್ಮಾದ, ತ್ಯಾಗ, ಶರಣಾಗತಿ, ಮಾತೃವಾತ್ಸಲ್ಯ, ಎನಗಿಂತ ಕಿರಿಯರಿಲ್ಲ, ಆಶ್ರಯ, ಸ್ವಾಧ್ಯಾಯ, ಪವಿತ್ರಕರ್ಯ, ಪ್ರಪಂಚ ಯೋಗ, ನೀರ್ಬೀಜ.

<u>೬.೧.ಸ್ವಾಧ್ಯಾಯ:</u> ಧರ್ಮೋಪದೇಶದ ಪ್ರಮುಖ ಉದ್ದೇಶ ಮನುಷ್ಯನನ್ನು ಬಹುದೊಡ್ಡ ಜ್ಞಾನಿಯನ್ನಾಗಿ, ವಕ್ತಾರನನ್ನಾಗಿ ಮಾಡುವುದಲ್ಲ. ಬದಲಾಗಿ ಮಾನವ ಹೃದಯದಲ್ಲಿ ಸಮಾನತೆಯ, ಪ್ರೀತಿ ಕರುಣೆಯ ದೀಪ ಬೆಳಗಿಸುವುದು. ಈ ಧರ್ಮೋಪದೇಶಕ್ಕೆ ಪ್ರವಚನವೆಂದೂ ಕರೆಯುತ್ತಾರೆ.

**ಶಮಶ್ಚ ಸ್ವಾಧ್ಯಾಯ ಪ್ರವಚನೇಚ ದಮಶ್ಚ ಸ್ವಾಧ್ಯಾಯ ಪ್ರವಚನೇ ಚ** ಮನುಷ್ಯನೇ ನೀನು ಶಮೆ, ದಮೆ, ಜ್ಞಾನ, ವೈರಾಗ್ಯ ಏನನ್ನಾದರೂ ಸಾಧಿಸು ಆದರೆ ಸ್ವಾಧ್ಯಾಯ, ಪ್ರವಚನಗಳನ್ನು ಮಾತ್ರ ಎಂದೂ ಬಿಡಬೇಡ! ಕತ್ತಲೆಯಲ್ಲಿ ನಡೆಯುವವನಿಗೆ ಕೈದೀಪವು ಒಂದು ಆಸರೆ. ಮಹಾತ್ಮರ ಉಪದೇಶವು ಒಂದು ಜ್ಞಾನದೀಪ! ಮನದ ಕತ್ತಲೆಯನ್ನು ಕಳೆದು ಸಂತಸದ ದಾರಿಯನ್ನು ಅವರು ನಮಗೆ ತೋರಿಸುತ್ತಾರೆ. ಅಂಥ ಗ್ರಂಥಗಳ ಅವಲೋಕನ, ಅವರ ನುಡಿಯ

ನೆನಹಿಗೆ ಸ್ವಾಧ್ಯಾಯ ಎನ್ನುತ್ತಾರೆ. ಪ್ರವಚನದಿಂದ ಮಾನವನಿಗೆ ಸತ್ಯದ ದರ್ಶನವಾಗುವುದಲ್ಲದೆ ಮಾನವನೇ ಮಹಾದೇವನ ಸ್ವರೂಪ ಹೊಂದುತ್ತಾನೆ.

ಸಂತರ ಶರಣರ ಒಂದೆರಡು ನುಡಿಗಳನ್ನು (ಮೈಯಲ್ಲಾ ಕಿವಿಯಾಗಿ) ಒಲಿದಾಲಿಸುವನು ಅದು ಪ್ರವಚನ!! ಆ ಶರಣರ ನುಡಿಯ ಮಹತಿಯನ್ನು ದೇವರ ದಾಸಿಮಾರ್ಯರು ಮನಮುಟ್ಟುವಂತೆ ವಿವರಿಸುತ್ತಾರೆ-

**ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ**

**ಹಿರಿದಪ್ಪ ರಾಜ್ಯವನಿತ್ತಡೆಯೂ ಒಲ್ಲೆ**

**ನಿಮ್ಮ ಶರಣ ಸೂಳ್ನುಡಿಯ ಒಂದರಗಳಿಗೆ ಇತ್ತರೆ**

**ನಿಮ್ಮನ್ನೇ ಇತ್ತೆಕಾಣಾ ರಾಮನಾಥ !**

ಮಹಾತ್ಮರ ಉಪದೇಶಕ್ಕೆ ಶರಣರು ಆನೆ, ಅಂಬಾರಿ ಅರಸೊತ್ತಿಗೆ, ಭೋಗಭಾಗ್ಯ ಎಲ್ಲವನ್ನೂ ತೊರೆದರು ! ಅವರ ತ್ಯಾಗದ ಫಲವಾಗಿ ದೇವಲೋಕದ ಬಟ್ಟೆಯನ್ನು ಕಂಡು ಕೃತಾರ್ಥರಾದರು ! ಮಹಾತ್ಮರ ಮಾತೆಂಬುದು ಜ್ಯೋತಿರ್ಲಿಂಗವಾಯಿತು !! ಅದು ಭಾರತೀಯ ಅನುಭಾವ ಸಾಹಿತ್ಯದ ಅಲೌಕಿಕ ವೈಭವ. ಶಾಪೆನ್ ಹಾರ್ ಇನ್ನೊಂದು ಹೃದಯಸ್ಪರ್ಶಿಯಾದ ಮಾತನ್ನು ಹೇಳುತ್ತಾರೆ.

ಶಾಪೆನ್ ಹಾವರ್‌ನು ಮಲಗುವ ಕೋಣೆಯ ಮೇಜಿನ ಮೇಲೆ 'ಈಶಾವಾಸ್ಯೋಪನಿಷತ್ತು' ಪುಸ್ತಕವಿರುತ್ತದೆ. ಸಾಮಾನ್ಯವಾಗಿ ವಿದೇಶಿಯರು ಮಲಗುವ ಕೋಣೆಯಲ್ಲಿ ಒಂದು ಬೈಬಲ್ ಇರುತ್ತದೆ. ಆತನ ಮಿತ್ರ ಆಶ್ಚರ್ಯದಿಂದ ಕೇಳುತ್ತಾನೆ "ತಮ್ಮ ಮೇಜಿನ ಮೇಲೆ ಅದಾವುದೋ ಬೇರೆ ಗ್ರಂಥ ಇರುವಂತಿದೆ?" ಶಾಪೆನ್ ಹಾವರ್- "ಹೌದು, ಅದು ನನಗೆ ಬೈಬಲ್‌ದ ಬೈಬಲ್ !" ಮಿತ್ರ- "ಅದು ಹೇಗೆ?" ಶಾಪೆನ್ ಹಾವರ್- "ಅದು ನನ್ನ ಬದುಕಿನಲ್ಲಿ ಸಂತಸವನ್ನೀಯುತ್ತದೆ. ನನ್ನ ಬದುಕಿನ ತರುವಾಯವೂ ಅದು ನನಗೆ ನೆಮ್ಮದಿಯನ್ನು ನೀಡುತ್ತದೆ!"

ಇದು ಭಾರತೀಯ ತತ್ವಜ್ಞಾನದ ಗರಿಮೆ. ಅದನ್ನು ನಾವಿಂದು ಹೊತ್ತು ಮೆರೆಯುತ್ತಿದ್ದೇವೆ ಅಭಿಮಾನದಿಂದ. ಆದರೆ ಆನಂದದಿಂದ ಅರಿತು ಆಚರಿಸುತ್ತಿಲ್ಲ ! ನಮ್ಮ ಮಹಾತ್ಮರ ಈ ಅಮೃತೋಪಮ ಉಪದೇಶ ಕೇಳುವುದೆ ಸ್ವಾಧ್ಯಾಯ, ಅದರಿಂದ ನಮಗೆ ಆ ಪರಮಾನಂದ, ಪರಮಶಾಂತಿ ದೊರೆಯುತ್ತದೆ !

**೭. ನೀತಿಯೋಗ** : (ನಿಪ್ಪಾಣಿ ನಗರದಲ್ಲಿ ೨೦೦೯ ರಲ್ಲಿ ಮಾಡಿದ ಪ್ರವಚನದ ಸಾರಸಂಗ್ರಹ ಕೃತಿ)

ಸಮಾಧಾನ, ರತ್ನತ್ರಯಗಳು, ಶ್ರೀ ಗುರುದೇವರು, ಲೌಕಿಕ ಗುರು, ನೈತಿಕ ಗುರು, ಮಾಯಾಮೃಗ, ಪ್ರಮಾದ, ತ್ಯಾಗ, ನಿರಹಂಕಾರ, ಮಧ್ಯಮ ಮಾರ್ಗ, ಕ್ಷಮೆ ಕಾರ್ಯೋತ್ಸಾಹ, ಭಕ್ತಿಭಾವ, ದೇವಪೂಜೆ, ದೈವೀತೋಟ, ದೇವಕಾರ್ಯ, ಔದಾರ್ಯ, ಪರಿಪೂರ್ಣ.

**೮. ಗೆಲುವಿನ ಜೀವನ** : (ಬಾಗಲಕೋಟೆಯಲ್ಲಿ ೨೦೦೮ ರಲ್ಲಿ ನಡೆದ ಪ್ರವಚನದ ಸಾರಸಂಗ್ರಹ ಕೃತಿ)

ಈ ಪ್ರವಚನ ಕೃತಿಯಲ್ಲಿ ಡಾ. ಶ್ರದ್ಧಾನಂದ ಮಹಾಸ್ವಾಮಿಗಳು ಪ್ರಸ್ತಾವನೆಯಲ್ಲಿ ಹೀಗೆ ಬರೆಯುತ್ತಾರೆ.

ಇದರಲ್ಲಿ ಯಶಸ್ವಿ ಜೀವನದ ಸರಳ ಸುಂದರ ಸೂತ್ರಗಳನ್ನು ನಾವು ಕಾಣಬಹುದಾಗಿದೆ. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ' ಎಂಬ ಪ್ರಸಿದ್ಧ ಮಂತ್ರ ವಾಕ್ಯವು ಹೇಳುವಂತೆ ನಮ್ಮ ಬಂಧನಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣವಾಗಿದೆ. ಬಂಧನವೆಂದರೆ ಆಂತರಿಕ ಅ-ಸ್ವಾತಂತ್ರ್ಯ ಅಥವಾ ದುಃಖ. ಮೋಕ್ಷವೆಂದರೆ ಆಂತರಿಕ ಸ್ವಾತಂತ್ರ್ಯ ಅಥವಾ ಸುಖ. ಹೀಗೆ ನಮ್ಮ ಸುಖ-ದುಃಖಕ್ಕೆ, ಗೆಲುವು-ಸೋಲಿಗೆ ಮನಸ್ಸೇ ಕಾರಣವಾಗಿದೆ.

ಈ ಮನಸ್ಸನ್ನು ಯೋಗ ಸಾಧನೆಗೆ ತೊಡಗಿಸಿ ಏಕಾಗ್ರತೆ ಅಥವಾ ತನ್ಮಯತೆಯನ್ನು ಸಾಧಿಸಬೇಕು. ಶ್ರದ್ಧೆ, ನಿಷ್ಠೆ, ದೂರದೃಷ್ಟಿ ಉಳ್ಳವರಾಗಿ ಆತ್ಮವಿಶ್ವಾಸದಿಂದ ಸತ್ಕಾರ್ಯಗಳನ್ನು ಮಾಡುತ್ತ ಸನ್ಮಾರ್ಗದಲ್ಲಿ ನಿರ್ವ್ಯಾಮೋಹದಿಂದ ನಿರಂತರ ಮುನ್ನಡೆದು ನಾವು ಸತ್ಯ ಸಾಕ್ಷಾತ್ಕಾರ ಪಡೆಯಬೇಕು. ಆಗ ನಮ್ಮ ಜೀವನದಲ್ಲಿ ಪರಮ ಶಾಂತಿಯು ನೆಲೆಸುತ್ತದೆ. ಇದನ್ನೇ ಕೈವಲ್ಯ ಅಥವಾ ಮುಕ್ತಿ ಎಂದು ಕರೆಯುತ್ತಾರೆ. ಇದುವೇ ಗೆಲುವಿನ ಜೀವನ. ಸಂತರ, ಶರಣರ, ಮಹಾತ್ಮರ, ಮಂತ್ರಪುರುಷರ ಪ್ರವಚನಾಮೃತವನ್ನು ಸವಿಯುತ್ತಾ ಅವರ ಸಾನ್ನಿಧ್ಯದಲ್ಲಿ ಸತ್ಸಂಗದಲ್ಲಿದ್ದೇ ಸ್ವಾಧ್ಯಾಯ ಮಾಡುತ್ತ ನಾವು ಗೆಲುವಿನ ಜೀವನವನ್ನು ಕಟ್ಟಿಕೊಳ್ಳಬೇಕು. ಅದು ಸಾರ್ಥಕ ಜೀವನ! ಆದರ್ಶ ಬದುಕು.

ಸತ್ಸಂಗವು ಅಮೋಘ, ಆಸೆಯ ಕುದುರೆ, ಜಿಗುಪ್ಸೆ, ಸತ್ಸಂಗದಿಂದ ಶಾಂತಿ, ಯೋಗ ಜೀವನ, ಮನೋದೌರ್ಬಲ್ಯ, ವ್ಯಾಮೋಹ, ವಿಕ್ಷೇಪ, ದೂರದೃಷ್ಟಿ, ಪರಮಶಾಂತಿ, ಶ್ರದ್ಧೆ-ಶಾಂತಿ, ಶಾಂತಿ ಸಾಗರ, ಶ್ರದ್ಧೆ, ಬ್ರಹ್ಮಸತ್ಯ, ಜೀವನೋತ್ಸಾಹ, ಸಮಾಧಿ, ನಿಷ್ಠೆ, ಪ್ರಜ್ಞಾ, ಆನಂದಕರ್ಮ,

ಕೃತಜ್ಞತೆ, ಸ್ವಾಧ್ಯಾಯ, ತ್ರಿವಿಧ ಸ್ವಾಧ್ಯಾಯ, ಸಮರಸಾನಂದ, ಅತಿಥಿ ದೇವೋಭವ, ನಿಸರ್ಗಾರಾಧನೆ.

ಎಮರ್ಸನ್ನರು: ಹೇಳುತ್ತಾರೆ– "ಹೃದಯವೆಂಬ ಹೂದೋಟದಲ್ಲಿ ಯಾರು ಸದ್ಗುಣದ ಹೂವುಗಳನ್ನು ಬೆಳೆದಿರುವವರೋ ಅವರೇ ದೊಡ್ಡವರು, ಸಂತರು, ಮಹಾಂತರು.

ಮಹಾನುಭಾವಿ ಅಲ್ಲಮ ಪ್ರಭುದೇವರು ಈ ಆಸೆಯ ಕುದುರೆನ್ನೇರಿದವರ ದುರವಸ್ಥೆಯನ್ನು ತಮ್ಮ ಒಂದು ಬೆಡಗಿನ ವಚನದಲ್ಲಿ ಹೀಗೆ ಹೇಳಿದ್ದಾರೆ.

**ಅರಗಿನ ಪುತ್ಥಳಿಯನುರಿಕೊಂಡಡೆ,**

**ಉದಕ ಬಾಯಾರಿ ಬಳಲುತ್ತಿದೆ**

**ಅಗೆಯಿಂಭೋ, ಭಾವಿಯನಗೆಯಿಂಭೋ,**

**ಭಾವಿಯನಗೆದಾತ ಸತ್ತ; ಭಾವಿ ಬತ್ತಿತ್ತು.**

**ಇದು ಕಾರಣ ನೆರೆ ಮೂರು ಲೋಕ**

**ಬರುಸೂರೆವೋಯಿತು ಗುಹೇಶ್ವರಾ.**

ದೇಹವೇ ಅರಗಿನ ಪುತ್ಥಳಿ ಇದಕ್ಕೆ ಕಾಲನ ಅಥವಾ ಮರಣದ ಬೆಂಕಿ ತಗುಲಿದೆ. ಉದಕವೆಂದರೆ ಮನಸ್ಸು. ಈ ಮನಸ್ಸು ವಿಷಯದಾಶೆಯ ತೃಷ್ಣೆಯಿಂದ ಬಾಯಾರಿ ಬಳಲುತ್ತಿದೆ. ವಿಷಯ ಸುಖದ ಜಲವನ್ನು ಕುಡಿದು ವಿಷಯದಾಹ ಕಳೆದುಕೊಳ್ಳಬೇಕು. ಸುಖ–ಸಮಾಧಾನ ಅನುಭವಿಸಬೇಕೆಂದು ಶಬ್ದಾದಿ ವಿಷಯಗಳ ಭಾವಿಯನ್ನು ತೊಡುತ್ತಾ ಹೋಗುತ್ತಾನೆ. ಆದರೆ ಇವನಿಗೆ ಸುಖದ ಜಲವೇನೂ ದೊರೆಯುವುದಿಲ್ಲ. ಇದೇ ರೀತಿ ಮೂರುಲೋಕದ ಮನುಜರೆಲ್ಲರೂ ವಿಷಯದ ಹಿಂದೆ ಹರಿದು ಜೀವನವನ್ನು ವ್ಯರ್ಥವಾಗಿ ಕಳೆಯುತ್ತಾರೆ.

ಜಗತ್ ಪ್ರಸಿದ್ಧ ಇತಿಹಾಸತಜ್ಞ ಅರ್ನಾಲ್ಡ ಟಾಯನ್‌ಬಿ : ಹೇಳುತ್ತಾರೆ– "ಮಾನವ ಇತಿಹಾಸವನ್ನು ಮೂರೇ ಮೂರು ಶಬ್ದಗಳಲ್ಲಿ ಚಿತ್ರಿಸಬಹುದು. ಅವು ಯಾವುವು ಎಂದರೆ– 'ಆಶೆ–ಹೋರಾಟ–ಸೋಲು!'

**ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**

**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥**

"ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ" ಎಂದು ಋಷಿ-ಮುನಿಗಳು ಹೇಳಿದಂತೆ ಮನುಷ್ಯರ ಸುಖ-ದುಃಖಗಳಿಗೆ ಮನಸ್ಸೇ ಕಾರಣವಾಗಿದೆ. ಮನಸ್ಸು ನಿರ್ಮಲವಾದರೆ, ಸುಖ. ಅದೇ ಮನಸ್ಸು ಮಲಿನವಾದರೆ ದುಃಖ.

**ಯದೃಚ್ಛಾ ಲಾಭ ಸಂತುಷ್ಟ;** ಎಂದರೆ ನಮಗೆ ಏನು ದೊರೆತಿದೆಯೋ ಅದರಲ್ಲಿಯೇ ನಾವು ಸಂತೋಷದಿಂದಿರಲು ಕಲಿಯಬೇಕು. ಮನದ ಎರಡನೆಯ ಮಾಲಿನ್ಯವೆಂದರೆ ಜಿಗುಪ್ಸೆ ಅಥವಾ ತಿರಸ್ಕಾರ ಮನೋಭಾವ.

ನಮ್ಮ ಋಷಿ-ಮುನಿಗಳು 'ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ ಸ್ವಾಧ್ಯಾಯ ಪ್ರವಚನಗಳನ್ನು ಬಿಡಬೇಡ ಎಂದು ಹೇಳಿದರು.

ಮಹಾತ್ಮರ ಉಪದೇಶಪರ ನುಡಿಗಳು, ವಚನಗಳು ತೀರಾ ಸಣ್ಣವು; ಆದರೆ ಅರ್ಥಪೂರ್ಣವಾದವುಗಳು. ನದಿಯಲ್ಲಿ ತೇಲುವುದಕ್ಕೆ ಬೆಂಡಿನ ಒಂದು ಸಣ್ಣ ಪಿಂಡೆಯಾದರೂ ಸಾಕು. ಅದಕ್ಕೆ ಬೆಂಡಿನ ಹೊರೆ ಅಥವಾ ಬ್ಯಾರಲ್ ಬೇಕೆಂದೇನಿಲ್ಲ. ಹಾಗೆಯೇ ಈ ಸಂಸಾರಸಾಗರದಲ್ಲಿ ತೇಲುವುದಕ್ಕೆ ಬೃಹದ್ ಗ್ರಂಥಗಳೇ ಬೇಕೆಂದೇನಿಲ್ಲ. ಅರ್ಥಗರ್ಭಿತವಾದ ಮಹಾತ್ಮರ ಒಂದು ನುಡಿಯೂ ಸಾಕು.

ಮಹಾತ್ಮರ ನುಡಿಗಳು ದೀಪದಂತೆ ಬೆಳಕನ್ನು ಚೆಲ್ಲುತ್ತವೆ ವಿನಾ ಬೆಂಕಿಯಂತೆ ಉರಿಯುವುದಿಲ್ಲ. ದೀಪ ಯಾರು ಬೆಳಗಿಸಿದರೇನು ಅದು ಬೆಳಕು ಕೊಟ್ಟರೆ ಸಾಕು. ಹಾಗೆ ಜ್ಞಾನದ ಜ್ಯೋತಿಯನ್ನು ಬೆಳಗಿಸುವ ಮಹಾತ್ಮರು ಯಾರಾದರೇನು ನಮ್ಮ ಬದುಕಿನಲ್ಲಿ ಸಂತಸದ ಬೆಳಕು ಬಿದ್ದರೆ ಸಾಕಷ್ಟೆ! ಅಂತೆಯೇ ಚನ್ನಬಸವಣ್ಣನವರು- "ಗೀತ ಮಾತೆಂಬ ಜ್ಯೋತಿಯ ಬೆಳಗಿಸಿಕೊಟ್ಟರು ನಮ್ಮ ಶರಣರು ದೇವಲೋಕಕ್ಕೆ ಬಟ್ಟೆ ಕಾಣಿರೋ!" ಎಂದು ಹೇಳಿದರು. ಅಲ್ಲಮ ಪ್ರಭುದೇವರು ಕೂಡಾ "ಮಾತೆಂಬುದು ಜ್ಯೋತಿರ್ಲಿಂಗ!" ಎಂದು ಹೇಳಿದರು.

**ಅತೀ ಸರ್ವತ್ರ ವರ್ಜಯೇತ್ :**

ನಮ್ಮ ಜೀವನದಲ್ಲಿ ಯಾವುದೂ ಅತಿಯಾಗಬಾರದು. ನಡೆ - ನುಡಿ, ನೋಟ-ಮಾಟ, ಆಟ-ಊಟ ಎಲ್ಲವು ಹಿತಮಿತವಾಗಿ ಇರಬೇಕು.

**ಯುಕ್ತಾಹಾರ ವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**

**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥**

ನಮ್ಮ ಆಹಾರ – ವಿಹಾರ, ಕ್ರಿಯಾ–ಕಲಾಪ, ನಿದ್ರೆ–ಜಾಗರಣಗಳು, ಹಿತ–ಮಿತವಾಗಿದ್ದರೆ ಅದೇ ಯೋಗ. ಅದರಿಂದ ವಿಹಾರ ಸುಖ–ಶಾಂತಿ. ಪಚನವಾಗುವಷ್ಟೇ ವಿಹಾರ, ದೇಹ ದಣಿಯದಷ್ಟೇ ಕಾರ್ಯ, ಜಡತೆ ಆವರಿಸದಷ್ಟು ನಿದ್ರೆ–ಜಾಗರಣೆಗಳು ಇರಬೇಕು. ಬಸವಣ್ಣನವರು ತಮ್ಮ ಒಂದು ವಚನದಲ್ಲಿ ಸುಂದರವಾಗಿ ತಿಳಿಸಿದ್ದಾರೆ.

**ಮನೆ ನೋಡಾ, ಬಡವರು; ಮನ ನೋಡಾ, ಸಂಪನ್ನರು!**

**ಧನ ನೋಡಾ, ಬಡವರು; ಘನ ಮನ ಸಂಪನ್ನರು.**

**ಕೂಡಲ ಸಂಗನ ಶರಣರು ಕರುಳಿಲ್ಲದ ಕಲಿಗಳು**

**ಆರಿಗೂ ಉಪಮಿಸಬಾರದು.**

ಮಹಾತ್ಮರ ಮನೆ ಸಣ್ಣದಿರಬಹುದು, ಧನ ಕಡಿಮೆ ಇರಬಹುದು ಆದರೆ ಅವರ ಮನಸ್ಸು ದೊಡ್ಡದಾಗಿದೆ; ಹೃದಯ ಸಿರಿವಂತವಾಗಿದೆ. ಸಂಸಾರ ವಿಷಯ ವ್ಯಾಮೋಹವೆಂಬ ವೈರಿಯನ್ನೇ ಗೆದ್ದಿರುವ ಮಹಾತ್ಮರಾದ ಆ ಶರಣರನ್ನು ಯಾರೊಂದಿಗೆಯೂ ಹೋಲಿಸಲಾಗದು.

**ವಿಲಿಯಂ ಜೇಮ್ಸ್** ಎಂಬ ಆಂಗ್ಲ ತತ್ತ್ವಜ್ಞಾನಿಯು "ಸ್ವರ್ಗ ನರಕಗಳು ನಮ್ಮ ಮನದ ರಚನೆ!" ಎಂದು ಹೇಳಿರುವನು. ಒಂದು ಸುಂದರ ಸುಭಾಷಿತವಿದೆ.

**ಯೇಷಾಂ ಬಾಹುಬಲಂ ನಾಸ್ತಿ ಯೇಷಾಂ ನಾಸ್ತಿ ಮನೋಬಲಂ ।**

**ತೇಷಾಂ ಚಂದ್ರಬಲಂ ದೇವಬಲಂ ಕಿಂ ಕುರ್ಯಾದಂಬರ ಸ್ಥಿತಮ್** ॥–ಯಶಸ್ತಿಲಕ.

ವಿದೇಶಿಯ ತತ್ತ್ವಜ್ಞಾನಿ **ವರ್ಜನಿಯಾ ವೂಲ್ಪ** ಹೇಳುತ್ತಾರೆ– "ಅತ್ಯಂತ ಚಂಚಲವಾದ ಕೀಟ ಅಥವಾ ಹುಳವೆಂದರೆ ನಮ್ಮ ಮನಸ್ಸು, ಅದು ನಿರಂತರ ಹರಿದಾಡುತ್ತಿರುತ್ತದೆ."

**ಅಕ್ಕ ಮಹಾದೇವಿ**, ನಿರ್ಮಲವಾದ ಪರಮ ಪ್ರೇಮರೂಪ ಭಕ್ತಿರಸವನ್ನು ಕುಡಿದು ಪರಮಾನಂದದ ಕಡಲಲ್ಲಿ ತೇಲಾಡಿದರು.

**ವನವೆಲ್ಲ ನೀವೆ, ವನದೊಳಗಿನ ತರುಮರಾದಿಗಳೆಲ್ಲ ನೀವೆ**

**ಆ ತರುಮರಗಳಲ್ಲಾಡುವ ಖಗಮೃಗಗಳೆಲ್ಲ ನೀವೆ**

**ಚೆನ್ನಮಲ್ಲಿಕಾರ್ಜುನ ದೇವಾ ಸರ್ವಭರಿತನಾಗಿ**

**ಎನಗೆ ನೀ ಮುಖದೋರಾ!**

ಅಕ್ಕಮಹಾದೇವಿಯು, ವನದಲ್ಲಿ, ಗಿಡ-ಮರಗಳಲ್ಲಿ, ಪಶುಪಕ್ಷಿಗಳಲ್ಲಿ ಎಲ್ಲೆಲ್ಲಿಯೂ ಆ ಪರಮಾತ್ಮನನ್ನೆ ಕಂಡು ಧನ್ಯಳಾದಳು.

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**

**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥**

ಗೀತಾ- ೬-೩೪

ಈ ಮನಸ್ಸು ಚಂಚಲವಾಗಿದೆ. ಪ್ರಕ್ಷೋಭೆಕಾರಿಯು, ದುರ್ಜಯಿಯು, ದುರ್ಭೇದ್ಯವು ಆಗಿದೆ. ಇಂತಹ ಮನಸ್ಸನ್ನು ನಿಗ್ರಹಿಸುದೆಂದರೆ ಗಾಳಿಯನ್ನು ನಿಗ್ರಹಿಸಿದಷ್ಟು ಕಷ್ಟಕರವಾಗಿದೆ.

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರು ನಂದನ ।**

**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋ ವ್ಯವಸಾಯಿನಾಮ್ ॥**

ಗೀತಾ- ೨-೪೧

ದೇವಧ್ಯಾನ, ದೇವಜ್ಞಾನರೂಪ ಸತ್ಕಾರ್ಯದಲ್ಲಿ ನಿರತವಾದ ಬುದ್ಧಿಯು ಏಕಮುಖಿ. ವಿಷಯ ಸಂಗ್ರಹ ರೂಪ ಅಸತ್ಕಾರ್ಯದಲ್ಲಿ ನಿರತವಾದ ಬುದ್ಧಿಯು ಬಹುಮುಖಿ!

**ಶ್ರದ್ಧಾವಾನ್‌ಲಭತೇ ಜ್ಞಾನಂ ತತ್ಪರ ಸಂಯುತೇಂದ್ರಿಯಃ ।**

**ಜ್ಞಾನಂ ಲಬ್ಧ್ವಾಪರಾಂ ಶಾಂತಿಮಚಿರೇಣಾಧೀಗಚ್ಛತಿ ॥**

ಗೀತಾ-೪-೩೯

ಗುರು ವಚನದಲ್ಲಿ ಶ್ರದ್ಧೆ, ತತ್ಪರತೆ ಉಳ್ಳ ಜಿತೇಂದ್ರಿಯ ಸಾಧಕನು ಆತ್ಮಜ್ಞಾನ ಪಡೆಯುತ್ತಾನೆ. ಮತ್ತು ಈ ಆತ್ಮಜ್ಞಾನದಿಂದ ಅತ್ಯಂತ ಶೀಘ್ರವಾಗಿ ಪರಮಶಾಂತಿ ಹೊಂದುತ್ತಾನೆ.

**ಮಾತ್ರಾ ಸ್ಪರ್ಶಾಸ್ತು ಕೌಂತೇಯ ಶೀತೋಷ್ಣ ಸುಖ ದುಃಖದಾ ।**

**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿಕ್ಷಸ್ವ ಭಾರತ ॥**

ಇಂದ್ರಿಯಗಳು ವಿಷಯಗಳೊಂದಿಗೆ ಕೂಡಿದಾಗ ಶೀತೋಷ್ಣ ಸಂಬಂಧದ ಸುಖ-ದುಃಖಗಳು ಸಂಭವಿಸುತ್ತವೆ. ಆದರೆ ಅವು ಬಂದು ಹೋಗುತ್ತವೆ; ಸ್ಥಿರವಲ್ಲ. ಆದ್ದರಿಂದ ಅವುಗಳನ್ನು ನಾವು ತಡೆದುಕೊಳ್ಳಬೇಕು.

**ಒಲೆ ಹತ್ತಿ ಉರಿದಡೆ ನಿಲ್ಲಬಹುದಲ್ಲದೆ**

**ಧರೆ ಹತ್ತಿ ಉರಿದಡೆ ನಿಲಲು ಬಾರದು.**

**ಏರಿ ನೀರುಂಬಡೆ, ಬೇಲಿ ಕೆಯ್ಯೆ ಮೇಯ್ವಡೆ**

**ನಾರಿ ತನ್ನ ಮನೆಯಲಿ ಕಳುವೊಡೆ ತಾಯ ಮೊಲೆವಾಲು**

**ನಂಜಾಗಿ ಕೊಲುವಡೆ ಇನ್ನಾರಿಗೆ ದೂರುವೆನಯ್ಯಾ**

**ಕೂಡಲಸಂಗಮದೇವಾ !**

ಬಸವಣ್ಣನವರು ಹೇಳಿರುವಂತೆ ಒಂದು ಮನೆಯಲ್ಲಿ ಇರುವವರಿಗೆ ಒಬ್ಬರ ಮೇಲೆ ಇನ್ನೊಬ್ಬರಿಗೆ ಶ್ರದ್ಧೆ-ವಿಶ್ವಾಸ ಇಲ್ಲದಿದ್ದರೆ ಅಲ್ಲಿ ಬದುಕುವುದೇ ಕಠಿಣವಾಗುತ್ತದೆ. ಹೊಲದಲ್ಲಿ ನೀರನ್ನು ತಡೆಯುವುದಕ್ಕೆ ಹಾಕಿದ ಒಡ್ಡು ತಾನೇ ನೀರನ್ನು ಕುಡಿದರೆ ಹೇಗೆ? ಮನೆಯನ್ನು ಕಾಪಾಡುವ ಗೃಹಿಣಿಯೇ ಮನೆಯಲ್ಲಿ ಕಳವು ಮಾಡಿದರೆ ಹೇಗೆ? ತಾಯಿಯ ಎದೆಯ ಹಾಲು ನಂಜಾದರೆ ಮಗುವಿನ ಗತಿ ಏನು? ಹೀಗೆ ಸಂಶಯ ತಾಳುವ ವಾತಾವರಣ ಮನೆಯಲ್ಲಿದ್ದರೆ ಅಲ್ಲಿ ಬದುಕುವುದಾದರೂ ಹೇಗೆ? ಆದ್ದರಿಂದ ನಮ್ಮಲ್ಲಿ ಮೊಟ್ಟ ಮೊದಲು ಇರಬೇಕಾದುದು ಶ್ರದ್ಧೆ!

**ಪರ ಚಿಂತೆ ನಮಗೇಕಯ್ಯಾ? ನಮ್ಮ ಚಿಂತೆ ನಮಗೆ ಸಾಲದೆ?**

**ಕೂಡಲ ಸಂಗಯ್ಯಾ ಒಲಿದಾನೋ ಒಲಿಯನೋ**

**ಎಂಬ ಚಿಂತೆ ಹಾಸಲುಂಟು, ಹೊದೆಯಲುಂಟು!**

ತಮ್ಮದನ್ನು ಮರೆತು ಬರೀ ಬೇರೆಯವರ ಬದುಕಿನ ಲೋಪ-ದೋಷಗಳನ್ನು ಹುಡುಕುತ್ತ ಹೊರಟವರಿಗೆ ಇದು ಬಸವಣ್ಣನವರು ಹೇಳಿದ ಒಂದು ಕಿವಿಮಾತಾಗಿದೆ. ನಮ್ಮ ಮನಸ್ಸನ್ನು ಹಸನಾಗಿಸಿಕೊಂಡು ಮೊದಲು ನಾವು ಹೂವಾಗಿ ಅರಳಬೇಕು. ಅನಂತರ ನಮ್ಮ ಪರಿಸರ ತಾನೆ ಸುಗಂಧಿತವಾಗುತ್ತದೆ.

ಓರ್ವ ವಿದೇಶದ ಮನಶ್ಶಾಸ್ತ್ರಜ್ಞ ಹೇಳುತ್ತಾನೆ. "ಬೆಳಕು, ಬಣ್ಣ, ಕುಂಚ, ಪರದೆ ಇದ್ದರೆ ಕಲಾವಿದನು ಸುಂದರ ಚಿತ್ರವನ್ನು ಬರೆಯುತ್ತಾನೆ. ಹಾಗೆಯೇ ಬುದ್ಧಿಯ ಬೆಳಕು ಭಾವದ ಬಣ್ಣ ದೇಹವೆಂಬ ಕುಂಚ ಇರುವಾಗ ಆಯುಷ್ಯ ಎಂಬ ಪರದೆಯ ಮೇಲೆ ನಾವು ನಮಗೆ ಬೇಕಾದಂತಹ ಸುಂದರ ಜೀವನದ ಚಿತ್ರ ಬರೆಯಬಹುದು.

**ಅಶ್ರದ್ದಧಾನಾಃ ಪುರುಷಾಃ ಧರ್ಮಸ್ಯಾಸ್ಯ ಪರಂತಪಃ ।**

**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥**

ಓ ಅರ್ಜುನನೇ, ಯಾರಿಗೆ ಈ ಧರ್ಮದಲ್ಲಿ ಶ್ರದ್ಧೆ ಇರುವುದಿಲ್ಲವೋ ಅವರು ನನ್ನನ್ನು ಪಡೆಯುವುದಿಲ್ಲ, ಸದ್ಗತಿಯನ್ನು ಹೊಂದುವುದಿಲ್ಲ. ಬದಲಾಗಿ ಅವರು ಮೃತ್ಯುರೂಪ ಸಂಸಾರದಲ್ಲಿ ಬಿದ್ದು ಬಿಡುತ್ತಾರೆ.

ಬಸವಣ್ಣನವರು ಸಜ್ಜನರ ಸಂಗದ ಮಹಿಮೆಯನ್ನು ಕುರಿತು ತಮ್ಮ ಒಂದು ವಚನದಲ್ಲಿ ಹೀಗೆ ಹೇಳುತ್ತಾರೆ–

**ಸಾರ: ಸಜ್ಜನರ ಸಂಗ ಮಾಡೂದು,**

**ದೂರ: ದುರ್ಜನರ ಸಂಗ ಬೇಡವಯ್ಯಾ.**

**ಆವ ಹಾವಾದರೇನು? ವಿಷವೊಂದೆ,**

**ಅಂತವರ ಸಂಗ ಬೇಡವಯ್ಯಾ.**

**ಅಂತರಂಗ ಶುದ್ಧವಿಲ್ಲದವರ ಸಂಗವು**

**ಸಿಂಗಿ, ಕಾಳಕೂಟ ವಿಷವೋ, ಕೂಡಲಸಂಗಯ್ಯಾ!**

ದುರ್ಜನರ ಸಂಗವು ಹಾವಿನ ವಿಷದಂತೆ ಭಯಂಕರ. ಆವ ಹಾವಾದರೂ ಅದರಲ್ಲಿ ವಿಷವು ಇದ್ದೇ ಇರುತ್ತದೆ. ಹಾಗೆಯೇ ದುರ್ಜನರು ಯಾರಾದರೇನು ಅವರಲ್ಲಿ ದುರ್ಗುಣಗಳು ಇದ್ದೇ ಇರುತ್ತವೆ ಅಂಥವರ ಸಂಗದಲ್ಲಿ ನಾವು ಇರಬಾರದೆಂಬುದೆ ಬಸವಣ್ಣನವರ ಶುಭ ಸಂದೇಶವಾಗಿದೆ.

**ಜಗತ್ ಪ್ರಸಿದ್ಧ ವಿಜ್ಞಾನಿ ಐನ್‌ಸ್ಟೀನರು ಹೇಳುತ್ತಾರೆ–** "ಅನಂತವಾದ ಸತ್ಯದ ಸಂಸ್ತುತಿಯೇ ನನ್ನ ಧರ್ಮವಾಗಿದೆ. ಮತ್ತು ಅನಂತವಾದ ಆ ಮಹಾಸತ್ಯವೇ ನಮಗೋಸ್ಕರ ಈ ಭವ್ಯ-ದಿವ್ಯ ಜಗತ್ತಿನ ರೂಪದಲ್ಲಿ ಅಭಿವ್ಯಕ್ತವಾಗಿದೆ!

**ನಿಯತಂ ಕುರು ಕರ್ಮ ತ್ವಂ ಕರ್ಮ ಜಾಯೋ ಹ್ಯಕರ್ಮಣಃ**

**ಶರೀರ ಯಾತ್ರಾಪಿ ಚ ತೇ ನ ಪ್ರಸಿಧ್ಯೇದಕರ್ಮಣಃ।**

ಗೀತಾ-೨ (೮)

ನಿತ್ಯವು ನಾವು ಕರ್ಮ ಮಾಡುತ್ತಿರಬೇಕು. ಏಕೆಂದರೆ ಅಕರ್ಮಕ್ಕಿಂತ ಕರ್ಮವು ಉತ್ತಮವಾಗಿದೆ. ಅಲ್ಲದೆ ಕರ್ಮ ಮಾಡದಿದ್ದರೆ ಜೀವನವೂ ನಡೆಯುವುದಿಲ್ಲ.

**ಕುರ್ವನ್ನೆವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ**

ಈಶಾವಾಸ್ಯ-೨

ಕರ್ಮಗಳನ್ನು ಮಾಡುತ್ತ ನೂರುವರುಷ ಬದುಕಬೇಕು.

**ಕೋಳಿ ಕೂಗದ ಮುನ್ನ ಏಳುವುದು**

**ನಿತ್ಯ ದಯಾಳು ದೇವನ ನೆನೆದರೆ**

**ಆಳಿನಾಳಯ್ಯ ಸರ್ವಜ್ಞ!**

ಕೋಳಿ ಕೂಗುವ ಮೊದಲು ಎಂದರೆ ಅರುಣೋದಯಕ್ಕೆ ಅಥವಾ ಸೂರ್ಯೋದಯಕ್ಕೆ ಮೊದಲೆ ಏಳಬೇಕು. ನಮಗೆ ಸುಂದರವಾದ ಈ ಜಗತ್ತನ್ನು ಜೀವನವನ್ನು ಕರುಣಿಸಿದ ದಯಾಸಾಗರನಾದ ಆ ಮಹಾದೇವನನ್ನು ಒಂದುಕ್ಷಣ ನೆನೆಯಬೇಕು. ಬೆಳಗ್ಗೆ ಎದ್ದು ಕೂಡಲೇ ನಶ್ವರ ಪ್ರಪಂಚವನ್ನೇ ನೆನೆಯುದಕ್ಕಿಂತ ಪರಮಸತ್ಯ ಪರಮಾತ್ಮನನ್ನು ನೆನಯುವುದು ಉತ್ತಮವಾದುದು. ಅದರಿಂದ ಜೀವನದಲ್ಲಿ ಸುಖ-ಶಾಂತಿ, ನೆಮ್ಮದಿ ನೆಲೆಸುತ್ತದೆ. ಇದು ದಿವ್ಯ ದೇವ ಸ್ಮೃತಿ!

**"ಋತಂ ಚ ಸತ್ಯಂ ಚ ದಮಶ್ಚ ಶಮಶ್ಚ ಅಥಿತಯಶ್ಚ ಸ್ವಾಧ್ಯಾಯ ಪ್ರವಚನೇ ಚ!"**

ಶಮ, ದಮೆ, ಸತ್ಯ, ಆತಿಥ್ಯ ಎಲ್ಲವೂ ಸ್ವಾಧ್ಯಾಯ ಅಥವಾ ಪ್ರವಚನದಲ್ಲಿ ಒಳಗೊಂಡಿವೆ ಎಂದು ನಮ್ಮ ಉಪನಿಷತ್ಕಾರರು ಹೇಳಿದರು.

ಜ್ಞಾನಿಗಳು ತಮ್ಮ ಆಧ್ಯಾತ್ಮಿಕ ಅನುಭವದ ನುಡಿಗಳನ್ನು ವಿಶ್ವದ ತುಂಬ ಹರಡಿ ಹೋಗಿರುವರು. ಆ ಮಹಾತ್ಮರ ನುಡಿಗಳನ್ನು ಮನನ ಮಾಡಬೇಕು, ಮೆಲುಕು ಹಾಕುತ್ತಿರಬೇಕು! ಮನಸ್ಸನ್ನು ಪ್ರಕ್ಷುಬ್ಧಗೊಳಿಸುವ ಮಾತುಗಳನ್ನು ಮೆಲುಕು ಹಾಕುವುದಕ್ಕಿಂತ, ಮಹಾತ್ಮರ ಅನುಭಾವದ ನುಡಿಗಳನ್ನು ಕೇಳುವದರಿಂದ ಓದುವುದರಿಂದ ನಮ್ಮ ಜೀವನದಲ್ಲಿ ಜ್ಞಾನದ ಬೆಳಕು ಬೀಳುತ್ತದೆ. ಸಂತಸದ ಸುಗಂಧ ಹರಡಿಕೊಳ್ಳುತ್ತದೆ.

**ಸರ್ವೇ ಜನಾಃ ಸುಖಿನೋ ಭವಂತು ಸರ್ವೇಜನಾಃ ಭದ್ರಾಣಿ ಪಶ್ಯಂತು ।**

**ಸರ್ವೇ ಸಂತು ನಿರಾಮಯಃ ಮಾ ಕಶ್ಚಿತ್ ದುಃಖ್‌ಭಾಗ್ಭವೇತ್ ॥**

ಎಲ್ಲರೂ ಸುಖಿಗಳಾಗಲಿ, ಎಲ್ಲರಿಗೂ ಮಂಗಲಕರವಾಗಲಿ ಎಲ್ಲರೂ ನಿರೋಗಿಗಳಾಗಲಿ, ಯಾರಿಗೂ ದುಃಖವಾಗದಿರಲಿ.

**ಸಹನಾವವತು ಸಹನೌ ಭುನಕ್ತು ಸಹವೀರ್ಯಂಕರವಾವ ಹೈ ।**

**ತೇಜಸ್ವಿನಾವ ಧೀತಮಸ್ತು ಮಾ ವಿದ್ವಿಷಾವ ಹೈ ॥**

ಆ ಮಹಾದೇವನು ನಮ್ಮನ್ನು ರಕ್ಷಿಸಲಿ, ನಾವು ಒಂದಾಗಿ ಸುಖವನ್ನು ಸವಿಯೋಣ. ನಾವು ವೀರ್ಯವಂತರಾಗಿರೋಣ, ನಮ್ಮಲ್ಲಿ ಎಂದೂ ದ್ವೇಷದ ಗಾಳಿ ಬೀಸದಿರಲಿ.

**ಯಜ್ಞಾರ್ಥಾತ್ಕರ್ಮಣೋऽನ್ಯತ್ರಲೋಕೋऽಯಂಕರ್ಮಬಂಧನಃ**

**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥**

ಗೀತಾ–೩–೯

ಅಮೇರಿಕಾ ದೇಶದ ಮಹಾಜ್ಞಾನಿಗಳಾದ ಎಮರ್ಸನ್ ಹೇಳುತ್ತಾರೆ– "ಒಂದು ತುತ್ತು ಅನ್ನ, ಒಂದು ಗುಟುಕು ನೀರು, ಪರಮಶಾಂತ ವಾತಾವರಣ ಇಪ್ಪಿದ್ರೆ ಸಾಕು; ಅತಿಥಿ ಸತ್ಕಾರ್ಯ ಆಗಿ ಬಿಡುತ್ತದೆ."

**ಎತ್ತೆತ್ತ ನೋಡಿದಡತ್ತತ್ತ  ನಿಮ್ಮನೆ ಕಾಂಬೆ.**

**ಎದ್ದು ನೋಡಿ ನಿಮ್ಮನೆ ಕಾಂಬೆ**

**ನಿದ್ರೆಗೈದು ನಿಮ್ಮನೆ ಕಾಂಬೆ.**

**ಅಹೋರಾತ್ರಿಯಲ್ಲಿ ನಿಮ್ಮ ಧ್ಯಾನದಲ್ಲಿರಿಸು ಮಹಾಲಿಂಗ ಕಲ್ಲೇಶ್ವರಾ!**

ಹಾವಿನಾಳ ಕಲ್ಲಯ್ಯ ಶರಣರು ಹೇಳುವಂತೆ ಮಲಗಿದಾಗಲೂ ಎದ್ದಾಗಲೂ ಕುಳಿತಾಗಲೂ ನಿಂತಾಗಲೂ ಸದಾವಕಾಲ ಮಹಾತ್ಮರ ಆ ಪರಮಾತ್ಮನ ಧ್ಯಾನದಲ್ಲಿಯೇ ಇರುತ್ತಾರೆ. **"ವಿಶ್ವಮಿದಂ ಸರ್ವಂ ಬ್ರಹ್ಮೈವ!"** ಈ ವಿಶ್ವವೆಲ್ಲವೂ ಬ್ರಹ್ಮವೇ ಆಗಿದೆ ಎಂದರು. ವಿದೇಶದ ಮಹಾನುಭಾವಿ ಎಮರ್ಸನ್‌ರು ಕೂಡಾ ಬಹುಸುಂದರವಾಗಿ ಪ್ರಶ್ನಿಸುತ್ತಾರೆ

ಪೂಜ್ಯರು ಹೀಗೆ ಹೇಳುತ್ತಾರೆ– ಜನಪದ ಕವಯಿತ್ರಿಯು ತನ್ನ ದೇಶಿಯ ಭಾಷೆಯಲ್ಲಿ ಹೃದಯಸ್ಪರ್ಶಿಯಾಗಿ ಚಿತ್ರಿಸಿರುವುದನ್ನು ನೋಡುತ್ತೇವೆ.

ಹಸಿರಂಗಿ ತೊಟ್ಟಾನ । ನೀಲುಡುಗಿ ಉಟ್ಟಾನ

ಬೆಳಕಿನಲಿ ಬಣ್ಣ ಬರೆದಾನ । ಮಹಾದೇವ

ನಗುಬನದಿ ನೆಲಿಸ್ಯಾನ ॥

೯. ಭಕ್ತಿಯೋಗ : (ಸುತ್ತೂರಿನಲ್ಲಿ ೧೯೬೫ ರಲ್ಲಿ ಮಾಡಿದ ಆಧ್ಯಾತ್ಮಿಕ ಪ್ರವಚನಗಳ ಸಾರಸಂಗ್ರಹ ಕೃತಿ)

ಪರಮಾತ್ಮನ ಸಾಕ್ಷಾತ್ಕಾರದ ದಾರಿಯಲ್ಲಿ ಭಕ್ತಿಯ ಪಾತ್ರ ಅನನ್ಯವಾದುದು. ನಿಷ್ಕಲ್ಮಷ ಪ್ರೇಮದ ಮೂಲಕ ಭಗವಂತನನ್ನು ಆರಾಧಿಸುವ ಈ ಉಪಾಸನಾ ಮಾರ್ಗ ಸರಳ, ಸಹಜ. ಅಂತೆಯೇ ಪರಮ ಶ್ರದ್ಧೆ ನಿಷ್ಠೆಗಳ ಅನುಪಮ ಸಂಕೇತ. ಈ ಭಕ್ತಿ ಮಾರ್ಗದಲ್ಲಿ ಯಾವುದೇ ಸಿದ್ಧಾಂತಗಳ ವಿಶ್ಲೇಷಣೆಯಿಲ್ಲ; ತಾರ್ಕಿಕ ಪ್ರದರ್ಶನಗಳ ಆಡಂಬರವಿಲ್ಲ. ಸಾಮಾನ್ಯ ಸಾಧಕನಿಗೂ ದೈವ ಚಿಂತನೆಯಲ್ಲಿ ಪಾಲ್ಗೊಳ್ಳುವ ಅವಕಾಶ ನೀಡುವ ಉತ್ತಮ ಯೋಗವೆಂದರೆ ಭಕ್ತಿಯೋಗವೇ.

ಪ್ರೇಮದ ಪರಿಮಳವನ್ನೇ ತಮ್ಮ ಉಸಿರಾಗಿಸಿಕೊಂಡಿದ್ದ ವಿಶ್ವದ ಅನೇಕ ಸಂತರ-ಶರಣರ ಜೀವನ ವಿಧಾನ ಇಲ್ಲಿ ಪರಿಚಯಿಸಲ್ಪಟ್ಟಿದೆ.

ಯೋಗ, ಪ್ರೇಮ ರಸಾಯನ, ನಿರಾಲಂಬ ಪ್ರೇಮ, ಸ್ವರೂಪ ಭಕ್ತಿ, ನಿರ್ಭೀತ, ನಿತ್ಯತೃಪ್ತ, ಸಹಜ ಭಕ್ತಿ, ಸತ್ಯದೃಷ್ಟಿ, ಅದ್ವೇಷ್ಟಾ, ನಿರ್ಲಿಪ್ತ, ನಿಷ್ಕಾಮ, ನಿಷ್ಕಾಮ ಭಕ್ತಿ, ಜ್ಯೋತಿ ಕಂಡಾ!, ಅರಿವು-ಮರೆವು, ಸತ್ಸಂಗ, ಹಂಬಲ, ನಿತ್ಯಾನಿತ್ಯ, ವಿರಾಗ, ಸತ್ಕಾರ್ಯ, ಬೆಳಕಿನ ಬಾಳು, ವಿಷಯ ರಸತ್ಯಾಗ, ಭವಮಾಲೆ, ಚಂದ್ರಗಿರಿ, ರಸಮುಕ್ತಿ, ಪರಮಾಶ್ರಯ, ದೇವಕುಸುಮ.

ಜೀವನು ದೇಹ ಭಾವವನ್ನು ಮರೆತು ದೇವನನ್ನು ನೆನೆಯುತ್ತ ಅವನಲ್ಲೇ ಬೆರೆಯಬೇಕು! ಹೀಗೆ ದೇಹವನ್ನೂ, ದೇಹ ಸಂಬಂಧಿತ ಸಕಲ ಪ್ರಪಂಚವನ್ನೂ ಒಂದುಕ್ಷಣ ಮರೆತು ದೇವನನ್ನು ನೆನೆಯುವುದೇ ಭಕ್ತಿ! ನೆನೆದ ದೇವನಲ್ಲಿ ಮನವೊಂದಾಗುವುದೇ ಯೋಗ, ಭಕ್ತಿಯೋಗ.

ದುಡಿದು ದಣಿದವರಿಗೆಲ್ಲ ನಿದ್ರೆ ಸಹಜ, ಅವಶ್ಯ. ಸಂಸಾರದಲ್ಲಿ ನೊಂದು-ಬೆಂದವರಿಗೆಲ್ಲ ಭಕ್ತಿಯೂ ಅಷ್ಟೇ ಅವಶ್ಯ.

ಭಕ್ತನು ತಾನೇ ಪ್ರೇಮರೂಪ ತಾಳುವುದರಿಂಧ ಯಾರೂ ಆತನನ್ನು ದ್ವೇಷಿಸುವ ಪ್ರಶ್ನೆಯೇ ಉಳಿಯುವುದಿಲ್ಲ. ಭಗವಂತನ ಕರುಣೆಯನ್ನೂ, ಜಗತ್ತಿನ ಪ್ರೇಮವನ್ನೂ ಸಂಪಾದಿಸುವ ಸುಂದರ, ಸುಮಧುರ ವಿದ್ಯೆ 'ಭಕ್ತಿಯೋಗ'.

ಭಕ್ತಿಯು ಒಂದು "ಪ್ರೇಮ ರಸಾಯನ." ಅದನ್ನು ಕುಡಿದಾಗ ಪರಮ ತೃಪ್ತಿ. ಜೀವನದ ಸಮಸ್ಯೆಗಳೆಲ್ಲ ಮರೆ. ಜಗದ ಕಲಹಗಳೆಲ್ಲ ಮಾಯ! ಆಗ ಮಾನವನಿಗೆ ಚಿರಶಾಂತಿ.

ದೇವನು ಎಲ್ಲಿದ್ದಾನೆ ಎನ್ನುವುದನ್ನು ಪೂಜ್ಯರು ಹೀಗೆ ಹೇಳುತ್ತಾರೆ. ಯಾರಿಗೆ ಸಿರಿ-ಸಂಪದ, ಸ್ಥಾನ-ಮಾನಗಳತ್ತ ಲಕ್ಷ್ಯವಿಲ್ಲವೋ ಅದರ ಅಭಿಮಾನವೂ ಇಲ್ಲವೋ ಅಂಥ ಸಂತರ-ಶರಣರ ಹೃದಯದಲ್ಲಿ ನೀನಿರುವೆ.

ಮೈಗೆ ಬಟ್ಟೆಯಿಲ್ಲದ ಬಡವರ ರಟ್ಟೆಯಲ್ಲಿ ನೀನಿರುವೆ. ಬಂಧು ಬಾಂಧವರೇ ಇಲ್ಲದವರಿಗೆ ನೀನೆ ದೀನ ಬಂಧುವಾಗಿರುವೆ. ಜಗತ್ತು ಯಾರನ್ನು ಉಪೇಕ್ಷಿಸಿದೆಯೋ ಅವರನ್ನೇ ನೀನು ಹೆಚ್ಚಾಗಿ ಅಪೇಕ್ಷಿಸುವೆ. ಅವರ ಬಳಿಯಲ್ಲಿಯೇ ನೀನಿರುವೆ. ಅಲ್ಲಿಗೆ ಬಂದು ನಿನ್ನನ್ನು ನಾನು ವಂದಿಸಬೇಕು ಎನ್ನುತ್ತೇನೆ. ಆದರೆ ನನ್ನ ಒಣ ಪ್ರತಿಷ್ಠೆ, ಅಭಿಮಾನ ನನ್ನನ್ನು ನಿನ್ನ ಬಳಿಗೆ ಬಿಡದಾಗಿದೆ!"

ಈ ದೇಹದಲ್ಲಿ 'ನಾನು' ಎಂಬುವುದೊಂದು ಆತ್ಮಜ್ಯೋತಿ! ಅದರಿಂದಲೇ ದೇಹದ ಒಳಹೊರಗೆಲ್ಲ ಬೆಳಕು. ದೇಹ, ಮನ-ಬುದ್ಧಿ ಸಕಲ ಪ್ರಪಂಚವೆಲ್ಲ ಈ ಆತ್ಮನ ಬೆಳಕಿನಲ್ಲಿಯೇ ಶೋಭಿಸುತ್ತದೆ!! ಈ ಆತ್ಮಜ್ಯೋತಿಯನ್ನು ಅರಿತಾಗಲೇ ಮಾನವನ ದುರಭಿಮಾನದ ಕತ್ತಲೆಯು ಕರಗಿ ಹೋಗುತ್ತದೆ. ಅವನ ಹೃದಯದ ಕಮಲ ಅರಳುತ್ತದೆ. ಪರಾಭಕ್ತಿಯ ಪರಿಮಳ, ಸೌರಭ ಹೊರ ಸೂಸುತ್ತದ! ಅದುವೇ ಭಕ್ತಿಯೋಗ!!

ಏಸು, ಬುದ್ಧ, ಬಸವ ಮಹಾವೀರ ಮುಂತಾದ ಮಹಾತ್ಮರಲ್ಲಿ ಈ ಪರಮ ಪ್ರೇಮ ಸೌರಭವನ್ನು ಕಾಣುತ್ತೇವೆ. ಅಂತೆಯೇ ಈ ಭಕ್ತಿಯೋಗವನ್ನು ಆಚರಿಸಿದವನ ಜೀವನ ಪಾವನ! ಅವನ ಬಾಳಕುಸುಮ ಮೃಡನ ಅಡಿಗೆ ಎಡೆಯಾಗುತ್ತದೆ! ಆಗ ಭವಬಂಧನಗಳೆಲ್ಲ ಕಳಚಿ ಹೋಗುತ್ತವೆ. ಭಕ್ತನು ಭಗವದಾನಂದದಲ್ಲಿ ಸಮರಸನಾಗುತ್ತಾನೆ! ನಿತ್ಯಮುಕ್ತನಾಗುತ್ತಾನೆ! ಹೀಗೆ ಜೀವ-ಕುಸುಮವನ್ನು ದೇವ-ಕುಸುಮವನ್ನಾಗಿಸುವುದೇ ಭಕ್ತಿಯೋಗ! ಅದು ಮುಕ್ತಿಯೋಗ!! ಎಂದು ವಿವರಿಸುತ್ತ ಭಕ್ತಿಯೋಗ ಸಮಾಪ್ತಿಗೊಳ್ಳುತ್ತದೆ.

## ೧೦. ದಿವ್ಯಾನುಭವ :

ದೇವರು, ಬಂಧನ, ಪೂರ್ಣ-ಅಪೂರ್ಣ, ಮಗುಮನ, ಭಕ್ತಿ, ಶಬ್ದಬ್ರಹ್ಮ, ಸದ್ಭಕ್ತ, ಅಬಂಧಿತ, ದಿವ್ಯಾನುಭವ, ಧರ್ಮಶಾಲೆ, ನಿರ್ಗುಣದೇವ, ಅನುಭಾವಿ, ಸದ್ಭಾವ, ಪ್ರಪಂಚ-

ಪರಮಾತ್ಮ, ಪರಾಭಕ್ತಿ, ಪ್ರಪಂಚ ಪ್ರೇಮ, ದಿವ್ಯಾನಂದ, ನಿರ್ಬಯಲು, ಪ್ರೇಮಾಮೃತ, ದೈವೀ ಲೀಲೆ, ಆವರ್ತನ ಸತ್ಯ-ಪರಮಸತ್ಯ, ದಿವ್ಯಜ್ಯೋತಿ.

## ೧೧. ಶ್ರೀ ಸಿದ್ಧರಾಮೇಶ್ವರ ವಚನ-ಪ್ರವಚನ :

ಶ್ರೀ ಸಿದ್ಧರಾಮೇಶ್ವರ ವಚನ-ಪ್ರವಚನದಲ್ಲಿ ಶ್ರೀ ಸಿದ್ಧರಾಮೇಶ್ವರರು ಯೋಗಿಗಳು. ಆತ್ಮಾನುಭಾವಿಗಳು. ಅವರ ವಚನ ಮಧುರ ಮಂತ್ರ, ಶಬ್ದ-ಹಂಸ. ಅವು ದೃಷ್ಟಿಯ ಜಾಡ ಹಿಡಿದು ಅಂತರಂಗವನ್ನು ಪ್ರವೇಶಿಸಿದವು; ಅಲ್ಲಿ ಹರವಿದ ಮನಸ್ಸಿನಲ್ಲಿ ತೇಲಿದವು. ಅವುಗಳನ್ನು ಬಳಸಿ ಎದ್ದ ಕಿರುತೆರೆಗಳು, ಆಲೋಚನಾ ಅಲೆಗಳು ನೂರಾರು. ಆ ಅಲೆಗಳ ಒಂದು ಪುಟ್ಟನೋಟ ಈ 'ವಚನ ವ್ಯಾಖ್ಯಾನ'.

ಕನ್ನಡ ನಾಡಿನ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಉದಿಸಿ ಬಂದ ಬಸವಾದಿ ಪ್ರಮಥರು ನಡೆಯಿಸಿದ ಧಾರ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ಜಾಗೃತಿಕ ಕಾರ್ಯ ಅತ್ಯಪೂರ್ವವಾದುದು. ಜಗತ್ತಿನಲ್ಲಿ ಯಾವ ತರತಮ ಭಾವವಿಲ್ಲದೆ ಸರ್ವರಿಗೂ ಸರ್ವವೂ ಲಭ್ಯವಾಗಬೇಕೆಂಬ ಮಹದಾಶಯದಿಂದ ಸಮಾಜದಲ್ಲಿ ನವ ಚೇತನವನ್ನು ನೀಡಿದುದು ಒಂದು ಮಹತ್ವದ ಘಟನೆ. ಇದರ ಫಲವಾಗಿ ಮೂಡಿಬಂದ ಅವರ ವಚನಗಳನ್ನು ಕನ್ನಡದ ಉಪನಿಷತ್ತುಗಳು ಎಂದೇ ಕರೆದಿದ್ದಾರೆ.

ಉಪನಿಷತ್ತುಗಳು ಭಾರತೀಯ ದರ್ಶನದ ಮೂಲ ಸೂತ್ರಗಳು. ಅಂತೆಯೇ ಶರಣ ಸಂಸ್ಕೃತಿಯ ಸಂಪತ್ತು ಈ ವಚನ ಶಾಸ್ತ್ರ ಶರಣರ ವೈಯಕ್ತಿಕ ಸಾಧನೆಯ ನಿಲುವಿನಲ್ಲಿ ಹಾಗೂ ಅನುಭವ ಮಂಟಪದಲ್ಲಿ ಅವರು ಸಮಾವೇಶಗೊಂಡ ಸತ್ಯದರ್ಶನಕ್ಕಾಗಿ ಚರ್ಚಿಸಿದ ಫಲವಾಗಿ ಮೂಡಿ ಬಂದ ವಚನಗಳು ಮಾನವ ಜೀವನದ ಮಹತ್ ತತ್ತ್ವಗಳನ್ನು ವಿವರಿಸುತ್ತವೆ. ಅವನ್ನು "ವಚನಶಾಸ್ತ್ರ" ಎಂದೇ ಪರಿಗಣಿಸಿದ್ದಾರೆ. ಅವು ಇಹಪರಗಳ ಸಾಧನೆಗೆ ಕೈದೀವಿಗಳಾಗಿ ಬೆಳಕು ಬೀರುತ್ತವೆ. ಸಮಾಜದ ಸಾಮಾಜಿಕ ಪಿಡುಗನ್ನು ತೊಡೆದು ಸುಖಿ ಸಮಾಜ, ನಿರ್ಮಾಣಕ್ಕೆ ಹೊಸ ಚೈತನ್ಯವನ್ನು ತುಂಬುತ್ತವೆ. ಅಜ್ಞಾನದತ್ತ, ಮೃತ್ಯುವಿನಿಂದ ಅಮೃತತ್ವದತ್ತ ಕರೆದೊಯ್ಯುತ್ತವೆ. ಸಂತೃಪ್ತ ಹೃದಯಕ್ಕೆ ಸಾಂತ್ವನ ನೀಡುತ್ತವೆ.

ಅದರಲ್ಲೂ ಶಿವಯೋಗಿ ಶ್ರೀ ಸಿದ್ಧರಾಮೇಶ್ವರರ ವಚನಗಳು ಚಿಂತನ ಶೀಲರ ಅಧ್ಯಾತ್ಮ ಪಿಪಾಸುಗಳ ಆಸಕ್ತಿಯನ್ನು ಕೆರಳಿಸುತ್ತವೆ. ಓದಿ ಅರ್ಥ ಮಾಡಿಕೊಳ್ಳುತ್ತ ಹೋದಂತೆ ಜ್ಞಾನ ತೃಷೆ ಹೆಚ್ಚುತ್ತಾ ಹೋಗುತ್ತದೆ. ೨೧ ವಚನಗಳ ನಿರ್ವಚನ ಕೃತಿ ಇದಾಗಿದೆ.

**೧೨. ಗುಣಸಂಪದ:** (ಹುಲಕೋಟಿಯಲ್ಲಿ ಗೀತೆಯ ೧೬ನೆಯ ಅಧ್ಯಾಯ "ದೈವಾಸುರ ಗುಣಸಂಪದ್ವಿಭಾಗ ಯೋಗ" ಆ ಪ್ರವಚನದ ಸಾರ-ಸಂಗ್ರಹ ಕೃತಿ)

ಪೂಜ್ಯರು ಗೀತೆಯ ಒಂದೊಂದು ಅಧ್ಯಾಯದ ಮೇಲೆ ಅಲ್ಲಲ್ಲಿ ಪ್ರವಚನ ಮಾಡುತ್ತಾರೆ. ಎರಡು ವರುಷಗಳ ಹಿಂದೆ ಹುಲಕೋಟಿಯಲ್ಲಿ ಅವರು ಒಂದು ತಿಂಗಳ ಪ್ರವಚನ ನೀಡಿದರು. ಗೀತೆಯ ೧೬ನೆಯ ಅಧ್ಯಾಯ "ದೈವಾಸುರ ಗುಣಸಂಪದ್ವಿಭಾಗ ಯೋಗ" ಅಲ್ಲಿಯ ವಿಷಯ. ಆ ಪ್ರವಚನದ ಸಾರ-ಸಂಗ್ರಹವೇ 'ಗುಣಸಂಪದ'

ಆಶೆ-ಆಮಿಷ, ರೋಷ-ದ್ವೇಷಗಳಂಥ ಆಸುರೀಗುಣಗಳಿಂದ ಕೂಡಿರುವವನು ಹೊರಗೆ ಎಷ್ಟು ಸಿರಿವಂತನಾದರೇನು ಆತ ಬಡವ. ಶಾಂತಿ-ಸಮಾಧಾನ, ಪಾವಿತ್ರ್ಯತೆ-ಪ್ರೇಮಗಳಂಥ ದೈವೀಗುಣಗಳಿಂದ ಕೂಡಿರುವವನು ಹೊರಗೆ ಎಷ್ಟು ಬಡವನಾದರೇನು ಆತ ಸಿರಿವಂತ! ಭಾವಸಿರಿಯೇ ನಿಜವಾದ ಸಂಪದ. ಅದರ ಕೊರತೆಯೇ ಬಡತನ.

ಭಾವಸಿರಿ ಎಂದರೆ ಶಾಂತಿ-ಸಮಾಧಾನ ಮೊದಲಾದ ದೈವೀಗುಣಗಳು. 'ಗುಣಸಂಪದ'ವು ಇಂಥ ಹಲವು ಗುಣಮಣಿಗಳಿಂದ ಕೂಡಿದ ಗ್ರಂಥ. ಒಂದೊಂದು ದೈವೀ ಗುಣವೂ ಅಮೌಲ್ಯ ರತ್ನ! ಅವುಗಳ ಬೆಳಕು ಭವ್ಯ ದಿವ್ಯ! ಅಂಥ ಗುಣ-ಸಿರಿಯನ್ನು ಗಳಿಸುವ ರೀತಿ, ಬದುಕಿನಲ್ಲಿ ಬಳಸುವ ಬಗೆ, ತನ್ಮೂಲಕ ಚಿರ-ಸ್ಥಿರ ಶಾಂತಿಯನ್ನು ಪಡೆಯುವ ಕಲೆ ಎಲ್ಲವನ್ನೂ ಪೂಜ್ಯರು ನಮಗಿಲ್ಲಿ ಕರುಣಿಸಿರುವರು!

**೧೨.೧ ಗುಣಸಿರಿ :**

**(ಅ.) ದೈವಿ-ಗುಣಗಳು** : ಅಭಯ, ಸತ್ವ ಸಂಶುದ್ಧಿ, ಜ್ಞಾನಯೋಗ ವ್ಯವಸ್ಥಿತ ದಾನ, ದಮ, ಯಜ್ಞ, ಸ್ವಾಧ್ಯಾಯ, ತಪ, ಆರ್ಜುನ, ಅಹಿಂಸಾ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ, ಅಪೈಶೂನ್ಯ, ಭೂತದಯೆ, ಅಲೋಲುಪ್ತಿ, ಮಾರ್ದವತೆ, ಹ್ರೀ, ಅಚಾಪಲ್ಯ, ತೇಜ, ಕ್ಷಮಾ, ಧೃತಿ, ಶೌಚ, ಅದ್ರೋಹ, ನಾತಿಮಾನಿತಾ.

(ಆ.) **ಆಸುರಿ-ಗುಣಗಳು** : ದಂಭ, ದರ್ಪ, ಅತಿಮಾನಿತಾ, ಕ್ರೋಧ, ಪಾರುಷ್ಯ, ಅಜ್ಞಾನ.

(ಇ.) **ಸಮಾರೋಪ** : ಬಂಧ-ಮೋಕ್ಷ, ದೈವಾಸುರ ಸೃಷ್ಟಿ.

೧೩. ಸಂಯಮ ಮತ್ತು ಸಿದ್ಧಿ : (ಮೈಸೂರಿನಲ್ಲಿ ೨೦೦೪ ರಲ್ಲಿ ನಡೆದ ಪ್ರವಚನದ ಸಾರಸಂಗ್ರಹ ಕೃತಿ)

ಸಾಮಾನ್ಯ ಸಿದ್ಧಿ, ಸಾಧನಾತ್ಮಕ ಸಿದ್ಧಿ, ಪರಮ ಸಿದ್ಧಿ.

ನಿಜವಾಗಿ ನೋಡಿದರೆ ಪ್ರಾಪಂಚಿಕ ವಿಷಯಗಳ ಹಿಂದೆ ಓಡುವುದು ಸಿದ್ಧಿಯಲ್ಲ; ಪ್ರಾಪಂಚಿಕ ವಿಷಯ ವ್ಯಾಮೋಹವನ್ನು ತೊರೆದು ಸ್ಥಿರವಾಗಿ ನಿಲ್ಲುವುದೇ ಸಿದ್ಧಿ!

**ಮೈತ್ರೀ ಕರುಣಾ ಮುದಿತೋಪೇಕ್ಷಾಣಾಂ**

**ಸುಖದುಃಖ ಪುಣ್ಯಾಪುಣ್ಯಾನಾಂ ವಿಷಯಾಣಾಂ**

**ಭಾವನಾತ್ ಚಿತ್ತಪ್ರಸಾದನಂ**

೧೪. ಶಾಂತಿ ಪಥ :

ಸಾಮಾನ್ಯ ಜೀವನವನ್ನೂ ನಿಧಾನವಾಗಿ ಮೇಲೆತ್ತಿ, ಶಿವಪರಂಜ್ಯೋತಿಯಲ್ಲಿ ಒಂದುಗೂಡಿಸುವ ಸಾಮರ್ಥ್ಯ ರಾಜಯೋಗದಲ್ಲಿದೆ. ಈ ರಾಜಯೋಗಕ್ಕೆ ಎಂಟು ಅಂಗಗಳು. ಅನೇಕ ಅವಯವಗಳು ಕೂಡಿದಾಗ ದೇಹ ಪೂರ್ಣವಾಗುವಂತೆ, ಈ ಸರ್ವ ಅಂಗಗಳು ಕೂಡಿದಾಗ ಯೋಗಸರ್ವಾಂಗ ಸುಂದರವಾಗುವದು; ಪರಿಪೂರ್ಣವೆನಿಸುವದು.

**ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಹಾಗೂ ಸಮಾಧಿ.**

ಇವೇ ಈ ಅಷ್ಟ ಅಂಗಗಳು. ಸಾಧಕ ಎಲ್ಲ ಅಂಗಗಳನ್ನು ಸಾಧಿಸಬೇಕೆಂದಿಲ್ಲ; ಅವನು ಉತ್ತಮೋತ್ತಮ ಅಧಿಕಾರಿಯಾಗಿದ್ದರೆ ಕೊನೆಯ ಎರಡು ಅಂಗಗಳು ಸಾಕು; ಉತ್ತಮನಾಗಿದ್ದರೆ ನಾಲ್ಕಂಗಗಳು ಬೇಕು; ಮಧ್ಯಮ ಅಧಿಕಾರಿಯಾಗಿದ್ದರೆ ಆರಂಗಗಳು ಅವಶ್ಯ; ಇನ್ನೂ ಸಾಮಾನ್ಯ ಅಧಿಕಾರಿಯಾಗಿದ್ದರೆ ಮೊದಲಿನಿಂದ ಕೊನೆಯವರೆಗಿನ ಎಲ್ಲ ಅಂಗಗಳು ಅತ್ಯವಶ್ಯ.

೧೫. ಪೂರ್ಣಯೋಗ : (ತಾಳಿಕೋಟಿಯಲ್ಲಿ ಒಂದು ತಿಂಗಳವರೆಗೆ ನೀಡಿದ ಪ್ರವಚನದ ಸಾರಸಂಗ್ರಹ ಕೃತಿ)

ಹೀಗೆ ಹೇಳುತ್ತಾರೆ- ಯೋಗಗಳು ಹಲವು. ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ, ಧ್ಯಾನಯೋಗ ಮೊದಲಾವುಗಳು. ಎಲ್ಲ ಯೋಗಗಳ ಉದ್ದೇಶ ಒಂದೇ; ಸತ್ಯದರ್ಶನ ಸದಾನಂದ. ಆ ಯೋಗಗಳ ಸಾಮರ್ಥ್ಯ ನಿಸ್ಸೀಮ-ನಿರುಪಮ! ಒಂದೊಂದು ಯೋಗ ಮಾರ್ಗದಲ್ಲಿ ಮುನ್ನಡೆದು ಅನೇಕ ಮಹಾತ್ಮರು ಲೋಕಪೂಜ್ಯರಾಗಿರುವರು. ಎಲ್ಲ ಯೋಗಗಳ ಸಮನ್ವಯ ರೂಪದಲ್ಲಿರುವುದೇ ಪೂರ್ಣಯೋಗ. ಒಂದೊಂದು ಯೋಗದ ಸಾಮರ್ಥ್ಯವೇ ನಿಸ್ಸೀಮವಾಗಿರುವಾಗ ಪೂರ್ಣಯೋಗದ ಕುರಿತು ಏನೆಂದು ಹೇಳುವದು! ಸಾರ್ಥಕ ಬದುಕಿನೊಂದಿಗೆ ನಿಸ್ವಾರ್ಥ ಸೇವೆಯಲ್ಲಿ ಪರಿವರ್ತನ ಪರ್ಯವಸಾನಗೊಳ್ಳುವುದೇ ಪೂರ್ಣಯೋಗ!

ಈ 'ಪೂರ್ಣಯೋಗ'ದ ವಿಷಯದ ಮೇಲೆ ಶ್ರೀ ಗುರುದೇವರು ಐದು ವರುಷಗಳ ಹಿಂದೆ ತಾಳಿಕೋಟಿಯಲ್ಲಿ ಒಂದು ತಿಂಗಳವರೆಗೆ ಪ್ರವಚನ ನೀಡಿದರು. ಅದರ ಸಾರ ಸಂಗ್ರಹವೇ ಈ ಪುಸ್ತಕ. ಎಂದು ಈ ಕೃತಿಯಲ್ಲಿ ಸಂಪಾದಕರಾದ ಡಾ. ಶ್ರದ್ಧಾನಂದ ಮಹಾಸ್ವಾಮಿಗಳು ಅಭಿಪ್ರಾಯಪಡುತ್ತಾರೆ.

ಸಾರ್ಥಕ ಬದುಕು, ಸುಖ-ಶಾಂತಿ, ಸಂತಸ-ಸಮೃದ್ಧಿ, ತನ್ಮಯತೆ, ವ್ಯಾಮೋಹ, ಬಂಧನ-ಭಾರ, ಪೂರ್ಣಯೋಗ, ಜಗದ್ಗುರು, ಶುಭ ಮುಹೂರ್ತ, ಭೇದ-ಭಾವ, ಮಾಡಿ-ಮರೆ, ಮಧುರ ಬಾಳು ಪ್ರಾಮಾಣಿಕತೆ, ಪಾವಿತ್ರ್ಯತೆ, ವಿನಿಯೋಗ, ಸಮಾಧಾನ, ವಿರಾಮ, ತಪ್ಪು ತಿಳುವಳಿಕೆ, ನಿರೀಕ್ಷಣೆ-ಪರೀಕ್ಷಣೆ, ಸತ್ಯ-ಪರಮಸತ್ಯ, ವಿಕಲ್ಪ, ಸದ್ಬುದ್ಧಿ, ಸದ್ಭಾವ, ನಿರ್ಮೋಹ (ವಿರಾಗ), ಮಾಡು-ಮರೆ.

೧೬. ಚಿಂತನೆಗಾಗಿ ಕಥೆಗಳು:

ಪೂಜ್ಯರು ಭಾಷೆಯ ಮೃದು-ಮದುರ, ಉಪನಿಷತ್ ಮಂತ್ರಗಳಂತೆ ಅರ್ಥಗರ್ಭಿತ, ಸೂತ್ರಪ್ರಾಯ! ಶರಣರ ವಚನಗಳಂತೆ ಸರಳ ಸುಂದರ ಹಾಗೂ ಅನುಭಾವಪೂರ್ಣ! ಅವರ ತಪೋಭೂಮಿಕೆಯಲ್ಲಿ ಅರಳಿದ ಈ ಕಥಾಕುಸುಮಗಳು ಸಾಧಕರಿಗೆ ಅಲೌಕಿಕಾನಂದವನ್ನು ನೀಡುತ್ತವೆ. ನಿರಾಯಾಸವಾಗಿ ಭಗವಚ್ಚಿಂತನೆಗೆ ತೊಡಗಿಸುತ್ತವೆ.

ವೈಚಾರಿಕ, ಚಿಂತನೀಯ ಹಾಗೂ ರಸವತ್ತಾದ ಈ ಕಥಾಕುಸುಮಗಳನ್ನು ಭಗವಚ್ಚಿಂತನದಿಂದ ಆಯ್ದುಕೊಂಡು ಚಿಂತನೆಗಾಗಿ ಕಥೆಗಳು ಕೃತಿ ರಚನೆಯಾಗಿದೆ.

ಅನನ್ಯ ಪ್ರೇಮ, ಅಭೀಪ್ಸೆ, ಅವ್ಯಯ ಚಿಂತನ, ಆತ್ಮತೃಪ್ತಿ, ಆನಂದಗೀತೆ, ಆವರ್ತಶೀಲ ಜಗತ್ತು, ಆಶಾಪತಂಗ, ಆಸಕ್ತಿ, ಎಲ್ಲರೂ ಸಿರಿವಂತರು, ಒಳಗೆ ಸ್ಥಳವಿಲ್ಲ, ಕಾರ್ಯಗಳ ಮಧ್ಯೆ ಭಗವದ್ದರ್ಶನ, ಗುರು, ತನ್ಮಯತೆ, ತುಕಾರಾಮ-ಅಧ್ಯಾತ್ಮ, ತೃಪ್ತಿಯ ಬದುಕು, ದಿವ್ಯಭಾವ, ದೃಷ್ಟಿ, ದೇವನು ಅಬಂಧಿತ, ದೇವನು ಇದ್ದಾನೆಯೇ?, ದೊಡ್ಡವರು-ಸಣ್ಣವರು, ಧರ್ಮ-ವಿನಾಶ, ಧ್ಯಾನೋಪಾಸನೆ, ನಾನು ಯಾರು?, ನಿರ್ವಾಣ ಯಾರಿಗೆ?, ನಿಶ್ಚಿಂತನಾಗಿರು, ಪತನ-ಉತ್ಥಾನ, ಪರಮಾಶ್ರಯ, ಪರಿವರ್ತನೆ, ಭ್ರಮಣಚಕ್ರ, ಬರೀ ಪ್ರಜ್ಞೆ, ಮನಸ್ಸು ಚಂಚಲ? ಮಾಯೆ, ಮಹಾಭಕ್ತ, ಮಹಾಪವಾಡ, ಯಾವುದು ಸಂಪದ?, ರಾಗರಹಿತ ಬದುಕು, ಶಾಂತಿದೂತ, ಶಾಶ್ವತತೆಯ ಭ್ರಮೆ, ಸತ್ಯದೇವತೆ, ಸಮದರ್ಶನ, ಸರ್ವವಿದಿತ ಸತ್ಯ, ಸಾಪೇಕ್ಷತೆ, ಸಾಕ್ಷಾತ್ಕಾರ, ಸಾಕ್ಷೀದೃಷ್ಟಿ, ಸಿರಿಯ ಕಟೀರ, ಜ್ಞಾನಲಾಂದ್ರ

<u>೧೬.೧ ದೊಡ್ಡವರು-ಸಣ್ಣವರು</u> : (೨೧ ನೇ ಕಥೆ)

ಒಬ್ಬ ಕುಳಿತಿದ್ದ. ಆತ ಗೋಡೆ ಕಟ್ಟುತ್ತಿದ್ದ. ಅದು ಬಹಳ ಶ್ರೀಮಂತರ ಮನೆ. ಹಾಲುಗಲ್ಲಿನ ಗೋಡೆ. ಒಂದು ದಿನ ಆ ಶ್ರೀಮಂತ ಬಂದು ನಿಂತ ಕಟ್ಟುವದನ್ನು ನೋಡುತ್ತ ಕಟ್ಟುವವ ದೊಡ್ಡ ಕಲ್ಲುಗಳ ಮಧ್ಯ ಚೀಪು ಕಲ್ಲುಗಳನ್ನು ಇಡುತ್ತಿದ್ದ.

ಶ್ರೀಮಂತ ನುಡಿದ- "ಈ ಸಣ್ಣ ಕಲ್ಲು ಏಕೆ? ಕೇವಲ ದೊಡ್ಡ ಕಲ್ಲುಗಳನ್ನು ಜೋಡಿಸಲಾಗದೆ?"

ಆ ಕಟ್ಟುವ ನುಡಿದ, "ಮಾಲೀಕರೆ, ಈ ಬಹು ಅಮೂಲ್ಯವಾದ ದೊಡ್ಡ ದೊಡ್ಡ ಕಲ್ಲುಗಳು ತಮ್ಮ ತಮ್ಮ ಸ್ಥಾನದಲ್ಲಿ ಗಟ್ಟಿಯಾಗಿ ನಿಲ್ಲಬೇಕಾದರೆ ಈ ಪುಟ್ಟ ಕಲ್ಲುಗಳು ಅತ್ಯವಶ್ಯ!"

ದೊಡ್ಡವರು ದೊಡ್ಡವರಾಗಿರಬೇಕಾದರೆ ಸಣ್ಣವರೂ ಅವಶ್ಯ; ಅನಿವಾರ್ಯ!

<u>೧೬.೨ ನಾನು ಯಾರು?</u> : (೨೪ ನೇ ಕಥೆ)

ಒಬ್ಬ ಮನುಷ್ಯ ಸುಶ್ರೇಷ್ಠ ಸಂತನಾದ ಡಾಯೋಜಿನ್ಸನ ಹತ್ತಿರ ಬರುತ್ತಾನೆ. ಪ್ರಶ್ನೆ ಕೇಳುತ್ತಾನೆ- "ನಾನು ಯಾರು, ಹೇಳಿ ಸಂತರೇ" ಎಂದು.

ಆಗ ಡಾಯೋಜಿನ್ಸ ಉತ್ತರಿಸಿದ್ – "ನೀನು? ನೀನು ಎಲ್ಲರಿಗೂ ಗೊತ್ತಿರುವಂತೆ ಶ್ರೀಮಂತ."

ಆಗ ಆತ ಹೇಳಿದ– "ಅದೆಲ್ಲ ಸರಿ ಸಂತರೆ, ನ್ನ ಹತ್ತಿರ ಧನವೇ ಇಲ್ಲದಿದ್ದರೆ ನಾನಾರು?"

ಸಂತ ನುಡಿದ– " ಆಗ ನೀನಾರು? ನನಗೆ ಗೊತ್ತಿಲ್ಲ! ನಿನಗೂ ಗೊತ್ತಿಲ್ಲ! ಅದು ನೀನು!

ಸಂತನ ಮಾತಿನಲ್ಲಿ ವಿರೋಧಾಭಾಸವಿದೆ. ಆದರೂ ಅದು ಸತ್ಯ. ಅದು ಹಾಗೆಯೇ!

೧೬.೩ ಮನಸ್ಸು ಚಂಚಲ ? (೩೪ ನೇ ಕಥೆ)

ಒಬ್ಬ ಸಾಧಕ. ಧಾನ್ಯ ಸಾಧನೆ ಮಾಡುತ್ತಿದ್ದ. ಮನಸ್ಸು ನಿಲ್ಲುತ್ತಿರಲಿಲ್ಲ. ಏನು ಮಾಡಬೇಕು ತಿಳಿಯಲಿಲ್ಲ. ಮಾರ್ಗದರ್ಶನ ಪಡೆಯಲು ಒರ್ವ ಸಂತನ ಬಳಿ ಹೋದ. ತನ್ನ ತಾಪ ತೋಡಿಕೊಂಡ "ಈ ದುಷ್ಟ ಮನಸ್ಸು ನಿಲ್ಲುತ್ತಲ್ಲೇ ಇಲ್ಲ. ಸಂತರೆ, ಉಪಾಯ ಹೇಳಿ" ಎಂದ.

ಆಗ ಆ ಮನಸ್ಸು ಹೇಳಿತು' "ಸಂತರೇ, ಸ್ವಲ್ಪ ಕೇಳಿ. ಈತ ಧ್ಯಾನ ಮಾಡು; ಚಿಂತಿಸು; ಸ್ಥಿರವಾಗಿ ನಿಲ್ಲು; ಎಂದು ಹೇಳುತ್ತಾನೆಯೇ ವಿನಃ ನಾನು ಎಲ್ಲಿ ನಿಲ್ಲಬೇಕು? ಏನು ಧ್ಯಾನಿಸಬೇಕು? ಎಂಬುದನ್ನೇ ಹೇಳುವುದಿಲ್ಲ. ತಪ್ಪು ಯಾರದು ? ತಾವೇ ಹೇಳಿ?"

ಮನಸ್ಸು ಒಳ್ಳೆಯದೇ, ಅದನ್ನು ಜಾಣ್ಮೆಯಿಂದ ಉಪಯೋಗಿಸಿಕೊಳ್ಳಬೇಕು.

ಶ್ರೀ ಸಿದ್ಧೇಶ್ವರ ಸ್ವಾಮಿಗಳು ತಮ್ಮ ಪ್ರವಚನಗಳಲ್ಲಿ ಸರ್ವಧರ್ಮಗಳ ವಿಚಾರಗಳನ್ನು ಸಹಜವಾಗಿ ಬಳಸುವುದರಿಂದ ಅವು ವಿಶಾಲವ್ಯಾಪ್ತಿಯ ಪರಿಣಾಮವನ್ನು ಪಡೆದಿವೆ. ಉದಾಹರಣೆಗೆ : 'ವಿಶ್ವದ ವಿವಿಧ ಧರ್ಮದ ಸೂಕ್ತಿಗಳು' ಕೃತಿ. ಸಂಗ್ರಹಿಸಿದನ್ನು ಇಲ್ಲಿ ಗಮನಿಸಬಹುದು.

## ೧೭. ವಿಶ್ವದ ವಿವಿಧ ಧರ್ಮದ ಸೂಕ್ತಿಗಳು

### ೧೭.೧ ಹಿಂದೂ ಧರ್ಮಸೂಕ್ತಿ :

- ವಿಶ್ವದ ಉದಯ, ಸ್ಥಿತಿ, ಲಯಗಳಿಗೆ ಮೂಲ ಆಧಾರವಾದುದು ಬ್ರಹ್ಮ.
- ಬ್ರಹ್ಮವು ಸತ್ಯ; ಜ್ಞಾನ ಹಾಗೂ ಅನಂತರೂಪ.
- ಪರಮಾತ್ಮನು ತನ್ನ ಅಚಿಂತ್ಯ ಶಕ್ತಿಯ ಮೂಲಕ ಈ ಸಮಗ್ರಜಗತ್ತನ್ನು ಸೃಷ್ಟಿಸಿದ್ದಾನೆ ಹಾಗೂ ಸೃಷ್ಟಿಯ ತುಂಬ ವ್ಯಾಪಿಸಿದ್ದಾನೆ.
- ದೇವರು ಸಾಗರ; ಜಗತ್ತು ವಸ್ತು, ವ್ಯಕ್ತಿಗಳ ತೆರೆಗಳು.
- ಪರಮಾತ್ಮನ ದೃಷ್ಟಿಯ ದೃಷ್ಟಾರ, ಶ್ರೋತೃದ ಶ್ರೋತಾರ, ಮನಸ್ಸಿನ ಮಂತಾರ.
- ದೇವನು ಜಗತ್ತನೆಲ್ಲ ತುಂಬಿ ಅದರ ಆಚೆಗೂ ವ್ಯಾಪಿಸಿದ್ದಾನೆ. ಅವನಿಗೆ ರೂಪು ಇಲ್ಲ, ನಾಮವಿಲ್ಲ, ದುಃಖ ಇಲ್ಲ.
- ಜಗತ್ತು ಪರಮಾತ್ಮನ ಸಂಪತ್ತು. ಅದೇ ಭಾವದಿಂದ ಉಪಭೋಗಿಸು.
- ಸತ್ಯ, ತಪ, ಜ್ಞಾನ, ಹಾಗೂ ಬ್ರಹ್ಮಚರ್ಯದಿಂದ ಆತ್ಮದರ್ಶನ. ಯೋಗ ದರ್ಶಿಸುವ ಆತ್ಮನು ಶರೀರದ ಒಳಗಡೆಯೇ ಇದ್ದಾನೆ.
- ತಪಸ್ಸು, ದಾನ, ಸರಳ ಜೀವನ, ಪರರಿಗೆ ಪೀಡೆ ಕೊಡದಿರುವುದು ಹಾಗೂ ಸತ್ಯ ಇವೇ ಧರ್ಮದ ಲಕ್ಷಣಗಳು.
- ಗರ್ವ ಪಡಬೇಡ; ಎಲ್ಲವೂ ಪರಮಾತ್ಮನಿಂದ ಸಾಗುತ್ತದೆ.
- ದಾನ ಮಾಡು, ಶತ್ರುಗಳು ನಷ್ಟವಾಗುತ್ತಾರೆ; ಶತ್ರುಮಿತ್ರನಾಗುತ್ತಾನೆ. ದಾನದಲ್ಲಿ ಎಲ್ಲವೂ ಸಮಾವೇಶವಾಗಿದೆ; ಆದ್ದರಿಂದ ದಾನ ಸರ್ವಶ್ರೇಷ್ಠ.
- ಧರ್ಮದ ಲಕ್ಷಣ ಹತ್ತು– ೧) ಧೈರ್ಯ ೨) ಕ್ಷಮೆ ೩) ಇಂದ್ರಿಯಗಳನ್ನು ನಿರೋಧಿಸುವದು ೪) ಕಳವು ಮಾಡದಿರುವದು ೫) ಹೊರಗೆ ಒಳಗೆ ಶುಚಿಯಾಗಿರುವದು ೬) ಮನಸ್ಸನ್ನು ನಿಗ್ರಹಿಸುವುದು ೭) ಸನ್ಮತಿ ೮) ಆತ್ಮವಿದ್ಯೆ ೯) ಸತ್ಯ ೧೦) ಅಕ್ರೋಧ.

- ದಿನವೂ ಗುರುಜನರನ್ನು ವಂದಿಸು ಸೇವೆ ಮಾಡುವವನಿಗೆ ಆಯುಷ್ಯ, ವಿದ್ಯೆ, ಯಶ, ಬಲ– ಈ ನಾಲ್ಕೂ ವರ್ಧಿಸುತ್ತವೆ.

- ಸತ್ಯವೇ ಪರಮ ಧರ್ಮ, ಸತ್ಯ ನುಡಿ, ಸವಿಯಾಗಿ ನುಡಿ, ಕಹಿ ಸತ್ಯ ಹೇಳಬೇಡ, ಸವಿಯಾಗಿದೆಯೆಂದು ಸುಳ್ಳನ್ನು ಹೇಳಬೇಡ. ಇದೇ ವೇದಶಾಸ್ತ್ರಗಳಲ್ಲಿ ಹೇಳಿದ ಧರ್ಮ

<u>೧೭.೨ ಜೈನ ಧರ್ಮಸೂಕ್ತಿ</u> :

- ಪರಿಮಿತಿಗಳನ್ನು ಕಳಚಿ, ತನ್ನೆಲ್ಲ ಸುಪ್ತ ಶಕ್ತಿಗಳನ್ನು ವಿಕಾಸಗೊಳಿಸಿಕೊಂಡು ಅಮೃತಪುರುಷನಾದ ಆತ್ಮನೇ ಪರಮಾತ್ಮ. ಸದಾಶಿವ, ಪರಬ್ರಹ್ಮ, ಆತ್ಮ, ತಥಾಗತ–ಇವು ಒಬ್ಬನೇ ಪರಮಾತ್ಮನ ನಾಮಗಳು. ಬರೀ ಶಬ್ದ ಭೇದಅಷ್ಟೇ.

- ಸಂಸಾರವು ದುಃಖರೂಪವಾಗಿದೆ. ಹುಟ್ಟುವಾಗ ದುಃಖ, ಮುಪ್ಪಿನಲ್ಲಿ ದುಃಖ, ರೋಗ ಮರಣಗಳಲ್ಲಿ ದುಃಖ.

- ದ್ವಂದ್ವ ಸಂಘರ್ಷಣೆಯಿಂದ ಪಾರಾದ, ಮಮತೆಯನ್ನು ಕಳೆದುಕೊಂಡ, ರಾಗದದ್ವೇಷಗಳನ್ನು ಕಳಚಿಹಾಕಿದ ವಿವೇಕಿಯು ಮಾತ್ರ ಮುಕ್ತ; ಅವನನ್ನು ಸಂಸಾರ ದುಃಖ ಬಾಧಿಸದು.

- ಜೀವಿಗಳಲ್ಲಿ ದಯೆ, ಇಂದ್ರಿಯಗಳ ಮೇಲೆ ಹಿಡಿತ, ಸತ್ಯ ವಚನ. ಅಸ್ತೇಯ, ಬ್ರಹ್ಮಚರ್ಯ, ಸಂತೋಷ, ಸಮ್ಯಕ್‌ದರ್ಶನ್ ಜ್ಞಾನ, ತಪ–ಇವು ಶೀಲ. ಈ ಶೀಲವೇ ಮೋಕ್ಷದಮೆಟ್ಟಲು.

- ಅಹಿಂಸೆಯು ಪರಮ ಧರ್ಮ.

- ಯಾರ ಮನಸ್ಸಿನಲ್ಲಿ ಯಾವಾಗಲೂ ಧರ್ಮ ಇರುತ್ತದೆಯೋ ಅವನಿಗೆ ದೇವತೆಗಳು ಕೂಡ ವಂದಿಸುತ್ತಾರೆ.

- ಸರಿಯಾದ ನಂಬಿಕೆ, ಸತ್ಯವಾದ ಜ್ಞಾನ ಹಾಗೂ ಸುಚರಿತಗಳಿಂದ ಅಮರಸೌಖ್ಯದ ಪ್ರಾಪ್ತಿ.

- ಜೂಜು, ಮಾಂಸಾಹಾರ, ಸುರಾಪಾನ, ಲಂಚ, ವ್ಯಭಿಚಾರ, ಬೇಟೆ ಹಾಗೂ ಕಳವು – ಈ ಏಳು, ವ್ಯಕ್ತಿಯನ್ನು ನರಕಕ್ಕೆ ಒಯ್ಯುತ್ತವೆ.

- ಅಹಿಂಸೆಯನ್ನು ಪರಿಪಾಲಿಸುವವ ಸುರಾಪಾನ, ಮಾಂಸಾಹಾರ ಮತ್ತು ಕ್ರೋಧ – ಈ ಮೂರನ್ನು ಬಿಡಲೇಬೇಕು.

- ಸ್ವಾರ್ಥ ಸಾಧನೆಗಾಗಿಯಾಗಲಿ, ಪರರ ಲಾಭಕ್ಕಾಗಿಯಾಗಲಿ ಸುಳ್ಳು ಹೇಳಬೇಡ. ಸಿಟ್ಟಿನಲ್ಲಿ ಹಾಗೂ ಅಂಜಿಕೆ ಉಂಟಾದಾಗ ಅಸತ್ಯ ನುಡಿಯದಿರು. ನೀನಷ್ಟೇ ಅಲ್ಲ; ಇನ್ನೊಬ್ಬರಿಂದಲೂ ಹೇಳಿಸಬೇಡ.

- ಸತ್ಯವಿದ್ದರೇನಾಯ್ತು, ಪರರ ಮನಸ್ಸಿಗೆ ನೋವಾಗುತ್ತಿದ್ದರೆ ಮೌನವಾಗಿರು.

- ಎಲ್ಲ ಪ್ರಾಣಿಗಳನ್ನೂ ನನ್ನ ಮನಸ್ಸು ಸ್ನೇಹದಿಂದ ಕಾಣಲಿ; ಗುಣವಂತರನ್ನು ಕಂಡು ಸಂತೋಷಿಸಲಿ; ದುಃಖಿಗಳನ್ನು ನೋಡಿ ಮರುಕಪಡಲಿ; ವಿಪರೀತ ಆಚಾರವುಳ್ಳವರನ್ನು ಕಂಡಾಗ ಉದಾಸೀನವಾಗಲಿ.

- ಸತ್ಯವ್ರತಿಯು ಬಾಧಕ ಹಾಸ್ಯ ವಸ್ತುವಿನ ವ್ಯಾಮೋಹ ಹೇಡಿತನ ಹಾಗೂ ಸಿಟ್ಟುಗಳನ್ನು ಬಿಡಬೇಕು. ಮಾತನಾಡುವ ಮುಂಚೆ ವಿಚಾರ ಮಾಡಬೇಕು.

**೧೭.೩ ಬೌದ್ಧ ಧರ್ಮಸೂಕ್ತಿ :**

- ಯಾವುದನ್ನು ಕಣ್ಣು ನೋಡದು, ಮತಿ ಗ್ರಹಿಸದು ಅದು ಪರಮ ಸತ್ಯ ಅದು

- ಅವರ್ಣನೀಯ. ಅದನ್ನು ಶೂನ್ಯವೆಂದಾಗಲಿ, ಶೂನ್ಯವಲ್ಲವೆಂದಾಗಲೀ ವರ್ಣಿಸಲಾಗದು. ಆದರೂ ನಿರ್ದೇಶನಕ್ಕಾಗಿ ಶೂನ್ಯ ಎಂದು ಕರೆಯಲಾಗಿದೆ.

- ಶೂನ್ಯ ಸತ್ಯವು ಕಾರ್ಯ-ಕಾರಣ, ವೃತ್ತಿ-ವಿಚಾರಗಳಿಗೆ ನಿಲುಕದು. ಅದು ಅಜ, ಅಪ್ರಮಾಣ. ಅದು ಅ-ನಿರ್ವಚನೀಯ, ಅಗ್ರಾಹ್ಯ ಹಾಗೂ ಅಪ್ರಮೇಯ, ಭಾಷೆ ಹಾಗೂ ವಿಚಾರಗಳು ಅದನ್ನು ತಲುಪವು.

- ಆತ್ಮನು ಈ ನಿಜರೂಪ ತಿಳಿದಾಗ ಆಶೆಗಳು ಹಾಗೂ ಅಹಂಕಾರ ನಾಶವಾಗುತ್ತವೆ. ದುಃಖ ಅಳಿಯುತ್ತದೆ.

- ಸುವರ್ಣ ನಾಣ್ಯಗಳ ವರ್ಷಾವದಿಂದಲೂ ಆಶೆಯ ತೃಪ್ತಿ ಉಂಟಾಗದು. ಇದನ್ನು ತಿಳಿದ ಜ್ಞಾನಿಯು ಸ್ವರ್ಗ ಸುಖಗಳನ್ನು ಬಯಸುವುದಿಲ್ಲ. ಬುದ್ಧ ಭಿಕ್ಷುವು ಆಶೆಯ ನಾಶದಲ್ಲಿ ಸಂತೋಷಪಡುತ್ತಾನೆ.

- ದ್ವೇಷಿಗಳ ಮಧ್ಯದಲ್ಲಿ ಮೈತ್ರಿಯಿಂದಿರುವವ ಸುಖಿ. ವೈರಿಗಳ ನಡುವೆ ಸ್ನೇಹದಿಂದಿರುವವ ಸುಖಿ.
- ಲೋಭಿಗಳ ಮಧ್ಯೆ ನಿರ್ಲೋಭಿಯಾಗಿ ಪರಿಗ್ರಹಿಗಳ ಮಧ್ಯೆ ಅಪರಿಗ್ರಹಿಯಾಗಿ ಇರುವವ ಸುಖಿ.
- ಕಾಮದಂಥ ಅಗ್ನಿಯಿಲ್ಲ, ದ್ವೇಷದಂಥ ದೋಷವಿಲ್ಲ. ನಿರ್ವಾಣದಂತ ಸುಖಸಂತೋಷವಿಲ್ಲ.
- ಪ್ರಾಣಘಾತಕ, ಅಸತ್ಯವಾದಿ, ಪರದ್ರವ್ಯಾಪಹಾರಕ, ಪರಸ್ತ್ರೀಮೋಹಿ ಹಾಗೂ ಮಾದಕದ್ರವ್ಯಾಸಕ್ತನಾದ ಮನುಷ್ಯನು ಬದುಕಿರುವಾಗಲೇ ತನ್ನ ಸಮಾಧಿ ಅಗೆಯುತ್ತಾನೆ.
- ಉದ್ಯಮಶೀಲನಾದ ಆತ್ಮಸಂಯಮಿಯು ಏಕಾಂಗಿಯಾಗಿ ನಡೆಯುತ್ತಾನೆ, ಕೂಡುತ್ತಾನೆ, ಮಲಗುತ್ತಾನೆ, ಅವನು ಅರಣ್ಯದ ಮಧ್ಯದಲ್ಲೂ ಪರಮ ಶಾಂತಿಯನ್ನು ಅನುಭವಿಸುತ್ತಾನೆ.
- ಕಾಮ ಹಾಗೂ ಕ್ರೋಧಗಳನ್ನು ಬಿಸಾಕಿ ನಿನ್ನ ಜೀವನ ನೌಕೆಯನ್ನು ಹಗುರು ಮಾಡಿಕೊ. ಸುರಕ್ಷಿತವಾಗಿ ನಿರ್ವಾಣ ತಲುಪುವೆ.
- ಧ್ಯಾನಿಸು, ಚಿಂತಿಸು, ವಿವೇಚಿಸು; ವಿಷಯಗಳಲ್ಲಿ ಮನಸ್ಸನ್ನು ಹರಿಬಿಡಬೇಡ. ದುಃಖ ನೀಗುವೆ.
- ನಿಜವಾದ ಉಪದೇಶಕ ಗುರುವಿನ ಬಟ್ಟೆಯೆಂದರೆ ತಾಳ್ಮೆ. ಅನಂತದ ಪ್ರೇಮವೇ ಅವನ ನಿವಾಸ. ಆತ್ಮಪ್ರಶಂಸೆ, ಹೀನ ಜನರ ಸಂಘ ಹಾಗೂ ದ್ರವ್ಯದ ಆಶೆಗಳಿಂದ ದೂರಿರುವದು ಅವನ ಶೀಲ. ಅವನು ಇನ್ನೊಬ್ಬ ಉಪದೇಶಕನನ್ನು ಬಯ್ಯುವದಿಲ್ಲ, ಕಠೋರ ಶಬ್ದಗಳನ್ನು ಬಳಸುವುದಿಲ್ಲ. ಕಲಹಾತ್ಮಕವಾದ ವಿವಾದದಲ್ಲಿ ಕೈಹಾಕುವದಿಲ್ಲ. ಅವನ ಆಚಾರ, ವಚನ ಹಾಗೂ ವಿಚಾರಗಳಲ್ಲಿ ಶಾಂತಿ ನೆಲೆಸಿದೆ.

<u>೧೭.೪ ಕ್ರೈಸ್ತ ಧರ್ಮಸೂಕ್ತಿ</u> :

- ಪೂರ್ವದಲ್ಲಿ ಪರಮಾತ್ಮನೊರ್ವನೆ ಇದ್ದ. ಜಗತ್ತು ಇರಲಿಲ್ಲ. ಕರುಣಾಮೂರ್ತಿಯಾದ ಅವನು ಜಗತ್ತನ್ನು ನಿರ್ಮಿಸಿದ.
- ದೇವನು ಪ್ರೇಮರೂಪ.

- ದೇವನು ಒಬ್ಬ. ಅವನು ಪರಮ ಪವಿತ್ರ, ಪರಮ ಕರುಣಾಮಯಿ, ನ್ಯಾಯಶೀಲ, ಕ್ಷಮಾಶೀಲ.
- ವಿಶ್ವದ ಒಡೆಯನಾದ ಅವನು ಸರ್ವಜ್ಞ, ಸರ್ವಶಕ್ತಿವಂತ, ಸರ್ವವ್ಯಾಪ್ತಿ; ಅನಾದಿ ಅನಂತ, ನಿತ್ಯ, ಪೂರ್ಣ.
- ದೇವರೇ ಸತ್ಯ. ಅವನ ನಿಜಜ್ಞಾನ ಪಡೆಯುವದೇ ಅಮರ ಜೀವನ. ಅವನನ್ನು ಅರಿತರೆ ಆತ್ಮಸ್ವಾತಂತ್ರ್ಯ (ಪಾಪಯುಕ್ತಿ) ದೊರೆಯುತ್ತದೆ.
- ಸಿರಿವಂತರು ದೇವರಾಜ್ಯ ಪ್ರವೇಶಿಸರು.
- ನೆರಹೊರೆಯವರನ್ನು ಪ್ರೀತಿಸದವರು ದೇವರನ್ನು ತಿಳಿಯರು.
- ಸ್ವರ್ಗ–ನರಕ ನಿನ್ನ ಹೃದಯದಲ್ಲಿವೆ. ಪ್ರೀತಿಸು, ಸ್ವರ್ಗಸೌಖ್ಯ ಅನುಭವಿಸು. ದ್ವೇಷಿಸು, ನರಕ ದುಃಖ ಅನುಭವಿಸು.
- ಆನರು ನೋಡಲೆಂದು ಪ್ರಾರ್ಥಿಸಬೇಡ; ಏಕಾಂತದಲ್ಲಿ ಪ್ರಾರ್ಥಿಸು.
- ನಾವು ದೇವನಲ್ಲಿಯೇ ಬಾಳಿದ್ದೇವೆ, ದೇವನತ್ತ ಬನ್ನಿ; ನಿಮಗೆ ಶಾಂತಿ ಸಮಾಧಾನ ಕೊಡುತ್ತಾನೆ.
- ನಿಮ್ಮ ಅಂತರಂಗದಲ್ಲಿಯೇ ದೇವರಾಜ್ಯವಿದೆ
- ವೈರಿಯನ್ನು ಪ್ರೀತಿಸಿರಿ.
- ಯಾರನ್ನೂ ಕೆಟ್ಟ ದೃಷ್ಟಿಯಿಂದ ನೋಡಬೇಡಿ; ಅದು ಅಪರಾಧ. ಕೆಟ್ಟವರಿಗೆ ಒಳ್ಳೆಯದನ್ನು ಮಾಡಿರಿ. ನಿಮ್ಮ ಬಲಗೆನ್ನೆಗೆ ಹೊಡೆದವನಿಗೆ ನಿಮ್ಮ ಎಡೆಗೆನ್ನೆ ಮುಂದೆ ಮಾಡಿರಿ.
- ಪಾಪವನ್ನು ತಿರಸ್ಕರಿಸಿರಿ; ಪಾಪಿಯನ್ನು ತಿರಸ್ಕರಿಸಬೇಡಿ.

### ೧೭.೫ ಇಸ್ಲಾಂ ಧರ್ಮಸೂಕ್ತಿ :

- ಪರಮಾತ್ಮನು (ಅಲ್ಲಾನು) ದೊಡ್ಡವ. ಅವನೊಬ್ಬನೇ ಇದ್ದಾನೆ. ಅವನ ಬಿಟ್ಟು ಯಾರೂ ಇಲ್ಲ.
- ಅವನೇ ಸರ್ವ ವಿಶ್ವದ ಆದಿ, ಅಂತ್ಯ. ಅವನು ದೃಶ್ಯನೂ ಸರಿ ಅದೃಶ್ಯನೂ ಸರಿ. ಅವನು ಸರ್ವಜ್ಞ, ನೀನೆಲ್ಲಿಯೋ ಇದ್ದರೂ ನಿನ್ನೊಂದಿಗೆ ಅವನಿದ್ದಾನೆ. ನಿನ್ನ ಎಲ್ಲ ಕಾರ್ಯಗಳನ್ನು ನೋಡುತ್ತಾನೆ.
- ಅವನು ಕರುಣಾಳು, ದಯಾಘನ, ನಿತ್ಯಸತ್ಯ, ಸರ್ವಕರ್ತ, ಸರ್ವಕಾರಣ.
- ದೇವನೇ ಮನುಷ್ಯನಿಗೆ ಎಲ್ಲವನ್ನೂ ಕರುಣಿಸಿದ್ದಾನೆ.
- ಅವನು ಸ್ವರ್ಗದ ಬೆಳಕು; ಮರ್ತ್ಯದ ಪ್ರಭೆ.
- ನಾವು ಅವನಿಂದ ಬಂದಿದ್ದೇವೆ, ಅವನತ್ತ ಹೋಗುತ್ತೇವೆ.
- ಸ್ವರ್ಗರಾಜ್ಯ. ಮರ್ತ್ಯದರಾಜ್ಯ ಅವನಿಗೆ ಅವನೇ ಸರ್ವಕರ್ತ.
- ದೇವನನ್ನೇ ಸೇವಿಸು. ಅವನ ಆಜ್ಞೆಯಂತೆ ನಡೆ. ನಿಯಮಿತ ಪ್ರಾರ್ಥನೆ, ಉಪವಾಸ, ದಾನ ಹಾಗೂ ಮಕ್ಕಾ ಯಾತ್ರೆಗಳು ಮಾನವನ ಪವಿತ್ರ ಕಾರ್ಯಗಳು. ಇವುಗಳಿಂದ ದೇವನು ಸಂಪ್ರೀತನಾಗುತ್ತಾನೆ; ನಮ್ಮನ್ನು ಅನುಗ್ರಹಿಸುತ್ತಾನೆ. ತನ್ನ ಅಮರ ರಾಜ್ಯದಲ್ಲಿ ಪ್ರವೇಶ ನೀಡುತ್ತಾನೆ.

### ೧೭.೬ ಲಿಂಗಾಯತ ಧರ್ಮಸೂಕ್ತಿ :

- ನಾದ, ಬಿಂದು, ಕಳೆ, ಮೋಳೆದೋರದಂದು, ದೇಹದೇಹಿಗಳ ಉತ್ಪತ್ತಿಯಾಗದಂದು, ಜೀವಾತ್ಮ ಪರಮಾತ್ಮ ಭೇದ ಇಲ್ಲದಂದು, ಸಕಲ ಸಚರಾಚರಗಳನ್ನು ಸುಳಿಯದಂದು ಒಂದು ದಿವ್ಯ ವಸ್ತುವಿತ್ತು; ಅದೇ ಶೂನ್ಯ ದೇವ.
- ಅವನು ಸ್ವಯಂಭು; ಕಾರ್ಯನಲ್ಲ ಕಾರಣನಲ್ಲ; ಅವನಿಗೆ ಇದಿರಾಗಿ ಏನಿಲ್ಲ, ಅವನು ಅಪ್ರತಿಮ, ಅದ್ವಯ, ನಿಷ್ಕಲ, ಅಖಂಡ, ಪರಿಪೂರ್ಣ, ವರ್ಣನೆಗೆ ನಿಲುಕದ ಚಿದ್ಘನ ವಸ್ತು.

- ಏನೆಂದೆನಲಿಲ್ಲದ ಆ ಮಹಾಘನವು ತನ್ನ ಲೀಲೆಯಿಂದ ತಾನೆ ಸ್ವಯಂಲಿಂಗಭಾವ ತಲೆದೋರಿತು ಅದರಿಂದ ಚರಾಚರ ವಿಶ್ವದ ರಚನೆ.

- ಪರಮಾತ್ಮ, ಪರಶಿವ, ಪರಬ್ರಹ್ಮ – ಹೀಗೆ ಹಲವಾರು ನಾಮಗಳು ಲೋಕಗಳೇ ಆ ಭಿತ್ತಿಯ ಮೇಲೆ ಮೂಡಿದ ಸುಂದರ ಚಿತ್ರಗಳು. ಅವನು ಸಾಗರ; ಮೂವ್ವತ್ತಾರು ತತ್ವಗಳು ತೆರೆ ಗುರುಳೆಗಳು.

- ನೆಲದ ಮರೆಯ ವಿಧಾನದಂತೆ, ಮುಗಿಲು ಮರೆಯಲಡಗಿದ ಮಿಂಚಿನಂತೆ, ಬಯಲ ಮರೆಯಲಡಗಿದ ಮರೀಚಿಯಂತೆ.

- ತನು, ಮನ, ಪ್ರಾಣಿಗಳ ಮರೆಯಲ್ಲಿರ್ದ ಪರಮಾತ್ಮನನ್ನು ಅರಸಬೇಕು, ಆನಂದ ಅನುಭವಿಸಬೇಕು.

- ಒಂದೇ ವಸ್ತುವು ತನ್ನ ಲೀಲೆಯಿಂದ ಪರಮಾತ್ಮ ಜೀವಾತ್ಮನಾಯಿತು. ಪರಮಾತ್ಮನೇ ಲಿಂಗ. ಜೀವಾತ್ಮನೇ ಅಂಗ, ಸಂಗತವೇ ಏಕಾತ್ಮ. ತತ್‌ಪದವೇ ಪರಮಾತ್ಮ, ತ್ವಂಪದವೆ ಜೀವಾತ್ಮ ಅಸಿ ಪದವೇ ತಾದಾತ್ಮ್ಯ.

- ಏನಾನ್ನಾದರೂ ಸಾಧಿಸಬಹುದು. ಮತ್ತೇನನ್ನಾದರೂ ಸಾಧಿಸಬಹುದು. ತಾನಾರೆಂಬುದು ಸಾಧಿಸುವದು ಕಷ್ಟ. ದೇವನ ಕೃಪೆಯಿಂದಲ್ಲದೆ ಅದು ಸಾಧ್ಯವಾಗದು.

- ದೇಶ ದೇಶಾಂತರವ ತೊಳಲಿ ಬಳಲಿ, ಕೆಲರ ಹಳಿದು, ಕೆಲರ ಹೊಗಳಿ, ವೃಥಾಹೋಯಿತೆನ್ನ ಸಂಸಾರ, ಗಿರಿಯ ಶಿಖರದ ಮೇಲೆ ದೇವಧ್ಯಾನದಲ್ಲಿ ಕುಳ್ಳಿರುವದೇ ವರಣೀಯ ಅದು ಶಾಂತಿದಾಯಕ.

- ಇಳೆ, ಬೆಳೆ, ಸುಳಿದು ಬೀಸುವ ಗಾಳಿ, ಎತ್ತು ಬಿತ್ತು, ಸುತ್ತಿ, ಹರಿವ ಸಾಗರ ಎಲ್ಲವೂ ಪರಮಾತ್ಮನ ದಾನ.

- ಗುರುವು ಕರುಣಿಸಲು ಸಂಸಾರದ ವಿಷಯ ಕೆಡುವುದು, ಮಾಯಾ ಪ್ರಪಂಚ ಬಿಡುವುದು, ಹುಟ್ಟುರತು ಹೋಗುವುದು, ಭವ ಹಿಂಗುವುದು.

- ಮೊಟ್ಟೆ ಮೊಟ್ಟೆ ಪತ್ರೆ ಪುಷ್ಪವ ತಂದು ವಟ ವಟ ಲಿಂಗದ ಪೂಜಿಸಿದಡೇನು, ತನು ಮನದ ಕೆಟ್ಟತನ ಹಿಂಗದನ್ನಕ್ಕರ? ಹುಸಿಕಳವು ಪರದಾರ ವ್ಯಾಪಾರದಲ್ಲಿ ಹರಿದಾಡುವ ಮರಳು ಬುದ್ಧಿಯ ದುರಾಚಾರಿಗಳಿಗೆ ದೇವನು ದೂರಾಗಿರ್ಪನು.

- ಮನವಿಲ್ಲದೆ ಮಾಡಿ ಕೆಡದಿರು; ಮಾಡಿದೆನೆಂಬ ಭಾವ ಬಿಟ್ಟು ಮಾಡು. ಪರಮಾತ್ಮನು ಬೇಡಿದುದನೀವನು.

- ಅರಿವೇ ಗುರು, ಆಚಾರವೇ ಶಿಷ್ಯ, ಜ್ಞಾನವೇ ಲಿಂಗ, ಪರಿಣಾಮವೇ ತಪ. ಸಮತೆಯೇ ಯೋಗ.

- ನಡೆಯೊಳಗೆ ನುಡಿ ತುಂಬಿ, ನುಡಿಯೊಳಗೆ ನಡೆ ತುಂಬಿ, ನಡೆ ನುಡಿ ಎರಡನೂ ಪರಿಪೂರ್ಣ ತುಂಬಿ ದೇವನಲ್ಲಿ ಕೂಡಬಲ್ಲವನೇ ಶರಣ-ಸಂತ.

- ದಯವಿಲ್ಲದ ಧರ್ಮವಾವುದು? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯಾ.

ಯಾವ ಧರ್ಮವನ್ನು ದೂಷಿಸದೆ ಯಾರನ್ನು ದೂಷಿಸದೆ "ಆನೋಭದ್ರಾಕ್ರತವೋಯಂತೋವಿಶ್ವತಹ" ಎಂಬ ಉಪನಿಶದ್ವಾನಿಯಂತೆ ಜಗತ್ತಿನ ಎಲ್ಲ ಕಡೆಗಳಿಂದಲ್ಲೂ ತತ್ತ್ವಪೂರ್ಣವಾದದ್ದನ್ನು ಎತ್ತಿ ಹೇಳುವ ಈ ಸಂತ ಸ್ವಂತದ ಒತ್ತನ್ನು ಕಳಕೊಂಡವರು. ಇವರ ಒಂದೊಂದು ಪ್ರವಚನವು ತತ್ತ್ವಜ್ಞಾನದ ಒಂದೊಂದು ಕೈದಿವಿಗೆ.

## ೭.೫. ಶ್ರೀಗಳ ಭಾವಸಂಪದ ಭಾಗ-೫ ರ ಪ್ರವಚನ :

ಪೂಜ್ಯರಲ್ಲಿ ತಮ್ಮೆಲ್ಲರಲ್ಲಿ ವಂದನೆಗಳು........

ಇದು ಭಾವಸಂಪದ. ಯಾವಸಂಪತ್ತನ್ನು ಮನುಷ್ಯಗಳಿಸಿದ್ರ ಪರಮಶಾಂತಿಯನ್ನು ಅನುಭವಿಸಬಲ್ಲ ಅದುಭಾವಸಂಪತ್ತು. ಆ ಭಾವ ಶುದ್ಧವಾಗಿರಬೇಕು, ಮಧುರವಾಗಿರಬೇಕು, ಸುಂದರವಾಗಿರಬೇಕು, ಹಾಗ ಭಾವಾಗಬೇಕು. ಅದಕ್ಕ ದಿವ್ಯಭಾವ, ಪವಿತ್ರಭಾವ ಸದ್ಭಾವ, ಅಂತ ಹಲವಾರು ಶಬ್ಧಗಳನ್ನ ನಾವ ಬಳಸ್ತಿರ್ತಿವಿ. ನಮ್ಮ ಕೈಯೊಳಗದ ದೇಹವನ್ನ ತೀಡೋದು, ತಿದ್ದೋದು, ತಿದ್ದೋದು, ನಮಗೆಲ್ಲಿ ಸಾಧ್ಯದ? ಈಗ ನನ್ನ ಬಣ್ಣ ಕಪ್ಪದ, ಎಲ್ಲಿ ಕೆಂಪ ಮಾಡಾಕ ಎಲ್ಲಾಗ್ತದ. ನಾನೊಂದಿಷ್ಟ ಅದಿನಿ ಈಗ ನಾನು! ಆರ್ರೂಟ ಎತ್ರಾಗಬೇಕು, ಬಲಿಷ್ಟ ಆಗ್ಬೇಕು, ನಮ್ಮ ಕೈಯೊಳಗಿಲ್ಲ ಕುರೂಪ ಇದ್ರ ಕುರೂಪ, ಸುರೂಪ ಇದ್ರ ಸುರೂಪ. ಕೆಲವು ಸಂಗತಿಗಳು ಹೀಗದಾವ ಯಾವ್ವು ನಮ್ಮ ಕೈಯೊಳಗಿಲ್ಲ. ಅವುಗಳನ್ನ ನಾಂವ ಪಡದ ಬಂದಿರ್ತಿವಿ. ಅವ ಇರ್ತಾವ ಅದನ ಬದಲಮಾಡಾಕ ಅಂತೂ ಆಗೋದಿಲ್ಲ. ಮತ್ತ ಬದಲಿ ಏನ ಮಾಡೋದು? ಹೊರಗಿನ

ಜಗತ್ತನ್ನು ಸಂಪೂರ್ಣ ಬದಲ ಮಾಡ್ಲಿಕ್ಕ ಆಗೋದಿಲ್ಲ. ಅದು ಅಷ್ಟೇಸತ್ಯ. ಎಲ್ಲ ಈ ಕಲ್ಪನೆಗೆ ಸರಿಯಾಗಿ ಜಗತ್ತನ್ನು ಬದಲಮಾಡ್ಲಿಕ್ಕಾಗ್ತದೇನು? ನನಗೊಂದು ಕಲ್ಪನಾ ಅದ ಎಲ್ಲರೂ ವಿಜ್ಞಾನಿಗಳಾಗಬೇಕು. Mathemetician ಆಗಬೇಕು ಅಂತ ನನ್ನ ಕಲ್ಪನಾ ಅದ ಮಾಡಾಕಾಗ್ತದೇನು? ಆಗೂದಿಲ್ಲ.

ಹಚ್ಚ ಹಸಿರಾಗಿರಬೇಕು ಭೂಮಿಸದೈವ ಅಂತ ಅದ ಮಾಡೂಕಾಗೂದಿಲ್ಲ. ನನಗ ಆಗೂದಿಲ್ಲ. ಆದ್ರ ನನ್ನ ಕೈಯೊಳಗ ಒಂದದ ಏನ ಅದ ಅಂದ್ರ ನಾನು ಅಂತರಂಗದಲ್ಲಿ ಇರುವಭಾವವನ್ನ ರೂಪಿಸುವ ಸಾಧ್ಯಶಕ್ತಿ ನನಗದ. ನನ್ನ ಭಾವ್ ಹ್ಯಾಗಿರಬೇಕು ಹಾಗ ನನಗ ಮಾಡಲ್ಲಿಕ್ಕಾಗ್ತದ ನನಗ, ಆಗ್ತದ. ಎಲ್ಲಾ ಆಗೂದಿಲ್ಲ, ಭಾವಮಾತ್ರ ನನ್ನ ಕೈಯೊಳಗದ. ಈಗ ನಿಮ್ಮನ್ನಾ ದ್ವೇಷ ಮಾಡಬಲ್ಲೆ, ನನ್ನ ಕೈಯೊಳಗದ. ನಾನಿಮ್ಮನ್ನ ಪ್ರೀತಿಸಬಲ್ಲೆ ಅದು ನನ್ನ ಕೈಯೊಳಗದ. ಎರಡೂ ನನ್ನ ಕೈಯೊಳಗದಾವ ಯಾವ್ದು ನನಗ ಸಾಧ್ಯ ಅದ ಅದನ್ನಾನು ಮಾಡಬಲ್ಲೆ. ಅದರಿಂದ ಬದುಕನ್ನ ಕಟ್ಟಿಕೋಬೇಕು. ಸುಂದರಾದಗಲೇ ನಾನು ಸಂತೋಷದಿಂದ ಬದಕ್ಕತೀನಿ ಅಂದ್ರ ಸಾದ್ದಿಲ್ಲ. ನಾನಿಷ್ಟ ಶ್ರೀಮಂತಾದಾಗಲೇ ಬದಕ್ತೀನಿ ಸಂತೋಷದಿಂದ ಇರ್ತಿನಿ ಅಂದ್ರ ಹ್ಯಾಂಗ ಸಾಧ್ಯದ. ಒಬ್ಬ ಏನೋ ಆಕಸ್ಮಾತ ಲಕ್ಷಾಧೀಶ ಆಗ್ತಾನ, ಇನ್ನೊಬ್ಬ ಕೋಟ್ಯಾಧೀಶನಾಗ್ತಾನ, ನನಗಷ್ಟಗಳಿಸಲ್ಲಿಕ್ಕಾಗ್ಲಿಕ್ಕಿಲ್ಲ, ಅಷ್ಟಾದ ಬಳಿಕ ಸಂತೋಷ ಆಗ್ತೀನಿ ಅಂದ್ರ ಅಗೋದ್ಯಾವಾಗ, ಈಗ ನನಗಿಷ್ಟು ವಯಸ್ಸಾಗ್ಯದ, ಇನ್ನ ಮುಂದ ವಯಸ್ಸ ಆಗ್ಬಾರದು ಹಿಂಗ ಇದ್ದಬಿಡಬೇಕು ಅಂದ್ರ ಇಲ್ಯಾಗ್ತದ. ಇದ ಮುಪ್ಪಾಗೂದ, ಬೆಳ್ಳಾಗೋದೇ? ಕಣ್ಣು ಒಂದಿಲ್ಲ ಒಂದಿವಸ ಹೋಗ್ಹೋದೆ? ಕಿವಿ ಹೋಗೋದೆ? ಕಾಲುಹೋಗೋದೆ? ಎಲ್ಲವೂ ಆಗೋದೇ? ನಾಂವ ಬಯಸ್ಲಿ ಅಥವಾ ಬಯಸದೇ ಇರ್‍ಲಿ ಆಗ್ತಾಇರ್ತದ ಅದ ನಮ್ಮ ಕೈಯೊಳಗಿಲ್ಲ. ಅದ ಇದ್ರ ಆಗ್ತೀವಿ ಅಂದ್ರ ಯಾವಾಗಾಗೋದದ, ಜಗತ್ತೆಲ್ಲ ನಾ ಹೇಳದ ಕೇಳದ ಬಳಿಕ ನಮಗ ಸಂತೋಷ ಆಗ್ತದಂದ್ರ ಆಗೋದ್ಯಾವಾಗ, ಯಾವಾಗ ಆಗ್ತದ. ಇವೆಲ್ಲ ಆಗದ ಸಂಗತಿಗಳಿಗಿ ಗಂಟುಬಿದ್ದು ಸಂತೋಷದ ಸೌಧ ಕಟ್ಟೋದಕ್ಕಿಂತ ಭಾವವನ್ನ ರೂಪಿಸಿಕೊಂಡ್ರ ಬಹಳ ಸುಲಭದ ನಾನು ಕ್ಷಣದಲ್ಲಿ ಮುಕ್ತವಾಗಬಲ್ಲೆ, ಕ್ಷಣದಲ್ಲಿ ಭಾವ ಬಂಧಿತನಾಗಬಲ್ಲೆ, ಎರಡೂ ನನ್ನ ಕೈಯೊಳಗದಾವ, ಸುಂದರವಾದಂಥಹ ಒಂದು ಭಾವವನ್ನು ಶುದ್ಧವಾದ ಒಂದು ಭಾವವನ್ನ ರೂಡಿಸಿಕೊಂಡ್ರ ನಾನು ಇದೇ ಕ್ಷಣ ಬಂಧಿತನಾಗಬಲ್ಲೆ. ಅಲ್ಲೇನ ತುಳಸಿದಾಸ............ ನಿವಾಗ ಕತಿ ಗೊತ್ತದ. ಹೋದ, ಹೆಂಡತಿ ಮನೀಗಿ, ಹೋದ ರಾತ್ರೋ ರಾತ್ರಿ ಯುವಕ ಹೆಂಡತಿ ಸುಂದರ ಆಕೆ ತವರ ಮನಿಗ್ಹೋಗ್ಯಾಳ ಹೊಳಿ ಆಚಿಕಡೆ ಇಚಿಕಡೆ ಇವ್ನಾದ ಸಾಯಂಕಾಲಾತು ಹೋಗ್ಬೇಕ ಅನಸ್ತು ಹೊಳ್ಯಾಗ ಜಿಗದ ತುಂಬಿದಹೊಳಿ ಅದು ಮಹತ್ತ್ವದ್ದಲ್ಲ ಕತಿ. ಅಂಥಾದ್ರಾಗ ಹ್ವಾದ ಎಷ್ಟು! ಎಷ್ಟು!

ತಲಿಬಳಗ ಹೊಕ್ಕಿರಬ್ಯಾಡ. ಆತ ಈಸ್ತಾ ಇರುವಾಗ ಹೊಳಿಕಾಣ್ತಾ ಇರ್ಲಿಲ್ಲ, ಕರದ್ಹಾಂಗ ಆಗ್ತಿತ್ತದ, ಕಣ್ಣಾಗ ಹೆಂಢತಿ ಕಾಣ್ತಾಇದ್ಳು, ಮನಸ್ಸಿನ್ಯಾಗ ಹೆಂಡತಿ ಆಕಡೆ ನಿಂತಾಂಗ, ಕೈಮಾಡಿ ಕರದಾಂಗ ಅದಕ್ಕ ಹೊಳಿಸಹಿತ ಕಾಣ್ಲಿಲ್ಲ ಆದ್ದರಿಂದ ಹೊಳಿಕೂಡ ಕಾಣಲಿಲ್ಲ. ಯಾಕೆ? ಕಣ್ತುಂಬಿತ್ತು, ಮನಸ್ತುಂಬಿತ್ತು, ಒಂದಿಷ್ಟು ತುಂಬಿದ್ರ ಮಹಾಪೂರದ ಭಯಾ ಇರ್ಲಿಲ್ಲ. ಮನಸ್ಯಾಗ ಒಮ್ಮೆ ಏನಾದ್ರು ತುಂಬ್ತು ಅಂದ್ರೆ ಭಯಾ ಇರೋದಿಲ್ಲದ. ಈಗ ಹಣದ ವ್ಯಾಮೋಹ ತುಂಬಿತೂ ಅಂದ್ರ, ಯಾವಧರ್ಮೇನು? ಅಧರ್ಮೇನು? ಎದರ ಭಯಾ ಇರ್ತದ. ನೀತಿ ಏನೂ, ಅನೀತಿ ಏನೂ? ಪುಣ್ಯವೇನೂ ಪಾಪಏನು? ಯಾವುದ ಭಯಾ ಇರೂದಿಲ್ಲ. ಒಂದಿಷ್ಟ ಏನರೆ ಹೋಗಬೇಕಾಗ್ತದ. ಹಂಗ ತುಳಸಿದಾಸನ ಕಣ್ಣೊಳಗ ಹೊಕ್ಕಲ್ಲ, ನಿರ್ಭಯ ಆಗಿದ್ದ. ಹೋದ ಹೆಂಡತಿ ಎದುರಿಗೆ ನಿಂತ. ಎಲ್ಲರೂ ಕೆಟ್ಟಕಲ್ಲೆ, ಭಯಾನಕವಾದಂತಹ ಹೊಳಿ ಈಸಿ ಬಂದಾನ ನೋಡ್ತಾಳ ಭಯ ಅನಿಸ್ತು, ಎಷ್ಟ ತುಂಬಿಕೊಂಡ ಬಂದಿದ್ದ, ಭಾವದಾಗ ಎಷ್ಟ ತುಂಬಿತ್ತು ಮುಂದ ಬಹಳಾ ಅದ್ಭುತ ಕೆಲಸ ಆಗ್ತದ, ಎಷ್ಟ ತುಂಬಿತ್ತು ಭಾವದಾಗ ಬಂಧಿತನಾಗಿದ್ದಾ, ಮೋಹದಿಂದ ಬಂಧಿತನಾಗಿದ್ದ. ಹೆಂಡತಿ ನೋಡಿ ಹೇಳಿದ್ಲು ಏನ ನನಗಾಗಿ ಇಷ್ಟ ಕಷ್ಟ ಪಡೋದಕ್ಕಿಂತ ಒಂದಿಷ್ಟು ದೇವರಿಗಾಗಿದ್ರ! ಇಷ್ಟೊತ್ತಿಗೆ ದೇವರ ಒಲಿತಿದ್ದ ಅಂದ್ಳು ಸುಮ್ನ ಅಂದ್ಳು ಅಷ್ಟೇ! ಆಕೆಗೆ ಬಹಳ ಸಂತೋಷ ಆಗಿತ್ತು. ಆದ್ರ ಅದರ ವ್ಯಕ್ತ ಮಾಡೋ ರೀತಿ, ಈ ರೀತಿ ವ್ಯಕ್ತ ಮಾಡಿದ್ಲು. ತತ್‌ಕ್ಷಣ ಭಾವ ಬದಲಾತು. ಅಂವ ಅಂದ ಇನ್ನ ಇದಬ್ಯಾಡ ಅದನ್ನ ತುಂಬಿಕೊಳ್ಳೊನ ಆಮಧ. ಅದೇಕ್ಷಣ ಹೊರಟ ಆಕೆ ತಡದ್ಲು. ನೀನಿಗ ಹೆಂಡತಿ ಅಲ್ಲ. ನಿನ್ನ ದಾಸ ನಾನ ತುಳಸಿದಾಸ ನಾನು. ನನಗ ನೀನು ಮಾರ್ಗದರ್ಶನ ಮಾಡ್ದಿ. ಏನ ತುಂಬಕೊಂಡ್ರ ನಾನ ಅಮರಾಗಬಲ್ಲೆ ಹೇಳ್ಬಟ್ಟಿ ಅಲ್ಲ ಸಾಕಲ್ಲ ಇನ್ನೇನದು ಕ್ಷಣದಲ್ಲಿ ಭಾವ ಬಂಧನ, ಕ್ಷಣದಲ್ಲಿ ಭಾವಮುಕ್ತಿ. ಎಷ್ಟು ಆಶ್ಚರ್ಯ ಇರಬ್ಯಾಡ, ಮನಸ್ಸುಮಾಡಿದ್ರ, ಒಂದಕ್ಷಣದಾಗ ತುಳಸಿದಾಸ ಸಂತ. ಇನ್ನೊಂದು ಕ್ಷಣದಾಗ ತುಳಸಿದಾಸ ಬಂಧಿತ. ಮೊದಲು ದಾಸನೇ ಈಗಲೂ ದಾಸನೇ, ಆದ್ರೆ-ಬಂಧಿತವಾಗಿದ್ದ, ಈಗ ಮುಕ್ತನಾಗಿದ್ದಾ. ಮನಸ್ಸ ಮಾಡಿದ್ರ ಯಾವುದ ಸಾಧ್ಯ್ ಜಗತ್ತಿನ್ಯಾಗ ಭಾವದಲ್ಲಿ ಮನಸ್ಸಾ ಮಾಡಿದ್ರ ಭಾವವನ್ನ ಇಷ್ಟ ಸುಂದರಗೊಳಿಸುವಂಥ ಸಾಧ್ಯತೆ ಬಹಳ ಸುಲಭ. ಕೆಡಸೋದು ಅದಕ್ಕಿಂತ ಸುಲಭ. ಈಗ ನಾನು ಕೆಡೋದು ಎಷ್ಟೊತ್ತು-ಎಷ್ಟೊತ್ತ, ಒಳ್ಳೆಯವರಾಗೋದ ಎಷ್ಟೊತ್ತ, ಒಂದಕ್ಷಣದಾಗ ಏನ ನೀಂವ ಅಂದೇ ಕೆಟ್ಟೆ ಎಂಥಾ ಅದ್ಭುತ ನೀವು ಅಂದೆ ಉಳಿದೆ. ಆಗೂದಿಲ್ಲ ನಿಮ್ಮನ್ನೆಲ್ಲ ಒಂದಿಷ್ಟು ವೈಲಿಕ್ಕೆ ಬರೂದಿಲ್ಲೇನು? ಚನ್ನಾಗಿ ಬೈಲಾಕೂ ಬರ್ತದ. ಸಿಕ್ಕ ಬಿಳ್ತೀವಿ. ಹೀಗ ಮಾತಾಡಿದ್ರ ಪಾರಾಗ್ತೀವಿ. ಉಳಿತೀವಿ ಸ್ವತಂತ್ರಾಗ್ತೀವಿ. ಬಂಧನ ಸ್ವಾತಂತ್ರ್ಯಭಾವದೊಳಗ, **ಭಾವದ ಮ್ಯಾಲ ಹಿಡತ ಬಂತೂ, ಬಂಧ ಮುಕ್ತ. ಭಾವಸೋಲ್ತು ಬಂಧಿತ**. ಬಹಳ ಕಷ್ಟದ್ದಲ್ಲ. ಮುಕ್ತಿ

ಬಂಧನಗಳು. ಭಾವದಿಂದ ಮುಕ್ತಿ. ಭಾವದಿಂದ ಬಂಧನ. ಮನುಷ್ಯಭಾವಿಸಬೇಕದ. ಬಾವಿಸೋದು ಈಗ ನಾವಿಲ್ಲೇ ಕೂತೇವಿ ನಾನು ಒಳ್ಳೆಯಂವ ಸುಮ್ನೆ ಕೂತಲ್ಲೆ ನಿಮ್ಮಷ್ಟಕ್ಕ ನೀವೆ ನಾನು ಅಂತ ಭಾವಿಸಿ ನಾಂವ ಒಳ್ಳೆಯವ್ರೆ, ನನಷ್ಟ ಕೆಟ್ಟವನ ಯಾರಿಲ್ಲ, ಯಾಂವನಿಲ್ಲ, ಕೆಟ್ಟವನೇ. ನಾಂವ ಹ್ಯಾಗ ಭಾವುಸ್ತೀವಿ ಹಾಗ ರೂಪಗೊಳ್ತಿರ್ತದ ನೋಡಬೇಕು. ಜಗತ್ತಿನ್ನ ನೋಡೋದಷ್ಟೇ! ಮಹತ್ತ್ವದ್ದಲ್ಲ. ಕಣ್ಣೊಳಗಭಾವ ಹರೀತೂ ಮಧುರಭಾವ ಹರೀತೂ ಜಗತ್ತ ಮಧುರಾಗಿ ಕಾಣಾಕ ಶುರುಆಗ್ತದ. ಕಣ್ಣೊಳಗ ದ್ವೇಷ ಭಾವ ಹರೀವೂ ದ್ವೇಷಾಗಿ ಕಾಣಾಕ ಶುರುಆಗ್ತದ ಜಗತ್ತ. ನನ್ನ ಕೈಯೊಳಗದ ಜಗತ್ತನ್ನ ದ್ವೇಷಿ ಅನ್ನಾಗಿಸೋದು, ಜಗತ್ತನ್ನ ಪ್ರೀಯ ಆಗಿಸೋದು, ಈ ಕಣ್ಣೊಳ ಅದ. ಬರೇಕಣ್ಣೊಳಗಲ್ಲ ಭಾವದಾಗ ಅದ. ಎಂಥಾಭಾವ. ಭಾವನೇ ಬಂಧನ, ಭಾವವೇ ಮುಕ್ತಿ ಮನ ಏವ ಕಾರಣಂ ಮನಸ್ಸೇ ಕಾರಣ. ಎದಕ್ಕ? ಮುಕ್ತಿಗೂ ಬಂಧನಕ್ಕೂ ಮನವೇ ಕಾರಣ. ಎರಡಕ್ಕೂ ಮನಸ್ಸೇ ಕಾರಣ. ಎರಡಕ್ಕೂ ಭಾವವೇ ಕಾರಣ. ಇಂಥ ಭಾವವನ್ನ ಬೆಳೆಸಿಕೋಬೇಕಾಗ್ತದ ಮನುಷ್ಯ. **ಭಾವದಲ್ಲಿ ತಾಕತ್ತ ಬಹಾಳದ**. ಇದು ಬಹಳ ಅದ್ಭುತ.

ಸುಮ್ನೆ ಒಂದ ತೋಟಾ ಅದ ನಿಮ್ದು ಒಂದು ಮನಿ ಅದ, ಸುಂದರವಾದ ಮನಿ ಅದ ಹೊಲಸಮಾಡಾಕೂ ಬರ್ತದ, ಕಸಾನೇ ಗೂಡಸ್ದೇ ಇದ್ರ, ಕಸಬಾರ್ಗಿನೇ ತಂದಿಲ್ಲ, ಎಲ್ಲಾ ತಂದಾನ ಕಸಬಾರಿಗೊಂದ ತಂದಿಲ್ಲ ತಾನೆ ಹೊಲಸಾಗ್ತದ. ಏನೂ ತಂದಿಲ್ಲ ಬಾರಿಗೆ ಒಂದ ತಂದಾನ ಎಷ್ಟ ಸ್ವಚ್ಛ, ಮನ್ಯಾಗ ಮುತ್ತದಾವ, ರತ್ನ ಅದಾವ, ಬಟ್ಟೆಬರೆ ಬಾಂಡೆ-ಪಾಂಡೆ ಎಲ್ಲಾ ಅದಾವ ಕಸಬಾರಿಗೊಂದಿಲ್ಲ ಎರಡನೆದ್ದು ಒಂದ ಸಣತಿಲ್ಲ ಕಲ್ಲೆ ಹೊಲಸ ಸುಂದರ ಮಾಡಾಕ ಬರೂದಿಲ್ಲೇನ? ದೀಪಾ ಹಚ್ಚೋದ ಕಸಗುಡಿಸೋದು ಸ್ವಚ್ಛ ಸುಂದರ, ನಮ್ಮ ಕೈಯೊಳಗದ, ಮನಿ ಅದ ಆದ್ರ ಹೊಲಸ ಮಾಡೋದು ನಮ್ಮ ಕೈಯೊಳಗ ಸುಂದರ ಮಾಡೋದು ನಮ್ಮ ಕೈಯೊಳಗ, ಹಚ್ಚಿದ್ರ ಬೆಳಗ್ತದ ಹುಡಗದ್ರ ಸ್ವಚ್ಛ ಆಗ್ತದ ಎರಡ ಕೆಲಸ ಮಾಡದೇ ಇದ್ರ, ಮಾರ್ಬಲನ್ಯಾಗ ಮನಿ ಕಟ್ಟ್ಯಾನ ತಗೊಂಡ ಏನ ಮಾಡೋದದ ಬೆಳಕಿಲ್ಲ ಮನ್ಯಾಗ. ಮನ್ಯಾಗ ಬೆಳಕಿಲ್ಲ ಬಹಳ ಸುಂದರ ಅದಾನ ತಗೊಂಡ ಏನ ಮಾಡೋದು? ಒಳಗ ಬೆಳಕಿಲ್ಲ, ಏ! ಹುಡುಗ ಬಹಳ ಚಲೋ ಅದಾನ ಆದ್ರ ಏನ ಮಾಡೋದು ಯಾರ್ನ ಸೇರೋದಿಲ್ಲ ಆ ಮನುಷ್ಯ. ಏನ ಮಾಡೋದು ಮುಖ ಎಷ್ಟ ಚಂದ ಇದ್ರರೆ ಏನ ಮಡೋದು, ಮೈ ಎಷ್ಟ ಚಂದ ಇದ್ರರ ಏನ ಮಡೋದು, ಯಾವ ಸೌಂದರ್ಯದ ಮ್ಯಾಲ ಭಾವದ ಬೆಳಗ ಮೂಡಿಲ್ಲ, ಹೊಳದಿಲ್ಲ ಅಂತ ಮೈ ತಗೊಂಡರೆ ಏನ ಮಾಡೋದು ಸುಮ್ನೆ ಇರಬೇಕೊಂದಿಷ್ಟು, ಮನಿ ಕಟ್ಟೇರಿ ಅಂದಾಗ ಮನಿಗೊಂದಿಷ್ಟು ಕಳಾಬೇಕಲ್ಲ, ಸುಂದರವಾದ ಮನಿಕಟ್ಟೇರಿ ಲಗ್ನ ಆಗಿರಿ ಮಕ್ಕಳ, ಮಕ್ಕಳದಾವ ಎಲ್ಲಾ ಅದಾವ ಅದಕ್ಕೊಂದಿಷ್ಟು ಕಳೆ ಬರಬೇಕಲ್ಲ? ಕಳಾ ಬರಬೇಕಾಗಿತ್ತು ಅಂದ್ರ ಮನ್ಯಾವ್ರು

ನಗತಿರಬೇಕಾಗ್ತದ. ಕಳೆ ಹೋಗ್ಬೇಕ್ಕಾಗಿತ್ತಂದ್ರ ಮನಿಮವ್ವು ಜಗಲಾಮಾಡಬೇಕಾಗ್ತದ ಇಷ್ಟ. ಏನ ಇಲ್ಲ ಜಗಳಾತು ನರಕ. ನಕ್ರೂ ಸ್ವರ್ಗ ಮನಿಸ್ವರ್ಗನರಕಲ್ಲ. ಮನಿ ಒಳಗಿನ ಜನಾ ಇರ್ತಾರ ಅದನ್ನ ಮನಿಗಳು-ಮನಿಗಳೇ ಯಾರ ಮನಿ ಆದ್ರ ಏನಾಯ್ತು, ಯಾರ ಮನಿ ಆದ್ರ ಏನಾಯ್ತು. ಒಂದ ಗುಡಿಸ್ಲಾದ್ರೂ ಸರಿ. It may became a hell or heaven. ಒಂದು ದೊಡ್ಡ ಅರಮನಿ ಆದ್ರ ಏನಾಯ್ತು If there is a Smile, asweet Smile. It is a heaven. If there is jelassy and hateness It is a help. ಏನಿಲ್ಲ ಅಂಥಾ ಭವ್ಯ ಮನಿಯೊಳಗ ಮನಸ್ಸ ಒಡದ್ದುದ್ದು ಭಾವ ಒಡದಿತ್ತು. ದ್ವೇಷ ಇತ್ತು ವಾತ್ಸಲ್ಯ ಇತ್ತು. ಅರಮನೆ! ಸ್ವರ್ಗ ಅಲ್ಲ ಗುಡಸ್ಲಾ ಇದ್ರು ತಿನ್ನಾಕ ಇಲ್ಲ ಆದ್ರ ನಗತಾರ. ಸ್ವರ್ಗ. ಸ್ವರ್ಗ,- ಸ್ವರ್ಗ ಇರು ಮನಿ ಅಲ್ಲ ಸ್ವರ್ಗ ಇರುಮನ. ಬಡ ಮನುಷ್ಯನೊಬ್ಬ ಅರಮನಿ ಕಟ್ಟಿಕ್ಕಾಗ್ಲಿಕ್ಕಿಲ್ಲ ಮನಿಯನ್ನ ಸ್ವರ್ಗ ಮಾಡ್ಲಿಕ್ಕಾಗ್ತದ. ಅದು ಅಧ್ಯಾತ್ಮ ಮಾಡಬೇಕು ಮನುಷು! ಮಾಡಬೇಕು. ಮನಸ್ಸಿನ ತುಂಬ ಹೂವಿನಂಥ ಭಾವ ಇರಬೇಕು. ಆ ಮನೆ ಸ್ವರ್ಗನರಕ ಎಂಬುದು ಬೇರಿಲ್ಲ ಕಾಣಿರೋ ಸ್ವರ್ಗನರಕ ಎಂಬುದು ಬೇರಿಲ್ಲ ಕಾನಿರೋ ಅಲ್ಲೈಲ್ಲ ಸ್ವರ್ಗ ಕೆಳಗಲ್ಲ ನರಕ ಸ್ವರ್ಗ ಸುಮ್ನೆ ಸ್ವರ್ಗ. ಬಸವಣ್ಣಾ ಎಂಥಾ ಸುಂದರ ಮಾತಹೇಳ್ದ ಎಷ್ಟು ಸತ್ಯವನ್ನ ಹೇಳ್ದ ಪ್ರೇಮದಿಂದ ಇರ್ರಿ, ಸ್ವರ್ಗ ದ್ವೇಷ ಮಾಡಿ ಹೋಗೋದು ಬರೋದು ಅಲ್ಲ. ಮಾಡೋದು ಬಿಡೋದು ನಮ್ಮ ಕೈಯೊಳಗ ಅದ ಏನ ಓದಿದ್ರರೇ ಏನು? 'ನೂರನೋಡಿ ನೂರ ಕೇಳದರೇನು? ಆಸೆ ಹರಿಯದು ರೋಷ ಬಿಡದು' ಎಲ್ಯದ ಸ್ವರ್ಗ, ಒದೋದು ಮಹತ್ವದ್ದಲ್ಲ, ಕೇಳೋದು ಮಹತ್ವದ್ದಲ್ಲ. ಯಾವುದು ಮಹತ್ತ್ವದ್ದು? ಹೃದಯದ ಭಾವ ಒಂದುಮನೆ ಸುಮ್ನೆ ಒಂದು ಮನೆ ಮನೆತುಂಬ ಜಗಳ ತಾಯಿಗೆ-ತಂದೀಗೆ ವಿಪರೀತ ಜಗಳ ಇನ್ನೇನ ಕೈ-ಕೈ ಬಡದಾಟ ಎಲ್ಲಾ ಆಗ್ತದಂತ ಇಟ್ಟಕೋಳ್ಳಿ ಅವ್ವು ಚನ್ನಾಗಿನೇ ಅದಾರ, ಇಂವ ೫೦ ಕಿಲೋ, ಅವ್ವು ೬೦ ಕಿಲೋ ಜಗಳಾ ಶುರು ಆಯ್ತು, ಜೋರುಜೋರಾತು ಇನ್ನೇನು ಅಷ್ಟ್ರಾಗ ಹುಡುಗ ಒಂದು ಎದ್ದು ನಕ್ತು. ತೊಟ್ಲಾಗ ಇದ್ದ ಒಂದ ಹುಡುಗ ನಕ್ತು. ಕೈಯಾಗ ಏನ ಹಿಡಿದಿದ್ರು ಕೆಳಗ ಬಿದ್ದು! ನಗುವಿನಲ್ಲಿ ಎಂಥಾ ಸಾಮರ್ಥ್ಯದ ಅಂದ್ರ ಕೈಯೊಳಗಿನ ಶಸ್ತ್ರಗಳಿಂದಲೂ ಸಾಧ್ಯ ಆಗೋದಿಲ್ಲ. ಅಂಥಾ ಸಾಮರ್ಥ್ಯ ಒಂದ ನಗುವಿನೊಳಗ, ಕ್ಷಣದ ಹಿಂದ ನರಕ. ಕ್ಷಣದಾಗ ಹುಡುಗ ನಕ್ಕ ಸ್ವರ್ಗ ಮನ್ಯಾಗ. ಎಷ್ಟ ಬದಲ ಮಾಡ್ತದ. ಒಂದ ಮಗು ಮನಿಯನ್ನ ಸ್ವರ್ಗಮಾಡ್ತದ. ಇವರಿಬ್ರು ಇಷ್ಟ ದೊಡವರಿದ್ರೂ ಸಹಿತ ಏನ ಮಾಡಿದ್ರು ಏನ ಹುಡುಗ ಮಾಡ್ದ ಅದನ್ನ ಮಾಡ್ಲಿಕ್ಕಾಗ್ಲಿಲ್ಲ. ಅದುsss ಮಾಡ್ತು. ಭಾವ ಬೇಕಾಗ್ತದ. ಇಂಥ ಅದ್ಭುತ ಭಾವ ಹ್ಯಾಗಿರ್ತದ. ಈ ಭಾವ ಹ್ಯಾಗ ಇರ್ತದಂದ್ರ ಭಗವಂತನನ್ನ ತನ್ನ ಒಡಲಿನಲ್ಲಿ ಹಿಡಿಯುವಷ್ಟು ಸಮರ್ಥವಾಗಿರ್ತದ. ಭಾವದಾಗ ದೇವರನ್ನ ಹಿಡಿಯಬಹುದೇ ವಿನಃ ಬುದ್ಯಾಗ ದೇವರನ್ನ

ಹಿಡಿಯೋದು ಬಹಳ ಕಷ್ಟಾಗ್ತದ. ಭಾವದಲ್ಲಿ ದೇವರನ್ನ ಹಿಡಿಬಹುದೇ ವಿನಃ ಕೈಯಲ್ಲಿ ದೇವರನ್ನ ಹಿಡಿಯಲು ಕಷ್ಟಾಗ್ತದ. ಏಕೆ? ದೇವ್ರು ಭಾವಗತ ಭಾವಕ್ಕೆ ಸುಲಭ. ಬಹಳ ಅದ್ಭುತಭಾವ ದೇವ್ರು ಅಷ್ಟೇ ಅದ್ಭುತ, ಅಂತಾ ದೇವ್ರ ಹ್ಯಾಗದಾವ, ಭಾವದಾಗ ಯಾಕ ಸಿಗ್ತಾನ, ಸುಮ್ನೆ ಒಂದಿಷ್ಟು ಹ್ಯಾಂಗ ಅದಾನ ದೇವ್ರು ನಾಂವ ಹ್ಯಾಂಗದಾನಂತೇವಿ ಹಾಂಗಿಲ್ಲ ಅಂವ. ಏನೇನ ನೀಂವ್ ಕಲ್ಪನಾ ಮಾಡ್ತಿರೇ ಹಾಂಗ ಅಂವ ಇಲ್ಲ ಹೇಳಿ ಹ್ಯಾಂಗದಾನ ಇವರಾಂಗ ಅದಾನೇ ಅವರಾಂಗ ಅದಾನೇ ಪುರುಷದಾನೇ ಸ್ತ್ರೀ ಅದಾನೇ ಸಣ್ಣಾಂವದನೇ ದೊಡ್ಡಂವದಾನೇ ಏನ ಉಟ್ಯಾನ, ಏನ ತೊಟ್ಯಾನ, ಏನ ತಿಂತಾನ, ಏನಾದ್ರೂ ಕಲ್ಪನೆ ಮಾಡಿ ಹಾಗಿಲ್ಲ. ಅದೇ ದೇವ್ರು ಎಲ್ಲಿರ್ತಾನ. ಏನ್ಮಾಡಿದೀವಿ ಹಾಗಿಲ್ಲ, ಯಾಕೆ? ದೇವ್ರು ಸಣ್ಣದಿತ್ತು ಅಂದ್ರ, ಸಣ್ಣಾಂವ ಇದ್ರ ಅದಕ್ಕೊಂದಿಷ್ಟು ಭಾವಿಸಾಕ ಬರತದ ಒಂದಿಷ್ಟ ಏನ್ರೆಕಲ್ಪನಾ ಮಾಡಾಕ ಬರ್ತದ. ನಾವ್ ಏನೇ ಕಲ್ಪನಾ ಮಾಡ್ಕೊಳ್ಳಿ, ಕಲ್ಪನಾ ಮಾಡಬೇಕಾದ್ರ ಏನೋ ರೂಪಬೇಕಲ್ಲ. ಸಣ್ಣದಿರಬೇಕು, ಯಾವವಸ್ತು ಚಿಕ್ಕದಾಗಿರ್ತದ ಆ ಕಲ್ಪನೆಗೆ ಸಿಗಬೇಕಾಗಿತ್ತು ಅಂದ್ರ ಅದಕ್ಕೊಂದಿಷ್ಟು ಸಣ್ಣದಿರಬೇಕಾಗ್ತದ. ನಮ್ಮ ದೇವತೆಗಳು ಕಲ್ಪನೆಗೆ ಸಿಗ್ತಾರ ಯಾಕೆ? ಸಣ್ಣವರದಾರ ಸಣ್ಣವರದಾರ ಯಾವದ್ದು ಕಲ್ಪನಾಕ ಸಿಕ್ತೋ ಅದು ರೂಪು ಉಳ್ಳದ್ದಾಗಿರ್ತದ ಅದು ಸಣ್ಣದಾಗಿರ್ತದ ದೇವರು ಸಣ್ಣಾಂವ ಅಲ್ಲಾದ ಬಳಿದ ಅವಾಗ ಕಣ್ಣಾಗು ಸಿಗುದಿಲ್ಲ, ನಾಂವ ಏನಕಲ್ಪಿಸ್ತೀವಿ ಅದು ಹಾಗ ಇಲ್ಲಾ! **ನಮ್ಮ ಕಲ್ಪನೆಗಳನ್ನೆಲ್ಲ ತಗದ ಹಾಕಿದ ಬಳಿಕ ಏನ ಥಣ್ಣಗ ಇರ್ತದಲ್ಲಾ ಅದೇ ದೇವರು.** ಇವೆಲ್ಲ ಸುಮ್ನ ಈಗ ಇವೆರಡು ವಸ್ತುಗಳನ್ನ ತಗೊಂಡ ಜೋಡಿಸಿ ಒಂದ ಮಾಲೆ ಅನ್ನ ಮಾಡ್ತಿವಿ ಆ ಮಾಲೆ ತಯಾರಾತು. ಮಾಲೆ ತಯಾರಾತು. ಆದ್ದರಿಂದ ಅದನ್ನ ಹರದ ಮತ್ತ ಬಿಚ್ಚಾಕ ಬರ್ತದ. ಯಾವುದನ್ನು ತಯಾರಾಮಾಡಿರ್ತೀವಿ ಅದನ್ನ ಬಿಟ್ಟಾಕ ಬರ್ತದ ಯಾವುದನ್ನ ತಯಾರೇಮಾಡಿಲ್ಲ ಬಿಚ್ಚಾಕ ಬರೂದಿಲ್ಲ. ಮನೆ ನಾಂವ ತಯಾರಾಮಾಡ್ತೀವಿ. ಸಾಮಾನ ತಗೊಂಡೆಲ್ಲ ತಯಾರಾಮಾಡ್ತೀವಿ. ಬ್ಯಾರೆ–ಬ್ಯಾರೆ ಸಾಮಾನಾ ತಗೊಂಡ ತಯಾರಾಮಾಡ್ತೀವಿ, ಅಂಥ ಮನೆಯನ್ನು ಮತ್ತ ಬಿಚ್ಚಾಕ ಬರ್ತದ, ಇದೊಂದು ಬಟ್ಟೆ, ತಯಾರಾಮಾಡ್ತೀವಿ, ಎಳೆ–ಎಳೆ–ಎಳೆಜೋಡಿಸಿ ಇದನ್ನ ತಯಾರಾಮಾಡ್ತೀವಿ ಆದ್ದರಿಂದ ಈ ಬಟ್ಟೆಯನ್ನ ಮತ್ತ ಹಿಂಜಾಕ ಬರ್ತದ, ಬಿಡಸಾಕ ಬರ್ತದ, ತಯಾರಾಗ್ತದ, ಆ ಬಳಿಕ ನಾಶ ಆಗ್ತದ. ಹಾಂಗ **ದೇವರನ್ನ ತಯಾರಮಾಡಾಕ ಬರೂದಿಲ್ಲ.** ಹೆಣದ ತಯಾರಾಮಾಡಿದ್ಹಂಗ, ಕೂಡಿಸಿ ತಯಾರಾಮಾಡಿದ್ಹಾಂಗ, ಕಟದ ತಯಾರಾಮಾಡಿದ್ಹಾಂಗ, ದೇವರನ್ನ ತಯಾರಮಾಡ್ಲಿಕ್ಕೆ ಬರೂದಿಲ್ಲ. ಜಗತ್ತನ್ನೆಲ್ಲ ತಯಾರಾಮಾಡಿರ್ತೀವೀ, ಕಾಲ ತಯಾರಾಮಾಡ್ತದ, ನನ್ನ ತಯಾರಾಮಾಡೇದ, ನಿಮ್ಮನ್ನ ತಯಾರಾಮಾಡೇದ, ಎಲ್ಲ ದೇಹಗಳನ್ನ ತಯಾರಾಮಾಡೇದ, ಒಂದು ದಿವಸ ಅದೇ ಕಾಲ

ಬಿಚ್ಚಬಿಡ್ತದ. ಎಲ್ಲಾ ಬಿಚ್ಚಬಿಡ್ತದ. ಇಷ್ಟಚಲೋ ದೇಹಾ ಅದ, ಇದನ್ನ ಒಂದು ದಿವಸ ಕಾಲ ಬಿಚ್ಚತದ. ಎಲ್ಲಾ ಬಿಚ್ಚತದ ಈಗೇನದ ಒಳಗೆಲ್ಲಾ (Celles) ಸೆಲ್ಸ ಅದಾವ, ಒಳಗೆಲ್ಲಾ ಬೇರೆ-ಬೇರೆ ಅವಯವಗಳಾದಾವ, ಪ್ರತಿಯೊಂದು ಅವಯವಾ ಬೇರೆ. ಎಲ್ಲ ಅವಯವಗಳನ್ನ ಒಂದದಿನ ಕಾಲ ಹಿಂಗ ಬಿಚ್ಚಿ-ಬಿಚ್ಚಿ-ಬಿಚ್ಚಿ-ಬಿಚ್ಚಿ ಎಲ್ಲಾ ಸೇಲ್‌ಗಳು ಹೋಗ್ತಾವ ಕೊನೆಗೆ ಅನುಗಳಾಗ್ತಾವ. ಇದಕಾಲ ಕೂಡಸ್ತಾ ಕೂಡಸ್ತಾ ಕೂಡಸ್ತಾ ಇಷ್ಟ ಶರೀರ ನಿರ್ಮಾಣ ಮಾಡೆದ ಇಂಥಾ ಕಾಲ! ಕೂಡಸ್ತದ, ಅಗಲಸ್ತದ. ಕೂಡಿಸಿದ್ದೇ ಹುಟ್ಟಾ, ಅಗಲಿಸಿದ್ದೇ ಮರಣ! ಇದು ಜಗತ್ತಿಗೆಲ್ಲ ಇರ್ತದ.

ಹಾಂಗ ದೇವರನ್ನ ಕೂಡಿಸಾಕ ಆಗೂದಿಲ್ಲ. ದೇವ್ರನ್ನ ಅಗಲ್ಸಾಕ ಆಗೂದಿಲ್ಲ, ಕೂಡಿಸಿ ಮಾಡಿದ ವಸ್ತು ಅದಲ್ಲ. ಅದು ಇರೋ ವಸ್ತು. ಯಾವುದನ್ನ ಕೂಡಿಸಾಕ ಬರ್ತದ ಅಲ್ಲಿ ಕಾಲಿರ್ತದ. ದೇವರನ್ನ ಕೂಡಿಸಾಕ ಬರೂದಿಲ್ಲಂದ್ರ ಕಾಲಿಲ್ಲಲ್ಲೇ! ಅದು ದೇವರು. ಈಗ ನಮ್ಮ ಮೂರ್ತಿಗಳಾದವೆ. ನಾಂವ ಕೂಡಿಸುದಿಲ್ಲೇನಾವ್, ಮೂರ್ತಿಗಳನ್ನ ಕೂಡಿಸಿ ಮಾಡ್ತೇವಿ. ಅದಕ್ಕೊಂದು ವೇದಿಕೆ ಮಾಡ್ತೇವಿ. ಮ್ಯಾಲ ಒಂದು ಪಿಂಡಿಕೆ ತಯಾರಮಾಡ್ತೇವಿ. ಅದಕ್ಕೊಂದುದಿಷ್ಟು ಪೀಠತಯಾರಾಮಾಡ್ತೇವಿ. ಎಲ್ಲಾ ಕೂಡಸ್ತೇವಿ, ಹಿಂಗ ಹೊಂದಸ್ತೇವಿ. ಆ ಬಳಿಕ ಇದ ಅಖಂಡಾ ಅಂತಾ ಭಾವುಸ್ತೇವಿ. ಕಾಲ ಕೂಡಿಸೇದ, ಮುಂದ ಸಾವಕಾಶ ಅದನ್ನ ಸರಿಸಿ-ಸರಿಸಿ-ಸರಿಸಿ-ಸರಿಸಿ, ಇನ್ನೊಂದು ಹತ್ತಿಪ್ಪತ್ತು ಕೋಟಿ ವರ್ಷದ ನಂತರ ಗುಡಿ ಇಲ್ಲಾ, ಮನುಷ್ಯಾ ಇಲ್ಲಾ, ಯಾರಿಲ್ಲಾ, ಅದು ಇಲ್ಲಾ, ಎಲ್ಲಾ ಮರಿಯಾಗ್ತದ. ಎಲ್ಲಾ ಹೋಗಿ ಬಿಡ್ತದ. ಕಾಲನುಂಗಿ ಹಾಕ್ತದ. ಕೂಡಿಸಿದನ್ನ ಕಾಲನುಂಗಿ ಹಾಕ್ತದ. ಮೊದಲ ಇರೋದಿಲ್ಲ. ಕೂಡ್ತಾವ, ರೂಪಗೊಳ್ತದ; ಅಗಲ್ತಾವ, ರೂಪ ಹೋಗ್ತದ, ಮರಿಯ್ಯಾಗ್ತದ. ಹಾಗ ದೇವರಂದ್ರ ಹೀಗಲ್ಲಾ! ಅದು ಕಾಲಕ್ಕಸಿಗೋದಿಲ್ಲ. ಕಾಲದ ಕೈಯೊಳಗ ಅದು ಸಿಕ್ಕ ಬೀಳೋದಿಲ್ಲ. ಇಂಥದು ದೇವರು. ಇಂಥಾ ದೇವರನ್ನ ಈ ಕಣ್ಣಾಗ್ರಹಿಸೋದಿಲ್ಲಾ. ಈ ಕೈಯಾ ಹಿಡಿಯೋದಿಲ್ಲಾ, ಇಂಥ ದೇವರನ್ನ ಗ್ರಹಿಸಬೇಕಾದ್ರ ಭಾವಬೇಕು. ಹೃದಯಬೇಕಾಗ್ತದ. ಅದ್ಭುತ ಹೃದಯ ಬೇಕಾಗ್ತದ. ನಾಂವ ಯಾವುದನ್ನ ಅರ್ಚಿಸ್ತಿವಿ ಅದು ಕಣ್ಣಿಗೆ ಸಿಗ್ತದ. ಆದ್ದರಿಂದ ಕಾಲಕ್ಕ ಸಿಗ್ತದ. ಯಾವ್ದುಕಾಲಕ್ಕ ಸಿಗ್ತದ ಅದು-ಅದು ನಿಜವಾದ ದೇವರ ಅಲ್ಲ. ಜಗತ್ತಿನ ಬಾಳ ಜನ ಸಂತ್ರು ಹೇಳಿದ್ದೇ ಅಷ್ಟೇ! ದೇವರನ್ನ ಕುರಿತು ಅವರು ಇಷ್ಟು ವರ್ಣಾ ಮಾಡಿದ್ರು ಆದ್ರ ಅವರ ಹೇಳಿದ್ದೇ ಬೇರೆ- ನಾಂವ್ ಮಾಡ್ತಾ ಇರೋದೆ ಬೇರೆ. ಎಂಥಾ ಅದ್ಭುತ ಮಾಡಿದ್ರು, 'ಈಶಾವಾಸ್ಯಮಿದಂ', ಏನ ಹೇಳಿದ್ರು, ಎಷ್ಟ ಅದ್ಭುತ ಹೇಳಿದ್ರು, ಅದು ಹರುವಾ, ಬರಿ ಹರುವಾ, ಅನಂತಾ ಏನ ಆ ಶಬ್ದಗಳನ್ನ ನೋಡಬೇಕ. ಅದು ದೇವರು. ಇಂಥ ದೇವರನ್ನ ಅನುಧಿಸಬೇಕಾಗಿತ್ತು ಅಂದ್ರೆ ಮನುಷ್ಯನೇ ಒಂದೇ ಒಂದು

ಸಾಧನ. ಅದು ಅದ್ಭುತವಾದ ಭಾವ. ಅದುಭಾವ. ಭಾವದೊಳಗ ಅಂತಾ ಅದ್ಭುತ ವಸ್ತು ದೇವಾ ಹೀಗ ಸಿಕ್ಕಬಿಲ್ತಾನ ಅಂತಾಭಾವಾ ಏನ ಅಂತ ಹೇಳಬಾರದು ಅದನ್ನ ಅನುಭವಿಸಬೇಕು ಮನುಷ್ಯ. ಉದಾಹರಣೆಗೆ ಸುಮ್ನೆ, ಈಗ ನಾನು ಸುಮ್ನೆ ಕಂದ, ಈಗ ನಿಶ್ಯಬ್ದದ ಇಷ್ಟೆಲ್ಲ ನಿಶ್ಯಬ್ದ. ಈ ನಿಶ್ಯಬ್ದವನ್ನ ನಾಂವ್ ಅನುಭವಿಸ್ತಿವೀ ಕೇಳಾಕ ಆಗೋದಿಲ್ಲ ಶಬ್ದ ಕೇಳಸ್ತಾವ, ನಿಶ್ಯಬ್ದ ಕೇಳಸೋದಿಲ್ಲ. ಆದ್ರ ನಿಶ್ಯಬ್ದವನ್ನ ಅನುಭವಿಸ್ತಾ ಇತ್ರೀವಿ ಕೇಳ್ಳೋದಿಲ್ಲ. ಅನುಭವಿಸ್ತೀವಿ. ಇಲ್ಲಾ ಅಂತಾನಾ ಅಂದೆ. ಅರ ಕೇಳಸ್ತದ ನಿಶ್ಯಬ್ದ! ಅಂದೇ ಅದು ಕೇಳಸ್ತದ.

ಆದ್ರ ಶಬ್ದ ಮಾಡದೇ ಇದ್ರೆ ನಾನು ಮೌನ ಆದೆ ಅಂದ್ರೆ ಕೇಳಸೋದಿಲ್ಲ ಅನುಭವಕ್ಕೆ ಬರ್ತದ. ನಿಶ್ಯಬ್ದವನ್ನ ಅನುಭವಿಸ್ತೀವಿ. ಶಬ್ದವನ್ನ ಕೇಳ್ತಿವೀ. ಅದು ಅನುಭವಿಸೋದು ಭಾವ. ಹ್ಯಾಂಗ ನಿಶ್ಯಬ್ದವನ್ನ ಅನುಭವಿಸ್ತಿವೋ ಹಾಗ, ಭಗವಂತನನ್ನ ಅನುಭವಿಬೇಕಾಗ್ತದ. ಭಗವಂತಂದ್ರ ಒಂದು ಥರಾ ನಿಶ್ಯಬ್ಧ. ಅದು ಅಮೃತ, ಅಮೃತಾ. ಇಂಥಾ ಭಾವ ಕೂಡಾ ಅಮೃತ. ಭಾವಾಮೃತ. ಭಾವಕೂಡಾ ಅಮೃತ. ಯಾವಾಗ ಈ ಬಾವ ಅಮೃತ ಆಯ್ತೋ ಆ ಮನುಷ್ಯ ಅಮೃತವನ್ನ ಅನುಭವಿಸ್ತಾ ಇರ್ತಾನ. ಅದು ಅಮೃತ. ಸಂತೋಷವನ್ನ ಅನುಭವಿಸ್ತಾ ಇರ್ತಾನ. ಇದು ಅಮೃತ. ಎಷ್ಟು ಸುಂದರವಾದ ಅಮೃತದ ಅನುಭವ ಇದ. ಸುಮ್ನೆ ಸಹಜವಾಗಿ ಅನುಭವಿಸಬೇಕು ಮನುಷ್ಯ. ಅಮೃತವನ್ನ ಅನುಭವಿಸೋದು. ಭಾವ ಅದರ ರೂಪ ತಾಳ್ತು ಅಂದ್ರ, ಶರೀರ ಕಡೆ ನೋಡಿದ್ರ, ಇದು ಅಳತದ, ಮುಪ್ಪಾಗದ. ಇದರ ರೂಪ ತಾಳ್ತು ಅಂದ್ರ ಮುಪ್ಪಿನ ಭಾವ ಬರ್ತದ. ದೇಹದ ಭಾವಾ ಅದ ಬಂದ ಬಳಿಕ ದೇಹದ ಅವಸ್ಥೆಭಾವ ಬರ್ತದ ಮನುಷ್ಯಾ, ಆದ್ರ ದೇವನಭಾವ ಬಂತನಾ ಅಂದ್ರ ಅದು ಬದಲಾಗೋದಿಲ್ಲ. ರೂಪಿಲ್ಲ, ಬದಲಾಗೋದಿಲ್ಲ, ರೂಪಿಲ್ಲ ಆದ್ದರಿಂದ ಅನುಭವದಲ್ಲಿ ಬರಲಿಲ್ಲ. ಅದನ್ನ ಅನುಭವಿಸ್ತೀವಿ. ಆವಾಗ ಕಾಲಿಲ್ಲ. ಕಾಲಾತೀತ ಮಾಡ್ತೀವಿ. ಭಾವದಲ್ಲಿ ಕಾಲಾತೀತ ಆಗೋದು ಅಮೃತರಾಗೋದು ಅಂದ್ರ, ಭಾವದಲ್ಲಿ ಕಾಲಾತೀತರಾಗೋದು. ನಾಂವೆಷ್ಟೋಸಲ ತಪ್ಪ ಹೆಂಗ ತಿಳ್ಕೋತೀವಿ ಅಂದ್ರ, ಅಮೃತರಾಗೋದು ಅಂದ್ರ ಅಮೃತ ಕುಡಿಯೋದು ಅಂತ ನಾಂವ ಭಾವುಸ್ತೀವಿ, ಅಮೃತ ಕುಡದ್ರ ನಾವ ಇರ್ತೀವಿ ಅಂತ ನಮ್ಮ ಭಾವನಾ. ಇದು ಯಾವಾಗೂ ಇರೋದಲ್ಲ. ಬಹಳಾದ್ರ ಎರಡನೂರ ವರ್ಷ ಆಗಬಹುದು, ಸಾವಿರ ವರ್ಷ ಆಗಬಹುದು, ಹತ್ತು ಸಾವಿರ ವರ್ಷ ಆಗಬಹುದು. ಜಗತ್ತೇ ಹೀಗೆ ಸುಮ್ನೆ ಮರಿಯಾಗಿ ಹೋಗ್ತಾ ಇರುವಾಗ ನಾನೇಲ್ಯೆ! ಅಮೃತ ಆಗೋಕೋ ಎದರಿಂದ ಅಂದ್ರ ಭಾವದಿಂದ ಅಮೃತ ಆಗಬೇಕು ಮನುಷ್ಯ. ನಾನು ಅಮೃತ, ನಾನು ಅಮೃತ. ಭಾವದಲ್ಲಿ ಅಮೃತವಸ್ತು ತುಂಬ್ತು, ದೇವ ವಸ್ತು ತುಂಬ್ತು ಮನುಸ್ಸಾ ಭಾವಾ ದಿವ್ಯ ಆಗ್ತದ. ಆದಿವ್ಯಭಾವನೇ ಅಮೃತಬಾವ. ಅಮೃತಭಾವ. ಇಂಥ ಅಮೃತ ಇದು.

ಈ ಅಮೃತಭಾವ ಮನಸ್ಸನ್ನ ತುಂಬ್ತು, ಇಂಥಾ ಪ್ರೇಮಬಾವ ಮನಸ್ಸನ್ನ ತುಂಬ್ತು ಅಂದ್ರ ಮನುಷ್ಯ ಏನಾಗ್ತಾನ. ಮನುಷ್ಯ ಅಸಾಧ್ಯ ವಸ್ತುಗಳನ್ನ ಸಾಧ್ಯಮಾಡಿಕೊಳ್ತಾನ. ಅದನ ಆವ್ಯಕ್ತಿ ಮಾಡಿರ್ತಾನ. ಇದು ಬಹಳ ಆಶ್ಚರ್ಯ! ಯಾವುದು ನಮಗ ಅಸಾಧ್ಯದ ಅದನ ಅಂವ ಸುಲಭವಾಗಿ ಮಾಡ್ತಾಇರ್ತಾನ. ಸುಮ್ನೆ-ಒಂದು ಒಂದ ಉದಾಹರಣೆ! ನಿಮಗ ಗೊತ್ತಿರೋದೇ ಸುಮ್ನೆ ಒಂದಿಷ್ಟ ಗೊತ್ತಿರೋದ ಉದಾಹರಣಾ. ಇರಲಿ ಅಂತ. ನಿಮಗ ಗೊತ್ತದ. ಯಾರು? ಜಮದಗ್ನಿ ಗೊತ್ತಲ್ಲ. ಜಮದಗ್ನಿ ಅದಾನ, ಬಹಳ ದೊಡ್ಡ ಋಷಿ. ಮಕ್ಳು ಸಾಕಷ್ಟು ಜನ ಮಕ್ಳುಮನ್ಯಾಗ. ಹೆಂಡತಿ ಬಹಳಸೇವೆ ಮಾಡುವಂಥಾ, ಸಮರ್ಪಣಾ ಮಾಡಿಕೊಂಡಿರುವಂಥ ಹೆಂಡತಿ ಯಾರು ನಿಮಗೆ ಗೊತ್ತಿದೆ, ಹೆಸರಬೇಡಾ. ಇಂಥಾ ಹೆಂಡತಿ, ಇಂಥಾ ಒಬ್ಬ ಋಷಿ, ನಾನೀಗ ಹೆಸರ ಬಿಟ್ಟೆ ಒಬ್ಬ ಋಷಿ ಆಕೆ ಹೆಂಡತಿ. ಮಕ್ಳು ಆಕೆ ಸಾರ ತರಾಕಹೊದ್ಳು, ಸಾರ ತಗೊಂಡು ಬರುವಾಗ ಸುಮ್ನೆ ಒಂದಿಷ್ಟು ಏನೋ ನೋಡಿದ್ಲು, ಸುಮ್ನೆ ನೋಡಿದ್ಲು, ಯಾವ ಭಾಂಡೆದಾಗ ಸಾರ ತರತದ್ಲು, ಆವಾಗ ಎಲ್ಲಗಡಿಗ್ಗಳು ಅದು ತೂಕತಪ್ಪಿ ಬಿತ್ತ-ಕೆಳಗ. ಒಡದ್ಹೋತ. ಆ ಕಡೆ ಲಕ್ಷಹರಿಯುವದರಾಗ ಈಕೆಯ ಕೊಡ ಒಡದಿತ್ತು ಕೊಡಿಇಲ್ದೇ ಮನೆಗೆ ಬಂದ್ಳು, ಈತಾ ಸಿಟ್ಟಿಗೆದ್ಧಾ! ಎಷ್ಟ ಸುಮ್ನೆ ಒಂದು ಘಟನಾ ಇದು ನಮ್ಮ ಜೀವನದಾಗೂ ನಡೀವ ಘಟನಾಗಳಳೇ. ಆದ್ರ ಕತಿ ಬಿಟ್ಟ ಬಿಡೂನ ಆತ ಆ ಪ್ರಶ್ನೇಬ್ಯಾರೇ. ನಮ್ಮ ಜೀವನದಾಗು ಅಷ್ಟೇ! ಆಕಸ್ಮಾತ ಕೊಡ ಒಡದಿತ್ತು ಯಾಕ ಒಡದಿತ್ತು ಆ ಪ್ರಶ್ನೆ ಬ್ಯಾಡ, ಒಡದಿತ್ತ ಅದು ತುಂಬೋದ್ರಾಗ ಕಲ್ಲಿಗೆ ಬಡ್ದು ಒಡದಿತ್ತು ಕೊಡಾ. ಯಾಕ ಮಣ್ಣಿನ ಕೊಡಾ, ಒಡಿಯೋದೇ? ಕೊಡಾ ಒಡದೀಲಾ ಅಂತ ಸಿಟ್ಟಿಗೆದ್ದಾ! ಎಷ್ಟ ಸಿಟ್ಟಿಗೆದ್ದಾ ಅಂತ ಅಂದ್ರ ಸಿಟ್ಟ ತಾಪ ತಡಕೊಳ್ಳಾರ್ದಕ್ಕ ಮಗನಿಗೆ ಹೇಳ್ದಾ, ಈಕೆಯನ್ನ ಕೊಲೆಮಾಡಲಾ ಅಂದಾ. ಎಷ್ಟ ಆಗಿರಬ್ಯಾಡ ಹಿಂಗ ಅಂತೂ ಯಾರೂ ಅಂದಿಲ್ಲಾ ಜಗತ್ತಿನ್ಯಾಗ. ಪುರಾಣದಾಗ ಅಂತಾರ, ಪುರಾಣದಾಗ ಇಷ್ಟೆಲ್ಲ ನಡೀತಾವ, ಹಿಂಗ ನಡದ್ರ ಕೇಳ್ತಾರ ಜನ. ಸುಮ್ನ ಅಟ್ಟಿಟ್ಟ ಹೇಳಿದ್ರ ಕೇಳೊಲ್ಲದ. ಎನಾ ಸಿಟ್ಟು? ಏನಮಾತು? ಹೆಂಡತಿ ಪಾಪ ಎಷ್ಟ ವಯಸ್ಸಾಗಿರಬೇಕು ಆಕಿ ಮಗನಿಗೇ ನಲವತ್ತವರ್ಷ ವಯಸ್ಸಾ ಅವರಿಗೆಸ್ಟ ಆಗಿರಬೇಕು ವಿಚಾರ ಮಾಡಬೇಕದವ. ಪಾಪ ಆವಯಸ್ಸಿನ್ಯಾಗ ಸುಮ್ನ ತುಂಬದರಾಗ ಒಂದಿಷ್ಟು ಬಡದು ಅವಸ್ರ-ಅವಸರ್ಲೆ ಹೋದ್ಲು, ಈತ ಸಾರ ತಗೊಂಡು ಬಾ ಅಂತ ಹೇಳಿದ್ದ ತರೂದರಾಗ ಒಡಿತಷ್ಟ, ಬಹಳದಿವಸದ ಕೊಡಾ ಒಡದಿತ್ತು. ಘಳಕೋಬೇಕು ಕೊಡಾ ಒಡೀತಾವ. **ಹೊಸ-ಹೊಸ ಕೊಡಾನೇ ಬೇಕಾದಷ್ಟ ದಾರ್‍ಯಾಗ ಒಡೀತಾವ, ಇನ್ನ ಮುಪ್ಪಿನ ಕೊಡಾ ಯಾಕ ಒಡಿಬಾರ್ದದಾ. ಒಡಿದಿಲ್ಲನ ದಾರ್‍ಯಾಗ? ಹಿಂಗ ಒಡದ ಹೋಗ್ತಾವ. ಆ ಕಡಿದ ಅದು ಬಂತು, ಈ ಕಡಿದ ಇದು ಹೋತು** ಒಡಿತು ಹಂಗ ಹೋಗೆಬಿಟ್ತು ಎಷ್ಟುಸಲ. ಹಾಂಗ ಒಂದ ಕೊಡಾ ಒಡದಿತ್ತು ಋಷಿಗೆ,

ದೊಡ್ಡ ಖುಲುಷಿಗೆ ಸಿಟ್ಟುಬಂತೂ. ವಿಪರೀತ ಸಿಟ್ಟು ಬಂತೂ, ಮಗನಿಗ್ಹೇಳಿದಾ, ಮುಗಿಸಿ ಬಿಡು ಅಂದಾ! ಇಲ್ಲಾ ಇದು ಯಾರಾದ್ರೂ ಮಾಡ್ತಾರ ಇದನ ಎಷ್ಟು ಸುಲಭ ಇದು. ಇದು ಸುಲಭಲ್ಲಾ. ಒಡಿದು ಸಿಟ್ಟಿಗೆದ್ದ ಎಷ್ಟು ಸುಲಭಿದೂ ಇದು ಅಸಾಧ್ಯಲ್ಲ! ಇದು ಸುಸಾಧ್ಯ. ಅಕಸ್ಮಾತ ಹಂಗ ಒಡದ ಬಂದ್ರೂ ಸಹಿತ ನಕ್ಕ ಅಂತ ತಿಳ್ಕೊಳ್ಳಿ ಅದು ಬಹಳ ಪ್ರಸಂಗದಾಗ ಸಿಟ್ಟಿಗೇಳದಿದ್ರ ಅದು–ಅದು ಅಸಾಧ್ಯ ಆದದನ್ನ ಸುಸಾಧ್ಯಾ ಮಾಡೋದದು. ನಾವೇವ ತಿಳ್ಕೊಡೀವಿ. ಅಸಾಧ್ಯ ಸುಸಾಧ್ಯ ಅಂದ್ರ, ಒಂದದ ಎರಡ ಮಾಡಿಬಿಟ್ರ ಇದು ಅಸಾಧ್ಯ–ಸುಸಾದ್ಯ ಅಂತ ನಾವೇಂವ ತಿಳಕೊಂಡೀವಿ. ಒಂದ ಮಾಡಿದ್ದ ಎರಡಲ್ಲಾ ಕೈಯಾಗ ಒಂದ ಕೊಡಾಕ ಬಂದ್ರೂ ಸಹಿತ ನನಗ ಅವಶ್ಯಲ್ಲಾ ಅಂತಾ ಹೇಳದ್ರ ಅದು ಅದ್ಭುತಾ ಅದಾ. ಅದು, ಪವಾಡ ಅಂದ್ರ ಏನು? ಇದು ಪವಾಡಲ್ಲಾ ಎರಮಾಡೋದು ಪವಾಡಲ್ಲ. ಕೈಗೆ ಬರೂವಾಂಗಿದ್ರ ಕೈ ವರದಕ್ಷಣಾ ಲಕ್ಷ ಕೊಡಾಕಬಂದಾರ, ಕೈಚಾಚದೇ ಇದ್ರೆ ಪವಾಡ. ಅಸಾಧ್ಯ–ಸಾಧ್ಯ. ನಂಬದ ಬ್ಯಾರೇ ಡಬಲ್. ಹತ್ತಸಾಂವ ಕೊಟ್ರ ನಾ ಇಪ್ಪತ್ತುಕೊಟ್ಟೆ ನನ್ನ ಪವಾಡ ಅದ. ನಂಬದ ನಮಗಷ್ಟ ಕೊಡು ನಿಂಬದೇವ ಡಬಲ್ ಬ್ಯಾಡಾ,, ಟ್ರಬಲ್ ಬ್ಯಾಡಾ ಪೊರ್ತ ಅದವನ ಅಂತೀರಲ್ಲಾ ಅದು ಯಾವ್ದು ಬ್ಯಾಡಾ. ಅಂತ ಅಂದ್ರಿ ಅದ ಪವಾಡಾ. ಅಸಾಧ್ಯದು, ಸಾಮಾನ್ಯರಿಗದು ಸಾಧ್ಯ ಇಲ್ಲಾ. ಎಂಥೆಂಥವರೇ ಹಿಂಗs ಕೈ ಒಡ್ಡುವಾಗ, ಕೈಒಡ್ಡದ ಒಬ್ಬ ಮನುಷ್ಯ ಅದಾನಂದ್ರ ಪವಾಡಲ್ಲೇನು? ಅಲ್ಲೇನು ಒಬ್ರು ಹೋಗ್ಯಾರ ದೇವಾಲಯಕ್ಕ ದಿವಸ್ತುಂಬ ಬಹಳಜನಾ ಬಂದಾರ, ಒಬ್ಬ ಮನುಷ್ಯ ಒಬ್ಬ ತಾಯಿ ಹೋಗ್ಯಾಳ. ದೀಪಹಚ್ಯಾಳ, ನಮಸ್ಕಾರ ಮಾಡ್ಯಾಳ ದೇವರ ಕೇಳ್ದ ಏನಬೇಕೂ ಅಂತ. ಏನೂ ಬ್ಯಾಡ ಅಂದ್ಲು. ತಿರುಗಿ ಬಂದ್ಲು. ಅಂವ ಅಂದಾ ಪವಾಡ ಪವಾಡ ಪುರುಷಾ. ಅಸಾಧ್ಯ ಸಾಧ್ಯ. ಮುಂಜಾನೆಯಿಂದ ಸಾಯಂಕಾಲತಕ ಎಲ್ಲರಿಗಿ ಕೇಳಾಕ ಹತ್ಯಾನ ಜೀವದು ನಿನಗೇನಬೇಕು ನಿನಗೇನಬೇಕು. ನಿನಗೇನಬೇಕಂತ. ಎಲ್ಲರಿಗೂ ಕೇಳ್ತಾನ ಈಗ ಕೇಳೂರಿಲ್ಲ. ಮೊದಲ ಕೇಳ್ತಿದ್ದ. ಆವಾಗ ಅಂತಾ ಜನಾ ಇದ್ರು ಕೇಳ್ತಿದ್ದ ಈಗ ಕೇಳಿದ್ರ........ ಈಗ ಕೇಳಿದ್ರ ದೇವರ್ಗಿ ಹುಚ್ಚ ಹಿಡಿಬೇಕ ಅದೂ. ಇಂಥಾದ್ರಾಗ ನೀಂವ ದೀಪಹಚ್ಚಿ ನಮಸ್ಕಾರಾ ಮಾಡಿ ಸುಮ್ನ ಮೌನವಾಗಿ ಮನಿಗಿಬರ್ರಿ, ನಿಮ್ಮಂಥಾ ದೊಡ್ಡ ವ್ಯಕ್ತಿಗಳೇ ಇಲ್ಲಾ ಈ ಜಗತ್ತಿನ್ಯಾಗ ಅಂಥವರ ಹಿಂದ ದೇವ್ರೂ ಸಾಗಾಕ ಶುರು ಆಗ್ತಾನ. ದೇವರ ಹಿಂದ ಸರ್ರ್ಯಾಕ ಶುರು ಆಗ್ತಾನ. ಮನಿಗಿ ಬಂದ್ಲು ಆ ತಾಯಿ ಮುಪ್ಪಿನೋಳು, ೮೦ ವರ್ಷ. ಮನಿಗಿಬಂದ್ಲು. ಬಾಘಲಾ ಹಾಕಿದ್ಲು, ಒಳಗ ಒಂದ ದೀಪ ಹಚ್ಚಿದ್ಲು ಕಟಿರೊಟ್ಟಿ ಒಂದಿಷ್ಟು ನೆನಾಕಿದ್ಲು ತಿಂತಾ ಇದ್ಲು ಬಾಗಲಾ ಬಡದಾ! ತೆರದ್ಲು ಬೇವರ ಬಂದಿದ್ದಾ. ಆಕೆ ಕೇಳಿದ್ಲು ನಾನು ಏನೂ ಬ್ಯಾಡಂತ ಹೇಳನೀ ಇಲ್ಲಿಗ್ಯಾಕ ಬಂದಿ ಅಂದ್ಲು. ಅವಾಗ ಅಂವಾ ಅಂದಾ ಯಾರ ಬ್ಯಾಡ ಅಂತಾರಲ್ಲ ಅವರಂಥಾ ದೊಡ್ಡವ್ರ ಯಾರ ಅದಾರ! ಅವರನ್ನ–

ಅವರನ್ನ ನೆರಳಾಗಿ ಅನುಸರಿಸೋದೇ ನನ್ನ ಕೆಲಸ ಇದು ಎಂಥಾ ದೊಡ್ಡ ವ್ಯಕ್ತಿಗಳು ದೊಡ್ಡವರಂದ್ರ ಜಗತ್ತಿನ್ಯಾಗ ಯಾರೂ ಅಂದ್ರ ಯಾರು ದೊಡ್ಡಕೆಲಸಾಮಾಡ್ತಾರೋ ಅವ್ರು ದೊಡ್ಡಕೆಲ್ಸಾ ಮಾಡ್ತಾನ, ಭಾವ ಅದ್ಭುತಾದ ಮನುಷ್ಯ. ಅದ್ಭುತ ಕೆಲ್ಸಾಮಾಡ್ತಾನ. ಏನ ಮಾಡ್ತಾನಂದ್ರ ಜಗತ್ತಿನವ್ರು ಯಾವುದಕ್ಕ ಸೋಲ್ತಾರ ಅಂವ ಸೋಲೋದಿಲ್ಲಾ! ಬಾಳ ದೊಡ್ಡ ಮನಸ್ಸಿರಿದ ಇಂವ ದೊಡ್ಡಾಂವ ಆಗ್ತಾನ ಯಾರು? ಭಾವಯುಕ್ತ ಮನುಷ್ಯ ಬಹಳ ದೊಡ್ಡವನಾಗ್ತಾನ. ಎಷ್ಟ ದೊಡ್ಡಾಂವಾಗ್ತಾನಂದ್ರ ದೇವ್ರೆಬೆನ್ನಹತ್ತಬೇಕು ಅಷ್ಟದೊಡ್ಡವನಾಗ್ತಾನ. ಆವಾಗ ಶಿಷ್ಯ ಬಹಳ ಕುತೂಹಲಿ ಶಿಷ್ಯ ಪ್ರಶ್ನಿಸ್ತಾನ ಗುರುಗಳೇ-ಗುರುಗಳೇ ಈ ಮನುಷ್ಯ ಜೀವನ ಹ್ಯಾಗ ಇರ್ತದ ಸ್ವಲ್ಪಹೇಳೀ ಅಂದ! ಗುರುಗಳು ನಾಳೆ..........

# ಅಧ್ಯಾಯ-೮

## ಉಪಸಂಹಾರ

ಯಾವುದೇ ಸಮಾಜಕ್ಕೆ ಧಾರ್ಮಿಕ ತತ್ತ್ವವೆಂಬುದು ನಿಯಂತ್ರಕ ಶಕ್ತಿಯಂತೆ ಕೆಲಸ ಮಾಡುತ್ತದೆ. ಅದು ನೀತಿಸಂಹಿತೆಯೂ ಆಗಿ ಆಚಾರ-ವಿಚಾರಗಳ ಪ್ರಸಾರಕ್ಕಾಗಿ ಪ್ರವಚನದಂಥ ಒಂದು ವಿಶಿಷ್ಟ ಮಾಧ್ಯಮವೂ ಸಮಾಜವನ್ನು ಎಚ್ಚರದಲ್ಲಿಡಲು ಪ್ರಯತ್ನಿಸುತ್ತಿರುತ್ತದೆ.

ಹನ್ನೆರಡನೇ ಶತಮಾನದ ಆಂದೋಲನವು ಸಮಗ್ರ ಸಮಾಜಕ್ಕೆ ಸಮಾನ ಧಾರ್ಮಿಕಪ್ರಜ್ಞೆಯನ್ನುಂಟು ಮಾಡಿದ್ದರಿಂದ ಪ್ರವಚನ-ಕೀರ್ತನಗಳು ವಿಶಿಷ್ಟ ಮೆರಗನ್ನು ಪಡೆದುಕೊಂಡವು. ಉದಾಹರಣೆಗೆ ಗ್ರಂಥಪಠಣ, ಪುರಾಣವಾಚನ, ಕೀರ್ತನ, ಗಾಯನ, ವೇಷಧಾರಣೆ, ಶಿವಾನುಭವಗೋಷ್ಠಿ, ಸತ್ಸಂಗದಂಥ ಮಾಧ್ಯಮಗಳ ಮೂಲಕ ತಮ್ಮ ಪಾಲಿನ ಧಾರ್ಮಿಕ ಪ್ರಜ್ಞೆಗೆ ನಾಂದಿ ಹಾಡಿದರು. ಪ್ರಾಚೀನಕಾಲದಲ್ಲಿ ಹೀಗೆ ಪ್ರಚಾರ ಮಾಡಿದ ಪ್ರಮುಖರೆಂದರೆ, ಅರವತ್ತೂರು ಪುರಾತನರಲ್ಲಿರುವ ಭದ್ರಗಾಯಕ, ಚಾರಮ, ಇಂಡಿಯ ಶಾಂತಯ್ಯ, ನಿಂಬಣದ ಗಣೇಶ್ವರ, ಅಲ್ಲಯ್ಯ, ಕೇಶಿರಾಜ, ನಿರ್ಲಜ್ಜ ಶಾಂತಯ್ಯ, ಸುಜ್ಞಾನಿದೇವ, ಶ್ರೀಪತಿಪಂಡಿತ, ವೇಮನಾರಾಧ್ಯ, ತಾಳಿಕೋಟೆಯ ಶಿವಾರಾಧ್ಯ, ಎಡೆಮಠದ ನಾಗಿದೇವ, ವೀರದೇವಮ್ಮ, ವಿಮಳದೇವಿ, ಮೊದಲಾದವರು ಇಂಥ ಉಪಯುಕ್ತ ಕಾರ್ಯವನ್ನು ಮಾಡಿ ಸಮಾಜಕ್ಕೆ ಉಪಕಾರ ಮಾಡಿದ್ದಾರೆ.

ಹಿಂದೆಂದಿಗಿಂತಲೂ ಇಂದು ಪ್ರವಚನ ಮತ್ತು ಪ್ರವಚನದಂಥ ಪರಿಣಾಮಕಾರಿ ಸಮೂಹ ಸಂವಹನದೊಂದಿಗಿನ ಅನುಸಂಧಾನದ ಆಧುನಿಕ-ಅತ್ಯಾಧುನಿಕತೆಗಳು ತಂದಿರುವ ಬದುಕಿನ ಮೇಲೆ ನೇತ್ಯಾತ್ಮಕ ಪ್ರಭಾವಗಳಿಂದ ಹೊರತಂದು ನಿಲ್ಲಿಸಬೇಕಾದ ಅವಶ್ಯಕತೆಯಿದೆ. ಮಾನವೀಯ ಸಂಬಂಧಗಳು ಕದಡಿವೆ. ಸ್ನೇಹ, ಸಹಕಾರ, ಪ್ರೀತಿ ಬಿರುಕು ಬಿಟ್ಟಿವೆ. ಆತ್ಮೀಯತೆ ಇಲ್ಲವಾಗಿದೆ. ಆದ್ದರಿಂದ ನಾವೆಲ್ಲ ಅಧ್ಯಾತ್ಮವನ್ನು ಶ್ರವಣ ಮಾಡಬೇಕು. ಅಧ್ಯಾತ್ಮವಿಲ್ಲದ ವಿದ್ಯೆ ಅದು ರಾಮನಿಲ್ಲದ ಅಯೋಧ್ಯೆ. ಇಂದು ಬಿರುಕುಗಳನ್ನು ಮೆತ್ತಬೇಕಾಗಿದೆ. ಹರಿದುದನ್ನು ಹೊಲಿಯಬೇಕಾಗಿದೆ. ಆತ್ಮೀಯ ಸಂಬಂಧಗಳನ್ನು ಗಟ್ಟಿಗೊಳಿಸಬೇಕಾಗಿದೆ. ವೈಚಾರಿಕ ಪ್ರಜ್ಞೆ, ವೈಜ್ಞಾನಿಕ ನೆಲೆಗಟ್ಟಿನ ಮೇಲೆ ಬದುಕನ್ನು ನಿರ್ಮಿಸಬೇಕಾಗಿದೆ. ಬಯಕೆಯ ಬಿರುಗಾಳಿಗೆ ಸಿಲುಕಿ ಬಳಲಿ ಬೆಂಡಾದವರಿಗೆ, ನೊಂದವರಿಗೆ, ಬಿದ್ದವರಿಗೆ ಸಾಂತ್ವನದ ನುಡಿಗಳ ಅವಶ್ಯಕತೆಯಿದೆ. ಮಂತ್ರ ಸದೃಶ್ಯ ಮಾತುಗಳು ಮನವನ್ನು ಅರಳಿಸಬಲ್ಲವು.

ಪ್ರವಚನಗಳು ಬಾಡುವ ಬದುಕಿನ ಬಳ್ಳಿಗೆ ಜೀವಜಲ. ಸದ್ಭಾವನೆಗಳು ಅರಳಲು, ಜ್ಞಾನದೀವಿಗೆ ಬೆಳಗಲು ಅನುಭಾವಿಗಳ ನುಡಿಗಡಣ ಬೇಕು. ಭಾರತದೇಶ ಹಬ್ಬ ಹರಿದಿನಗಳಲ್ಲಿ ಜಾತ್ರೆ-ಯಾತ್ರೆಗಳಲ್ಲಿ ಪುಣ್ಯಾರಾಧನೆ, ಉತ್ಸವ ಹೀಗೆ ಅನೇಕ ಸಂದರ್ಭಗಳಲ್ಲಿ ಪ್ರವಚನಗಳನ್ನು ನಡೆಸುತ್ತಾ ಭಕ್ತಿ – ಧರ್ಮ, ಲೋಕಹಿತ, ಜಾಗೃತಿ ಮಾಡುತ್ತ ಬಂದಿದೆ. ಎಲ್ಲ ಧರ್ಮೀಯರು ಅವರವರ ಧರ್ಮಕ್ಕನುಗುಣವಾಗಿ ಪ್ರವಚನಗಳನ್ನು ನಡೆಸುತ್ತಿವೆ. ಬೆಳಕು ಯಾರಿಗೆ ಬೇಡ? ಗಾಳಿ ಯಾರಿಗೆ ಬೇಡ? ನೀರಿಗೆ ಜಾತಿ ಇದೆಯೇ? ಪ್ರಣತೆ ಬಂಗಾರದಾದ್ದರೇನು? ಮಣ್ಣಿನದಾದ್ದರೇನು? ಬೆಳಕು ಮುಖ್ಯ. ಹೇಳುವವರು ಸನ್ಯಾಸಿಗಳೇ, ಸಂಸಾರಿಗಳೇ, ಸಂತ, ಶರಣ, ಶಿವಯೋಗಿಗಳೇ ಮುಖ್ಯವಲ್ಲ. ಕಾರಣ ದಾಹವಾದವನಿಗೆ ಯಾವ ಭಾವಿಯ ನೀರಾದರೇನು ದಾಹ ಪರಿಹಾರಕ್ಕೆ ನಮಗೆ ಬೇಕಿರುವುದು ಶುದ್ಧ ನೀರು ಅಷ್ಟೇ. ಹಾಗೇ ಯಾವ ದಿನವಾದರೂ ಕೇಳುವುದು ನಿಲ್ಲಬಾರದು. ಪ್ರವಚನ ನಿರಂತರ ಚಲನ ಶೀಲ ಗುಣವುಳ್ಳದ್ದು. ಇದು ಜ್ಞಾನಗಂಗೋತ್ರಿ. ಒಂದು ದೀಪ ಇನ್ನೊಂದು ದೀಪಕ್ಕೆ ಸ್ಪರ್ಶ ಮಾಡಿದಾಗ ಜ್ಯೋತಿ ಮುಟ್ಟಿದ ಬತ್ತಿ ಜ್ಯೋತಿಯೇ ಆಗಿರುತ್ತದೆ. ಪ್ರವಚನಗಳು ಸರ್ವರ ಕಿವಿಗಳನ್ನು ಶೃತಗೊಳಿಸುವ ಧ್ವನಿತರಂಗಗಳು. ಶಾಂತರಾಗಿ, ಪ್ರಸನ್ನ ಚಿತ್ತರಾಗಿ, ಏಕೋಭಾವದಿಂದ ಬುದ್ಧನ ಮಾತುಗಳನ್ನು ಆಲಿಸಿದ ಗಣಿಕೆ ಅಂಬಾಪಾಲಿ ಬುದ್ಧನ ಅನುಯಾಯಿಯಾದಳು, ನಿರ್ವಾಣದ ಹಾದಿ ಹಿಡಿದಳು. ರಾಮಕೃಷ್ಣ ಪರಮಹಂಸರ ನುಡಿ ಕೇಳಿದ ನರೇಂದ್ರ ವಿವೇಕಾನಂದ ಆಗಿದ್ದ. ಬಸವಣ್ಣನ ಮಾತುಗಳನ್ನು ಆಲಿಸಿದ ಇಡೀ ಶರಣ ಸಂಕುಲವು ಬಸವ ಸ್ವರೂಪರೇ ಆದರು.

ಇಂದು ಯುವಕರು ಉತ್ಸಾಹಿ ತರುಣರಾಗಬೇಕಾಗಿದೆ. ಆಲಸ್ಯತನದಿಂದ ಹೊರಬರಬೇಕಿದೆ. ಮುಖ್ಯವಾಗಿ ಪ್ರವಚನ ಪುಣ್ಯಕಥೆಗಳಲ್ಲಿ ಯುವಕರು ಭಾಗವಹಿಸುವವರಾಗಬೇಕು. ಓದಿನ ಜೊತೆ ವ್ಯಸನಾದಿಗಳ ದಾಸರಾಗಿ ಪವಿತ್ರವಾದ ಆಯುಷ್ಯವನ್ನು ಹಾಳುಮಾಡಿಕೊಳ್ಳುತ್ತಿದ್ದಾರೆ. ಧರ್ಮ, ದೇವರು, ಆದರ್ಶ ವ್ಯಕ್ತಿಗಳ ಚಿತ್ರಣ, ಮಹಾನುಭಾವರ ಲೋಕೋಕ್ತಿ, ದಾರ್ಶನಿಕ ಚರಿತ್ರೆ, ಜ್ಞಾನಿ-ವಿಜ್ಞಾನಿಗಳ ಮಾಹಿತಿ ಯುವಕರಿಗೆ ಜೀರ್ಣವಾಗುತ್ತಿಲ್ಲ. ಸುಮ್ಮನೆ ಸಮಯವನ್ನು ವೃಥಾ ಹಾಳುಮಾಡುತ್ತಿದ್ದಾರೆ. ಶೈಕ್ಷಣಿಕ ರಂಗದಲ್ಲಿ ಅಧ್ಯಾತ್ಮವೇ ಅಡಿಪಾಯವಾಗಬೇಕು. ಶರಣರ ಮನೆಗಳೆಲ್ಲ ಮಠಗಳಾಗಬೇಕು. ಸದ್ವಿಚಾರ, ಸಚ್ಚಿಂತನೆ ನಡೆಯುವಂತಾಗಬೇಕು.

ಬಲ್ಲವರ ಬೆಳಕಿನ ಮಾತುಗಳು, ಸೂಳ್ನುಡಿಗಳು ಜೀವ ಚೈತನ್ಯವನ್ನು ತುಂಬಬಲ್ಲವು. ಜೀವನದಲ್ಲಿ ಜಿಗುಪ್ಸೆಗೊಂಡ ಯುವಕ ನೇಣು ಹಾಕಿಕೊಳ್ಳಲು ತಾನು ಮಲಗುವ ಕೊಠಡಿಗೆ ಹೋದ. ಇನ್ನೇನು ಕುತ್ತಿಗೆ ನೇಣು ಬಿಗಿದುಕೊಂಡು ಸಾಯಬೇಕೆನ್ನುವಷ್ಟರಲ್ಲಿ ತಾನು ಬರೆದಿಟ್ಟ ದಿನಚರಿ ಅವನ ಕಣ್ಣಿಗೆ ಬಿತ್ತು. ಆ ದಿನಚರಿ ಎತ್ತಿಕೊಂಡು ತಾನು ಅಲ್ಲಲ್ಲಿ ಕೇಳಿದ ಪ್ರವಚನದ ಮಾತುಗಳಲ್ಲಿ ಮುಖ್ಯ ಸಂಗತಿಗಳನ್ನು ಕವಿ ಸಾಹಿತಿಗಳ ಅಮೂಲ್ಯ ಸಾಲುಗಳನ್ನು ಬರೆದಿಟ್ಟುಕೊಂಡಿದ್ದ. ಅದರಲ್ಲಿ ಒಂದು ಸಾಲು ಹೀಗೆ ಬರೆದಿದ್ದ. 'ನೇಣು ಎಂಬುದು ಗೇಣು ಹಗ್ಗ, ಪ್ರಾಣ ಅದಕ್ಕೆಷ್ಟು ಅಗ್ಗ' ಈ ಸಾಲನ್ನು ಓದಿ ಕಣ್ಣಂಚಿನಲ್ಲಿ ನೀರು ತಂದು ಹೌದಲ್ಲ ! ಎಷ್ಟು ಸತ್ಯ ಈ ಮಾತು. ನಾವೇಕೆ ಸಾಯಬೇಕು. ಶ್ರೇಷ್ಠವಾದ ಜನ್ಮವನ್ನು ಬಲಿ ಕೊಡಬೇಕು, ಈಸಬೇಕು ಇದ್ದು ಜೈಸಬೇಕು ಎಂದು ಚಿಂತನೆಗೆ ತೊಡಗಿದ. ಸಾಯುವ ವಿಚಾರ ಬಿಟ್ಟು ಶ್ರೇಷ್ಠ ವ್ಯಕ್ತಿಯಾಗಿ ಬಾಳಿದ. ಹೀಗೆ ಕಷ್ಟ ಕಾಲದಲ್ಲಿ ಪ್ರವಚನ ಸಂಜೀವಿನೋಪಾದಿಯಲ್ಲಿ ರಕ್ಷಿಸುತ್ತದೆ.

ಪ್ರವಚನ ಪ್ರಸಾದ-ಊಟವಿದ್ದಂತೆ.!! ಇದು ಹೊಟ್ಟೆಯ ಬೋನವಲ್ಲ. ನೆತ್ತಿಯ ಬೋನವಾದ ಜ್ಞಾನ. ಅನ್ನವನ್ನು ಒಲೆಯ ಮೇಲಿಟ್ಟು ತಯಾರಿಸಿದರೆ, ಜ್ಞಾನವು ತಲೆಯಲ್ಲಿ ಅಟ್ಟುಣ್ಣುವ ಅನ್ನವಾಗಿದೆ. ಹೊಟ್ಟೆಗೆ ಸೇರಿದ ಅನ್ನ ಶಾರೀರಿಕ ಶಕ್ತಿಯನ್ನು ನೀಡಿದರೆ, ನೆತ್ತಿಯ ಜ್ಞಾನ ಆತ್ಮಿಕ ಶಕ್ತಿಯನ್ನು ನೀಡುತ್ತದೆ. ಮನುಷ್ಯ ಅನ್ನ-ಜ್ಞಾನ ಎರಡನ್ನು ಪಡೆಯಬೇಕು. ಏಕೆಂದರೆ ಅವನು ಕೇವಲ ಅನ್ನವನ್ನು ತಿಂದು ಬದುಕುವ ಪ್ರಾಣಿಯಲ್ಲ. ಜ್ಞಾನಕ್ಕಾಗಿ ಹಾತೊರೆಯುವವನು. ಉಳಿದೆಲ್ಲ ಪ್ರಾಣಿಗಳಿಗೆ ಹೊಟ್ಟೆ ತಲೆ ಸಮಾನಾಂತರದಲ್ಲಿದ್ದರೆ, ಮನುಷ್ಯನಿಗೆ ಹೊಟ್ಟೆ ಕೆಳಗಿದೆ. ತಲೆ ಮೇಲಿದೆ. ಇದರರ್ಥ ಮನುಷ್ಯನು ತಿನ್ನುವುದಕ್ಕಿಂತ, ಹೆಚ್ಚು ವಿಚಾರ ಮಾಡಬೇಕು ಎಂಬುದನ್ನು ನಿಸರ್ಗವು ಸ್ಥಿರೀಕರಿಸುತ್ತದೆ.

ಮಾನವನು ತನು-ಮನ-ಆತ್ಮಗಳೆಂಬ ಮೂರು ಘಟಕಗಳಿಂದ ಆಗಿದ್ದಾನೆ. ಮಾನವ ದೇಹಕ್ಕೆ ಬೇಕಾದ ಅನ್ನವನ್ನು ದಿನ ನಿತ್ಯ ನಾವು ಒದಗಿಸುವಂತೆ, ನೆತ್ತಿಗೆ ಬೇಕಾದ ಜ್ಞಾನವನ್ನು, ಆತ್ಮನಿಗೆ ಬೇಕಾದ ಧ್ಯಾನವನ್ನು ಒದಗಿಸುತ್ತ ಹೋದರೆ, ಮಾನವನ ವ್ಯಕ್ತಿತ್ವವು ಸಮಗ್ರವೂ, ಸಂಪೂರ್ಣವೂ ಆಗುವುದು. ಮಾನವನ ವ್ಯಕ್ತಿತ್ವ ವಿಕಸನಕ್ಕೆ, ನಾಡಿನಲ್ಲಿ ದೇಶದಲ್ಲಿ ಆಗಿಹೋದ ಸಂತರು ಶರಣರು-ಮಹಾಂತರು ನೀಡಿದ ಸಂದೇಶಗಳು ಇಂದಿನ ಸಮಾಜಕ್ಕೆ ಅವಶ್ಯವಾಗಿವೆ ಅನಿವಾರ್ಯವಾಗಿವೆ.

ಮಾತುಗಾರಿಕೆಯ ವಿಧಾನ ಹಲವು ವಿಧಗಳಲ್ಲಿದೆ. ಅದು ಪುರಾಣ, ಕೀರ್ತನ, ಭಾಷಣ, ಪ್ರವಚನಗಳೆಂದು ವಿಂಗಡಿಸಲಾಗುತ್ತದೆ. ಪುರಾಣ ಪದ್ಧತಿಯ ನಿರೂಪಣೆಯಲ್ಲಿ ಹರಿಕತೆ, ಶಿವಕತೆಗಳಿವೆ. ಈ ನಿರೂಪಣಾ ವಿಧಾನದಲ್ಲಿ ಕತೆಗೆ ಆದ್ಯತೆಯೇ ವಿನಃ ತತ್ತ್ವಜ್ಞಾನಕ್ಕಲ್ಲ.

ಕೀರ್ತನಗಳಲ್ಲಿ ಸಂಗೀತ, ತಾಳ-ಮೇಳ ಆಲಾಪ-ನಾಟಕೀಯತೆಗೆ ಪ್ರಮುಖ ಸ್ಥಾನ. ತತ್ತ್ವಜ್ಞಾನ ಇಲ್ಲಿಯೂ ನಗಣ್ಯವಾಗಿದ್ದು, ಪೌರಾಣಿಕ ಕತೆಗಳಿಗೆ ಆದ್ಯತೆ ಇದೆ; ಉಪನ್ಯಾಸ-ಭಾಷಣಗಳಲ್ಲಿ ವಿವಿಧ ವಿಷಯಗಳ ಬಗ್ಗೆ ಪಾಂಡಿತ್ಯ ಪೂರ್ಣ ಶೈಲಿಯಲ್ಲಿ ನೇರ, ನಿರೂಪಣೆ, ನಾಟಕೀಯತೆ ಕತೆಗೆ ಸ್ಥಾನವಿರದೆ, ಪ್ರೌಢ ಮತಿಗಳಿಗೆ ಹಿಡಿಸುವ ಶೈಲಿಗೆ ಆದ್ಯತೆ ಇರುತ್ತದೆ.

ಪ್ರವಚನ ಒಂದು ಬಗೆಯ ಸಮನ್ವಯ ಪದ್ಧತಿ. ಇಲ್ಲಿ ಕತೆ, ತತ್ತ್ವಜ್ಞಾನಗಳುಂಟು. ಹಲವಾರು ತರದ ಹೂಗಳನ್ನು ಪೋಣಿಸಿ ತಯಾರಿಸಿದ ಹಾರದಂತೆ! ಈ ಪ್ರವಚನ ಶೈಲಿ. ಜೀವನವೆಂದರೆ ಕೇವಲ ವೈಚಾರಿಕತೆಯ ರವಿಕಿರಣದಿಂದ ಮಾತ್ರ ಪೋಷಿಸಿಸಲ್ಪಡುವಂತಹದು ಅಲ್ಲ ಬಾಳವೃಕ್ಷ ಸುಳಿದೆಗೆದು ಬೆಳೆಯಬೇಕಾದರೆ, ಅದಕ್ಕೆ ಸದ್ಭಾವನೆಯ ಸುಜಲ, ಸುಜ್ಞಾನದ ರವಿಕಿರಣ, ಸಮಾಚಾರದ ಗೊಬ್ಬರ ಇವು ಮೂರುಬೇಕು. ಆದ್ದರಿಂದಲೇ ಈ ಎಲ್ಲ ಮಾನಸಿಕ, ನೈತಿಕ ಪೋಷಕಾಂಶಗಳನ್ನು ಪ್ರವಚನದ ಮೂಲಕ ನೀಡಲಾಗುತ್ತದೆ.

ಪ್ರವಚನವು ಆತ್ಮಬಲಹೀನತೆಯ ನರದೌರ್ಬಲ್ಯವನ್ನು, ಅಜ್ಞಾನದ ದೃಷ್ಟಿ ಮಾಂದ್ಯತೆಯನ್ನು, ಅಹಂಕಾರ ಪೊರೆ ಕವಿದ ಸ್ಥಿತಿಯನ್ನು ಪ್ರವಚನವೆಂಬ ಶಸ್ತ್ರಚಿಕಿತ್ಸೆಯ ಥಿಯೇಟರಿನಲ್ಲಿ ಗುಣಪಡಿಸಲಾಗುವುದು. ಇಲ್ಲಿರುವ ಜ್ಞಾನವೆಂಬ ಶಸ್ತ್ರದಿಂದ ಕತ್ತರಿಸಿ ಸದ್ಭಕ್ತಿಯ ಮುಲಾಮು ಲೇಪಿಸಿ, ಸತ್ಸಂಗದ ಬ್ಯಾಂಡೇಜ್ ಹಾಕಿ ಬಿಟ್ಟರೆ ಎಂಥ ಭವರೋಗವಾದರೂ ಮಾಯವಾಗುತ್ತದೆ.

ಜ್ಞಾನವಾಹಿನಿ ಎನಿಸಿದ ಪ್ರವಚನದಲ್ಲಿ ಪಾಲ್ಗೊಂಡು ಒಂದಿಷ್ಟು ಒಳ್ಳೆಯ ಮಾತುಗಳನ್ನು ಕೇಳಿದರೆ, ತಲೆಯೊಳಗೆ ತುಂಬಿರುವ ಅಜ್ಞಾನ, ಮೂಢನಂಬಿಕೆ, ಕಂದಾಚಾರಗಳು ಕಡಿಮೆಯಾಗುತ್ತವೆ. ಬದುಕಿನಲ್ಲಿ ಶಾಂತಿ-ಸಮಾಧಾನ ಹರಿದು ಬದುಕು ಹಗುರಾಗುತ್ತದೆ. ಪ್ರವಚನ ಅದು ಆರ್ಭಟವಲ್ಲ-ಸಹಜವಾಗಿ ತಿಳಿದುಕೊಳ್ಳುವುದು. ಹೃದಯ-ಹೃದಯಗಳ ನಡುವಿನ ಸುಂದರವಾದ ಸಂವಾದ. ವಚನದಲ್ಲಿನ ಬೆಳಕು. ಬದುಕಿಗಾಗಿ ನಾವು ವ್ಯಾಪಾರ, ವ್ಯವಸಾಯ, ಅಧ್ಯಾಪಕ, ವೈದ್ಯ-ವಕೀಲ ಏನೇ ಆಗಿರಲಿ ಪ್ರವಚನ ಕೇಳುವುದನ್ನು ಮರೆಯಬಾರದು. ಅನುಭಾವದ ಮಾತುಗಳನ್ನು ಕೇಳದೆ ಇರಬಾರದು. ಯಾಕೆಂದರೆ ಆ ಮಾತುಗಳಲ್ಲಿ ಅಮೃತವಿದೆ. ಅದು ನಮ್ಮೆಲ್ಲರ ಬಾಳಿಗೆ ಬೆಳಕುವೆನಿಸಿದೆ.

ಪ್ರವಚನಗಳ ಮುಖ್ಯಭಾವ ಪರಿವರ್ತನೆ. ಮಾನಸಿಕ ಸ್ವಾಸ್ಥ್ಯಕ್ಕೆ ಪ್ರವಚನಗಳು ತಾಯಿಬೇರು. ಕನ್ನಡ ಸಾಹಿತ್ಯದಲ್ಲಿ ಪ್ರವಚನ ಒಂದು ತನ್ಮತೆಯ ಫಲ. ಜನಜಾಗೃತಿ ಅದರ ಮೂಲದ್ರವ್ಯ. ಪ್ರವಚನದ ಮಾತುಗಳು ಸಮನ್ವಯದ ಮಾತುಗಳು. ಅವು ಸಮಾಜಕ್ಕೆ ಬೆಳಕಿನ

ಹಾದಿ ತೋರಬಲ್ಲವು. ಪ್ರವಚನಕ್ಕೆ ವಚನದ ಸಾರ. ವೇದ ವೇದಾಂತದ ತಾತ್ವಿಕ ನುಡಿಗಡಣ. ಸಾಹಿತ್ಯದ ಸ್ವಾರಸ್ಯ. ಸಂಗೀತದ ಸಾಮರಸ್ಯ ಬೆರೆತಾಗ ಮೂಡಿ ಬರುವ ಆ ಮಾತುಗಳು ಅಮೂಲ್ಯ ಸಾಹಿತ್ಯದ ರಚನೆಗೆ ಕಾರಣವಾಗಬಲ್ಲವು.

ಯಾವುದೇ ಸಾಹಿತ್ಯ, ಅನುಭವ, ಭಾವನೆ, ಅರಿವು, ಆಚಾರ–ವಿಚಾರಗಳನ್ನು ತನ್ನ ಮೂಲಸಾಮಗ್ರಿಯಾಗಿ ಹೊಂದಿರುತ್ತದೆ. ಜೀವನದಲ್ಲಿ ಒಳಿತನ್ನು ಕಾಣಲು ಪ್ರೀತಿ ಆತ್ಮೀಯತೆಯ ಬದುಕು ಬದುಕಲು ನೆಮ್ಮದಿಯ ಜೀವನ ನಡೆಸಲು ಜೀವನಕ್ಕೆ ನವೀನತೆಯನ್ನು ತಂದು ಕೊಡಲು ಪ್ರವಚನಗಳು ಅವಶ್ಯ. ಯಾವ ಮಾತುಗಳಿಂದ ಜನತೆಯ ಹೃದಯಕ್ಕೆ ಮಾನವೀಯ ಸ್ಪರ್ಶಮಾಡಬಲ್ಲದು ಅವೆಲ್ಲ ಪ್ರವಚನದ ಮಾತುಗಳು.

## ಪ್ರವಚನಕ್ಕೆ ಇರುವ ವೈಶಿಷ್ಟ್ಯಗಳು :

**ಒಂದು** : ಸಾಂಸ್ಕೃತಿಕವಾಗಿ ಸ್ಥಿತ್ಯಂತರಗೊಳ್ಳುತ್ತಿರುವ ನಮ್ಮ ಸಾಮಾಜಿಕ ಸಂದರ್ಭದಲ್ಲಿ ಪ್ರವಚನದಂಥ ಮೌಲ್ಯ ಪ್ರತಿಪಾದನೆಯ ಸಾಮುದಾಯಿಕ ಶಕ್ತಿ ಸಂವಹನ ಮಾಧ್ಯಮವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿರುವುದು.

ಒಂದು ಸುಂದರ ಸಮಾಜ ರಚನೆಗೆ, ಸಾಮಾಜಿಕ ಬೆಳವಣಿಗೆಗೆ ಪ್ರವಚನ ಮೌಲ್ಯಗಳನ್ನು ತುಂಬಬಲ್ಲ ಒಂದು ಶ್ರೇಷ್ಠ ಮಾಧ್ಯಮ. ಶಾಂತವಾತಾವರಣದಲ್ಲಿ ಹೃದಯದಿಂದ ಮೂಡಿಬಂದ ಮೌಲ್ಯಯುತ ಮಾತುಗಳು ಕಠಿಣ ಹೃದಯವನ್ನು ಹೂವಿನಂತೆ ಅರಳಿಸಬಲ್ಲವು. ಗ್ರಂಥ ಓದಿದರೆ ಒಬ್ಬನಿಗೆ ಆನಂದ. ಪ್ರವಚನವು ಏಕಕಾಲಕ್ಕೆ ಸಾವಿರ–ಸಾವಿರ ಜನರ ಮನ ತಣಿಸಬಲ್ಲದು ಅಂತಹ ಒಂದು ಸಂವಹನ ಶಕ್ತಿ ಪ್ರವಚನಕ್ಕಿದೆ. ಒಬ್ಬ ಪ್ರವಚನಕಾರ ತಾನು ಕಂಡುಕೊಂಡ ಸತ್ಯಗಳನ್ನು, ಓದಿದ ಅನುಭವಗಳನ್ನು ರೂಪಕ ದೃಷ್ಟಾಂತಗಳ ಮೂಲಕ ನೇರವಾಗಿ ಶ್ರೋತೃಗಳಿಗೆ ಮುಟ್ಟಿಸುತ್ತಾನೆ. ಮೌಲ್ಯಗಳು ಇಲ್ಲವಾಗುತ್ತಿರುವ ಇಂದಿನ ದಿನಗಳಲ್ಲಿ ಜನರ ಮನಸ್ಸಿಗೆ ಮುದನೀಡುವ ಅಂತರಂಗದ ಅವಿರಳ ಮಾತುಗಳು ಚಿರಸ್ಥಾಯಿಯಾಗಿ ಉಳಿಯಬಲ್ಲವು. ಎಲ್ಲರ ಮನಸ್ಸುಗಳು ಒಂದೇ ಬಿಂದುವಿನಲ್ಲಿ ಕೇಂದ್ರಿಕೃತವಾಗುವ ಸಾಧನ ಪ್ರವಚನ. ಅದೊಂದು ಯೋಗವೇ ಸರಿ. ಪೂಜ್ಯ ಲಿಂಗಾನಂದ ಮಹಾಸ್ವಾಮಿಗಳು ಹೇಳುವಂತೆ– ಶಿವಯೋಗದಿಂದ ಒಬ್ಬವ್ಯಕ್ತಿಗೆ ಒಳಿತಾದರೆ, ಪ್ರವಚನ ಯೋಗದಿಂದ ಇಡೀ ಸಮುದಾಯಕ್ಕೆ ಬೆಳಕಾಗುವುದು. ಪ್ರವಚನ ಕ್ಷೇತ್ರ ವಿಸ್ತಾರವಾದುದು. ಸಾಂಸ್ಕೃತಿಕ, ಧಾರ್ಮಿಕ, ಆಧ್ಯಾತ್ಮಿಕ ನೆಲೆಗಟ್ಟಿನಲ್ಲಿ ಇದು ತನ್ನ ಕ್ಷಿತೀಜವನ್ನು ವಿಸ್ತಾರಿಸಿಕೊಂಡಿದೆ.

**ಎರಡು :** ಶರಣಸಂಸ್ಕೃತಿಯ ಅಭಿವೃದ್ಧಿಗಳಾದ ವಚನಗಳನ್ನು ಯಥೇಚ್ಛವಾಗಿ ಪ್ರವಚನದಲ್ಲಿ ಬಳಸುತ್ತಿರುವುದು. ಶರಣಸಂಸ್ಕೃತಿ ಶ್ರಮಸಂಸ್ಕೃತಿ. ಕಾಯಕ ದಾಸೋಹ, ಶಿವಯೋಗ ಮಾಡುವಾಗ ರಚನೆಗೊಂಡವುಗಳೇ ವಚನಗಳು. ನೀತಿಯುಕ್ತ ಮಾತುಗಳು. ಬದುಕು ಭವ್ಯ-ದಿವ್ಯವಾಗಲು ವಚನಗಳನ್ನು ನುಡಿದು ನಡೆಯಬೇಕು. ಇಂದು ಪ್ರವಚನದಲ್ಲಿ ವಚನಗಳನ್ನು ಎಲ್ಲರೂ ಯಥೇಚ್ಛವಾಗಿ ಬಳಸುತ್ತಾರೆ. ಪ್ರವಚನಕ್ಕೆ ಕೀರ್ತಿಟಪ್ರಾಯವಾದವುಗಳು ಶರಣರ ಸುವಚನಗಳು. ಒಂದು ಗಂಟೆಯ ಪ್ರವಚನದಲ್ಲಿ ಕನಿಷ್ಠ ೨ ರಿಂದ ೩ ವಚನಗಳನ್ನಾದರೂ ಬಳಸುವ ರೂಢಿಯಿದೆ. ವೇದೋಪನಿಷತ್ತಗಳನ್ನು ಹೇಳುವಾಗಲೂ ಜನ ಸಾಮಾನ್ಯರ ಮನಕ್ಕೆ ಮುಟ್ಟುವಂತೆ ತಿಳಿಯಪಡಿಸಲು ವಚನಗಳನ್ನು ಬಳಸಲೇಬೇಕು.

ವಚನ ಎಂದರೆ ಮಾತು ಮೀರಿದ ನುಡಿ. ಅದನ್ನು ಸುಂದರಗೊಳಿಸಿ ಶಬ್ದ ಪದವಾಕ್ಯಕ್ಕೆ ದಕ್ಕೆ ಬಾರದಂತೆ ಮಾತನಾಡುವ ಕಲೆ ಪ್ರವಚನ.

**ಮೂರು :** ಸಾಮಾಜಿಕ ಮೌಲ್ಯವಾಗಿರುವ ಪ್ರವಚನಕ್ಕೆ ಆಧುನಿಕತೆಯ ಸ್ಪರ್ಶವನ್ನುಂಟು ಮಾಡಿಯೂ ಪರಿಣಾಮಕಾರಿ ಫಲಶೃತಿಯನ್ನು ಕಾಣುತ್ತಿರುವುದು.

ಹಿಂದೆ ಪುರಾಣ-ಪ್ರವಚನಗಳನ್ನು ಹೇಳುವಾಗ ರಾಮಾಯಣ ಮಹಾಭಾರತ ಒಳಿ ಪುರಾತನದ ಕಥೆ ಹೀಗೆ ಉದಾಹರಿಸುತ್ತಿದ್ದರು. ಇಂದು ವಿಜ್ಞಾನದ ಯುಗ. ಹಳೆಯ ತಲೆಮಾರು ದಾಟಿದೆ. ಎರಡು-ಮೂರು ಗಂಟೆಗಳ ಕಾಲ ಕುಳಿತು ಕೇಳುವ ವ್ಯವಧಾನವಿಲ್ಲ. ಕಾಲಕ್ಕೆ ತಕ್ಕಂತೆ ಇಂದು ಪ್ರವಚನಗಳು ಆಧುನಿಕತೆಯ ಸ್ಪರ್ಶವನ್ನು ಹೊಂದುತ್ತಿವೆ. ಕವಿ-ಸಾಹಿತಿಗಳ ಸಾಲುಗಳನ್ನು, ನೈಜ ಘಟನೆಗಳನ್ನು, ದೇಶ ಸ್ವಾತಂತ್ರ್ಯದ ಹೋರಾಟದ ಕ್ಷಣಗಳನ್ನು, ಹಳ್ಳಿಯ ಚಿತ್ರಣಗಳನ್ನು ಹೇಳುವುದಾಗಿದೆ. ಪ್ರವಚನದ ಯಾವುದೇ ಪ್ರಸಂಗವನ್ನು ಪ್ರಸ್ತುತ ವಿದ್ಯಮಾನಕ್ಕೆ ಹೋಲಿಸಿ ಹೇಳುವುದಾಗಿದೆ.

ಪ್ರವಚನವು ಸಾಮಾಜಿಕ ಮೌಲ್ಯ, ಆಧುನಿಕತೆಯ ಸ್ಪರ್ಶ ಮಾಡಿದರೂ ಪರಿಣಾಮಕಾರಿ ಫಲವನ್ನು ಕಾಣುತ್ತಿದ್ದೇವೆ. ಹಿಂದೆ ಕೇಳುಗರೂ ಪ್ರವಚನದ ಮಾತುಗಳನ್ನು ಬರೆದಿಡುತ್ತಿರಲಿಲ್ಲ. ಆದರೆ ಇಂದು ಬಹಳಷ್ಟು ಜನ ಬರೆದಿಡುವಂತಾಗಿದೆ.

**ನಾಲ್ಕು :** ಓದಿನ ಕ್ರಿಯೆ ವ್ಯಾಪಕವಾಗಿದ್ದೂ ಸಹ ವಚನದಂಥ ವೈಚಾರಿಕ ಸಾಹಿತ್ಯದ ಬಗ್ಗೆ ವಿಶೇಷ ಆಸ್ಥೆವಹಿಸದ ಬಹುಸಂಖ್ಯಾತವಾದ ಒಂದು ವರ್ಗಕ್ಕೆ ಅವುಗಳ ಬಗ್ಗೆ ಆಸಕ್ತಿಯನ್ನುಂಟು ಮಾಡುವುದು.

ವಚನಸಾಹಿತ್ಯ ವೈಚಾರಿಕ ಸಾಹಿತ್ಯ. ಪ್ರವಚನಗಳೂ ಸಹ ವೈಚಾರಿಕತೆಯನ್ನು ಬಿಂಬಿಸಬೇಕು. ಸಾಮಾನ್ಯವಾಗಿ ವಚನಗಳನ್ನು ಓದಿದರೂ ಅರ್ಥವಾಗಲಿಕ್ಕಿಲ್ಲ ಎಂಬ ಕಾರಣಕ್ಕೆ ಪ್ರವಚನಗಳ ಮೂಲಕ ಅವುಗಳನ್ನು ನಿರ್ವಚನ ಮಾಡುವ ರೂಢಿಯಿದೆ. ಜನರಲ್ಲಿ ವಚನಗಳ ಬಗ್ಗೆ ನಂಬಿಗೆ ವಿಶ್ವಾಸ ಹುಟ್ಟಲು ಪ್ರವಚನಗಳು ಕಾರಣವಾಗುತ್ತವೆ.

**ಐದು** : ವಚನಗಳನ್ನು ಧಾರ್ಮಿಕ ನೆಲೆಯಲ್ಲಿ ವೈಚಾರಿಕವಾಗಿಯೂ ಸಾಮಾಜಿಕ ನೆಲೆಯಲ್ಲಿ ಜಾತ್ಯತೀತವಾಗಿಯೂ ತಮ್ಮ ಪ್ರವಚನದಲ್ಲಿ ತುಂಬುವುದು. ವಚನಗಳು ಒಂದು ಧರ್ಮ ಮತ ಪಂಥಕ್ಕೆ ಸಂಬಂಧಪಟ್ಟಿಲ್ಲ. ಅವು ಇಡೀ ಮನುಕುಲಕ್ಕೆ ಸಂಬಂಧಪಟ್ಟಿವೆ. ಬೇದ ರಹಿತ ಸಮಾಜದ ರಚನೆಗೆ ಸಹಕಾರಿಯಾದ ವಚನಗಳು ವೈಚಾರಿಕತೆ ಪ್ರಜ್ಞೆಯನ್ನು ಮೂಡಿಸುತ್ತವೆ. ಧಾರ್ಮಿಕ ನೆಲೆಯಲ್ಲಿ ವೈಚಾರಿಕತೆಯನ್ನು ಸಾಮಾಜಿಕ ನೆಲೆಯಲ್ಲಿ ವರ್ಣ, ವರ್ಗ ರಹಿತವಾಗಿ ಪ್ರವಚನದಲ್ಲಿ ತುಂಬಬೇಕು. ಆಗ ಪ್ರವಚನವು ಬಹುಕಾಲ ಉಳಿಯಬಲ್ಲುದು.

**ಆರು** : ವಿನಾಕಾರಣವಾಗಿ ತರ್ಕಮಾಡುವ, ಅನಗತ್ಯವಾದ ಭ್ರಮೆಯಲ್ಲಿರುವ, ಅಸಂಗತವಾದ ಪ್ರತಿಷ್ಠೆ ಹೊಂದಿರುವ ಜನಗಳ ಮಧ್ಯೆಯೂ ಬಹುಸಂಖ್ಯಾತ ಸಾಮಾನ್ಯವರ್ಗದಿಂದ ಪ್ರವಚನದಾಚೆಯ ವ್ಯಕ್ತಿತ್ವವನ್ನು ಸಂಪಾದಿಸಿರುವುದು.

ಸಾಮಾನ್ಯವಾಗಿ ಪ್ರವಚನ ಕ್ಷೇತ್ರದಲ್ಲಿ ಟೀಕೆ ಮಾಡುವದು ಜಾಸ್ತಿ. ಓದಿದ ಜ್ಞಾನಕ್ಕಿಂತಲೂ ಅನುಭವ ದೊಡ್ಡದು. 'ಪ್ರಾಯಂ ಕಿರಿದಾಡೊಡೇನು ಅಭಿಪ್ರಾಯಂ ಕಿರಿದೆ? ಅರಿವಿಂಗೆ ಹಿರಿದು ಕಿರಿದುಂಟೆ?' ಎನ್ನುವಂತೆ ಅನುಭವಕ್ಕೆ ವಯಸ್ಸಿನ ಇತಿ–ಮಿತಿಯಿಲ್ಲ. ಧ್ವನಿ ಶೈಲಿ ಸಮಯ ಪ್ರಜ್ಞೆ, ಸರಳತೆ ಮನ ಮುಟ್ಟುವ ಮಾತು ಹುಡುಗನಲ್ಲಿದ್ದರೂ ನಾವು ತಲೆಬಾಗಲೇಬೇಕು. ಇದಬಿಟ್ಟು ವಿನಾಕಾರಣ ತರ್ಕ ಮಾಡಿ ಅನಗತ್ಯವಾಗಿ ಚರ್ಚಿಸಿ ಸುಂದರವಾಗಿ ನಡೆದಿರುವ ಕಾರ್ಯಕ್ರಮವನ್ನು ಕೆಡಿಸಿ ಖುಷಿ ಪಡುವುದು ಒಳ್ಳೆಯದಲ್ಲ. ಪ್ರವಚನ ಅಪರಿಮಿತ ಕತ್ತಲೆಯ ವಿಪರೀತದ ಮಾತು.

**ಏಳು** : ಯುವ ಪ್ರವಚನಕಾರರು ಮತ್ತು ಅಂಥ ಯುವಪ್ರತಿಭೆಗಳು ಇಂದು ಔದ್ಯೋಗಿಕ, ವ್ಯವಹಾರಬದುಕಿಗೆ ಮನಸ್ಸನ್ನು ಕೊಂಡೊಯ್ಯದೇ ಆಧುನಿಕ ಬದುಕಿನಲ್ಲಿ ನೈತಿಕತೆ, ಆಧ್ಯಾತ್ಮಿಕತೆಯ ಜೊತೆಗೆ ಒಂದು ವಿಶಿಷ್ಟವೇದಿಕೆಯಲ್ಲಿ ಪಾರಂಪರಿಕ ವಿದ್ಯಾವಾಹಿನಿಯನ್ನು ರೂಪಿಸಿಕೊಂಡು ಪ್ರವಚನ ಮಾಧ್ಯಮವನ್ನು ಸಾದ್ಯಂತವಾಗಿ ಸಾರ್ಥಕಗೊಳಿಸುತ್ತಿರುವುದು ವಿಶೇಷ. ಇಂಥವರು ಪ್ರವಚನಕಾರರಾಗಿ ಒಂದು ವಿಶ್ವಾಸವನ್ನು ಮೂಡಿಸಿದ್ದರ ಕಾರಣವಾಗಿ ನಮ್ಮ 'ಬಸವಜ್ಞಾನ ಗುರುಕುಲ'ದಂಥ ಮೊದಲಾದ ಆಶ್ರಮಗಳಲ್ಲಿ ಪ್ರವಚನ ಶಿಕ್ಷಣಕ್ಕೆ ಒಂದು ವೇದಿಕೆ ರೂಪಿಸಿರುವುದು.

